ಆಚಾರ್ಯಭರ್ತೃಹರಿಪ್ರಣೀತ

# ವಾಕ್ಯಪದೀಯ

## ಬ್ರಹ್ಮಕಾಂಡ–ಕಾಲಸಮುದ್ದೇಶ–ಕ್ರಿಯಾಸಮುದ್ದೇಶಗಳ ಅನುವಾದ ಸಹಿತ

ಅನುವಾದ

ಮಹಾಮಹೋಪಾಧ್ಯಾಯ

**ವಿದ್ವಾನ್ ಎನ್. ರಂಗನಾಥಶರ್ಮಾ**

ಪ್ರಕಾಶನ

**ಪ್ರಸಾರಾಂಗ**

ಕರ್ನಾಟಕ ಸಂಸ್ಕೃತ ವಿಶ್ವವಿದ್ಯಾಲಯ

ಚಾಮರಾಜಪೇಟೆ, ಬೆಂಗಳೂರು–೧೮

# ಅನುವಾದಕರ ನುಡಿ

ವಾಕ್ಯಪದೀಯದ ಬ್ರಹ್ಮಕಾಂಡ, ಕಾಲಸಮುದ್ದೇಶ ಮತ್ತು ಕ್ರಿಯಾಸಮುದ್ದೇಶಗಳನ್ನು ಆನುವಾದಿಸುವ ಕಾರ್ಯದಲ್ಲಿ ಪ್ರಖ್ಯಾತ ವಿದ್ವಾಂಸರಾದ 'ಪದ್ಮಶ್ರೀ' ಪಂಡಿತ ರಘುನಾಥಶರ್ಮಾರವರ 'ಅಂಬಾಕರ್ತ್ರೀ' ವ್ಯಾಖ್ಯಾನದಿಂದಲೂ ಶ್ರೀಸೂರ್ಯನಾರಾಯಣಶುಕ್ಲರ 'ಭಾವಪ್ರದೀಪ' ವ್ಯಾಖ್ಯಾನದಿಂದಲೂ ಶ್ರೀ ಹೇಲಾರಾಜನ 'ಪ್ರಕಾಶ' ವ್ಯಾಖ್ಯಾನದಿಂದಲೂ ತುಂಬ ಉಪಕಾರವಾಗಿದೆ. ಆ ಮೂವರು ಪಂಡಿತಶ್ರೇಷ್ಠರನ್ನು ಕೃತಜ್ಞತೆಯಿಂದ ಸ್ಮರಿಸಿಕೊಳ್ಳುತ್ತೇನೆ.

ಸಾಗರದ ಅಕ್ಷರಪ್ರಕಾಶನ ಸಂಸ್ಥೆಯ ಅಧ್ಯಕ್ಷರಾಗಿದ್ದ ದಿವಂಗತ ಶ್ರೀ ಕೆ.ವಿ. ಸುಬ್ಬಣ್ಣನವರು ಈ ಬಗೆಯ ವಿಚಾರಸಾಹಿತ್ಯವು ಕನ್ನಡದಲ್ಲಿ ಬೆಳೆಯಬೇಕೆಂಬ ಘನೋದ್ದೇಶವನ್ನಿಟ್ಟುಕೊಂಡು ವಾಕ್ಯಪದೀಯದ ಬ್ರಹ್ಮಕಾಂಡ, ಕಾಲ ಮತ್ತು ಕ್ರಿಯಾಸಮುದ್ದೇಶಗಳನ್ನು ಅನುವಾದ ಮಾಡಿಕೊಡಬೇಕೆಂದು ನನ್ನನ್ನು ಪ್ರೇರಿಸಿ ನಾನು ಬರೆದ ಅನುವಾದವನ್ನು ಎರಡು ಪುಸ್ತಕಗಳನ್ನಾಗಿ ಮೊದಲು ಪ್ರಕಟಿಸಿದ್ದರು. ಆವರನ್ನು ಅಭಿಮಾನದಿಂದ ಸ್ಮರಿಸಿಕೊಳ್ಳುತ್ತೇನೆ.

ಈ ಎರಡು ಗ್ರಂಥಗಳ ಪ್ರತಿಗಳು ಮುಗಿದು ಹೋಗಿರುವುದರಿಂದ ಈಗ ದೊರಕುತ್ತಿಲ್ಲ. ಈ ವಿಚಾರವು ಕರ್ನಾಟಕ ಸಂಸ್ಕೃತ ವಿಶ್ವವಿದ್ಯಾಲಯದ ಮಾನ್ಯ ಕುಲಪತಿಗಳಾದ ಪ್ರೊ॥ ಮಲ್ಲೇಪುರಂ ಜಿ. ವೆಂಕಟೇಶ ಅವರ ಗಮನಕ್ಕೆ ಬಂದಿತು. ಅವರು ಈ ಗ್ರಂಥವನ್ನು ವಿಶ್ವವಿದ್ಯಾಲಯದಿಂದ ಪ್ರಕಟಿಸುವುದಾಗಿ ಕೃಪೆಯಿಂದ ಒಪ್ಪಿಕೊಂಡರು. ಆ ಮಹನೀಯರ ಕೃಪಾಭಿಮಾನಗಳಿಂದ ಆ ಎರಡು ಪುಸ್ತಕಗಳು ಒಂದೇ ಗ್ರಂಥವಾಗಿ ಉತ್ತಮವಾದ ಮುದ್ರಣ ವಿನ್ಯಾಸದೊಡನೆ ಈಗ ಪ್ರಕಟವಾಗುತ್ತಿದೆ.

ಶ್ಲೋಕ, ಅರ್ಥ, ವಿವರಣೆಗಳು ಪ್ರತ್ಯೇಕವಾಗಿ ಗೋಚರಿಸುವಂತೆ ಲಿಪಿಯ ಆಕೃತಿಯು ಬೇರೆ ಬೇರೆಯಾಗಿದೆ. ಉತ್ತಮದರ್ಜೆಯ ಕಾಗದವನ್ನು ಬಳಸಲಾಗಿದೆ. ಮುದ್ರಣವು ಶುದ್ಧವಾಗಿ ಬಂದಿದೆ. ಗ್ರಂಥದ ಈ ವಿನ್ಯಾಸದಿಂದ ನನಗೆ ತುಂಬ ಸಂತೋಷವಾಯಿತು. ಇದಕ್ಕಾಗಿ ಮಾನ್ಯ ಕುಲಪತಿಗಳಾದ ಪ್ರೊ॥ ಮಲ್ಲೇಪುರಂ ಜಿ. ವೆಂಕಟೇಶ ಅವರಿಗೆ ಕೃತಜ್ಞತಾಪೂರ್ವಕವಾದ ವಂದನೆಗಳನ್ನು ಅರ್ಪಿಸುತ್ತೇನೆ.

ಚಿ॥ ವಿದ್ವಾನ್ ರಾಮಕೃಷ್ಣಭಟ್ಟ ಕೆ. ಎಂ.ಎ., ಎಂ.ಫಿಲ್ ಅವರು ಈ ಗ್ರಂಥದ ಪುನರ್ಮುದ್ರಣ ಕಾರ್ಯದ ಯೋಜಕರು. ಅಲ್ಲದೇ ಈ ಗ್ರಂಥದ ಮುದ್ರಣ ಕಾರ್ಯದಲ್ಲಿ ತುಂಬಾ ಉತ್ಸಾಹದಿಂದ ಶ್ರಮವಹಿಸಿ ಸಹಾಯ ಮಾಡಿದ್ದಾರೆ. ಸಮಗ್ರ ಗ್ರಂಥವನ್ನು ಶ್ರದ್ಧೆಯಿಂದ ಓದಿ ನನಗೆ ಕೇಳಿಸಿದ್ದಾರೆ. ಪರಿಷ್ಕೃತ ಈ ಆವೃತ್ತಿಯಲ್ಲಿ ಕೆಲವೊಂದು ಸಣ್ಣಪುಟ್ಟ ಮಾರ್ಪಾಡುಗಳನ್ನು ಮಾಡಿಸಿದ್ದೇನೆ. ಗ್ರಂಥದಲ್ಲಿ ಶ್ಲೋಕಾದಿಗಳ ವಿನ್ಯಾಸ, ಶ್ಲೋಕಗಳ ಅಕಾರಾದಿ ಸೂಚಿ, ಪ್ರಸ್ತಾವನೆಗಳ ಸಮೀಕರಣ, ಕರಡು ಪ್ರತಿಯ ತಿದ್ದುವಿಕೆ ಮುಂತಾದ ಕಾರ್ಯಗಳನ್ನು ಅಚ್ಚುಕಟ್ಟಾಗಿ ನೋಡಿಕೊಂಡಿದ್ದಾರೆ. ಅಲ್ಲದೇ ಇದುವರೆಗೆ ವಾಕ್ಯಪದೀಯ ಗ್ರಂಥವು ಎಲ್ಲೆಲ್ಲಿ ಯಾವ ರೀತಿಯಲ್ಲಿ ಪ್ರಕಟವಾಗಿದೆ ಎಂಬುದನ್ನು ಬಹುಶ್ರಮದಿಂದ ಸಂಗ್ರಹಿಸಿ ತಿಳಿಸಿಕೊಟ್ಟಿದ್ದಾರೆ. ಇವರ ಅವಿರತ ಪರಿಶ್ರಮದಿಂದ ಈ ಗ್ರಂಥವು ಶುದ್ಧವಾಗಿ ಮತ್ತು ಸುಂದರವಾಗಿ ಬೆಳಕಿಗೆ ಬಂದಿದೆ. ಚಿ॥ ಶ್ರೀರಾಮಕೃಷ್ಣಭಟ್ಟರಿಗೆ ಉಪಕಾರಸ್ಮರಣ ಪೂರ್ವಕವಾಗಿ ನಾನು ಶುಭಾಶೀರ್ವಾದಗಳನ್ನು ಸಲ್ಲಿಸುತ್ತೇನೆ.

ಬೆಂಗಳೂರು ವಿದ್ವಾನ್ ಎನ್. ರಂಗನಾಥಶರ್ಮಾ

೧೫-೦೮-೨೦೧೧

# ಪ್ರಸ್ತಾವನೆ

ಈ ಜಗತ್ತನ್ನು ಶಬ್ದ, ಅರ್ಥ – ಎಂದು ಎರಡು ವಿಧವಾಗಿ ವಿಂಗಡಿಸಬಹುದು. ಅರ್ಥವೆಂದರೆ ಪದಾರ್ಥ. ನಮ್ಮ ಇಂದ್ರಿಯಗಳಿಗೆ ಮತ್ತು ಮನಸ್ಸಿಗೆ ಗೋಚರಿಸುವ ಸಮಸ್ತ ವಿಷಯಗಳೂ ಪದಾರ್ಥಗಳೇ. ಈ ದೃಷ್ಟಿಯಲ್ಲಿ ಶಬ್ದವೂ ಒಂದು ಪದಾರ್ಥವೇ ಆಗಿಬಿಡುತ್ತದೆಯಾದರೂ ವಾಚಕ, ವಾಚ್ಯ ಎಂದು ಸೌಕರ್ಯಕ್ಕಾಗಿ ವಿಭಾಗಿಸಿಕೊಂಡು ಶಬ್ದ, ಅರ್ಥ ಎಂದು ಎರಡಾಗಿ ವಿಂಗಡಿಸಿಕೊಂಡಿದ್ದೇವೆ. ನಾಮರೂಪಾತ್ಮಕವಾದ ಈ ಜಗತ್ತು – ಎಂದು ದರ್ಶನಕಾರರು ಹೇಳುತ್ತಿರುವುದುಂಟು. ನಾಮ=ಶಬ್ದ, ರೂಪ=ಅರ್ಥ. ಅರ್ಥಪ್ರಪಂಚವು ಎಷ್ಟು ದೊಡ್ಡದೋ ಅದಕ್ಕಿಂತ ಶಬ್ದಪ್ರಪಂಚವು ದೊಡ್ಡದೆಂದು ಹೇಳಬಹುದು. ಏಕೆಂದರೆ ಒಂದು ಪದಾರ್ಥಕ್ಕೆ ವಾಚಕಗಳಾದ ಪರ್ಯಾಯ ಪದಗಳು ಬಹಳ ಇರುತ್ತವೆ. ನೀರು – ಎಂಬ ಅರ್ಥದಲ್ಲಿ ೧೦೧ ಶಬ್ದಗಳನ್ನು ವೈದಿಕನಿಘಂಟುವಿನಲ್ಲಿ ಹೇಳಿದ್ದಾರೆ. 'ಇತ ಉತ್ತರಮೇಕಶತಮುದಕನಾಮಾನಿ' ಎಂದು ಯಾಸ್ಕರು ನಿರುಕ್ತದಲ್ಲಿ ಬರೆದಿದ್ದಾರೆ. ಹೀಗೆ ಸಮಸ್ತ ವಸ್ತುಗಳಿಗೂ ಅನೇಕ ಪರ್ಯಾಯ ಪದಗಳಿರುತ್ತವೆ. ಇದು ಸಂಸ್ಕೃತಶಬ್ದಗಳ ಮಾತಾಯಿತು. ಜಗತ್ತಿನ ನಾನಾ ಭಾಷೆಗಳಲ್ಲಿರುವ ಜಲವಾಚಕ ಶಬ್ದಗಳು ಅಸಂಖ್ಯಾತವಾಗಬಹುದು.

ವ್ಯಾಕರಣಮಹಾಭಾಷ್ಯದಲ್ಲಿ ಚಮತ್ಕಾರಿಯಾದ ಒಂದು ಪ್ರಸಂಗ ಬರುತ್ತದೆ. ವಿಧಿನಿಷೇಧಾತ್ಮಕವಾದ ವ್ಯಾಕರಣಸೂತ್ರಗಳಿಗೆ ಬದಲಾಗಿ ಸಾಧುಶಬ್ದಗಳ ಒಂದು ಪಟ್ಟಿಯನ್ನು ತಯಾರಿಸುವುದು ಉತ್ತಮವಲ್ಲವೆ? ಈ ಪಟ್ಟಿಯಲ್ಲಿರುವ ಶಬ್ದಗಳು ಸರಿಯಾದ ಶುದ್ಧಶಬ್ದಗಳು, ಉಳಿದವು ಅಪಶಬ್ದಗಳು ಎಂದು ತಿಳಿಯುತ್ತದೆ. ಇದಕ್ಕೆ ಉತ್ತರವಾಗಿ ಭಾಷ್ಯಕಾರರು ಹೀಗೆ ಪಟ್ಟಿಯನ್ನು ತಯಾರಿಸಲು ಶಕ್ಯವಿಲ್ಲ. ಶಬ್ದಗಳು ಅನಂತವಾಗಿವೆಯೆಂದು ತಿಳಿಸುವುದಕ್ಕಾಗಿ ಒಂದು ನಿದರ್ಶನವನ್ನು ಕೊಡುತ್ತಾರೆ.

'ಬೃಹಸ್ಪತಿರಿಂದ್ರಾಯ ದಿವ್ಯಂ ವರ್ಷಸಹಸ್ರಂ ಪ್ರತಿಪದೋಕ್ತಾನಾಂ ಶಬ್ದಾನಾಂ ಶಬ್ದಪಾರಾಯಣಂ ಪ್ರೋವಾಚ । ನಾಂತಂ ಜಗಾಮ । ಬೃಹಸ್ಪತಿಶ್ಚ ಪ್ರವಕ್ತಾ । ಇಂದ್ರಶ್ಚಾಧ್ಯೇತಾ, ದಿವ್ಯವರ್ಷಸಹಸ್ರಮಧ್ಯಯನಕಾಲಃ, ನಚಾಂತಂ ಜಗಾಮ । ಕಿಂ ಪುನರದ್ಯತ್ವೇ?' (ಮ. ಭಾ. ಪಸ್ಪಶಾಹ್ನಿಕ) 'ಬೃಹಸ್ಪತಿಯು ಇಂದ್ರನಿಗೆ ಸಿದ್ಧವಾದ ಶಬ್ದರೂಪಗಳನ್ನು ಕಲಿಸಲು ಆರಂಭಿಸಿದನಂತೆ. ಹೇಳಿಕೊಡತಕ್ಕವನು ಬೃಹಸ್ಪತಿ.

ಕಲಿಯತಕ್ಕವನು ದೇವೇಂದ್ರ. ದಿವ್ಯವಾದ ಸಾವಿರ ವರ್ಷ ಅಧ್ಯಯನಕಾಲ. ಆದರೂ ಶಬ್ದಪಾರಾಯಣ ಮುಗಿಯಲಿಲ್ಲ ! ಇನ್ನು ಈ ಕಾಲದಲ್ಲಿ ಶಬ್ದಪಾರಾಯಣವು ಮನುಷ್ಯರಿಂದ ಸಾಧ್ಯವಾಗತಕ್ಕದ್ದೆ?' ಮನುಷ್ಯರ ಮಾನದಲ್ಲಿ ೩೬೦ ವರ್ಷಗಳಿಗೆ ಒಂದು ದಿವ್ಯವರ್ಷ. ಇಷ್ಟು ಅಪಾರವಾದ ಶಬ್ದರಾಶಿಗಳ ನಾನಾ ರೂಪಗಳನ್ನು ಗುರುತಿಸಿ ಅವೆಲ್ಲವನ್ನು ನಿಯಮಗಳ ಚೌಕಟ್ಟಿಗೆ ಒಳಪಡಿಸಿ ವ್ಯವಸ್ಥೆಗೊಳಿಸುವುದು ಅಗಾಧವಾದ ಕಾರ್ಯ. ಈ ಅಸಾಧಾರಣ ಕಾರ್ಯವನ್ನು ಪಾಣಿನಿಯ ಅಷ್ಟಾಧ್ಯಾಯಿಯು ವಹಿಸಿಕೊಂಡು ಯಶಸ್ವಿಯಾಗಿ ನಿರ್ವಹಿಸಿದೆ. ಇದರ ಎಂಟು ಅಧ್ಯಾಯಗಳಲ್ಲಿ ಮೂವತ್ತೆರಡು ಪಾದಗಳಿದ್ದು ಒಟ್ಟು ೩೯೮೩ ಸೂತ್ರಗಳಿವೆ. ಸುಮಾರು ೨೦೦೦ ಧಾತುಗಳನ್ನೊಳಗೊಂಡ ಧಾತುಪಾಠವೂ ನೂರಾರು ಗಣಗಳಲ್ಲಿ ವಿಭಿನ್ನ ಶಾಸ್ತ್ರೀಯ ಕಾರ್ಯಗಳಿಗಾಗಿ ಆರಿಸಿ ತೆಗೆದ ಶಬ್ದರಾಶಿಯೂ ಇದೆ. ಇಷ್ಟು ಬೃಹತ್ತಾದ ಇನ್ನೊಂದು ಸೂತ್ರಗ್ರಂಥವು ಸಂಸ್ಕೃತ ವಾಙ್ಮಯದಲ್ಲಿಯೇ ಇಲ್ಲ. ಅಷ್ಟಾಧ್ಯಾಯಿಯ ಮೇಲೆ ಕಾತ್ಯಾಯನನ ಸಾವಿರಾರು ವಾರ್ತಿಕಗಳೂ ಪತಂಜಲಿಯ ಮಹಾಭಾಷ್ಯವೂ ಹೊರಟಿವೆ. ಸೂತ್ರ, ವಾರ್ತಿಕ, ಮಹಾಭಾಷ್ಯ – ಇವು ಮೂರು ಸೇರಿ ಪಾಣಿನೀಯ ವ್ಯಾಕರಣಶಾಸ್ತ್ರವೆನಿಸುತ್ತದೆ. ವೇದದ ಷಡಂಗಗಳಲ್ಲಿ ಪಾಣಿನೀಯ ವ್ಯಾಕರಣವನ್ನು ಮಾತ್ರ ಈಗ ಗ್ರಹಿಸಿದ್ದಾರೆ. ಇದಕ್ಕೆ ಹಿಂದೆ ಇದ್ದ ಐಂದ್ರ, ಚಾಂದ್ರ, ಕಾಶಕೃತ್ಸ್ನ ಮುಂತಾದ ವ್ಯಾಕರಣಗಳು ಸೂರ್ಯೋದಯವಾದಾಗ ನಕ್ಷತ್ರಗಳಂತೆ ಅಷ್ಟಾಧ್ಯಾಯಿಯು ಉದಯಿಸಿದ ಮೇಲೆ ಮಾಸಿಹೋದವು.

ಸಂಸ್ಕೃತ ವ್ಯಾಕರಣಶಾಸ್ತ್ರವು ಒಂದು ಮಹಾವೃಕ್ಷವಾಗಿ ಬೆಳೆದಿದೆ. ಇದರಲ್ಲಿ ಎರಡು ದೊಡ್ಡಶಾಖೆಗಳಿವೆ. ಒಂದು ಸೂತ್ರಾರ್ಥ ಮತ್ತು ಶಬ್ದರೂಪಗಳ ಪ್ರಕ್ರಿಯೆಗೆ ಸಂಬಂಧಿಸಿದ್ದು. ಇನ್ನೊಂದು ದಾರ್ಶನಿಕ ವಿಷಯಗಳಿಗೆ ಸಂಬಂಧಿಸಿದ್ದು. ವಾಕ್ಯರಣಶಾಸ್ತ್ರವೇ ಒಂದು ದರ್ಶನವಾಗಿ ಬೆಳೆದದ್ದು ಆಶ್ಚರ್ಯಕರವಾದ ರೋಚಕ ಪ್ರಸಂಗವೇ ಹೌದು. ಇಂತಹ ಬೆಳವಣಿಗೆ ಭರತ ಖಂಡದಲ್ಲಿ ಮಾತ್ರ ಸಾಧ್ಯವಾಯಿತು. ಭಾರತೀಯ ಮೇಧಾವಿಗಳ ಪ್ರಜ್ಞಾಶಕ್ತಿ, ವಿಚಾರ, ವಿಮರ್ಶೆ, ತಳ ಮುಟ್ಟುವವರೆಗೆ ಶೋಧಿಸುವ ಎಣೆಯಿಲ್ಲದ ಕುತೂಹಲಗಳು ಈ ದರ್ಶನದ ವೃದ್ಧಿಗೆ ಕಾರಣಗಳಾದವು.

ಶಬ್ದವೆಂದರೇನು? ಇದರ ಸ್ವರೂಪವೆಂತಹದು? ಶಬ್ದದಿಂದ ಅರ್ಥಪ್ರತೀತಿಯಾಗುವುದು ಹೇಗೆ? ಶಬ್ದಕ್ಕೂ ಅರ್ಥಕ್ಕೂ ಇರುವ ಸಂಬಂಧ ಯಾವುದು? ಈ ಸಂಬಂಧ ನಮಗೆ ತಿಳಿಯುವ ಬಗೆ ಹೇಗೆ? ಯಾವ ಯಾವ

ಅರ್ಥವನ್ನು ಶಬ್ದವು ತಿಳಿಸಬಲ್ಲದು? ಶಬ್ದ, ವಾಕ್ಯ, ಭಾಷೆಗಳ ಉತ್ಪತ್ತಿ ಹೇಗೆ? ಶಬ್ದದಲ್ಲಿರುವ ಅಕ್ಷರಗಳ ಸ್ಥಾನ ಯಾವುದು? ವ್ಯಾಕರಣದಲ್ಲಿ ಶಬ್ದಸಿದ್ಧಿಗಾಗಿ ಹೇಳುವ ದ್ರವ್ಯ, ಗುಣ, ಜಾತಿ, ಕ್ರಿಯೆ, ಕಾಲ, ಕಾರಕ, ಸಂಬಂಧಗಳನ್ನು ಕೂಲಂಕುಷವಾಗಿ ತಿಳಿಯದೆ ಶಬ್ದಸಿದ್ಧಿಯಾಗುವುದಿಲ್ಲವಾದ್ದರಿಂದ ಅವುಗಳ ನಿರ್ಣಯ ಯಾವುದು? ವಾಕ್ಯವನ್ನು ಕೇಳಿದಾಗ ಶ್ರೋತಾರನಿಗಾಗುವ ಶಾಬ್ದಜ್ಞಾನದ ಆಕಾರವೇನು? – ಇತ್ಯಾದಿ ವಿಷಯಗಳನ್ನು ವ್ಯಾಕರಣದರ್ಶನವು ವಿವೇಚಿಸುತ್ತದೆ. ಅಲ್ಲದೆ ಜೀವ, ಜಗತ್ತು, ಈಶ್ವರ, ಮೋಕ್ಷ – ಈ ನಾಲ್ಕನ್ನು ಚರ್ಚಿಸದಿದ್ದರೆ ದರ್ಶನಶಾಸ್ತ್ರದ ಪರಮೋದ್ದೇಶಕ್ಕೆ ಭಂಗವಾಗುವುದೆಂದು ಭಾರತೀಯರ ದೃಷ್ಟಿ ಜಾಗೃತವಾಗಿರುತ್ತದೆ. ಆದ್ದರಿಂದ ವ್ಯಾಕರಣದರ್ಶನವೂ ಇವುಗಳನ್ನು ಸಂಕ್ಷೇಪವಾಗಿ ಪರಾಮರ್ಶಿಸಿದೆ. ಪಾಣಿನಿಯ ಸೂತ್ರಗಳಲ್ಲಿ ಈ ವಿಚಾರವು ಅತಿ ಸೂಕ್ಷ್ಮವಾಗಿದೆ. ಕಾತ್ಯಾಯನನು ವಾರ್ತಿಕಗಳಲ್ಲಿಯೂ ಪತಂಜಲಿಯು ಮಹಾಭಾಷ್ಯದಲ್ಲಿಯೂ ಈ ವಿಚಾರಗಳನ್ನು ಬೆಳೆಸಿದ್ದಾರೆ. ಆದರೆ ಅವರ ಮುಖ್ಯೋದ್ದೇಶವು ಶಬ್ದಗಳ ರೂಪಸಿದ್ಧಿಯಾದ್ದರಿಂದ ದಾರ್ಶನಿಕ ವಿಚಾರಗಳು ಒಂದು ಕಡೆ ವ್ಯವಸ್ಥಿತವಾಗಿ ಬರಲಿಲ್ಲ. ಪ್ರಾಯಶಃ ಪಾಣಿನಿಯ ಸಮಕಾಲಿಕನಾಗಿದ್ದ ವ್ಯಾಡಿಯು ಈ ದಾರ್ಶನಿಕ ವಿಚಾರಗಳನ್ನು ಒಂದು ಲಕ್ಷಶ್ಲೋಕಗಳಲ್ಲಿ ಸಂಗ್ರಹಿಸಿದ್ದನಂತೆ! ಅದಕ್ಕೆ ಸಂಗ್ರಹ ವೆಂದೇ ಹೆಸರಿತ್ತು. ಭಾಷ್ಯಕಾರ ಪತಂಜಲಿಯ ಕಾಲದಲ್ಲಿ ಸಂಗ್ರಹವಿತ್ತು. 'ಸಂಗ್ರಹೇ ಏತತ್ ಪ್ರಾಧಾನ್ಯೇನ ಪರೀಕ್ಷಿತಂ ನಿತ್ಯಃ ಶಬ್ದಃ ಕಾರ್ಯೋ ವೇತಿ । ತತ್ರ ತ್ವೇಷ ನಿರ್ಣಯಃ' ಎಂದು ಪತಂಜಲಿಯು ಮಹಾಭಾಷ್ಯದ ಪ್ರಥಮಾಹ್ನಿಕದಲ್ಲಿ ಬರೆದಿರು ವುದರಿಂದ ಪತಂಜಲಿಯು ಸಂಗ್ರಹವನ್ನು ನೋಡಿದ್ದನೆಂದು ಸ್ಪಷ್ಟವಾಗುತ್ತದೆ. ಅಷ್ಟು ವಿಸ್ತಾರವಾದ ಗ್ರಂಥ ನಷ್ಟವಾಯಿತು. ವ್ಯಾಕರಣಶಾಸ್ತ್ರಕ್ಕೆ ಒಂದು ದೊಡ್ಡ ಆಘಾತವೇ ಆಯಿತು. ಕ್ರಮೇಣ ಪತಂಜಲಿಯ ಮಹಾಭಾಷ್ಯಕ್ಕೂ ಈ ಗತಿ ಪ್ರಾಪ್ತವಾಗುತ್ತಿತ್ತು. ವಾಕ್ಯಪದೀಯಕಾರನಾದ ಭರ್ತೃಹರಿ ಹೇಳುತ್ತಾನೆ –

> ಪ್ರಾಯೇಣ ಸಂಕ್ಷೇಪರುಚೀನಲ್ಪವಿದ್ಯಾಪರಿಗ್ರಹಾನ್ ।
> ಸಂಪ್ರಾಪ್ಯ ವೈಯಾಕರಣಾನ್ ಸಂಗ್ರಹೇಽಸ್ತಮುಪಾಗತೇ ॥
>
> ಕೃತೇಽಥ ಪತಂಜಲಿನಾ ಗುರುಣಾ ತೀರ್ಥದರ್ಶಿನಾ ।
> ಸರ್ವೇಷಾಂ ನ್ಯಾಯಬೀಜಾನಾಂ ಮಹಾಭಾಷ್ಯೇ ನಿಬಂಧನೇ ॥
>
> ಅಲಬ್ಧಗಾಧೇ ಗಾಂಭೀರ್ಯಾದುತ್ತಾನ ಇವ ಸೌಷ್ಠವಾತ್ ।
> ತಸ್ಮಿನ್ನಕೃತಬುದ್ಧೀನಾಂ ನೈವಾವಾಸ್ಥಿತನಿಶ್ಚಯಃ ॥

ಬೈಜಿಸೌಭರಿಹರ್ಯಕ್ಷೈಃ ಶುಷ್ಕತರ್ಕಾನುಸಾರಿಭಿಃ ।
ಆರ್ಷೇ ವಿಪ್ಲಾವಿತೇ ಗ್ರಂಥೇ ಸಂಗ್ರಹಪ್ರತಿಕಂಚುಕೇ ॥

ಯಃ ಪತಂಜಲಿಶಿಷ್ಯೇಭ್ಯೋ ಭ್ರಷ್ಟೋ ವ್ಯಾಕರಣಾಗಮಃ ।
ಕಾಲೇ ಸ ದಾಕ್ಷಿಣಾತ್ಯೇಷು ಗ್ರಂಥಮಾತ್ರೇ ವ್ಯವಸ್ಥಿತಃ ॥

ಪರ್ವತಾದಾಗಮಂ ಲಬ್ಧ್ವಾ ಭಾಷ್ಯಬೀಜಾನುಸಾರಿಭಿಃ ।
ಸ ನೀತೋ ಬಹುಮಾರ್ಗತ್ವಂ ಚಂದ್ರಾಚಾರ್ಯಾದಿಭಿಃ ಪುನಃ ॥

ನ್ಯಾಯಪ್ರಸ್ಥಾನಮಾರ್ಗಾಂಸ್ತಾನಭ್ಯಸ್ಯ ಸ್ವಂ ಚ ದರ್ಶನಂ ।
ಪ್ರಣೀತೋ ಗುರುಣಾಸ್ಮಾಕಮಯಮಾಗಮಸಂಗ್ರಹಃ ॥

–ವಾಕ್ಯಪದೀಯ, ದ್ವಿತೀಯ ಕಾಂಡದ ಸಮಾಪ್ತಿಯಲ್ಲಿ.

ಅಲ್ಪವಾಗಿ ವಿದ್ಯಾಭ್ಯಾಸ ಮಾಡಿದವರೂ ಎಲ್ಲವೂ ಸಂಕ್ಷೇಪವಾಗಿರಬೇಕೆಂದು ಬಯಸತಕ್ಕವರೂ ಆದ ಕೆಲವು ವೈಯಾಕರಣರ ಕೈಗೆ ಸೇರಿ ಸಂಗ್ರಹಗ್ರಂಥವು ಅಸ್ತಂಗತವಾಯಿತು. ಸರ್ವಶಾಸ್ತ್ರಜ್ಞನೂ ವ್ಯಾಕರಣಶಾಸ್ತ್ರಕ್ಕೆ ಗುರುವೂ ಆದ ಪತಂಜಲಿಯು ಮಹಾಭಾಷ್ಯವನ್ನು ರಚಿಸಿದ್ದನು. ಅದು ಸಮಸ್ತ ನ್ಯಾಯಗಳಿಗೆ ಆಕರವಾದ ಗ್ರಂಥವಾಗಿತ್ತು.

ಅರ್ಥಗಾಂಭೀರ್ಯದಿಂದ ಮಹಾಭಾಷ್ಯದ ಆಳವನ್ನರಿತು ತಳವನ್ನು ಮುಟ್ಟುವುದು ಅಶಕ್ಯವಾಗಿತ್ತು. ಆದರೆ ವಾಕ್ಯಶೈಲಿಯು ಸುಲಭವಾದ್ದರಿಂದ ಮಹಾಭಾಷ್ಯದಲ್ಲಿ ಆಳವೇ ಇಲ್ಲವೆಂದು ಕಾಣುತ್ತಿತ್ತು! ಬುದ್ಧಿ ಪಕ್ವವಾಗದ ಸಾಮಾನ್ಯರಿಗೆ ಮಹಾಭಾಷ್ಯದ ನಿರ್ಣಯವೇನೆಂಬುದೇ ತಿಳಿಯಲಿಲ್ಲ! ಶುಷ್ಕತಾರ್ಕಿಕರಾಗಿದ್ದ ಬೈಜಿ ಸೌಭರಿ ಹರ್ಯಕ್ಷ ಎಂಬವರು ಋಷಿಪ್ರಣೀತವೂ ಸಂಗ್ರಹಕ್ಕೆ ಸದೃಶವಾಗಿ ಅದರ ಕವಚದಂತಿದ್ದ ಆ ಗ್ರಂಥವನ್ನು ಕಲಕಿ ಹಾಳು ಮಾಡಿಬಿಟ್ಟರು.

ಹೀಗೆ ಪತಂಜಲಿಶಿಷ್ಯರಿಂದ ಕೈದಪ್ಪಿಹೋದ ವ್ಯಾಕರಣಮಹಾಭಾಷ್ಯವು ಕಾಲಾಂತರದಲ್ಲಿ ದಾಕ್ಷಿಣಾತ್ಯರ ಬಳಿ ಕೇವಲ ಒಂದು ಗ್ರಂಥರೂಪದಿಂದ ಉಳಿದುಕೊಂಡಿತ್ತು. ಅನಂತರ ಚಂದ್ರಾಚಾರ್ಯರೇ ಮೊದಲಾದವರು ಪರ್ವತದಿಂದ ಆ ಗ್ರಂಥವನ್ನು ಪಡೆದು, ಭಾಷ್ಯದಲ್ಲಿರುವ ನ್ಯಾಯಶಾಸ್ತ್ರ ಪ್ರಸ್ಥಾನ ಮಾರ್ಗಗಳನ್ನನುಸರಿಸಿ, ಭಾಷ್ಯವನ್ನು ಬಹುಮಾರ್ಗದಲ್ಲಿ ವಿಸ್ತರಿಸಿದರು.

ನಮ್ಮ ಗುರುಗಳು ನ್ಯಾಯಶಾಸ್ತ್ರದ ಆ ಪ್ರಸ್ಥಾನಮಾರ್ಗಗಳನ್ನು ತಮ್ಮದೇ ಆದ ವ್ಯಾಕರಣ ಶಾಸ್ತ್ರೀಯ ದರ್ಶನವನ್ನು ಅಭ್ಯಾಸ ಮಾಡಿ ಈ ಆಗಮ ಸಂಗ್ರಹವನ್ನು ರಚಿಸಿದರು.

ಇಲ್ಲಿ 'ಪರ್ವತಾದಾಗಮಂ ಲಬ್ಧ್ವಾ' ಎಂಬುದರ ಅರ್ಥ ಸ್ಪಷ್ಟವಾಗುವುದಿಲ್ಲ. ವ್ಯಾಖ್ಯಾನಕಾರನಾದ ಪುಣ್ಯರಾಜನು ಶ್ರೀಶೈಲಪರ್ವತದಲ್ಲೊಂದೆಡೆ ಮಹಾಭಾಷ್ಯ ಪುಸ್ತಕವನ್ನು ಮುಚ್ಚಿಡಲಾಗಿತ್ತು – ಎಂದು ಅಭಿಪ್ರಾಯ ಪಡುತ್ತಾನೆ. ಪರ್ವತನೆಂಬ ಒಬ್ಬ ಆಚಾರ್ಯನಿಂದ ಚಂದ್ರಾಚಾರ್ಯಾದಿಗಳು ಈ ಗ್ರಂಥವನ್ನು ಪಡೆದರು ಎಂದೂ ಹೇಳಲು ಸಾಧ್ಯತೆ ಇದೆ. 'ಪ್ರಣೀತೋ ಗುರುಣಾಸ್ಮಾಕಂ' ಎಂಬ ಮಾತಿನಿಂದ ವಾಕ್ಯಪದೀಯದ ದ್ವಿತೀಯಕಾಂಡ ಪೂರ್ತಿಯಾಗಿ ವಸುರಾತನಿಂದ ರಚಿತವಾಗಿರಬಹುದೆ? ಎಂಬ ಸಂಶಯಕ್ಕೆ ಎಡೆಯಾಗುತ್ತದೆ. ಆದರೆ ಈ ಗ್ರಂಥವನ್ನು ಪೂರ್ತಿಯಾಗಿ ಭರ್ತೃಹರಿಯೇ ರಚಿಸಿದ್ದಾನೆಂದು ವ್ಯಾಖ್ಯಾನಕಾರರಿಂದ ಹಿಡಿದು ಸರ್ವರೂ ಒಪ್ಪಿಕೊಂಡಿದ್ದಾರೆ. ಪುಣ್ಯರಾಜನೂ ಸಹ 'ನಮ್ಮ ಗುರುವಿನಿಂದ ತಿಳಿದುಕೊಂಡು ನಾನು ರಚಿಸಿದೆ'. 'ಗುರುಗಳು ಬರೆದ ಗ್ರಂಥವನ್ನನುಸರಿಸಿ ಅದರ ಸ್ಪಷ್ಟತೆಗಾಗಿ ಈ ಆಗಮ ಸಂಗ್ರಹವನ್ನು ನಾನು ರಚಿಸಿದೆ' ಎಂದು ತಿರುಚಿ ಅರ್ಥಮಾಡಿದ್ದಾನೆ. ಅಥವಾ 'ಇದು ನನ್ನ ಗುರುವಿನ ರಚನೆಯೇ ನನ್ನದೇನಿದೆ? ಅವರಿಂದ ಕಲಿತದ್ದನ್ನು ಬರೆದಿದ್ದೇನೆ' ಎಂದು ಭರ್ತೃಹರಿಯ ವಿನಯಪ್ರದರ್ಶನವಿರಬಹುದು. ಶಬ್ದತತ್ತ್ವವನ್ನು ಕ್ರಮಬದ್ಧವಾಗಿ ಕ್ರೋಡೀಕರಿಸಿ ವ್ಯವಸ್ಥೆಗೊಳಿಸಿರುವ ದಾರ್ಶನಿಕ ಗ್ರಂಥವೆಂದರೆ ನಮಗೆ ಭರ್ತೃಹರಿಯ ವಾಕ್ಯಪದೀಯ ಒಂದೇ. ಅದನ್ನನುಸರಿಸಿ ಮಂಡನಮಿಶ್ರನ ಸ್ಫೋಟಸಿದ್ಧಿ, ಕೊಂಡಭಟ್ಟನ ವೈಯಾಕರಣ ಭೂಷಣಸಾರ, ನಾಗೇಶಭಟ್ಟನ ಲಘುಮಂಜೂಷಾ ಮೊದಲಾದ ಗ್ರಂಥಗಳು ಬಂದವು.

## ಭರ್ತೃಹರಿ

ಪಾಣಿನೀಯ ಸಂಪ್ರದಾಯದಲ್ಲಿ ಭಾಷ್ಯಕಾರ ಪತಂಜಲಿಗೆ ಸರ್ವೋನ್ನತವಾದ ಗೌರವ ಸಲ್ಲುತ್ತದೆ. ಅನಂತರ ಈ ಗೌರವ ಸಲ್ಲುವುದು ವಾಕ್ಯಪದೀಯಕಾರನಾದ ಭರ್ತೃಹರಿಗೆ. ಈತನನ್ನು 'ಭಗವಾನ್ ಭರ್ತೃಹರಿಃ' ಎಂದು ವೈಯಾಕರಣರು ಅಲ್ಲಲ್ಲಿ ಉಲ್ಲೇಖಿಸಿದ್ದಾರೆ. ಹರಿ ಎಂದು ಈತನ ಸಂಕ್ಷಿಪ್ತ ನಾಮ. ಭರ್ತೃ ಎಂಬುದು ಗೌರವಕ್ಕಾಗಿ ಸೇರಿಸಿದ ಶಬ್ದವಿರಬೇಕು. ಭರ್ತೃಪ್ರಪಂಚ, ಭರ್ತೃಮೇಂಠ ಮೊದಲಾದ ಹೆಸರುಗಳಲ್ಲಿ ಈ ಶಬ್ದದ ಉಪಾಧಿ ಇದೆ. ಈ ಬಗೆಯ ಹೆಸರು ಕಾಶ್ಮೀರದಲ್ಲಿ ಪ್ರಸಿದ್ಧವಾಗಿತ್ತು. ಚಂದ್ರಾಚಾರ್ಯ, ವಸುರಾತರು ಕಾಶ್ಮೀರ ದೇಶದವರು. ವಸುರಾತನ ಶಿಷ್ಯನಾದ ಭರ್ತೃಹರಿಯೂ ಕಾಶ್ಮೀರ ದೇಶದವನಾಗಿರಬೇಕು. ದಕ್ಷಿಣ ದೇಶದಲ್ಲಿ ರೂಢಿಯಲ್ಲಿರುವ ಭಟ್ಟ ಶಬ್ದವು ಭರ್ತೃ ಶಬ್ದದಿಂದ ಜನ್ಯವಾಗಿರಬಹುದು.

ಈತನ ಕಾಲದ ವಿಷಯವಾಗಿ ಭಿನ್ನಾಭಿಪ್ರಾಯಗಳಿವೆ. ಕ್ರಿ.ಶ. ೭ ನೆಯ ಶತಕದ ಕಡೆಯಲ್ಲಿ ಭಾರತಕ್ಕೆ ಬಂದಿದ್ದ ಚೀನಯಾತ್ರಿಕ ಇತ್ಸಿಂಗನ ಪ್ರಕಾರ ಭರ್ತೃಹರಿಯು ಕ್ರಿ.ಶ. ೬೫೦ ರಲ್ಲಿ ಮೃತನಾದನೆಂದು ಗೊತ್ತಾಗುತ್ತದೆ. ಅಲ್ಲದೆ ಭರ್ತೃಹರಿಯು ಬೌದ್ಧಮತಾವಲಂಬಿಯಾದನೆಂದೂ ಏಳು ಸಲ ಸಂನ್ಯಾಸಿಯಾಗಿ ಮತ್ತೆ ಮತ್ತೆ ಗೃಹಸ್ಥನಾಗುತ್ತಿದ್ದನೆಂದೂ ಇತ್ಸಿಂಗನು ಬರೆಯುತ್ತಾನೆ. ಈ ಸಂದರ್ಭ ದಲ್ಲಿ ಪರಿಶೀಲನೀಯವಾದ ಅಂಶಗಳು ಇವು –

೧. ಕಾಶಿಕಾಕಾರನಾದ ಜಯಾದಿತ್ಯನು ಕ್ರಿ.ಶ. ೬೬೦ ರಲ್ಲಿ ಮೃತನಾದನೆಂದು ಇತ್ಸಿಂಗನು ಹೇಳಿದ್ದಾನೆ. ಜಯಾದಿತ್ಯನು ಕಾಶಿಕೆಯನ್ನು ರಚಿಸಿದ ಕಾಲ ಕ್ರಿ.ಶ. ೬೫೦ ಇರಬಹುದು. ಅಷ್ಟಾಧ್ಯಾಯಿಯ ೪–೩–೮೮ ನೆಯ ಸೂತ್ರದ ಕಾಶಿಕೆಯಲ್ಲಿ ಭರ್ತೃಹರಿಯ ವಾಕ್ಯಪದೀಯದ ಉಲ್ಲೇಖವಿದೆ. ಅಷ್ಟರಲ್ಲಿಯೇ ಸಮಕಾಲಿಕನಾದ ಭರ್ತೃಹರಿಯ ಗ್ರಂಥವು ಪ್ರಾಮಾಣಿಕವೆಂದು ವಿದ್ವಜ್ಜನ ಪರಿಗೃಹೀತವಾಗಿತ್ತೆಂದು ನಂಬುವುದು ಕಷ್ಟ. ಸಮಕಾಲಿಕ ಗ್ರಂಥವನ್ನು ಪ್ರಮಾಣವಾಗಿ ಉದಾಹರಿಸುವುದೂ ಅಸಂಭವ.

೨. ವಾಗ್ಭಟನ ಸಾಕ್ಷಾತ್ ಶಿಷ್ಯನಾದ ಇಂದು ಎಂಬ ವೈದ್ಯನು ಅಷ್ಟಾಂಗ ಸಂಗ್ರಹದ ಉತ್ತರ ತಂತ್ರದ (ಅಧ್ಯಾ. ೫೦) ವ್ಯಾಖ್ಯಾನದಲ್ಲಿ 'ಸಂಯೋಗೋ ವಿಪ್ರಯೋಗಶ್ಚ .......' ಇತ್ಯಾದಿ ಶ್ಲೋಕದ್ವಯವನ್ನು ವಾಕ್ಯಪದೀಯದಿಂದ ಉದ್ಧರಿಸಿ ಇದು ಹರಿಯದೆಂದು ಸ್ಪಷ್ಟವಾಗಿ ಬರೆದಿದ್ದಾನೆ. ವಾಗ್ಭಟನ ಕಾಲ ಕ್ರಿ.ಶ. ೪ನೇ ಶತಕದ ಉತ್ತರಾರ್ಧ.

ಇವೇ ಮೊದಲಾದ ಪ್ರಮಾಣಗಳಿಂದ ಭರ್ತೃಹರಿಯು ಕ್ರಿ.ಶ. ಮೂರನೆಯ ಶತಮಾನದಲ್ಲಿದ್ದಿರಬೇಕೆಂದು ಕೆಲವು ವಿಮರ್ಶಕರು ಅಭಿಪ್ರಾಯಪಡುತ್ತಾರೆ. ಕ್ರಿ.ಶ. ೫ನೇ ಶತಮಾನದಲ್ಲಿದ್ದ ದಿಙ್ನಾಗನು ವಾಕ್ಯಪದೀಯವನ್ನು ಉದಾಹರಿಸಿರುವುದ ರಿಂದ ಅವನಿಗಿಂತ ಭರ್ತೃಹರಿ ಪ್ರಾಚೀನನೆಂಬುದರಲ್ಲಿ ಸಂದೇಹವಿಲ್ಲ. ವಾಗ್ಭಟ ಶಿಷ್ಯನಾದ ಇಂದುವಿನ ಸಾಕ್ಷ್ಯಬಲದಿಂದ ಭರ್ತೃಹರಿಯು ಕ್ರಿ.ಶ. ೩೫೦ ಕ್ಕಿಂತ ಹಿಂದಿನವನೆಂದು ನಿಃಸಂದೇಹವಾಗಿ ಹೇಳಬಹುದು.

ಹೀಗಿರುವಾಗ ಚೀನಯಾತ್ರಿಕ ಇತ್ಸಿಂಗನ ಮಾತನ್ನು ನಂಬುವುದು ಹೇಗೆ? ಕ್ರಿ.ಶ. ೬ನೆಯ ಶತಮಾನದಲ್ಲಿ ಮಾಳವ ದೇಶದ ವಲಭಿಯಲ್ಲಿ ಶ್ರೀಧರಸೇನನೆಂಬ ರಾಜನಿದ್ದನು. ಅವನ ಆಸ್ಥಾನದಲ್ಲಿ ಭಟ್ಟಿ ಎಂಬ ವೈಯಾಕರಣನಿದ್ದನೆಂದು ಇತಿಹಾಸದಿಂದ ತಿಳಿದು ಬರುತ್ತದೆ. ಭಟ್ಟಿಯು ರಾವಣವಧವೆಂಬ ಸಂಸ್ಕೃತ ಕಾವ್ಯವನ್ನು ಬರೆದಿದ್ದಾನೆ. ಅದು ಭಟ್ಟಿಕಾವ್ಯವೆಂದೇ ಪ್ರಸಿದ್ಧವಾಗಿದೆ. ವ್ಯಾಕರಣ

ಶಾಸ್ತ್ರಕ್ಕೆ ಉದಾಹರಣೆಗಳನ್ನೊಳಗೊಂಡ ಶಾಸ್ತ್ರಕಾವ್ಯವಿದು. ಈ ಭಟ್ಟಿಗೆ ಭರ್ತೃಹರಿಯೆಂದು ಮೂಲನಾಮವಿದ್ದು 'ಭಟ್ಟಿ' ಎಂದು ಲೋಕ ವ್ಯವಹಾರವಿದ್ದಿರಬಹುದು. ಇತ್ಸಿಂಗನು ಹೇಳಿದ ಭರ್ತೃಹರಿ ಈತನಿರಬಹುದೆಂದು ಕೆಲವರು ಊಹಿಸುತ್ತಾರೆ. ವಾಕ್ಯಪದೀಯಕಾರನಾದ ಭರ್ತೃಹರಿ ಇವನಲ್ಲ.

ಭರ್ತೃಹರಿಯು ಬೌದ್ಧನೆಂಬುದೂ ಮತ್ತೆ ಮತ್ತೆ ಸಂನ್ಯಾಸವನ್ನು ಬಿಟ್ಟು ಗೃಹಸ್ಥನಾಗುತ್ತಿದ್ದನೆಂಬುದೂ ಸರ್ವಥಾ ವಿಶ್ವಾಸಾರ್ಹವಲ್ಲ. ಆತನು ಪರಮ ವೇದ ಭಕ್ತನಾದವನು. ಬ್ರಹ್ಮಕಾಂಡವನ್ನೋದಿದರೆ ಭರ್ತೃಹರಿಗೆ ವೇದದಲ್ಲಿ ಎಷ್ಟು ದೃಢವಾದ ನಿಷ್ಠೆ ಇತ್ತೆಂದು ಗೊತ್ತಾಗುತ್ತದೆ. ಜೈನವಿದ್ವಾಂಸನಾದ ವರ್ಧಮಾನನು ಗಣರತ್ನಮಹೋದಧಿಯಲ್ಲಿ ಭರ್ತೃಹರಿಯನ್ನು 'ವೇದವಿದಾಮಲಂಕಾರಭೂತಃ' ಎಂದು ಕರೆದಿದ್ದಾನೆ. ವೈದಿಕರಾದ ಉತ್ಪಲದೇವ, ಅಭಿನವಗುಪ್ತ, ಭಟ್ಟೋಜಿದೀಕ್ಷಿತ ಮೊದಲಾದವರು ಭರ್ತೃಹರಿಯನ್ನು 'ಭಗವಾನ್' ಎಂದು ಗೌರವಾದರಗಳಿಂದ ಉಲ್ಲೇಖಿಸಿದ್ದಾರೆ. ಬ್ರಹ್ಮಕಾಂಡದಲ್ಲಿ ಶಬ್ದಾದ್ವೈತವಾದವೂ ವಿವರ್ತವಾದವೂ ಸ್ಪಷ್ಟ ರೂಪವಾಗಿ ನಿರೂಪಿತವಾಗಿವೆ. ಈ ಮಹಾಪುರುಷನು ಚಂಚಲ ಸ್ವಭಾವದವನಾಗಿ ಸಂನ್ಯಾಸವನ್ನು ಬಿಟ್ಟು ಗೃಹಸ್ಥನಾಗಿದ್ದರೆ, ಇವನಲ್ಲಿ ಯಾವ ವೈದಿಕನೂ ಪ್ರಾಮಾಣ್ಯ ಬುದ್ಧಿಯನ್ನೇ ಇರಿಸುತ್ತಿರಲಿಲ್ಲ. ಇತ್ಸಿಂಗನ ಮಾತು ಶ್ರದ್ಧೇಯವಲ್ಲ.

## ಈತನ ಗ್ರಂಥಗಳು

೧. ವಾಕ್ಯಪದೀಯ (ಮೂರು ಕಾಂಡಗಳು)

೨. ವಾಕ್ಯಪದೀಯದ ೧–೨ ಕಾಂಡಗಳಿಗೆ ಸ್ವೋಪಜ್ಞಟೀಕಾ

೩. ಮಹಾಭಾಷ್ಯದೀಪಿಕಾ

ಇವುಗಳಲ್ಲಿ ಮಹಾಭಾಷ್ಯದೀಪಿಕೆಯು ಅಷ್ಟಾಧ್ಯಾಯಿಯ ಮೊದಲನೆಯ ತ್ರಿಪಾದೀಭಾಷ್ಯಕ್ಕೆ ವ್ಯಾಖ್ಯಾನವೆಂದು ತಿಳಿದು ಬರುತ್ತದೆ. ಪೂರ್ತಿಯಾಗಿ ಮಹಾಭಾಷ್ಯಕ್ಕೆ ಈತನು ವ್ಯಾಖ್ಯಾನವನ್ನು ಬರೆಯಲಿಲ್ಲವೆಂದು ಹೇಳಬಹುದು. ವರ್ಧಮಾನನು ಗಣರತ್ನಮಹೋದಧಿಯಲ್ಲಿ ಭರ್ತೃಹರಿಯನ್ನು 'ಮಹಾಭಾಷ್ಯ ತ್ರಿಪಾದ್ಯಾ ವ್ಯಾಖ್ಯಾತಾ' ಎಂದೇ ಕರೆದಿದ್ದಾನೆ. ಇದರ ಒಂದು ತ್ರುಟಿತ ಹಸ್ತ ಪ್ರತಿಯು ಜರ್ಮನ್ ರಾಯಲ್ ಲೈಬ್ರರಿಯಲ್ಲಿದೆಯಂತೆ. ಅದು ಪ್ರಕಟವಾಗಿಲ್ಲ. ಈ ವ್ಯಾಖ್ಯಾನ ಗ್ರಂಥವನ್ನು ಕೈಯಟನು ಅಭ್ಯಾಸಮಾಡಿದ್ದನು. ಆತನು ಮಹಾಭಾಷ್ಯಕ್ಕೆ ವ್ಯಾಖ್ಯಾನ ಮಾಡಲು ತನಗೆ ಹರಿಯಿಂದ ಬಹಳ ಉಪಕಾರವಾಯಿತೆಂದು ಹೀಗೆ ಹೇಳುತ್ತಾನೆ :–

ತಥಾಪಿ ಹರಿಬದ್ಧೇನ ಸಾರೇಣ ಗ್ರಂಥಸೇತುನಾ ।
ಕ್ರಮಮಾಣಃ ಶನೈಃ ಪಾರಂ ತಸ್ಯ ಪ್ರಾಪ್ತಾಸ್ಮಿ ಪಂಗುವತ್ ॥

–ಭಾಷ್ಯಪ್ರದೀಪದ ಆದಿಯಲ್ಲಿ

ನೀತಿಶತಕ, ಶೃಂಗಾರಶತಕ, ವೈರಾಗ್ಯಶತಕಗಳನ್ನೊಳಗೊಂಡ ಸುಭಾಷಿತ ತ್ರಿಶತಿಯನ್ನು ಬಹುಶಃ ವಾಕ್ಯಪದೀಯಕಾರನಾದ ಭರ್ತೃಹರಿಯು ಬರೆದದ್ದಲ್ಲ. ವಿಟರ ವರ್ತನೆಯನ್ನು ಚಿತ್ರಿಸುವ ವಿಟವೃತ್ತವೆಂಬ ಪದ್ಯಕಾವ್ಯವನ್ನು ಇನ್ನೊಬ್ಬ ಭರ್ತೃಹರಿ ಬರೆದಿದ್ದಾನೆ. ಆತನೇ ಸುಭಾಷಿತ ತ್ರಿಶತಿಯನ್ನು ಬರೆದಿರಬಹುದು.

## ವಾಕ್ಯಪದೀಯ

ಈ ಗ್ರಂಥದಲ್ಲಿ ಬಂದಿರುವ ವಿಚಾರಗಳನ್ನು ಭರ್ತೃಹರಿಯ ಗುರುವಾದ ಆಚಾರ್ಯ ವಸುರಾತನು ಸಂಗ್ರಹಿಸಿದ್ದನೆಂದು ಭರ್ತೃಹರಿಯೇ ಹೇಳಿದ್ದಾನೆ. ಈ ಪ್ರಸ್ತಾವನೆಯ ಆದಿಯಲ್ಲಿ ಅದಕ್ಕೆ ಸಂಬಂಧಿಸಿದ ಶ್ಲೋಕಗಳನ್ನು ಬರೆಯಲಾಗಿದೆ. ಈ ವಾಕ್ಯಪದೀಯವು ಅತ್ಯಂತ ಪ್ರಾಮಾಣಿಕವಾದ ಗ್ರಂಥವೆಂದು ವಿದ್ವಲ್ಲೋಕದಲ್ಲಿ ಪ್ರಸಿದ್ಧಿಯನ್ನು ಗಳಿಸಿತು. ಇದು ವ್ಯಾಕರಣಶಾಸ್ತ್ರಕ್ಕೆ ಸಂಬಂಧಿಸಿದ ದಾರ್ಶನಿಕ ಗ್ರಂಥವಾದ್ದರಿಂದ ವೈಯಾಕರಣರಾದ ಜಿನೇಂದ್ರಬುದ್ಧಿ, ಕೈಯಟ, ಭಟ್ಟೋಜಿ ದೀಕ್ಷಿತ, ನಾಗೇಶಭಟ್ಟ ಮೊದಲಾದವರು ಇದರ ಶ್ಲೋಕಗಳನ್ನು ಪ್ರಮಾಣವಾಗಿ ಉದಾಹರಿಸಿರುವುದು ಸಹಜವೇ. ಇತರ ದರ್ಶನಶಾಸ್ತ್ರಕಾರರೂ ತಮ್ಮ ಗ್ರಂಥಗಳಲ್ಲಿ ವಾಕ್ಯಪದೀಯವನ್ನು ಉಲ್ಲೇಖಿಸುತ್ತ ಬಂದಿರುವುದು ವಿಶೇಷವೇ ಸರಿ. ಮಹಾಮಾಹೇಶ್ವರನಾದ ಅಭಿನವಗುಪ್ತನು ತಂತ್ರಾಲೋಕವೇ ಮೊದಲಾದ ಈಶ್ವರ ಪ್ರತ್ಯಭಿಜ್ಞಾ ಗ್ರಂಥಗಳಲ್ಲಿ ಮಾತ್ರವಲ್ಲದೆ ಲೋಚನ, ಅಭಿನವಭಾರತೀ ಮೊದಲಾದ ಸಾಹಿತ್ಯ ಗ್ರಂಥಗಳಲ್ಲಿಯೂ ಭರ್ತೃಹರಿಯ ವಾಕ್ಯಪದೀಯವನ್ನು ಪದೇ ಪದೇ ಉದಾಹರಿಸುತ್ತಾನೆ. ಜಯಂತಭಟ್ಟ, ಮಂಡನಮಿಶ್ರ, ಭೋಜರಾಜ, ಜೈನಾಚಾರ್ಯನಾದ ವಾದಿದೇವಸೂರಿ, ಬೌದ್ಧಾಚಾರ್ಯನಾದ ಶಾಂತರಕ್ಷಿತ, ಆಚಾರ್ಯ ಕಮಲಶೀಲ – ಮೊದಲಾದ ಮಹಾವಿದ್ವಾಂಸರು ತಮ್ಮ ವಾದದ ಸಮರ್ಥನೆಗಾಗಿ ವಾಕ್ಯಪದೀಯವನ್ನು ಉಲ್ಲೇಖಿಸುತ್ತಾರೆ.

ವಾಕ್ಯಪದೀಯದಲ್ಲಿ ಬ್ರಹ್ಮಕಾಂಡ, ವಾಕ್ಯಕಾಂಡ, ಪದಕಾಂಡ–ಎಂಬ ಮೂರು ಕಾಂಡಗಳಿವೆ. ಇವುಗಳಲ್ಲಿ ಬ್ರಹ್ಮಕಾಂಡವು ಭೂಮಿಕಾ ರೂಪದಲ್ಲಿದೆ. ಇದರ ವಿಚಾರ ಮುಂದೆ ಬರುತ್ತದೆ. ವಾಕ್ಯಕಾಂಡ ಪದಕಾಂಡಗಳಲ್ಲಿ ವಾಕ್ಯಪದಗಳಿಗೆ ಸಂಬಂಧಿಸಿದ ಸಮಸ್ತ ವಿಚಾರಗಳೂ ವಿಮರ್ಶೆಗೊಳಗಾಗುತ್ತವೆ. ಎಲ್ಲವೂ ಅನುಷ್ಟುಪ್ ವೃತ್ತದ

ಕಾರಿಕೆಗಳಲ್ಲಿವೆ. ಮೊದಲನೆಯ ಎರಡು ಕಾಂಡಗಳಿಗೆ ಹರಿಯೇ ಬರೆದ ಸ್ವೋಪಜ್ಞವೃತ್ತಿ ಇದೆ. ಈ ವೃತ್ತಿ ಮತ್ತು ಮೂರು ಕಾಂಡಗಳಿಗೆ ವಾಕ್ಯಪದೀಯವೆಂಬ ಹೆಸರು ಬಂದಿದೆಯೆಂದು ಶ್ರೀ ಚಾರುದೇವಶಾಸ್ತ್ರಿಗಳು ಸಪ್ರಮಾಣವಾಗಿ ಪ್ರತಿಪಾದಿಸಿದ್ದಾರೆ. ವಾಕ್ಯ – ಪದಗಳಿಗೆ ಸಂಬಂಧಿಸಿದ ಗ್ರಂಥವೇ ವಾಕ್ಯಪದೀಯ. ಮೂರು ಕಾಂಡಗಳಲ್ಲಿರುವ ಶ್ಲೋಕಗಳ ಸಂಖ್ಯೆ ಈ ಪ್ರಕಾರ –

| | | |
|---|---|---|
| ಬ್ರಹ್ಮಕಾಂಡ | – | ೧೫೫ |
| ವಾಕ್ಯಕಾಂಡ | – | ೪೮೫ |
| ಪದಕಾಂಡ | – | ೧೩೨೫ |
| ಒಟ್ಟು | – | ೧೯೬೫ |

ಇವುಗಳಲ್ಲಿ ಮೂರನೆಯ ಪದಕಾಂಡ ದೊಡ್ಡದು. ಭರ್ತೃಹರಿಯು ತಾನೇ ಬರೆದ ಪ್ರಥಮ ಕಾಂಡದ್ವಯದ ವೃತ್ತಿಯಲ್ಲಿ ತನಗಿಂತ ಪ್ರಾಚೀನರು ಹೇಳಿದ ಕೆಲವು ಶ್ಲೋಕಗಳನ್ನು ಉದಾಹರಿಸಿದ್ದಾನೆ. ಅವನ್ನು ಕೆಲವು ಪ್ರತಿಗಳಲ್ಲಿ ಮೂಲ ಶ್ಲೋಕಗಳಲ್ಲಿಯೇ ಸೇರಿಸಿದ್ದಾರೆ. ಪದಕಾಂಡದ ಹದಿನಾಲ್ಕು ಸಮುದ್ದೇಶಗಳಲ್ಲಿ ಎರಡು ಸಮುದ್ದೇಶಗಳು ದೊರಕಿಲ್ಲ. ಅಂತೂ ಸುಮಾರು ೨೦೦೦ ಶ್ಲೋಕಗಳಿರುವ ಗ್ರಂಥ ವಾಕ್ಯಪದೀಯ.

## ೧. ಪ್ರಥಮಕಾಂಡ

ಇದಕ್ಕೆ ಬ್ರಹ್ಮಕಾಂಡವೆಂದೂ ಆಗಮಕಾಂಡವೆಂದೂ ಹೆಸರಿದೆ. ಮೊದಲನೆಯ ಮಂಗಳಶ್ಲೋಕದಲ್ಲಿ 'ಅನಾದಿನಿಧನಂ ಬ್ರಹ್ಮ ಶಬ್ದತತ್ತ್ವಂ ಯದಕ್ಷರಂ' ಎಂಬುದಾಗಿ ಶಬ್ದತತ್ತ್ವವೇ ಬ್ರಹ್ಮವೆಂದೂ ಅದೇ ಜಗತ್ತಿಗೆ ಮೂಲಕಾರಣವಾದ ಪರಮತತ್ತ್ವವೆಂದೂ ಹೇಳಿ, ವಿಷಯವನ್ನು ವಿಸ್ತಾರವಾಗಿ ನಿರೂಪಿಸಿರುವುದರಿಂದ ಬ್ರಹ್ಮಕಾಂಡವೆಂಬ ಹೆಸರು ಬಂದಿದೆ. ಆಗಮವೆಂದರೆ ವೇದ ಮತ್ತು ವೇದ ಮೂಲಕವಾದ ಸ್ಮೃತಿ. ವೇದವು ನಿತ್ಯವೂ ಪ್ರಮಾಣವೂ ಆದದ್ದು. ತನ್ಮೂಲಕವಾದ ಸ್ಮೃತಿಯೂ ಸಹ ಪ್ರಮಾಣಭೂತವೇ. ಇವೆರಡೂ ಶಬ್ದಬ್ರಹ್ಮವನ್ನು ಪ್ರತಿಪಾದಿಸುತ್ತವೆ ಎಂದು–ಆಗಮದ ನಿತ್ಯತ್ವವೇ ಮೊದಲಾದ ವೈಶಿಷ್ಟ್ಯಗಳನ್ನು ಇಲ್ಲಿ ಪ್ರತಿಪಾದಿಸಿರುವುದರಿಂದ ಆಗಮಕಾಂಡವೆಂದು ಪ್ರಸಿದ್ಧವಾಯಿತು. ವಾಕ್ಯಪದೀಯಗ್ರಂಥಕ್ಕೆ ಈ ಕಾಂಡವು ವಿಸ್ತೃತವಾದ ಭೂಮಿಕೆಯಾಗಿದೆ. ವ್ಯಾಕರಣಕ್ಕೆ ದರ್ಶನ ಸ್ವರೂಪವನ್ನಿತ್ತ ಪ್ರಾಚೀನ ಗ್ರಂಥಗಳಿದ್ದವೆಂದೂ ಅವು ಕಾಲಗರ್ಭದಲ್ಲಿ

ಲುಪ್ತವಾದವೆಂದೂ ನಾವು ಊಹಿಸಬೇಕಾಗಿದೆ. ವ್ಯಾಡಿಯ ಲಕ್ಷಶ್ಲೋಕಾತ್ಮಕವಾದ 'ಸಂಗ್ರಹ'ದಲ್ಲಿ ವಿಸ್ತೃತವಾಗಿದ್ದಿರಬಹುದು. ಮಹಾಭಾಷ್ಯದಲ್ಲಿ ಬೀಜರೂಪವಾದ ಕೆಲವು ಅಂಶಗಳು ಮಾತ್ರ ನಮಗೆ ಸಿಗುತ್ತವೆ. ಚಂದ್ರಾಚಾರ್ಯ, ವಸುರಾತ – ಮೊದಲಾದ ಕೆಲವು ಆಚಾರ್ಯರು ಆ ಸಂಪ್ರದಾಯವನ್ನು ಬಲ್ಲವರಾಗಿದ್ದಿರ ಬೇಕೆಂದು ಅನುಮಾನಿಸಬೇಕಾಗುತ್ತದೆ. ಇಲ್ಲದಿದ್ದರೆ ಭರ್ತೃಹರಿಯ ವಾಕ್ಯಪದೀಯಕ್ಕೆ ಮೂಲವಾದ ತಳಹದಿ ಇಲ್ಲದೆ ಹೋಗುತ್ತದೆ. ಮಹಾಭಾಷ್ಯದಲ್ಲಿ ಈ ದರ್ಶನಕ್ಕೆ ಸ್ಮಾರಕವಾದ ಕೆಲವೇ ವಿಚಾರಗಳು ದೊರೆಯುತ್ತವೆ.

ಪಶ್ಯಂತೀ, ಮಧ್ಯಮಾ, ವೈಖರೀ – ಎಂಬ ಮೂರು ಶಬ್ದಭೇದಗಳು ವ್ಯಾಕರಣಶಾಸ್ತ್ರಕ್ಕೆ ವಿಷಯಗಳೆಂದೂ ಈ ಶಬ್ದದ ನಿಜತತ್ತ್ವವನ್ನರಿಯುವುದು ಮೋಕ್ಷಮಾರ್ಗವೆಂದೂ ಇಲ್ಲಿ ಪ್ರತಿಪಾದಿಸಲಾಗಿದೆ.

## ೨. ದ್ವಿತೀಯಕಾಂಡ

ಇದಕ್ಕೆ ವಾಕ್ಯಕಾಂಡವೆಂದು ಹೆಸರಿದೆ. ಬ್ರಹ್ಮಕಾಂಡಕ್ಕಿಂತ ಇದು ವಿಸ್ತೃತ ವಾದದ್ದು. ಶಾಸ್ತ್ರೀಯವಾದ ಪದ, ವಾಕ್ಯಗಳ ವಿವೇಚನೆ ಇಲ್ಲಿಂದ ಆರಂಭವಾಗು ತ್ತದೆ. ಈ ಕಾಂಡದಲ್ಲಿ ಪ್ರತಿಪಾದಿತವಾದ ಪ್ರಧಾನ ವಿಚಾರಗಳನ್ನು ಹೀಗೆ ಸಂಗ್ರಹಿಸ ಬಹುದು–ವಾಕ್ಯಸ್ವರೂಪದಲ್ಲಿ ಮತಭೇದಗಳು, ವಾಕ್ಯಸ್ಫೋಟ, ಅಭಿಹಿತಾನ್ವಯವಾದ ಮತ್ತು ಅನ್ವಿತಾಭಿಧಾನ ವಾದಗಳ ಪರಿಶೀಲನೆ, ಪ್ರತಿಭೆಯೇ ವಾಕ್ಯಾರ್ಥ, ಕಾಲವಿಭಾಗದಂತೆ ಅಖಂಡವಾದ ವಾಕ್ಯದ ವಿಭಾಗ ಕಾಲ್ಪನಿಕ, ವಾಕ್ಯದಿಂದ ಅರ್ಥ ಪ್ರತೀತಿಯೇ ಹೊರತು ಪದಗಳಿಂದಲ್ಲ, ಪದವಿಭಾಗ ವಾದಿಗಳ ಆಶಯ, ಶಬ್ದದಿಂದ ವಾಚ್ಯವಾದ ಅರ್ಥ, ಶಬ್ದವೂ ಶಬ್ದಾರ್ಥವಾಗಬಹುದು, ಲೋಕದಲ್ಲಿ ಶಬ್ದದ ಅರ್ಥಕ್ಕೆ ಪ್ರಾಧಾನ್ಯ, ಸಾಂಖ್ಯ ಜೈನ ಬೌದ್ಧಾದಿ ದರ್ಶನಗಳಲ್ಲಿ ಶಬ್ದಸ್ವರೂಪ, ವಾಕ್ಯಾರ್ಥವಾದ ಪ್ರತಿಭೆಯ ವಿಭಾಗ, ಪ್ರತ್ಯಕ್ಷಕ್ಕಿಂತಲೂ ಶಬ್ದದಿಂದಲೇ ವಿಶೇಷವಾಗಿ ಅರ್ಥಪರಿಚ್ಛೇದ, ನಾಮಪದಗಳಲ್ಲಿ ಪ್ರಕೃತಿ ಪ್ರತ್ಯಯಗಳ ಅರ್ಥ, ವಾಚಕತ್ವದ್ಯೋತಕತ್ವ ವಿಚಾರ, ಸ್ವಾರ್ಥಿಕ ಪ್ರತ್ಯಯಗಳ ವಿಶ್ಲೇಷಣೆ, ನಿಪಾತಗಳ ಅರ್ಥ, ಸಮಾಸಶಕ್ತಿವಿಚಾರ, ವ್ಯಾಕರಣವು ಸರ್ವಶಾಸ್ತ್ರೋಪಕಾರಿಯಾದ್ದರಿಂದ ನಾನಾಪಕ್ಷಗಳ ಆಶ್ರಯಣ, ಶಬ್ದಾರ್ಥದಲ್ಲಿ ಗೌಣ ಮುಖ್ಯ ವಿಭಾಗ, ಶಬ್ದಾರ್ಥವು ಬೌದ್ಧವೆ ಬಾಹ್ಯವೆ – ಎಂಬುದರ ವಿಮರ್ಶೆ, ಅನೇಕಾರ್ಥವಿರುವ ಶಬ್ದಕ್ಕೆ ಅರ್ಥನಿರ್ಣಯೋಪಾಯ, ಉತ್ಸರ್ಗ – ಅಪವಾದ ಸ್ಥಳಗಳಲ್ಲಿ ವಾಕ್ಯಾರ್ಥ ನಿರೂಪಣೆ, ಪ್ರವೃತ್ತಿ ನಿಮಿತ್ತಭೇದದಿಂದ ಶಬ್ದಭೇದ, ಸಂಜ್ಞಾಶಬ್ದಗಳಲ್ಲಿ ನಾಲ್ಕೂ ಭೇದಗಳಿವೆ, ಸಮುದಾಯೇ ವಾಕ್ಯಪರಿಸಮಾಪ್ತಿಃ, ಅಖಂಡವಾಕ್ಯವೇ ವಾಚಕ,

ಲೋಕದಲ್ಲಿ ಸರ್ವವೂ ವಾಕ್ಯಾರ್ಥದಲ್ಲಿ ಪರ್ಯವಸಾನವೇ ಹೊರತು ಕೇವಲ ಶಬ್ದಾರ್ಥವೆಂಬುದೇ ಇಲ್ಲ, ವಾಕ್ಯದಲ್ಲಿ ಕ್ರಿಯೆಗೆ ಪ್ರಾಧಾನ್ಯ, ವಾಕ್ಯಾರ್ಥವು ಬೌದ್ಧವೇ ಸರಿ, ಕ್ರಿಯಾಲಕ್ಷಣ, ಕ್ರಿಯೆಯ ಅಂತರ್ಭೇದಗಳು ಕ್ರಿಯಾಪದದಿಂದ ತೋರುವು–ದಿಲ್ಲ, ಕ್ರಿಯಾ ಸ್ಥಳದಲ್ಲಿ ಜಾತಿ ವ್ಯಕ್ತಿ ವಿಚಾರ ಇತ್ಯಾದಿ ವಿಪುಲ ವಿಷಯಗಳು ಇಲ್ಲಿ ಬಂದಿವೆ. ದ್ವಿತೀಯ ಕಾಂಡದ ಕಡೆಯಲ್ಲಿ ಮಹಾಭಾಷ್ಯವು ಅಸ್ತಂಗತವಾಗಿ ಪುನಃ ಪ್ರಾಪ್ತವಾದ ಸಂಗತಿ ಬಂದಿದೆ. ಈ ಕಾಂಡದಲ್ಲಿ ಕೆಲವು ಪದಾರ್ಥಗಳನ್ನು ಸಂಗ್ರಹವಾಗಿ ತಿಳಿಸಲಾಗಿದೆಯೆಂದೂ ಮೂರನೆಯ ಕಾಂಡದಲ್ಲಿ ಇವುಗಳ ಪೂರ್ಣ ವಿಚಾರ ನಡೆಯುವುದೆಂದೂ ಗ್ರಂಥಕಾರನು ತಿಳಿಸುತ್ತಾನೆ.

ವರ್ತ್ಮನಾಮತ್ರ ಕೇಷಾಂಚಿತ್ ವಸ್ತು ಮಾತ್ರಮುದಾಹೃತಂ ।
ಕಾಂಡೇ ತೃತೀಯೇ ನ್ಯಕ್ಷೇಣ ಭವಿಷ್ಯತಿ ವಿಚಾರಣಾ ॥

ಈ ಸಂದರ್ಭದಲ್ಲಿ ಭರ್ತೃಹರಿಯು ಹೇಳುವ ಎರಡು ಶ್ಲೋಕಗಳು ಮನನೀಯವಾದವು.

೧. ಪ್ರಜ್ಞಾ ವಿವೇಕಂ ಲಭತೇ ಭಿನ್ನೈರಾಗಮದರ್ಶನೈಃ ।
ಕಿಯದ್ವಾ ಶಕ್ಯಮುನ್ನೇತುಂ ಸ್ವತರ್ಕಮನುಧಾವತಾ ॥

ಬೇರೆ ಬೇರೆ ಶಾಸ್ತ್ರಗಳನ್ನು ನೋಡುವುದರಿಂದ ಬುದ್ಧಿಯು ಹರಿತವಾಗಿ ವಿಮರ್ಶನ ಶಕ್ತಿಯನ್ನು ಪಡೆದುಕೊಳ್ಳುತ್ತದೆ. ತನ್ನ ಬುದ್ಧಿಯನ್ನೇ ತನ್ನ ತರ್ಕವನ್ನೇ ನಂಬಿಕೊಂಡವನಿಂದ ಎಷ್ಟನ್ನು ಊಹಿಸಲು ಸಾಧ್ಯ ?

೨. ತತ್ತದುತ್ಪ್ರೇಕ್ಷಮಾಣಾನಾಂ ಪುರಾಣೈರಾಗಮೈರ್ವಿನಾ ।
ಅನುಪಾಸಿತವೃದ್ಧಾನಾಂ ವಿದ್ಯಾ ನೈವ ಪ್ರಸೀದತಿ ॥

ಪ್ರಾಚೀನ ಶಾಸ್ತ್ರಗಳನ್ನು ತೊರೆದು, ಯಾರು ಸ್ವಬುದ್ಧಿಯಿಂದಲೇ ಏನೇನನ್ನೋ ಊಹಿಸುತ್ತ ಹೋಗುತ್ತಾರೋ, ಯಾರು ಜ್ಞಾನವೃದ್ಧರ ಸೇವೆಯನ್ನು ಮಾಡಿಲ್ಲವೋ ಅವರಿಗೆ ವಿದ್ಯಾದೇವತೆ ಹೆಚ್ಚು ಪ್ರಸನ್ನಳಾಗುವುದಿಲ್ಲ !

## 3. ತೃತೀಯಕಾಂಡ

ಇದಕ್ಕೆ ಪದಕಾಂಡವೆಂದು ಹೆಸರಿದೆ. ಪದದ ಅರ್ಥ, ಪದ–ಅರ್ಥಗಳ ಸಂಬಂಧ, ಕಾರಕ, ಲಿಂಗ, ಸಂಖ್ಯೆ ಮುಂತಾದ ಪದಸಂಬಂಧಿ ವಿಚಾರಗಳೆಲ್ಲವೂ ಇಲ್ಲಿ ಪ್ರಸ್ತುತವಾಗಿವೆ. ಅನೇಕ ಪದಾರ್ಥಗಳ ಸಂಕೀರ್ಣತೆ ಇರುವುದರಿಂದ ಈ ಕಾಂಡಕ್ಕೆ ಪ್ರಕೀರ್ಣಕಾಂಡವೆಂದೂ ಹೆಸರು ಬಂದಿದೆ.

ಇದರಲ್ಲಿ ಒಟ್ಟು ಹದಿನಾಲ್ಕು ಪದಾರ್ಥಗಳ ವಿಮರ್ಶೆ ಬರುತ್ತದೆ. ಒಂದೊಂದು ಪದಾರ್ಥದ ವಿಮರ್ಶೆಗೆ ಸಮುದ್ದೇಶವೆಂದು ನಾಮಕರಣ ಉಂಟು. ಇವುಗಳಲ್ಲಿ ಬಾಧಾಸಮುದ್ದೇಶ, ಲಕ್ಷಣಸಮುದ್ದೇಶ – ಇವೆರಡು ಲುಪ್ತವಾಗಿವೆಯೆಂದು ವ್ಯಾಖ್ಯಾನಕಾರನಾದ ಹೇಲಾರಾಜನು ಹೇಳಿದ್ದಾನೆ. ಉಳಿದ ಹನ್ನೆರಡು ಸಮುದ್ದೇಶಗಳು ಈಗ ದೊರೆಯುತ್ತವೆ. ಜಾತಿ, ದ್ರವ್ಯ, ಸಂಬಂಧ, ಸಾಧನ (ಕಾರಕ), ಗುಣ, ಕ್ರಿಯಾ, ಕಾಲ, ಸಂಖ್ಯಾ, ಲಿಂಗ, ಪುರುಷ, ಉಪಗ್ರಹ (ಆಖ್ಯಾತ ಪ್ರತ್ಯಯ) ಮತ್ತು ವೃತ್ತಿಯೆಂಬ ಹನ್ನೆರಡು ಸಮುದ್ದೇಶಗಳಿವೆ. ಇವುಗಳ ಹೆಸರಿನಿಂದಲೇ ಅದರಲ್ಲಿ ಬಂದ ವಿಷಯವೇನೆಂದು ತಿಳಿಯುತ್ತದೆ. ವೃತ್ತಿಸಮುದ್ದೇಶವು ಬಹಳ ವಿಸ್ತೃತವಾಗಿದೆ. ಇದರಲ್ಲಿ ಕೃದಂತ, ತದ್ಧಿತಾಂತ, ಸಮಾಸ, ಏಕಶೇಷ, ಸನಾದ್ಯಂತ ಧಾತು – ಇವುಗಳ ವಿಚಾರ ಬರುತ್ತದೆ. ಕೃದಂತವೇ ಮೊದಲಾದ ಐದು ವಿಷಯಗಳಿಗೆ ವ್ಯಾಕರಣದಲ್ಲಿ ವೃತ್ತಿಯೆಂದು ಹೆಸರಿದೆ.

ವಾಕ್ಯಪದೀಯವು ಒಂದು ವಿಸ್ಮಯಕರವಾದ ಭಾಷಾಶಾಸ್ತ್ರ. ಸಮಸ್ತ ಭಾಷೆಗಳಿಗೂ ಅನ್ವಯಿಸತಕ್ಕ ವಿಚಾರಗಳು ಇಲ್ಲಿ ವಿಪುಲವಾಗಿ ದೊರೆಯುತ್ತವೆ. ಭರ್ತೃಹರಿಯ ಭಾಷೆ ಮಾತ್ರ ಬಿಗಿಯಾದುದು. ಸಂಪ್ರದಾಯ ಪದ್ಧತಿಯಿಂದ ಕ್ರಮವಾಗಿ ವ್ಯಾಕರಣಾಧ್ಯಯನ ಮಾಡಿದ ಮಹಾವಿದ್ವಾಂಸನಿಗೆ ಮಾತ್ರ ಇದರ ಮೇಲೆ ಬೆಳಕನ್ನು ಚೆಲ್ಲಲು ಸಾಧ್ಯ. ಮೂರುಕಾಂಡಗಳಲ್ಲಿ ಮೊದಲನೆಯ ಬ್ರಹ್ಮಕಾಂಡವು ಮಾತ್ರ ಸರಳ ಶೈಲಿಯಲ್ಲಿದೆಯೆನ್ನಬಹುದು. ವಾಕ್ಯಪದೀಯದ ಮೇಲೆ ಹಿಂದೆ ಅನೇಕ ವ್ಯಾಖ್ಯಾನಗಳು ಹುಟ್ಟಿದವು. ಹಾಗೆಯೇ ನಷ್ಟವಾದವು. ಬ್ರಹ್ಮಕಾಂಡಕ್ಕೆ ದೊರೆಯುವ ಪ್ರಾಚೀನ ವ್ಯಾಖ್ಯೆಯೆಂದರೆ ವೃಷಭ ದೇವನದು. ಅವನು ಪ್ರಾರಂಭದಲ್ಲಿ ಹೇಳುತ್ತಾನೆ –

ಯದ್ಯಪಿ ಟೀಕಾ ಬಹ್ವ್ಯಃ ಪೂರ್ವಾಚಾರ್ಯೈಃ ಸುನಿರ್ಮಲಾ ರಚಿತಾಃ ।
ಸಂತಃ ಪರಿಶ್ರಮಜ್ಞಾಸ್ತಥಾಪಿ ಚೈನಾಂ ಗ್ರಹೀಷ್ಯಂತಿ ॥

ಇವುಗಳಲ್ಲಿ ಪೂರ್ವಾಚಾರ್ಯನಿರ್ಮಿತವಾದ ಒಂದು ಟೀಕೆಯೂ ದೊರೆಯುವುದಿಲ್ಲ. ವೃಷಭದೇವನ ವ್ಯಾಖ್ಯಾನ ಪ್ರೌಢವಾದದ್ದು. ಈತನು ಶ್ರೀದೇವ ಯಶಸ್ಸಿನ ಮಗನೆಂದೂ ವಿಷ್ಣುಗುಪ್ತರಾಜನ ಆಶ್ರಿತನೆಂದೂ ತಿಳಿದು ಬರುತ್ತದೆ. ಇವನ ಕಾಲ ದೇಶಾದಿಗಳು ಸರಿಯಾಗಿ ತಿಳಿದಿಲ್ಲ. ವಾಕ್ಯಪದೀಯದ ಉಳಿದೆರಡು ಕಾಂಡಗಳಿಗೆ ಈತನು ಬರೆದಿರಬಹುದಾದ ಟೀಕೆ ದೊರಕಿಲ್ಲ.

ಕ್ರಿ.ಶ. ೧೦ನೆಯ ಶತಮಾನದಲ್ಲಿದ್ದ ಪುಣ್ಯರಾಜನು ವಾಕ್ಯಕಾಂಡಕ್ಕೆ ಟೀಕೆಯನ್ನು ಲಲಿತ ಶೈಲಿಯಲ್ಲಿ ಬರೆದಿದ್ದಾನೆ. ಶಶಾಂಕನ ಶಿಷ್ಯನಿಂದ ತಾನು ವ್ಯಾಕರಣವನ್ನು ಅಧ್ಯಯನ ಮಾಡಿದೆನೆಂದು ಹೇಳಿಕೊಂಡಿದ್ದಾನೆ. ಬ್ರಹ್ಮಕಾಂಡಕ್ಕೆ ಪುಣ್ಯರಾಜನು ಬರೆದ ಟೀಕೆ ಉಪಲಬ್ಧವಾಗಿಲ್ಲ. ಪದಕಾಂಡಕ್ಕೆ ಟೀಕೆಯನ್ನು ಬರೆದಿದ್ದನೋ ಇಲ್ಲವೋ ಗೊತ್ತಾಗುವುದಿಲ್ಲ.

ವಾಕ್ಯಪದೀಯದ ೩ನೆಯ ಕಾಂಡಕ್ಕೆ ಹೇಲಾರಾಜನು ಪ್ರಕಾಶವೆಂಬ ವ್ಯಾಖ್ಯಾನವನ್ನು ಬರೆದಿದ್ದಾನೆ. ಗ್ರಂಥದ ಕಡೆಯಲ್ಲಿ ತಾನು ಕಾಶ್ಮೀರದ ರಾಜನಾದ ಮುಕ್ತಾಪೀಡನ ಮಂತ್ರಿ ಲಕ್ಷಣ (ಲಕ್ಷ್ಮಣ) ನ ವಂಶದಲ್ಲಿ ಜನಿಸಿದವನೆಂದೂ ತನ್ನ ತಂದೆಯ ಹೆಸರು ಭೂತಿರಾಜನೆಂದೂ ಹೇಳಿದ್ದಾನೆ. ಹೇಲಾರಾಜನು ಘನ ವಿದ್ವಾಂಸನೆ ಹೌದು. ಈತನದು ಪ್ರಸನ್ನ ಗಂಭೀರವಾದ ಶೈಲಿ. ಉಳಿದ ಎರಡು ಕಾಂಡಗಳಿಗೆ ಈತನು ಟೀಕೆಯನ್ನು ಬರೆದಿದ್ದರೂ ಉಪಲಬ್ಧವಾಗದಿರುವುದು ಶೋಚನೀಯವಾದ ಸಂಗತಿ. ಈತನ ಕಾಲ ಕ್ರಿ.ಶ. ೧೦ನೆಯ ಶತಕವೆಂದು ಇತಿಹಾಸಜ್ಞರು ಊಹಿಸಿದ್ದಾರೆ. ಹೇಲಾರಾಜನಿಗೆ ಭರ್ತೃಹರಿಯ ವಿಷಯದಲ್ಲಿ ಎಷ್ಟು ಗೌರವಬುದ್ಧಿ ಇತ್ತೆಂಬುದನ್ನು ಪದಕಾಂಡದ ಕಡೆಯಲ್ಲಿ ಬರೆದಿರುವ ಈ ಎರಡು ಶ್ಲೋಕಗಳು ಸ್ಪಷ್ಟಪಡಿಸುತ್ತವೆ –

> ತ್ರೈಲೋಕ್ಯಗಾಮಿನೀ ಯೇನ ತ್ರಿಕಾಂಡೀ ತ್ರಿಪದೀಕೃತಾ ।
> ತಸ್ಮೈ ಸಮಸ್ತವಿದ್ಯಾಶ್ರೀಕಾಂತಾಯ ಹರಯೇ ನಮಃ ॥
>
> ಸೂಕ್ತಿಶ್ರಿಯಃ ಸ್ಫುಟಾ ಏತಾ ಜಯಂತಿ ಜಗತಾಂ ಗುರೋಃ ।
> ಹರೇರ್ಭಾಷ್ಯಾಬ್ಧಿಪೀಯೂಷಚ್ಛಟಾಚ್ಛುರಿತವಿಗ್ರಹಾಃ ॥

ಹೀಗೆ ವಾಕ್ಯಪದೀಯದ ಮೂರು ಕಾಂಡಗಳ ಟೀಕೆ ಮೂವರು ಪ್ರಾಚೀನ ವಿದ್ವಾಂಸರಿಂದ ಲಭ್ಯವಾಗಿದೆ. ಮೊದಲನೆಯ ಎರಡು ಕಾಂಡಗಳಿಗೆ ಹರಿವೃಷಭ ಕೃತವಾದ ಟೀಕೆ ಇದೆ. ಹರಿವೃಷಭನೆಂದರೆ ಭರ್ತೃಹರಿಯೆ ಎಂದು ಶ್ರೀಚಾರುದೇವ ಶಾಸ್ತ್ರಿಗಳು ನಿರ್ಣಯಿಸಿದ್ದಾರೆ. ಶ್ರೀ ರಘುನಾಥಶರ್ಮರೆಂಬ ಆಧುನಿಕ ವಿದ್ವಾಂಸರು ಅಂಬಾಕರ್ತ್ರೀ ಎಂಬ ವ್ಯಾಖ್ಯಾನವನ್ನು ತ್ರಿಕಾಂಡಗಳಿಗೂ ಬರೆದಿದ್ದಾರೆ. ಇದು ವಿಸ್ತೃತವಾಗಿಯೂ ಪ್ರಶಂಸನೀಯವಾಗಿಯೂ ಇದೆ. ಇದೊಂದು ಶ್ರೇಷ್ಠವಾದ ವ್ಯಾಖ್ಯಾನವೇ ಹೌದು. ಶ್ರೀ ಸೂರ್ಯನಾರಾಯಣ ಶುಕ್ಲ ಎಂಬವರು ಬ್ರಹ್ಮಕಾಂಡಕ್ಕೆ ಒಂದು ಶ್ರೇಷ್ಠವಾದ ಟೀಕೆಯನ್ನು ಬರೆದಿದ್ದಾರೆ. ಇವೆಲ್ಲವೂ ಪ್ರಕಾಶನಗೊಂಡಿವೆ. ಶ್ರೀ. ಕೆ.ಎ. ಸುಬ್ರಹ್ಮಣ್ಯ ಐಯರ್ ಎಂಬ ವಿದ್ವಾಂಸರು ವಾಕ್ಯಪದೀಯದ ಮೂರು ಕಾಂಡಗಳನ್ನು ಇಂಗ್ಲಿಷ್ ಭಾಷೆಗೆ ಪರಿವರ್ತಿಸಿದ್ದಾರೆ.

ಇದಿಷ್ಟು ವಾಕ್ಯಪದೀಯದ ಸಾಮಾನ್ಯ ಪರಿಚಯವಾಯಿತು. ಈಗ ಪ್ರಕೃತವಾದ ವ್ಯಾಕರಣದರ್ಶನವನ್ನೂ ಬ್ರಹ್ಮಕಾಂಡವನ್ನೂ ಕಾಲ ಮತ್ತು ಕ್ರಿಯಾ ಸಮುದ್ದೇಶಗಳನ್ನೂ ಕುರಿತು ಕೆಲವು ಮಾತುಗಳನ್ನಾಡುವುದು ಸಮುಚಿತವಾಗುತ್ತದೆ.

## ವ್ಯಾಕರಣದರ್ಶನ

ಬಾದರಾಯಣರು ಬ್ರಹ್ಮಸೂತ್ರಗಳ ಆರಂಭದಲ್ಲಿ 'ಅಥಾತೋ ಬ್ರಹ್ಮ ಜಿಜ್ಞಾಸಾ' ಎಂದು ಜ್ಞೇಯವಾದ ಪರಬ್ರಹ್ಮವನ್ನು ನಿರ್ದೇಶಿಸಿ 'ಜನ್ಮಾದ್ಯಸ್ಯ ಯತಃ' ಎಂಬ ಎರಡನೆಯ ಸೂತ್ರದಲ್ಲಿ ಬ್ರಹ್ಮದ ಪರಿಚಾಯಕ ಲಕ್ಷಣವನ್ನು ಹೇಳಿದ್ದಾರೆ. ಜಗತ್ತಿನ ಸೃಷ್ಟಿಸ್ಥಿತಿಲಯಗಳು ಯಾವುದರಿಂದ ಆಗುತ್ತವೆಯೋ ಅದು ಬ್ರಹ್ಮ ಎಂದು ಎರಡನೆಯ ಸೂತ್ರದ ಅರ್ಥ. ಅದರಂತೆಯೇ ಭರ್ತೃಹರಿಯು ಬ್ರಹ್ಮಕಾಂಡದ ಆರಂಭದಲ್ಲಿಯೇ 'ಅನಾದಿನಿಧನಂ ಬ್ರಹ್ಮ ಶಬ್ದತತ್ತ್ವಂ' ಎಂದು ಶಬ್ದಬ್ರಹ್ಮವನ್ನು ನಿರ್ದೇಶಿಸಿ, 'ಪ್ರಕ್ರಿಯಾ ಜಗತೋ ಯತಃ' ಎಂದು ಅದರ ಲಕ್ಷಣವನ್ನು ಹೇಳಿದ್ದಾನೆ. ವೇದಾಂತಿಗಳ ಬ್ರಹ್ಮದಂತೆ ಈ ಶಬ್ದಬ್ರಹ್ಮವೂ ವೇದ ಪ್ರತಿಪಾದ್ಯವೆಂದು ಅನಂತರ ತಿಳಿಸಿದ್ದಾನೆ. ವೇದವೇ ಶಬ್ದಬ್ರಹ್ಮದ ಪ್ರಥಮ ವಿವರ್ತವೆಂದು ಅವನ ಆಶಯ. ವೇದಾಂತಿಗಳಿಗೆ ಹಿರಣ್ಯಗರ್ಭನಿದ್ದಂತೆ ಈ ದರ್ಶನದಲ್ಲಿ ವೇದವಿದೆಯೆಂದು ತಿಳಿಯಬೇಕು. ವೇದವು ಅನಾದಿ, ಶಾಶ್ವತ, ಅದಕ್ಕೆ ಅಂತ್ಯವಿಲ್ಲ. ಅದು ಅತ್ಯಂತ ಪ್ರಾಮಾಣಿಕವಾದದ್ದು. ಋಷಿಗಳ ದಿವ್ಯಜ್ಞಾನವೂ ಸಹ ವೇದ ಮೂಲಕವಾದದ್ದು (ಶ್ಲೋಕ/೩೦). ಏಕೆಂದರೆ ಅವರ ದಿವ್ಯಜ್ಞಾನಕ್ಕೆ ನಿಮಿತ್ತವಾದ ತಪಸ್ಸು ವೇದಬೋಧಿತವಾದದ್ದು. ಲೋಕ ಪ್ರಸಿದ್ಧವಾದ ಋಷಿಪ್ರಣೀತ ಶಾಸ್ತ್ರವೆಲ್ಲವೂ ಜ್ಞಾನಸಂಸ್ಕಾರ ಹೇತುವಾಗಿ ವೇದದಿಂದಲೇ ನಿರ್ಮಿತವಾಗಿದೆ (ಶ್ಲೋಕ/೧೦). ಬರಿಯ ತರ್ಕದಿಂದ ಸತ್ಯವನ್ನು ತಿಳಿಯುವುದು ಶಕ್ಯವೇ ಇಲ್ಲ. ಒಬ್ಬನು ತರ್ಕದಿಂದ ಊಹಿಸಿದ್ದನ್ನು ಕುಶಲನಾದ ಇನ್ನೊಬ್ಬನು ತರ್ಕದಿಂದಲೇ ತಳ್ಳಿಹಾಕಿ ಬಿಡುತ್ತಾನೆ. (ಶ್ಲೋ/೩೪). ತರ್ಕದಿಂದ ಯಾವುದು ಧರ್ಮ, ಯಾವುದು ಅಧರ್ಮ – ಎಂದು ನಿಶ್ಚಯಿಸಲಾಗುವುದಿಲ್ಲ. ಯುಕ್ತಿಯಿಂದ ಧರ್ಮವನ್ನು ನಿರ್ಣಯಿಸಲು ಹೊರಟರೆ, ಕುರುಡನು ಇಕ್ಕಟ್ಟಿನ ದಾರಿಯಲ್ಲಿ ಓಡಿದಂತಾಗುತ್ತದೆ. ಅವನು ಉರುಳಿಬೀಳುವುದು ನಿಶ್ಚಯ (ಶ್ಲೋ/೪೨). ಆದ್ದರಿಂದ ಋಷಿಗಳ ಮಾರ್ಗದರ್ಶನ ನಮಗೆ ಅನಿವಾರ್ಯ. ಧರ್ಮಶಾಸ್ತ್ರಗಳು ವೇದ ಮೂಲಕವಾದ್ದರಿಂದ ಪ್ರಮಾಣ. ಅಂತೆಯೇ ವ್ಯಾಕರಣಶಾಸ್ತ್ರವೂ ಪಾಣಿನ್ಯಾದಿ ಮಹರ್ಷಿಮೂಲಕವಾದ್ದರಿಂದ ಪ್ರಮಾಣವಾಗುತ್ತದೆ. ಸಾಧುಶಬ್ದ ಪ್ರಯೋಗದಿಂದ ಧರ್ಮಪ್ರಾಪ್ತಿಯಾಗುವುದೆಂದು 'ಶಾಸ್ತ್ರೇಣ ಧರ್ಮನಿಯಮಃ' ಎಂಬ ವಾರ್ತಿಕದಿಂದಲೂ ಏಕಃ ಶಬ್ದಃ

ಸಮ್ಯಗ್‌ಜ್ಞಾತಃ ಶಾಸ್ತ್ರಾನ್ವಿತಃ ಸುಪ್ರಯುಕ್ತಃ ಸ್ವರ್ಗೇ ಲೋಕೇ ಕಾಮಧುಗ್ ಭವತಿ ಎಂಬ ಮಹಾಭಾಷ್ಯೋಕ್ತ (ಏಕಃ ಪೂರ್ವಪರಯೋಃ ೬–೧–೮೪) ವೇದವಾಕ್ಯದಿಂದಲೂ ಸ್ಪಷ್ಟವಾಗುತ್ತದೆ. ವ್ಯಾಕರಣವು ಒಂದು ವಿಧದಲ್ಲಿ ಧರ್ಮಶಾಸ್ತ್ರವೇ ಸರಿ. ಇದೂ ಒಂದು ಸ್ಮೃತಿ. ಈ ಕಾರಣದಿಂದಲೇ ಸಾಧುಶಬ್ದಸ್ವರೂಪವನ್ನು ತಿಳಿಸುವುದಕ್ಕಾಗಿಯೂ, ಶಬ್ದಬ್ರಹ್ಮದ ಜ್ಞಾನದಿಂದ ಮೋಕ್ಷವಾಗುತ್ತದೆಯೆಂದು ಬೋಧಿಸುವುದಕ್ಕಾಗಿಯೂ ಋಷಿಗಳು ವ್ಯಾಕರಣಸ್ಮೃತಿಯನ್ನು ರಚಿಸಿದ್ದಾರೆ.

ತಸ್ಮಾನ್ನಿಬಧ್ಯತೇ ಶಿಷ್ಟೈಃ ಶಬ್ದಾನಾಮನುಶಾಸನಮ್ ।। (ಶ್ಲೋ. ೪೩)

ಅರ್ಥಜ್ಞಾನವಾಗುವುದೇ ಭಾಷೆಯ ಉದ್ದೇಶವಾದರೆ ವ್ಯಾಕರಣದ ಆವಶ್ಯಕತೆ ಏನು? ಅರ್ಥಜ್ಞಾನವು ಅಪಶಬ್ದಗಳಿಂದಲೂ ಆಗುತ್ತದೆ. ಸರಿಯಾದ ಪ್ರಯೋಜನವಿಲ್ಲದೆ ಹೋಗಿದ್ದರೆ, ಇಷ್ಟೊಂದು ಕ್ಲೇಶಕರವಾದ ವ್ಯಾಕರಣ ರಚನೆಯಲ್ಲಿ ಶಿಷ್ಟರು ಕೈಹಾಕುತ್ತಲೇ ಇರಲಿಲ್ಲ. (ಶ್ಲೋ. ೨೯)

## ಬ್ರಹ್ಮಕಾಂಡ

ಶಬ್ದಬ್ರಹ್ಮದರ್ಶನವು ವೇದಮೂಲಕವಾದದ್ದು. 'ವಾಗೇವ ವಿಶ್ವಾ ಭುವನಾನಿ ಜಜ್ಞೇ, ನಾಮ್ನೈವೇದಂ ರೂಪತ್ವೇನ ವಿವೃತೇ, ಓಮಿತ್ಯೇಕಾಕ್ಷರಂ ಬ್ರಹ್ಮ, ಓಂಕಾರ ಏವ ಸರ್ವಾವಾಕ್, ವಾಚಂ ಧೇನುಮುಪಾಸೀತ, ಶಬ್ದಬ್ರಹ್ಮಣಿ ನಿಷ್ಣಾತಃ ಪರಂ ಬ್ರಹ್ಮಾಧಿಗಚ್ಛತಿ' ಇತ್ಯಾದಿ ಉಪನಿಷದ್ವಾಕ್ಯಗಳು, ಋಗ್ವೇದದಲ್ಲಿರುವ 'ಚತ್ವಾರಿ ಶೃಂಗಾ' ಇತ್ಯಾದಿ ವಿವಿಧ ಮಂತ್ರಗಳೂ ಈ ದರ್ಶನಕ್ಕೆ ಆಧಾರ. ಯಾವುದನ್ನು ಜನರು ಉಚ್ಚರಿಸುತ್ತಾರೋ, ಯಾವುದು ಶ್ರೋತ್ರಗ್ರಾಹ್ಯವಾದ ಆಕಾಶಗುಣವೆಂದು ತಾರ್ಕಿಕರು ಹೇಳುತ್ತಾರೋ ಅದೇ ಶಬ್ದಬ್ರಹ್ಮವೆಂದು ಯಾರೂ ಭ್ರಮಿಸಬಾರದು. ಅದು ಕೇವಲ ವೈಖರೀನಾದ. ಮೂಲಾಧಾರಚಕ್ರದಲ್ಲಿ 'ಪರಾವಾಕ್' ಎಂಬ ಶಬ್ದತತ್ತ್ವವಿದೆ. ಅದೇ ಶಬ್ದಬ್ರಹ್ಮ. ಅದು ಸ್ಪಂದಶೂನ್ಯವೂ ನಿರ್ಗುಣವೂ ಶುದ್ಧವೂ ಆಗಿದೆ. ನಿರ್ವಿಕಲ್ಪಕ ಸಮಾಧಿಯಲ್ಲಿ ಯೋಗಿಗಳಿಗೆ ಮಾತ್ರ ಈ ಪರಾವಾಕ್ ಗೋಚರವಾಗುತ್ತದೆ. ಮಾತಾಡಲು ಉದ್ದೇಶಿಸಿದಾಗ ಆತ್ಮನು ಬುದ್ಧಿಯೊಡಗೂಡಿ, ಹೇಳಬೇಕಾದ್ದನ್ನು ತಿಳಿದು ಹೇಳುವ ಇಚ್ಛೆಯಿಂದ ಮನಸ್ಸನ್ನು ಪ್ರೇರಿಸುತ್ತಾನೆ. ಮನಸ್ಸು ದೇಹಸ್ಥವಾದ ಅಗ್ನಿಯನ್ನು ಚೋದಿಸುತ್ತದೆ. ಅದು ಪ್ರಾಣವಾಯುವನ್ನು ಪ್ರೇರಿಸುತ್ತದೆ. ವಾಯುವು ಮೇಲೆದ್ದು ಶಬ್ದತತ್ತ್ವವನ್ನು ಸಂಸ್ಕರಿಸಿ ನಾಭಿಸ್ಥಾನದಲ್ಲಿ ವ್ಯಂಜಿಸಿದಾಗ ಆ ಶಬ್ದತತ್ತ್ವವೇ ಪಶ್ಯಂತೀ ಎನಿಸಿಕೊಳ್ಳುತ್ತದೆ. ಇದರಲ್ಲಿ ಕಿಂಚಿತ್ ಸ್ಪಂದ ಉಂಟು. ಇದರಲ್ಲಿ ಸೂಕ್ಷ್ಮವಾದ ಪ್ರಕೃತಿ ಪ್ರತ್ಯಯ ವಿಭಾಗವಿರುತ್ತದೆ. ಪಶ್ಯಂತಿಯು ಯೋಗಿಗಳ

ಸವಿಕಲ್ಪಕಸಮಾಧಿಗೆ ಗೋಚರ. ಅನಂತರ ಹೃದಯ ಪರ್ಯಂತವಾಗಿ ಮೇಲೆದ್ದ ವಾಯುವಿನಿಂದ ಸಂಸ್ಕೃತವಾಗಿ ಹೃದಯದೇಶದಲ್ಲಿ ಅಭಿವ್ಯಕ್ತವಾಗಿ 'ಮಧ್ಯಮಾವಾಕ್' ಎನಿಸಿಕೊಳ್ಳುತ್ತದೆ. ಇದು ವಕ್ತೃವಿನ ಬುದ್ಧಿಗೆ ಗೋಚರವೂ ಸ್ಪಂದಯುಕ್ತವೂ ಆಗಿದೆ. ಇದೇ ವಾಚಕತ್ವ ಶಕ್ತಿಯನ್ನು ಪಡೆದಿರುವ ಶಬ್ದ. ಇದಕ್ಕೆ ಸ್ಫೋಟವೆಂದೂ ಹೆಸರಿದೆ. ಆಮೇಲೆ ಅದೇ ವಾಯು ಬಾಯನ್ನು ಪ್ರವೇಶಿಸಿ ಕಂಠತಾಲ್ವಾದಿ ಸ್ಥಾನಗಳಲ್ಲಿ ಅಭಿಹತವಾಗಿ ವೈಖರೀ ವಾಕ್ಯವನ್ನು ಅಭಿವ್ಯಂಜಿಸುತ್ತದೆ. ದೀಪದಿಂದ ಪ್ರಭೆ ಹುಟ್ಟುವಂತೆ ವೈಖರಿಯಿಂದ ನಾದವು ಹುಟ್ಟಿ ಇತರರ ಕಿವಿಗೆ ಕೇಳಿಸುತ್ತದೆ. ಈ ವೈಖರೀನಾದವು ವರ್ಣಮಯವಾದದ್ದು. ಅಕಾರ, ಕಕಾರಾದಿ ವರ್ಣಮಯವಾದದ್ದು ವೈಖರೀನಾದ. ಇದರಿಂದ ಅಭಿವ್ಯಕ್ತವಾಗುವ ಮಧ್ಯಮಾವಾಕ್ಕಿನಿಂದ ಅರ್ಥಬೋಧವಾಗುತ್ತದೆ. ಇದನ್ನೇ ನಾವು ಸ್ಫೋಟ ಎಂದು ಹೇಳಿದ್ದು. (ಶ್ಲೋ ೧೧೨ – ೧೧೬, ೧೪೨)

ಸ್ಫೋಟ ಎಂಬ ಶಬ್ದವು ಹೊಸದಾಗಿ ಕಲ್ಪಿಸಿದ್ದಲ್ಲ. 'ಧ್ವನಿಃ ಸ್ಫೋಟಶ್ಚ ಶಬ್ದಾನಾಂ' ಎಂದು ಮಹಾಭಾಷ್ಯದಲ್ಲಿದೆ. 'ಸ್ಫೋಟಸ್ತ್ವಂ ವರ್ಣಸಂಶ್ರಯಃ' ಎಂದು ವಿಷ್ಣು ಪುರಾಣದಲ್ಲಿ ಭಗವಂತನ ಸ್ತುತಿ ಇದೆ. 'ಶೃಣೋತಿ ಯ ಇಮಂ ಸ್ಫೋಟಂ'. ಇತ್ಯಾದಿ ಶ್ಲೋಕಗಳಿಂದ ಭಾಗವತದಲ್ಲಿ (ಭಾಗ. ೧೨ – ೬ – ೩೭ ರಿಂದ ೪೪) ಸ್ಫೋಟವನ್ನು ಅದರಿಂದ ವ್ಯಕ್ತವಾಗುವ ವೈಖರೀನಾದವನ್ನು ವರ್ಣಿಸಲಾಗಿದೆ. 'ಸ್ಫುಟ್ಯತೇ ಅರ್ಥೋನೇನ ಇತಿ ಸ್ಫೋಟಃ, ಸ್ಫುಟತಿ ಅರ್ಥೋಸ್ಮಾದಿತಿ ಸ್ಫೋಟಃ' ಎಂದು ಈ ಶಬ್ದದ ವ್ಯುತ್ಪತ್ತಿ. ಅರ್ಥಬೋಧಕವಾದ ಶಬ್ದವೆಂದರ್ಥ. ವೇದಾಂತಿಗಳಾದ ಮಂಡನಮಿಶ್ರರು ಸ್ಫೋಟಸಿದ್ಧಿ ಎಂಬ ಗ್ರಂಥವನ್ನೇ ಬರೆದಿದ್ದಾರೆ. ಸಂಕ್ಷೇಪವಾಗಿ ಸ್ಫೋಟವಾದದ ಸಾರ ಹೀಗಿದೆ – ಶಬ್ದದಿಂದ ಅರ್ಥಬೋಧಕ ಶಕ್ತಿಯನ್ನು ವಾಚಕತ್ವಶಕ್ತಿ ಎನ್ನುತ್ತಾರೆ. ಇದು ಶಬ್ದದಲ್ಲಿದೆಯೆಂದು ಸಿದ್ಧವಾಗುತ್ತದೆ. ಈ ಶಕ್ತಿಗೆ ಆಶ್ರಯವಾದ ಶಬ್ದ ಯಾವುದು? ಪುಸ್ತಕದಲ್ಲಿ ಬರೆದದ್ದು ಲಿಪಿ, ಶಬ್ದವಲ್ಲ. ಉಚ್ಚರಿಸಲ್ಪಡತಕ್ಕ ಮನುಷ್ಯ, ಮೃಗ, ಗೃಹ ಮೊದಲಾದವು ಶಬ್ದವೆನ್ನಬೇಕು. ಇವು ವರ್ಣಾತ್ಮಕವಾದವು. ಒಂದೊಂದು ವರ್ಣವನ್ನಾಗಿ ಉಚ್ಚರಿಸಬೇಕಾಗಿದೆ. ಅದನ್ನು ಉಚ್ಚರಿಸಿದ ಎರಡನೇ ಕ್ಷಣದಲ್ಲಿ ಅದು ನಷ್ಟವಾಗಿ ಬಿಡುತ್ತದೆ. ಶಬ್ದದ ಕಡೆಯ ಅಕ್ಷರನ್ನು ಹೇಳಿದಾಗ ಹಿಂದಿನ ಅಕ್ಷರಗಳು ಲುಪ್ತವಾಗಿರುತ್ತವೆ. ಈ ಅಕ್ಷರಗಳನ್ನು ಒಂದರ ಪಕ್ಕದಲ್ಲೊಂದನ್ನಿಟ್ಟು, ಹೂವುಗಳನ್ನು ಜೋಡಿಸಿ ತೋರಿಸಿದಂತೆ ತೋರಿಸಲಾಗುವುದಿಲ್ಲ. ಆದ್ದರಿಂದ ವಾಚಕತ್ವಶಕ್ತಿ ಯಾವುದರಲ್ಲಿದೆ? ಶಬ್ದವೇ ಇಲ್ಲವಾದರೆ ಅರ್ಥ ಪ್ರತೀತಿಯಾಗುವುದು ಹೇಗೆ? ಇದಕ್ಕಾಗಿ ಸ್ಫೋಟವೆಂಬ ಒಂದು ಅಖಂಡಶಬ್ದವನ್ನು ವೈಯಾಕರಣರು ಒಪ್ಪುತ್ತಾರೆ. ನಾವು ಉಚ್ಚರಿಸಿದ ಅಕ್ಷರಗಳಿಂದ

ಸ್ಫೋಟವು ಅಭಿವ್ಯಕ್ತವಾಗುತ್ತದೆ. ಅದು ಬುದ್ಧಿಗ್ರಾಹ್ಯವಾದದ್ದು. ಕಿವಿಗೆ ಕೇಳತಕ್ಕದ್ದಲ್ಲ. ಇದರಲ್ಲಿ ವಾಚಕತ್ವಶಕ್ತಿ ಇದೆ. ಈ ಸ್ಫೋಟ ಇರತಕ್ಕದ್ದು ಒಂದೇ. ವ್ಯಂಜಕವರ್ಣಗಳ ಭೇದದಿಂದ ವಿಭಿನ್ನಶಬ್ದಗಳಿರುವಂತೆ ನಮಗೆ ಪ್ರತೀತಿಯಾಗುತ್ತದೆ. ಶುದ್ಧವಾದ ಸ್ಫಟಿಕವು ನಾನಾಬಣ್ಣದ ವಸ್ತುಗಳ ಸಂಬಂಧವಾದಾಗ ಚಿತ್ರವರ್ಣದ್ದಾಗಿ ತೋರುವಂತೆ, ಒಂದೇ ಶಬ್ದವು ಬೇರೆ ಬೇರೆ ವರ್ಣಗಳೆಂಬ ಉಪಾಧಿಯಿಂದ ನಾನಾ ಶಬ್ದರೂಪವಾಗಿ ತೋರುತ್ತದೆ. ಆದ್ದರಿಂದಲೇ ಅರ್ಥಭೇದವಾಗುತ್ತದೆ. ಘಟ ಎಂಬ ವೈಖರೀನಾದದಿಂದ ಅಭಿವ್ಯಕ್ತವಾದ ಸ್ಫೋಟವು ಗಡಿಗೆಯನ್ನೂ ಪಟ ಎಂಬುದರಿಂದ ಅಭಿವ್ಯಕ್ತವಾದ ಸ್ಫೋಟವು ಬಟ್ಟೆಯನ್ನೂ ಬೋಧಿಸುತ್ತದೆ.

ಸ್ಫೋಟವನ್ನು ಎಂಟು ಬಗೆಯಾಗಿ ವಿಂಗಡಿಸಿದ್ದಾರೆ. ವರ್ಣಸ್ಫೋಟ, ಪದಸ್ಫೋಟ, ವಾಕ್ಯಸ್ಫೋಟ – ಎಂದು ಮೂರು ವ್ಯಕ್ತಿಸ್ಫೋಟಗಳು. ಇದೇ ಹೆಸರಿನ ಮೂರು ಜಾತಿಸ್ಫೋಟಗಳು. ಅಖಂಡ ಪದಸ್ಫೋಟ, ಅಖಂಡ ವಾಕ್ಯಸ್ಫೋಟ ಎಂದು ಎರಡು ವಿಧ. ಒಟ್ಟು ಎಂಟು. ಇವುಗಳಲ್ಲಿ ಅಖಂಡ ವಾಕ್ಯಸ್ಫೋಟವೇ ಸಿದ್ಧಾಂತದಲ್ಲಿ ಅಂಗೀಕೃತವಾದದ್ದು.

ವಾಕ್ಯಸ್ಫೋಟೋt ತಿನಿಷ್ಕರ್ಷೇ ತಿಷ್ಠತೀತಿ ಮತಸ್ಥಿತಿಃ ॥

–ವೈ. ಸಿ. ಕಾರಿಕಾ ೬೧

ಉಳಿದ ವರ್ಣಸ್ಫೋಟ ಮೊದಲಾದವು ಪ್ರಕ್ರಿಯಾರ್ಥವಾಗಿ ಸ್ವೀಕೃತವಾಗಿವೆ. ಇದರ ವಿಷಯವಾಗಿ ದಾರ್ಶನಿಕರಲ್ಲಿ ವಿಪುಲವಾದ ವಾದವಿವಾದಗಳಿವೆ.

ಹಿಂದೆ ಹೇಳಿದ ಮಧ್ಯಮಾವಾಕ್ ಎಂಬುದೇ ಪ್ರಕೃತವಾದ ಸ್ಫೋಟ. ಪರಾ, ಪಶ್ಯಂತಿಗಳನ್ನೂ ಈ ಸ್ಫೋಟವೆಂಬ ಶಬ್ದದಿಂದ ವ್ಯವಹರಿಸುವುದುಂಟು. ಪರಾವಾಕ್ ಎಂಬುದೇ ಶಬ್ದಬ್ರಹ್ಮ.

ವೈಖರ್ಯಾ ಮಧ್ಯಮಾಯಾಶ್ಚ ಪಶ್ಯಂತ್ಯಾಶ್ಚೈತದದ್ಭುತಂ ।
ಅನೇಕತೀರ್ಥಭೇದಾಯಾಸ್ತ್ರಯ್ಯಾ ವಾಚಃ ಪರಂ ಪದಮ್ ॥ ೧೪೨ ॥

ಎಂಬ ಶ್ಲೋಕದಲ್ಲಿ ವೈಖರೀ, ಮಧ್ಯಮಾ, ಪಶ್ಯಂತೀಗಳಿಗೆ ವ್ಯಾಕರಣವು ಆಶ್ರಯ ವೆಂದು ಹೇಳಿದೆ. ಪರಾವಾಕ್ಕನ್ನು ಹೇಳಿಲ್ಲ. ಇದನ್ನು ಗಮನಿಸಿ ನಾಗೇಶಭಟ್ಟರು ವ್ಯಾಕರಣಕ್ಕೆ ಇವು ಮೂರು ಮಾತ್ರ ವಿಷಯವಾಗುತ್ತದೆ ಎಂದರು. ಪಶ್ಯಂತೀ ಮೊದಲಾದ ಮೂರರಲ್ಲಿಯೂ ಪ್ರಕೃತಿಪ್ರತ್ಯಯ ವಿಭಾಗವಿದೆ. ಪರಾವಾಕ್ಕಿನಲ್ಲಿ ಅದಿಲ್ಲವಾದ್ದರಿಂದ ಅದು ವ್ಯಾಕರಣಕ್ಕೆ ಗೋಚರವಲ್ಲ ಎಂದು ಲಘು ಮಂಜೂಷಾದ ಸ್ಫೋಟಪ್ರಕರಣದಲ್ಲಿಯೂ ಮಹಾಭಾಷ್ಯದ ಪ್ರಥಮಾಹ್ನಿಕದ ಉದ್ಯೋತವ್ಯಾಖ್ಯಾನ

ದಲ್ಲಿಯೂ ಬರೆದಿದ್ದಾರೆ. ಶ್ರೀ ಸೂರ್ಯನಾರಾಯಣ ಶುಕ್ಲರು ಮೇಲ್ಕಂಡ ಶ್ಲೋಕದ ತಮ್ಮ ವ್ಯಾಖ್ಯಾನದಲ್ಲಿ ವೈಯಾಕರಣ ಸಿದ್ಧಾಂತದಲ್ಲಿ ಪರಾವಾಕ್ ಇಲ್ಲವೆಂದೂ ಪಶ್ಯಂತೀ, ಮಧ್ಯಮಾ, ವೈಖರೀ – ಎಂಬ ಮೂರು ವಾಕ್ಕುಗಳನ್ನು ಮಾತ್ರ ಅಂಗೀಕರಿಸಲಾಗಿದೆ ಎಂದೂ ಬರೆದಿದ್ದಾರೆ. ಅಲ್ಲದೆ ನಾಗೇಶಭಟ್ಟರು ಪರಾವಾಕ್ಕನ್ನು ಹೇಳಿರುವುದು ವ್ಯಾಕರಣಸಿದ್ಧಾಂತವನ್ನು ತಿಳಿಯದ ನಿಮಿತ್ತದಿಂದ – ಎಂದೂ ಬರೆದಿದ್ದಾರೆ. ನಾಗೇಶಭಟ್ಟರಿಗೆ ವ್ಯಾಕರಣಸಿದ್ಧಾಂತವು ಗೊತ್ತಿಲ್ಲವೆಂಬುದು ಕಠೋರವಾದ ನುಡಿ ಎಂದು ಹೇಳಬೇಕಾಗಿದೆ. ನವೀನ ವೈಯಾಕರಣದಲ್ಲಿ ನಾಗೇಶಭಟ್ಟರಿಗೆ ಸದೃಶನಾದ ಇನ್ನೊಬ್ಬ ಪಂಡಿತನು ಇದುವರೆಗೆ ಕಂಡು ಬಂದಿಲ್ಲ.

> ಸ್ವರೂಪಜ್ಯೋತಿರೇವಾಂತಃ ಪರಾವಾಗನಪಾಯಿನೀ ।
> ತಸ್ಯಾಂ ದೃಷ್ಟಸ್ವರೂಪಾಯಾಮಧಿಕಾರೋ ನಿವರ್ತತೇ ॥

ಎಂಬ ವಾಕ್ಯಪದೀಯ ಶ್ಲೋಕವನ್ನು ನಾಗೇಶಭಟ್ಟರೇ ಉದಾಹರಿಸಿದ್ದಾರೆ. ಈ ಶ್ಲೋಕವು 'ವೈಖರ್ಯಾ ಮಧ್ಯಮಾಯಾಶ್ಚ – ' ಎಂಬ ಶ್ಲೋಕಕ್ಕೆ ಭರ್ತೃಹರಿಯೇ ಬರೆದ ವ್ಯಾಖ್ಯಾನದಲ್ಲಿ ಉದಾಹೃತವಾಗಿದೆ. ಸ್ವೋಪಜ್ಞವ್ಯಾಖ್ಯಾನ ಸಹಿತವಾದದ್ದಕ್ಕೆ ವಾಕ್ಯಪದೀಯವೆಂಬ ಹೆಸರಿದೆಯೆಂದು ಚಾರುದೇವಶಾಸ್ತ್ರಿಗಳು ಸ್ಥಾಪಿಸಿದ್ದಾರೆ. ಮೇಲ್ಕಂಡ ಶ್ಲೋಕದ 'ಪರಾವಾಗನಪಾಯಿನೀ' ಎಂಬೆಡೆ 'ಸೂಕ್ಷ್ಮಾವಾಗನ ಪಾಯಿನೀ' ಎಂಬ ಪಾಠ ಕೆಲವು ಪ್ರತಿಗಳಲ್ಲಿದೆ. ಆಗಲೂ ಸೂಕ್ಷ್ಮ ಎಂದರೆ ಪರಾ ಎಂದೇ ಅರ್ಥ. ಸಿದ್ಧಾಂತ ಶೈವಾದಿ ತಂತ್ರಗ್ರಂಥಗಳಲ್ಲಿ ಪರಾವನ್ನು ಅಂಗೀಕರಿಸಿ ವಾಕ್ಕುಗಳಲ್ಲಿ ನಾಲ್ಕು ಭೇದಗಳನ್ನು ಸ್ಪಷ್ಟವಾಗಿ ತಿಳಿಸಿದ್ದಾರೆ. ವೈಯಾಕರಣರೂ ಈ ನಾಲ್ಕು ಭೇದಗಳನ್ನಂಗೀಕರಿಸಿದರೆ ಏಕ ವಾಕ್ಯತೆ ಬರುತ್ತದೆ. ಅಂಗೀಕರಿಸಿದ್ದರಿಂದ ಬಾಧೆಯಾದರೂ ಏನು? ಕೆಳಗೆ ಕಂಡ ಋಙ್ಮಂತ್ರದಲ್ಲಿ ನಾಲ್ಕು ಬಗೆಯ ವಾಕ್ಕುಗಳಿವೆಯೆಂದೂ ಅವುಗಳಲ್ಲಿ ಮೂರು ಎಲ್ಲರಿಗೂ ತಿಳಿಯದೆಂದೂ ನಾಲ್ಕನೆಯದನ್ನು ಮಾತ್ರ ಜನರು ಆಡುತ್ತಾರೆಂದೂ ಹೇಳಿದೆ.

> ಚತ್ವಾರಿ ವಾಕ್‌ಪರಿಮಿತಾ ಪದಾನಿ
> ತಾನಿ ವಿದುರ್ಬ್ರಾಹ್ಮಣಾ ಯೇ ಮನೀಷಿಣಃ ।
> ಗುಹಾ ತ್ರೀಣಿ ನಿಹಿತಾ ನೇಂಗಯಂತಿ
> ತುರೀಯಂ ವಾಚೋ ಮನುಷ್ಯಾ ವದಂತಿ ॥

(ಋ.ಸಂ. ೧–೧೬೪–೪೫)

ಪರಾ, ಪಶ್ಯಂತೀ, ಮಧ್ಯಮಾ – ಇವು ಮೂರು ಶರೀರ ಗುಹೆಯಲ್ಲಡಗಿರುವ

ಮೂರು ವಾಕ್ಕುಗಳು. ಇವುಗಳಿಗೆಲ್ಲಾ ತಿರುಚಿ ಅರ್ಥ ಹೇಳುವುದಕ್ಕಿಂತ ನಾಲ್ಕು ವಾಕ್‌ಗಳನ್ನು ಅಂಗೀಕರಿಸುವುದು ಉತ್ತಮ ಪಕ್ಷ. ವೈಯಾಕರಣಸಿದ್ಧಾಂತದಲ್ಲಿ ಮೂರೇ ವಾಗ್ಭೇದಗಳಾದರೆ ಮಧ್ಯಮಾ ಪಶ್ಯಂತೀಗಳ ಸ್ವರೂಪವನ್ನು ಭರ್ತೃಹರಿಯು ಹೇಳಬೇಕಾಗಿತ್ತು; ಹೇಳಿಲ್ಲ. ಅನ್ಯಶಾಸ್ತ್ರಪ್ರಸಿದ್ಧವಾದ್ದರಿಂದ ಹೇಳಿಲ್ಲವೆಂದೂ ಈ ನಾಲ್ಕು ಭೇದಗಳೂ ಆತನಿಗೆ ಸಂಮತವೆಂದೂ ಒಪ್ಪಬೇಕಾಗುತ್ತದೆ.

ಶಬ್ದವು ಮಾತ್ರವಲ್ಲದೆ ಶಬ್ದಾರ್ಥವೂ ಶಬ್ದಾರ್ಥಗಳ ಸಂಬಂಧವೂ ನಿತ್ಯವಾದದ್ದು. ಅರ್ಥಜ್ಞಾನವು ಶಬ್ದಾನುವಿದ್ಧವಾಗಿರುತ್ತದೆ. ಎಂದರೆ ಅರ್ಥಜ್ಞಾನದೊಡನೆ ಶಬ್ದವೂ ಪ್ರತೀತವಾಗುತ್ತದೆ. ಅಗ್ನಿ ಎಂದು ಒಬ್ಬನು ಹೇಳಿದರೆ ಬೆಂಕಿಯ ಜ್ಞಾನದೊಡನೆ ಅಗ್ನಿಶಬ್ದವೂ ಸ್ಫುರಿಸುತ್ತದೆ. ಶಬ್ದಾರ್ಥಗಳಿಗೆ ತಾದಾತ್ಮ್ಯ ಸಂಬಂಧವಿದೆ. ಶಬ್ದವು ಅನಿತ್ಯವೆಂಬ ಪಕ್ಷದಲ್ಲಿ ಇನ್ನೊಂದು ಪರಿಶೀಲನೀಯವಾದ ಅಂಶ ಉಂಟು. ಎಲ್ಲ ವೈದಿಕಮತಾನುಯಾಯಿಗಳೂ ವೇದವು ನಿತ್ಯವೆಂದು ಸಾಧಿಸುತ್ತಾರೆ. ವೇದವು ಶಬ್ದಾತ್ಮಕವಾದದ್ದು. ಶಬ್ದವು ನಿತ್ಯವೆಂಬ ಪಕ್ಷದಲ್ಲಿ ವೇದವು ನಿತ್ಯವೆಂಬ ವಾದ ಸಂಗತವಾಗುತ್ತದೆ. ಈಗಿರುವ ವೇದಾರ್ಥವನ್ನೇ ಬೋಧಿಸುವ, ಈಗಿರುವ ಶಬ್ದಾನುಪೂರ್ವಿಯೇ ಇರತಕ್ಕ ಗ್ರಂಥವು ಸದಾ ಇರುತ್ತದೆಯೆಂದು ಆ ಮಾತಿನ ಅರ್ಥ. ಶಬ್ದವು ಅನಿತ್ಯವೆಂಬ ಪಕ್ಷದಲ್ಲಿ ವೇದಗಳಿಗೆ ನಿತ್ಯತ್ವವನ್ನು ಸಾಧಿಸುವುದು ಹೇಗೆ ? ಉಚ್ಚಾರಣೆಗೆ ಒಳಗಾದಾಗ ಶಬ್ದವು ಹುಟ್ಟಿ ನಶಿಸುತ್ತದೆ. ಉಚ್ಚರಿಸದಿದ್ದಾಗ ಅದು ಇಲ್ಲವೆಂದೇ ಅರ್ಥ. ಯಾರ ಉಚ್ಚಾರಣೆಗೂ ಒಳಗಾಗದೆ ಅಪೌರುಷೇಯವಾಗಿರುವ ವೇದವಿತ್ತು – ಎಂಬ ಮಾತು ಅರ್ಥಶೂನ್ಯವಾಗುತ್ತದೆ. ವೇದವು ಈಶ್ವರಪ್ರೋಕ್ತವೆಂಬ ಪಕ್ಷದಲ್ಲಿಯೂ ಈಶ್ವರೋಕ್ತವಾದದ್ದು ಮಾತ್ರ ವೇದವೆನಿಸೀತು. ಅನ್ಯರು ಉಚ್ಚರಿಸಿದ್ದು ವೇದ ಸದೃಶವಾದ ಶಬ್ದವಾಗುತ್ತದೆಯೇ ಹೊರತು ಮೂಲ ವೇದವೇ ಆಗುವುದಿಲ್ಲ. ವೇದಕ್ಕೆ ಸದೃಶ, ಸದೃಶಕ್ಕೆ ಸದೃಶ, ಅದಕ್ಕೆ ಸದೃಶ ಎಂದು ಸದೃಶಪರಂಪರೆಯನ್ನು ಒಪ್ಪಿ ಪ್ರವಾಹನಿತ್ಯತ್ವವನ್ನು ಹೇಳಬೇಕಾಗುತ್ತದೆ. ಮುಖ್ಯವಾದ ನಿತ್ಯತ್ವ ಬರುವುದೇ ಇಲ್ಲ.

ಮಹೇಶ್ವರನ ಅನುಗ್ರಹದಿಂದ ಈ ವರ್ಣಮಾಲೆ ಲಭಿಸಿತೆಂದು ನಂದಿಕೇಶ್ವರನು ಹೇಳುತ್ತಾನೆ. ಇದಕ್ಕೆ ಶಿವಸೂತ್ರಗಳೆಂದೂ ಹೆಸರುಂಟು. ನಂದಿಕೇಶ್ವರನು ಈ ಹದಿನಾಲ್ಕು ಸೂತ್ರಗಳನ್ನು ಅಧ್ಯಾತ್ಮಪರವಾಗಿ ಅರ್ಥ ಮಾಡಿದ್ದಾನೆ. ಮೀಮಾಂಸಕರು ಅಕ್ಷರಗಳು ನಿತ್ಯವೆನ್ನುತ್ತಾರೆ. ಯಾಗಗಳಲ್ಲಿ ಇಂದ್ರ, ಅಗ್ನಿ, ಮೊದಲಾದ ಶಬ್ದಗಳೇ ದೇವತೆಗಳೆನ್ನುತ್ತಾರೆ. ವೇದದಲ್ಲಿ ವಾಕ್ಯವನ್ನು ಸ್ತುತಿಸುವ ಅನೇಕ ಮಂತ್ರಗಳಿವೆ. ಮಂತ್ರಶಾಸ್ತ್ರವು ಅಕ್ಷರಗಳಿಗೆ ತುಂಬ ಮಹತ್ತ್ವವನ್ನು ಕೊಡುತ್ತದೆ. ಉಪನಿಷತ್ತುಗಳಲ್ಲಿ

ಹೇಳಿದ ಓಂಕಾರೋಪಾಸನೆ ಅಕ್ಷರೋಪಾಸನೆಯೇ. ಯೋಗಸೂತ್ರದಲ್ಲಿ ಈಶ್ವರ ವಾಚಕ ಶಬ್ದವು ಪ್ರಣವವೆಂದು ಹೇಳಿದೆ. 'ತಸ್ಯ ವಾಚಕಃ ಪ್ರಣವಃ' (ಯೋಗ ೧–೨೩) ಆ ಸೂತ್ರದ ಭಾಷ್ಯದಲ್ಲಿ ಶಬ್ದಾರ್ಥಸಂಬಂಧವು ನಿತ್ಯವೆಂದು ಉಕ್ತವಾಗಿದೆ. ಶಿವದೃಷ್ಟಿ – ಮೊದಲಾದ ಪ್ರತ್ಯಭಿಜ್ಞಾಶಾಸ್ತ್ರದಲ್ಲಿಯೂ ಅಕ್ಷರಗಳಿಗೆ ಪವಿತ್ರವಾದ ಸ್ಥಾನ ಉಂಟು 'ವರ್ಣಸ್ಯಾಸ್ತಿ ಶಿವಾತ್ಮತಾ' – ಅಕ್ಷರವು ಶಿವಸ್ವರೂಪವೆಂದು ಆ ಶಾಸ್ತ್ರ ಹೇಳುತ್ತದೆ.

ಹೀಗೆ ಭಾರತೀಯ ಪರಂಪರೆಯಲ್ಲಿ ಶಬ್ದತತ್ತ್ವಕ್ಕೆ ಉನ್ನತವಾದ ಪವಿತ್ರ ಸ್ಥಾನವಿರುವುದರಿಂದ ಶಬ್ದಮೀಮಾಂಸೆಯಾದ ವ್ಯಾಕರಣಶಾಸ್ತ್ರಕ್ಕೆ ಮಹತ್ತರವಾದ ಗೌರವ ಸಂದಿರುತ್ತದೆ. ಛಾಂದೋಗ್ಯೋಪನಿಷತ್ತು ವ್ಯಾಕರಣವನ್ನು 'ವೇದಾನಾಂ ವೇದಃ' ಎಂದು ಪ್ರಶಂಸೆ ಮಾಡಿದೆ (ಛಾಂ ೭–೧).

ವ್ಯಾಡಿಯು ರಚಿಸಿದ ಲಕ್ಷ ಶ್ಲೋಕಾತ್ಮಕವಾದ ಸಂಗ್ರಹವು ನಷ್ಟವಾದ್ದನ್ನೂ ಪತಂಜಲಿಯ ಮಹಾಭಾಷ್ಯವು ನಷ್ಟಪ್ರಾಯವಾದ್ದನ್ನೂ ಭರ್ತೃಹರಿಯು ಸ್ವತಃ ಕಂಡಿದ್ದನು. ಜ್ಞಾನಪಿಪಾಸುಗಳಾದ ಚಂದ್ರಾಚಾರ್ಯನೇ ಮೊದಲಾದವರು ಮತ್ತೆ ಈ ದರ್ಶನವನ್ನು ವ್ಯವಸ್ಥೆಗೊಳಿಸುವುದಕ್ಕಾಗಿ ಪಟ್ಟಪಾಡನ್ನು ತನ್ನ ಗುರುವಾದ ಆಚಾರ್ಯ ವಸುರಾತನಿಂದಲೇ ಭರ್ತೃಹರಿಯು ಕೇಳಿರಬೇಕು. ಅವರ ಶ್ರಮವನ್ನು ಕಂಡು ಅವರು ಹಾಕಿಕೊಟ್ಟ ದಾರಿಯಲ್ಲಿ ಮುಂದುವರಿದು ವ್ಯಾಕರಣದರ್ಶನವನ್ನು ಪುನಃ ಪ್ರತಿಷ್ಠೆಮಾಡಿದ ಕೀರ್ತಿ ಭರ್ತೃಹರಿಗೆ ಸಲ್ಲುತ್ತದೆ. ವ್ಯಾಕರಣದ ಅಧ್ಯಯನದಲ್ಲಿ ಜನರಿಗೆ ಈ ಕಾಲದಲ್ಲಿರುವ ಅವಜ್ಞೆ ಪೂರ್ವಕಾಲದಲ್ಲಿಯೂ ಇತ್ತೆಂದು ತೋರುತ್ತದೆ. ಪತಂಜಲಿಯೇ ತನ್ನ ಭಾಷ್ಯದಲ್ಲಿ–

'ವೇದಾನ್ನೋ ವೈದಿಕಾಃ ಶಬ್ದಾಃ ಸಿದ್ಧಾ ಲೋಕಾಚ್ಚ ಲೌಕಿಕಾಃ ।
ಅನರ್ಥಕಂ ವ್ಯಾಕರಣಂ' ಇತಿ ಪ್ರತ್ಯವತಿಷ್ಠಂತೇ – ಎಂದು ಬರೆದಿದ್ದಾನೆ.

'ವೇದದಿಂದಲೇ ನಮಗೆ ವೈದಿಕಶಬ್ದಗಳ ಸ್ವರೂಪ ತಿಳಿಯುತ್ತದೆ. ಲೌಕಿಕ ಶಬ್ದಗಳ ಸ್ವರೂಪವು ಲೋಕದಿಂದಲೇ ತಿಳಿಯುತ್ತದೆ. ಇನ್ನು ವ್ಯಾಕರಣ ಏಕೆ ? ಅದು ನಿಷ್ಫಲ – ಎಂದು ಎದುರುಬೀಳುತ್ತಾರೆ !'

ಇಂತಹ ವಿಪ್ರತಿಪನ್ನಬುದ್ಧಿಯವರು ಯಾವಾಗಲೂ ಇರುತ್ತಾರೆಂದು ಭಾವಿಸಿ, ಮತ್ತೆ ಈ ಶಾಸ್ತ್ರಕ್ಕೆ ಆ ದುಃಸ್ಥಿತಿ ಬಾರದಿರಲೆಂದು ವಾಕ್ಯಪದೀಯಕಾರನು ವ್ಯಾಕರಣ ಶಾಸ್ತ್ರವನ್ನು ವಿಶೇಷವಾಗಿ ಸ್ತುತಿಸಿದ್ದಾನೆ. ಈ ಶಾಸ್ತ್ರವು 'ಪವಿತ್ರಂ ಸರ್ವವಿದ್ಯಾನಾಂ,' 'ತಪಸಾಮುತ್ತಮಂ ತಪಃ,' 'ಸಾ ಸರ್ವವಿದ್ಯಾಶಿಲ್ಪಾನಾಂ ಕಲಾನಾಂ

ಚೋಪಬಂಧನೀ,' 'ಇಯಂ ಸಾ ಮೋಕ್ಷಮಾಣಾನಾಮಜಿಹ್ಮಾ ರಾಜಪದ್ಧತಿಃ' ಎಂದು ಬ್ರಹ್ಮಕಾಂಡದಲ್ಲಿ ಅತಿಶಯವಾಗಿ ಪ್ರಶಂಸೆಮಾಡಿದ್ದಾನೆ.

ಶಬ್ದಾದ್ವೈತ ಸಿದ್ಧಾಂತವಾದವೂ ಮೋಕ್ಷಮಾರ್ಗವೂ ಒತ್ತಟ್ಟಿಗಿರಲಿ. ವಾಕ್ಯ ಕಾಂಡ ಪದಕಾಂಡಗಳಲ್ಲಿ ಪ್ರತಿಪಾದಿತವಾದ ಶಬ್ದತತ್ತ್ವವು ಅತ್ಯಮೂಲ್ಯವಾದದ್ದು. ಇಂದು ಬೆಳೆಯುತ್ತಿರುವ ನೂತನ ಭಾಷಾಶಾಸ್ತ್ರಕ್ಕೆ ತುಂಬ ಉಪಯುಕ್ತವಾದದ್ದು. ಸಂಸ್ಕೃತ ಭಾಷೆಗೆ ಮಾತ್ರವಲ್ಲ, ಸಕಲ ಭಾಷೆಗಳಿಗೂ ಅನ್ವಯಿಸುವ ಸಿದ್ಧಾಂತ ಇದರಲ್ಲಿದೆ. ಸ್ಥೂಲವಾದ ವಾಕ್ಯರಚನಾಕ್ರಮವು ಭಾಷೆಯಿಂದ ಭಾಷೆಗೆ ಭಿನ್ನವಾಗಬಹುದು. ಆದರೆ ಮೂಲಭೂತವಾದ ಶಬ್ದದ ತತ್ತ್ವವೂ ಶಬ್ದದ ಸತ್ತ್ವವೂ ಎಲ್ಲ ಭಾಷೆಗಳಲ್ಲಿಯೂ ಸಮವಾಗಿರುತ್ತದೆ. ಉದಾಹರಣೆಗೆ ಕಾರಕಗಳನ್ನು ತೆಗೆದುಕೊಳ್ಳಬಹುದು. ಸಂಸ್ಕೃತ ಭಾಷೆಯಲ್ಲಿ ಕರ್ತೃ, ಕರ್ಮ, ಕರಣ, ಸಂಪ್ರದಾನ, ಅಪಾದಾನ, ಅಧಿಕರಣ ಎಂದು ಆರು ಕಾರಕಗಳಿವೆಯೆಂದು ವ್ಯವಸ್ಥಿತವಾಗಿದೆ. ಕಾರಕವೆಂದರೆ ಕ್ರಿಯಾನಿಷ್ಪತ್ತಿಗೆ ಕಾರಣವಾದದ್ದು. ಕ್ರಿಯೆಯಿಲ್ಲದೆ ವಾಕ್ಯವು ಪೂರ್ಣವಾಗುವುದಿಲ್ಲ. ಉಳಿದ ಶಬ್ದಗಳಿಂದ ಹುಟ್ಟುವ ಆಕಾಂಕ್ಷೆ ಕ್ರಿಯೆಯಿಂದಲೇ ಶಾಂತವಾಗುತ್ತದೆ. ಸಕಲ ನದಿಗಳಿಗೂ ಸಮುದ್ರವೇ ಗಮ್ಯವಾದಂತೆ ಸಕಲ ಶಬ್ದಾರ್ಥಗಳಿಗೂ ಕ್ರಿಯೆಯೇ ಗಮ್ಯಸ್ಥಾನವಾಗಿರುತ್ತದೆ. ಈ ಆರು ಕಾರಕಗಳು ಜಗತ್ತಿನ ಸಕಲ ಭಾಷೆಗಳಲ್ಲಿಯೂ ಇವೆ. ಒಂದು ಹೆಚ್ಚಿಲ್ಲ, ಒಂದು ಕಡಿಮೆ ಇಲ್ಲ. ಶಬ್ದರೂಪವು ಮಾತ್ರ ಭಿನ್ನರೀತಿಯಲ್ಲಿರಬಹುದು. ಒಂದು ಭಾಷೆಯಲ್ಲಿ ವಿಭಕ್ತಿ ಸೇರಿದರೆ ಇನ್ನೊಂದರಲ್ಲಿ ವಿಭಕ್ತಿ ಇಲ್ಲದಿರಬಹುದು. ಸಂಬಂಧಸೂಚಕವಾದ ಬೇರೆ ಬೇರೆ ಶಬ್ದದಿಂದ ಕಾರಕಶಕ್ತಿಯು ವ್ಯಕ್ತವಾಗಬಹುದು. ಒಂದೇ ವಿಭಕ್ತಿಯು ಸ್ಥಾನಬಲದಿಂದ ಅದೇ ಕಾರ್ಯವನ್ನು ನಿರ್ವಹಿಸಬಹುದು. ಕಾರಕಗಳು ನಡೆಸುವ ಸಂವಿಧಾನವು ಮಾತ್ರ ಒಂದೇ ಪ್ರಕಾರದಲ್ಲಿರುತ್ತದೆ. ಅಂತೆಯೇ ವ್ಯಕ್ತಿ, ವ್ಯಕ್ತಿನಿಷ್ಠವಾದ ಜಾತಿ, ಗುಣ, ಕ್ರಿಯೆ, ಸಂಬಂಧ, ದೇಶ, ಕಾಲ, ಶಬ್ದಶಕ್ತಿ – ಮೊದಲಾದವು ಎಲ್ಲ ಭಾಷೆಗಳಿಗೂ ಸಮಾನವಾದವು. ವಾಕ್ಯಪದೀಯದ ಉಳಿದೆರಡು ಕಾಂಡಗಳು ಭಾಷೆಯ ಜೀವಾಳವನ್ನೇ ಶೋಧಿಸಿ ಅದರ ಸ್ವರೂಪವನ್ನು ವಿವರಿಸುತ್ತವೆ.

## ಕಾಲ ಮತ್ತು ಕ್ರಿಯೆ

ಕಾಲ ಮತ್ತು ಕ್ರಿಯೆ – ಎಂಬಿವೆರಡು ಪ್ರತಿದಿನದ ವ್ಯವಹಾರದಲ್ಲಿ ಎಲ್ಲರಿಗೂ ಬೇಕಾದವಾದ್ದರಿಂದ ಸರ್ವರಿಗೂ ಪರಿಚಿತವಾದವು. ಘಂಟೆ, ನಿಮಿಷ, ಹಗಲು, ರಾತ್ರಿ, ನಿನ್ನೆ, ನಾಳೆ, ತಿಂಗಳು, ವರ್ಷ – ಮುಂತಾದವು ಕಾಲದ ಅಂತರ್ಭೇದಗಳು. ಹೋಗುತ್ತಾನೆ, ಬರುತ್ತಾನೆ, ನೋಡುತ್ತಾಳೆ, ಕೊಡುತ್ತಾಳೆ, ಬೀಳುತ್ತದೆ, ಏಳುತ್ತದೆ –

ಎಂಬಿವು ಕ್ರಿಯೆಯ ಅಂತರ್ಭೇದಗಳು. ಹೀಗೆ ಇವುಗಳ ಒಳಭೇದಗಳು ಗೊತ್ತಿದ್ದರೂ ಇವುಗಳೆಲ್ಲದರಲ್ಲಿಯೂ ಅನುಸ್ಯೂತವಾಗಿ ವ್ಯಾಪಕವಾಗಿರುವ ಕಾಲ ಮತ್ತು ಕ್ರಿಯೆಗಳ ಸಾಮಾನ್ಯಲಕ್ಷಣ ಯಾವುದು? – ಎಂಬ ಪ್ರಶ್ನೆಗೆ ಉತ್ತರ ಹೇಳುವುದು ಸುಲಭವಲ್ಲ. ಹಗಲು–ರಾತ್ರಿ ಇವೆರಡು ಪರಸ್ಪರ ವಿರುದ್ಧವಾದ ಕಾಲಭೇದಗಳು. ಇವೆರಡರಲ್ಲಿಯೂ ಸೇರಿಕೊಂಡಿರುವ ಕಾಲ ಎಂಬುದು ಯಾವುದು? ಹೋಗುವುದು–ಬರುವುದು, ಇವೆರಡು ವಿರುದ್ಧ ಕ್ರಿಯಾಭೇದಗಳು. ಇವೆರಡನ್ನೂ ವ್ಯಾಪಿಸಿಕೊಂಡಿರುವ ಕ್ರಿಯೆ ಯಾವುದು? ಎಂತಹ ವಿದ್ವಾಂಸನೂ ಉತ್ತರ ಹೇಳುವಾಗ ತಡವರಿಸುವ ಪ್ರಶ್ನೆಗಳಿವು. ಆದ್ದರಿಂದ ಶಾಸ್ತ್ರಕಾರರು ಈ ವಿಷಯದಲ್ಲಿ ತುಂಬ ವಿಚಾರಮಾಡಿದ್ದಾರೆ, ಕ್ರಿಯಾ ಸ್ವರೂಪವನ್ನು ನಿರ್ಣಯಿಸು ವುದಕ್ಕಿಂತ ಕಾಲಸ್ವರೂಪದ ನಿರ್ಣಯವು ಕಠಿಣವಾದದ್ದು.

ಇವೆರಡೂ ವ್ಯಾಕರಣಶಾಸ್ತ್ರದಲ್ಲಿ ಮುಖ್ಯವಾದವು. ಭೂತಕಾಲ, ವರ್ತಮಾನ ಕಾಲ, ಭವಿಷ್ಯತ್ಕಾಲ – ಎಂದು ಹೇಳುವಾಗ ಕಾಲದ ಸಾಮಾನ್ಯ ಸ್ವರೂಪವೂ ಯಾವುದೆಂಬುದನ್ನು ವಿವರಿಸಬೇಕಾಗುತ್ತದೆ. ಇದು ಕ್ರಿಯಾಪದ, ಕ್ರಿಯೆಯು ಧಾತುವಿನ ಅರ್ಥ – ಎನ್ನುವಾಗ ಕ್ರಿಯೆ ಎಂದರೇನು? ಎಂಬ ಪ್ರಶ್ನೆ ಹುಟ್ಟುತ್ತದೆ. ಕ್ರಿಯೆಯಿಲ್ಲದೆ ಕಾಲವನ್ನು ನಿರ್ಣಯಿಸುವುದಕ್ಕೆ ಆಗುವುದೇ ಇಲ್ಲ. ಭೂತ ಭವಿಷ್ಯದ್ವರ್ತಮಾನ ಕಾಲಗಳನ್ನು ಕ್ರಿಯೆಯ ಆಧಾರದಿಂದಲೇ ಹೇಳಬೇಕಾಗುತ್ತದೆ. ಕ್ರಿಯೆಯಿಲ್ಲದೆ ಯಾವ ವಸ್ತುವೂ ಸ್ವತಃ ಭೂತವೂ ಅಲ್ಲ, ಭವಿಷ್ಯತ್ತೂ ಅಲ್ಲ, ವರ್ತಮಾನವೂ ಅಲ್ಲ. 'ಈ ದೇವಸ್ಥಾನ ಹಳೆಯದು' ಎಂದು ಹೇಳುತ್ತೇವಷ್ಟೆ? ಯಾವ ಕಾರಣದಿಂದ ಹಳೆಯದು? ಬಹಳ ಹಿಂದಿನ ಕಾಲದಲ್ಲಿ ಅದರ ನಿರ್ಮಾಣ ವಾದ್ದರಿಂದ ಹಳೆಯದು. ನಿರ್ಮಾಣಕ್ರಿಯೆಯನ್ನವಲಂಬಿಸಿಯೇ ಹಳೆಯದು ಎಂಬುದು ಸಿದ್ಧವಾಗುತ್ತದೆ. 'ಆತನು ವೇಗವಾಗಿ ಓಡುತ್ತಾನೆ' – ಯಾವ ಆಧಾರ ದಿಂದ 'ವೇಗವಾಗಿ' ಎಂದು ಹೇಳಿದ್ದು? ಓಡುವಾಗ ಎರಡು ಹೆಜ್ಜೆಗಳ ನಡುವೆ ಹೆಚ್ಚುಕಾಲವಿಲಂಬವನ್ನು ಮಾಡದೆ ಹೆಜ್ಜೆಹಾಕುತ್ತಿದ್ದುದರಿಂದ. ಹೀಗೆ ಕಾಲ ಸಂಬಂಧವಿಲ್ಲದೆ 'ಬೇಗನೆ–ವೇಗವಾಗಿ' ಎಂದು ಗೊತ್ತುಪಡಿಸಲಾಗುವುದಿಲ್ಲ. ಈ ಪ್ರಕಾರವಾಗಿ ಕಾಲ ಮತ್ತು ಕ್ರಿಯೆಗಳು ಅನ್ಯೋನ್ಯ ಸಂಬಂಧವನ್ನು ಪಡೆದಿವೆ.

ಕಣ್ಣಿಗೆ ಕಾಣದ, ವೈಜ್ಞಾನಿಕ ಪ್ರಯೋಗಾಲಯಕ್ಕೆ ನಿಲುಕದ, ಆದರೆ ಸಮಸ್ತ ಜನರ ವ್ಯವಹಾರದಲ್ಲಿ ಪ್ರತಿದಿನವೂ ಬಳಕೆಯಾಗುವ ಕಾಲವೆಂಬ ನಿಗೂಢ ವಸ್ತುವಿನ ಸ್ವರೂಪವನ್ನು ಯಾರು ಹೇಳಬಲ್ಲರು? ವೇದವೂ ವೇದಾಂಗ ಜ್ಯೋತಿಃಶಾಸ್ತ್ರವೂ ಕಾಲದ ಅಂತರ್ಭೇದಗಳನ್ನು ತಿಳಿಸಿವೆ. ಆದರೆ ಕಾಲಸ್ವರೂಪವನ್ನು ನಿರ್ಣಯಾತ್ಮಕ ವಾಗಿ ತಿಳಿಸಿಲ್ಲ. ಪಂಚಮವೇದವೆನಿಸಿದ ಮಹಾಭಾರತದಲ್ಲಿ ಸಾಂಖ್ಯಾದಿಮತಗಳಲ್ಲಿ

ಅಂಗೀಕೃತವಾದ ಕಾಲದ ಸ್ವರೂಪವಿದೆ. ವೇದವ್ಯಾಸರು ಸ್ವಾಭಿಪ್ರಾಯವನ್ನು ನಿಶ್ಚಯಿಸಿ ಹೇಳಿಲ್ಲ. ಶಾಂತಿಪರ್ವದ ೨೩೮ನೆಯ ಅಧ್ಯಾಯದಲ್ಲಿ :–

ಕಾಲೋऽಂಶಃ ಪರಮಾತ್ಮನಃ ॥
ಕಾಲಾತ್ಮನಾತ್ವಿದಂ ಭಿನ್ನಮಭಿನ್ನಂ ಶ್ರೂಯತೇ ಹಿ ಯತ್ ।
ಅನಾದ್ಯಂತಮಜಂ ದಿವ್ಯಮವ್ಯಕ್ತಮಜರಂ ಧ್ರುವಮ್ ॥

ಎಂದು ಹೇಳಿದ್ದಾರೆಂದು ಡಾ. ಡಿ. ವಿ. ಗುಂಡಪ್ಪನವರು ತಮ್ಮ 'ಜೀವನಧರ್ಮ ಯೋಗ'ದ ಪರಿಶಿಷ್ಟ ೬ರಲ್ಲಿ ಬರೆದಿದ್ದಾರೆ. ನನ್ನಲ್ಲಿರುವ ಗೋರಖಪುರದ ಪ್ರತಿಯಲ್ಲಿ ಕಾಲದ ವಿಷಯ ಬಂದಿದೆಯಾದರೂ ಮೇಲ್ಕಂಡಂತೆ ಪಾಠವಿಲ್ಲ. ಹೇಗಿದ್ದರೂ ಈ ಭಾಗವು ವ್ಯಾಸರಿಂದ ತಮ್ಮ ಪುತ್ರನಾದ ಶುಕಮುನಿಗೆ ಮಾಡಿದ ಉಪದೇಶವಾಗಿರುವುದರಿಂದ ಇದು ಸ್ವಾಭಿಪ್ರಾಯವೆಂದು ತಿಳಿಯ ಬಹುದು. ಇಲ್ಲಿ 'ಕಾಲವು ಪರಮಾತ್ಮನ ಒಂದು ಅಂಶವಾಗಿದೆ. ಇದು ನಿತ್ಯವಾದದ್ದು. ಆದ್ಯಂತವಿಲ್ಲದ್ದರಿಂದ ಕಾಲವು ಶಾಶ್ವತವಾದದ್ದು' ಎಂದು ತಿಳಿದು ಬರುತ್ತದೆ. ಇದು ಅದ್ವೈತವೇದಾಂತಿಗಳಿಗೂ ವೈಯಾಕರಣರಿಗೂ ಸಂಮತ.

ಡಾ. ಡಿ. ವಿ. ಗುಂಡಪ್ಪನವರು (ಡಿ.ವಿ.ಜಿ) ಅದೇ ಆರನೇ ಪರಿಶಿಷ್ಟದಲ್ಲಿ ಹೇಳಿದ ಇನ್ನೂ ಕೆಲವು ನುಡಿಗಳು ಮನನಯೋಗ್ಯವಾದವು. ಅವುಗಳಲ್ಲಿ ಕೆಲವನ್ನು ಇಲ್ಲಿ ಉದಾಹರಿಸಿದೆ –

೧. "ಕಾಲವು ನಾವು ಅಂತರಂಗದಲ್ಲಿ ಅನುಭವಿಸುವ ಒಂದು ಬಹಿರಂಗ ಸಂಗತಿ. ಅದು ನಮ್ಮ ಕಣ್ಣು ಕೈಗಳಿಗೆ ಸಿಕ್ಕದೆ ಜ್ಞಾನಕ್ಕೆ ಮಾತ್ರ ವಿಷಯವಾಗುತ್ತದೆ.

೨. ಅದು ತಾನು ರೂಪವಿಲ್ಲದ್ದಾದ ಕಾರಣದಿಂದ ರೂಪತಾಳಿದ ಭೌತವಸ್ತುವಿನ ಅಥವಾ ಕ್ರಿಯೆಯ ಸಹವಾಸದಲ್ಲಿ ನಮ್ಮ ಮನಸ್ಸಿಗೆ ಗೋಚರಿಸುತ್ತದೆ. ಜಗದ್ವಸ್ತುಗಳ ಗುಣಗಳನ್ನು – ಬಿಳುಪು, ಕೆಂಪು, ಸಿಹಿ, ಖಾರ, ತೆಳು, ದಪ್ಪ, ಒಳ್ಳೆತನ, ಕೆಟ್ಟತನ, ಇಂಥವುಗಳನ್ನು ಆಯಾ ವಸ್ತುಗಳಿಂದ ಬೇರೆ ತೆಗೆದು ತೋರಿಸುವುದು ಹೇಗೆ ಆಗಲಾರದೋ ಹಾಗೆಯೇ ಕಾಲವನ್ನು ತತ್ಸಂಬದ್ಧಗಳಾದ ವಸ್ತುಕ್ರಿಯೆಗಳಿಂದ ಬೇರ್ಪಡಿಸಿ ತೋರಿಸುವುದು ಅಸಾಧ್ಯ. ಆಗ, ಈಗ, ಯಾವಾಗ, ಇಂದು, ನಾಳೆ, ನಿನ್ನೆ – ಅಂಥಾ ಕ್ರಿಯಾಸಂಬಂಧಿ ವಸ್ತುಗಳು ಕಾಲವಾಚಕಗಳು.

೩. ನಮ್ಮ ಜೀವಮಾನದ ಪ್ರತಿಯೊಂದು ಭಾಗವೂ ವಿಭಾಗವೂ ಕಾಲ.

೪. ಪರಿಮಿತವಾದದ್ದು ಅಳತೆಗೆ ಸಿಗುತ್ತದೆ. ಯಾವುದಕ್ಕೆ ಮೊದಲು ಕೊನೆಗಳುಂಟೋ ಅದನ್ನು ಅಳೆಯುವುದೂ ಎಣಿಸುವುದೂ ಸಾಧ್ಯವಾಗುತ್ತದೆ. ಹೀಗೆ ಆದವು ನಮ್ಮ ಕ್ಷಣ, ದಿನ, ಮಾಸ, ವರ್ಷ, ಯುಗ, ಕಲ್ಪ – ಮೊದಲಾದ ಕಾಲಾವಯವಸಂಕೇತಗಳು.

೫. ಕಾಲಭಾವನೆಯು ಭೌತವಸ್ತು. ಭೌತಕ್ರಿಯೆಗಳಿಗೆ ಅನ್ವಯಿಸಿದಾಗ ದೇಶ ಅಥವಾ ಸ್ಥಾನ ಎನಿಸಿಕೊಳ್ಳುತ್ತದೆ. ಅದೃಶ್ಯವಾದ ಕಾಲತತ್ತ್ವದ ದೃಶ್ಯಾಶ್ರಯವೇ ದೇಶ. ಕಾಲವಿಲ್ಲದೆ ದೇಶವಿಲ್ಲ. ಹಾಗೆಯೇ ದೇಶವಿಲ್ಲದೆ ಕಾಲವಿಲ್ಲವೆಂದೂ ಹೇಳಬಹುದು. ಕಾಲವನ್ನು ನಾವು ಮನಸ್ಸಿನಲ್ಲಿ ಕಾಣುವುದಕ್ಕಾಗಿ ಸಾಧನವಾಗಿ ಕಣ್ಣಿಗೆ ಕಾಣಬರುವ ವಸ್ತುವೋ ಕ್ರಿಯೆಯೋ ಒಂದು ಇರಬೇಕಷ್ಟೆ. ವಸ್ತುವಿಗಾಗಲಿ ಕ್ರಿಯೆಗಾಗಲಿ ಸ್ಥಲವೆಂಬ ಭೌತಾಶ್ರಯವು ಇರಬೇಕು.

೬. ಸತ್ತೂ ಚಿತ್ತೂ ಪರಬ್ರಹ್ಮದ ಲಕ್ಷಣಗಳು. ಆನಂದವೂ ಹಾಗೆಯೇ ಸರಿ. ಬ್ರಹ್ಮಚೈತನ್ಯದಲ್ಲಿ ಅಡಗಿರುವ ಶಕ್ತಿಸಾಮರ್ಥ್ಯಗಳು ಅಪಾರವಾದವು. ಅಚಿಂತ್ಯವಾದವು. ಬ್ರಹ್ಮವಸ್ತುವು ಆ ತನ್ನ ಅನಂತಾದ್ಭುತಶಕ್ತಿಗಳನ್ನು ಸ್ವಾನಂದಲೀಲೆಯಲ್ಲಿ ಜಗದ್ರಚನೆಗೆ ವಿನಿಯೋಗಿಸಿದಾಗ, ಆವರೆಗೆ ಗೂಢವಾಗಿದ್ದ ಕಾಲದೇಶಗಳು ಆಗ ಪ್ರಕಾಶಗೊಳ್ಳುತ್ತವೆ."

ಆದ್ದರಿಂದ ಕಾಲ, ಕ್ರಿಯೆ, ದ್ರವ್ಯ, ದೇಶ (space) ಇವು ನಿತ್ಯಸಂಬಂಧವನ್ನು ಪಡೆದ ವಸ್ತುಗಳು. ನಿಮಿಷ, ಮುಹೂರ್ತ, ದಿನ, ಮಾಸ – ಮುಂತಾದ ಕಾಲಭೇದಗಳ ಸಿದ್ಧಿಗೆ ಸಂಖ್ಯೆ ಬೇಕು. ಸಂಖ್ಯೆ ಇಲ್ಲದೆ ನಿಮಿಷ, ಘಂಟೆ, ಮುಂತಾದವುಗಳು ಸಿದ್ಧಿಸುವುದಿಲ್ಲ. ಕಾಲ, ಕ್ರಿಯೆ, ದ್ರವ್ಯ, ದೇಶ ಇವುಗಳೊಡನೆ ಸಂಖ್ಯೆಯನ್ನೂ ಸೇರಿಸಬೇಕಾಗುವುದು. ಸಂಖ್ಯೆಯು ದ್ರವ್ಯನಿಷ್ಠವಾದ ಗುಣಗಳಲ್ಲಿ ಸೇರುತ್ತದೆ.

'ಕಾಲಸಿದ್ಧಾಂತದರ್ಶಿನೀ' ಎಂಬ ಗ್ರಂಥದಿಂದ ಆಯ್ದ ಕಾಲಸಂಬಂಧಿಗಳಾದ ವಿವಿಧ ದಾರ್ಶನಿಕ ಮತಗಳನ್ನು ಅನುಬಂಧದಲ್ಲಿ ತೋರಿಸಿದ್ದೇನೆ. ಅವನ್ನು ಪರಿಶೀಲಿಸಿದರೆ ನಮ್ಮ ಪ್ರಾಚೀನವಿದ್ವಾಂಸರು ಕಾಲದ ವಿಷಯದಲ್ಲಿ ಎಷ್ಟು ಬಗೆಯಲ್ಲಿ ಚಿಂತನೆಗಳನ್ನು ನಡೆಸಿದ್ದಾರೆಂಬುದು ಗೊತ್ತಾಗುತ್ತದೆ.

ಕಾಲ, ಕ್ರಿಯೆ – ಇವುಗಳ ವಿಷಯವಾಗಿ ಪಾಣಿನಿಯ ಸೂತ್ರ, ಕಾತ್ಯಾಯನನ ವಾರ್ತಿಕ, ಪತಂಜಲಿಯ ಮಹಾಭಾಷ್ಯಗಳಲ್ಲಿ ಹಲವಾರು ವಿಚಾರಗಳು ಬಂದಿವೆ. ಇವೆಲ್ಲವನ್ನೂ ಅಧ್ಯಯನ ಮಾಡಿ ಆ ಕಾಲದ ವಿದ್ವದಭಿಪ್ರಾಯಗಳೆಲ್ಲವನ್ನು

ಸಂಗ್ರಹಿಸಿ ಮಹಾವೈಯಾಕರಣನೂ ದಾರ್ಶನಿಕ ಶಿರೋಮಣಿಯೂ ಆದ ಭರ್ತೃಹರಿಯು ವಾಕ್ಯಪದೀಯದ ಪ್ರಕೀರ್ಣಕಾಂಡದಲ್ಲಿ ಕಾಲಸಮುದ್ದೇಶ ಮತ್ತು ಕ್ರಿಯಾಸಮುದ್ದೇಶ – ಎಂಬೆರಡು ಅಧ್ಯಾಯಗಳನ್ನು ಸೇರಿಸಿದ್ದಾನೆ. ಕಾಲ ಸಮುದ್ದೇಶದಲ್ಲಿ ೧೧೪ ಕಾರಿಕೆಗಳೂ ಕ್ರಿಯಾಸಮುದ್ದೇಶದಲ್ಲಿ ೬೩ ಕಾರಿಕೆಗಳೂ ಉಂಟು. ಎಲ್ಲ ಕಾರಿಕೆಗಳ ಅರ್ಥತಾತ್ಪರ್ಯಗಳನ್ನು ಈ ಪುಸ್ತಕದಲ್ಲಿ ನಾನು ಯಥಾಮತಿಯಾಗಿ ವಿವರಿಸಿದ್ದೇನೆ.

ಶಾಸ್ತ್ರವಿಷಯವನ್ನು ವಿವರಿಸುವ ಶ್ಲೋಕಗಳಿಗೆ ಕಾರಿಕೆಗಳೆಂಬ ಹೆಸರಿದೆ. ಭರ್ತೃಹರಿಯ ಕಾರಿಕೆಗಳು ತುಂಬ ಕ್ಲಿಷ್ಟವಾದವು. ಇದ್ದುದರಲ್ಲಿ ಬ್ರಹ್ಮಕಾಂಡದ ಕಾರಿಕೆಗಳು ಸುಲಭಶೈಲಿಯಲ್ಲಿವೆ ಎನ್ನಬಹುದು. ಈ ಅನುವಾದ ಗ್ರಂಥದಲ್ಲಿ ಪದಶಃ ಅರ್ಥವನ್ನು ಬರೆದರೆ ವಿಸ್ತಾರವಾಗುತ್ತದೆಯೆಂದು ಶ್ಲೋಕಗಳನ್ನು ಆದಷ್ಟು ಸರಳ ಶೈಲಿಯಲ್ಲಿ ಕನ್ನಡದ ಜಾಯಮಾನಕ್ಕೆ ಒಗ್ಗುವಂತೆ ಅನುವಾದ ಮಾಡಿದ್ದೇನೆ. ಇದು ಭಾಷಾಂತರವಲ್ಲ, ಅನುವಾದ. ಸಂಸ್ಕೃತದ ಸಾಮಾನ್ಯ ಪರಿಚಯವಿರತಕ್ಕವರು ಮೂಲದಲ್ಲಿರುವ ಯಾವ ಪದಕ್ಕೆ ಯಾವ ಅರ್ಥವೆಂದು ಗೊತ್ತುಮಾಡಲು ಸಾಧ್ಯವಿದೆ. ಪ್ರತಿಯೊಂದು ಶ್ಲೋಕಕ್ಕೂ ವಿವರಣೆ ಇದೆ.

ಕನ್ನಡದಲ್ಲಿ ಈ ಬಗೆಯ ವಿಚಾರ ಸಾಹಿತ್ಯವು ಹೆಚ್ಚು ಬೆಳೆದಿಲ್ಲ. ಹಿಂದೀ ಭಾಷೆಯಲ್ಲಿ ವಿಪುಲವಾಗಿ ಬೆಳೆದಿದೆ. ಪ್ರಾಚೀನ ಸಂಸ್ಕೃತಶಾಸ್ತ್ರಗ್ರಂಥಗಳನ್ನು ಬಹಳಮಟ್ಟಿಗೆ ಹಿಂದಿಯಲ್ಲಿ ಅನುವಾದಿಸಿದ್ದಾರೆ. ದೇಹಕ್ಕೆ ಮೂಳೆಗಳಿದ್ದಂತೆ ವಿಚಾರ ಪ್ರಧಾನ ಗ್ರಂಥಗಳು ಯಾವ ಭಾಷಾಸಾಹಿತ್ಯಕ್ಕಾದರೂ ದೃಢತೆಯನ್ನುಂಟು ಮಾಡುತ್ತವೆ. ಹಾಗೆ ಈ ಗ್ರಂಥವು ಕನ್ನಡ ಸಾಹಿತ್ಯಕ್ಕೆ ಉಪಕಾರಿಯಾದ ಒಂದು ಕೊಡುಗೆಯೆಂದು ನಾನು ಭಾವಿಸಿದ್ದೇನೆ.

ಬೆಂಗಳೂರು

**ವಿದ್ವಾನ್ ಎನ್. ರಂಗನಾಥಶರ್ಮಾ**

# ಪರಿವಿಡಿ

# ವಾಕ್ಯಪದೀಯಮ್

## ೧. ಬ್ರಹ್ಮಕಾಂಡ

**ಅನಾದಿನಿಧನಂ ಬ್ರಹ್ಮ ಶಬ್ದತತ್ತ್ವಂ ಯದಕ್ಷರಂ ।**
**ವಿವರ್ತತೇಽರ್ಥಭಾವೇನ ಪ್ರಕ್ರಿಯಾ ಜಗತೋ ಯತಃ ॥ ೧ ॥**

ಉತ್ಪತ್ತಿವಿನಾಶಗಳಿಲ್ಲದೆ ಶಾಶ್ವತವಾಗಿರುವ ಶಬ್ದದ ಮೂಲಸ್ವರೂಪವೇ ಬ್ರಹ್ಮವೆನಿಸುತ್ತದೆ. ಇದು ಘಟ, ಪಟ – ಮುಂತಾದ ಪದಾರ್ಥರೂಪದಲ್ಲಿ ಕಾಣಿಸಿಕೊಳ್ಳುತ್ತದೆ. ಈ ಶಬ್ದತತ್ತ್ವದಿಂದ ಜಗತ್ತಿನ ಸೃಷ್ಟಿಯಾಗಿದೆ.

**ವಿವರಣೆ** – ಶಬ್ದವು ಪರಾ, ಪಶ್ಯಂತೀ, ಮಧ್ಯಮಾ, ವೈಖರೀ – ಎಂದು ನಾಲ್ಕು ವಿಧ. ಇವುಗಳಲ್ಲಿ ಪರಾವಾಕ್ ಮನುಷ್ಯನ ಮೂಲಾಧಾರಚಕ್ರದಲ್ಲಿ ವ್ಯವಸ್ಥಿತವಾಗಿದೆ. ಪಶ್ಯಂತೀ, ಮಧ್ಯಮಾ, ವೈಖರೀ ಎಂಬ ಮೂರು ಪರಾವಾಕ್ಕಿನ ಅವಸ್ಥಾಭೇದಗಳು. ವ್ಯಾಕರಣಶಾಸ್ತ್ರಕ್ಕೆ ವಿಷಯವಾಗತಕ್ಕವು ಇವು ಮೂರೇ. ಪೀಠಿಕಾರೂಪವಾಗಿ ಪರಾವಾಕ್ಕನ್ನು ಶಬ್ದತತ್ತ್ವವೆಂದೂ ಶಬ್ದಬ್ರಹ್ಮವೆಂದೂ ಇಲ್ಲಿ ಹೇಳಿ, ಅದರ ಮಹಿಮೆಯನ್ನು ಮುಂದೆ ವಿಸ್ತರಿಸಿದ್ದಾರೆ. ಶಬ್ದದ ಮೂಲ ಸ್ವರೂಪವು ಪರಾವಾಕ್. ವೇದಾಂತಿಗಳು ಯಾವುದನ್ನು ಪರಬ್ರಹ್ಮವೆನ್ನುತ್ತಾರೋ ಅದನ್ನೇ ಇಲ್ಲಿ ಶಬ್ದಬ್ರಹ್ಮವೆಂದು ಹೇಳಲಾಗಿದೆ. ಪರಬ್ರಹ್ಮವು ಶಬ್ದಸ್ವರೂಪವೆಂದು ವೈಯಾಕರಣರ ಸಿದ್ಧಾಂತ.

ವಿವರ್ತತೇ = ವಿವರ್ತಗೊಳ್ಳುತ್ತದೆ. ಸ್ವಸ್ವರೂಪವನ್ನು ತ್ಯಜಿಸದೆ ಅನ್ಯಸ್ವರೂಪದಲ್ಲಿ ಕಾಣಿಸಿಕೊಳ್ಳುವುದಕ್ಕೆ ವಿವರ್ತವೆಂದು ಹೆಸರು. ಹಗ್ಗವು ಹಾವಾಗಿ ಕಾಣುವುದು, ಕಪ್ಪೆಚಿಪ್ಪು ಬೆಳ್ಳಿಯಾಗಿ ಕಾಣುವುದು ವಿವರ್ತ. ಇಲ್ಲಿ ಹಗ್ಗವಾಗಲಿ ಕಪ್ಪೆಚಿಪ್ಪಾಗಲಿ ತನ್ನ ಮೂಲಸ್ವರೂಪವನ್ನು ತ್ಯಜಿಸದೆ ಅನ್ಯರೂಪದಲ್ಲಿ ಕಾಣಿಸುತ್ತದೆ. ಇದಕ್ಕೆ ದೂರಸ್ಥಿತಿಯೋ ಮಬ್ಬುಗತ್ತಲೆಯೋ ಕಾರಣವಾಗಿ ಭ್ರಮೆ ಹುಟ್ಟುತ್ತದೆ. ಇದೇ ವಿವರ್ತವಾದ. ಅದ್ವೈತವೇದಾಂತಿಗಳು ಈ ವಿವರ್ತವಾದವನ್ನೊಪ್ಪಿದ್ದಾರೆ. ಶಬ್ದ ಬ್ರಹ್ಮವಾದವು ಅದ್ವೈತ ಮತಾನುಸಾರವಾಗಿಯೇ ಹೊರಟಿದೆ.

**ಏಕಮೇವ ಯದಾಮ್ನಾತಂ ಭಿನ್ನಂ ಶಕ್ತಿವ್ಯಪಾಶ್ರಯಾತ್ ।**
**ಅಪೃಥಕ್ತ್ವೇಽಪಿ ಶಕ್ತಿಭ್ಯಃ ಪೃಥಕ್ತ್ವೇನೇವ ವರ್ತತೇ ॥ ೨ ॥**

ಇರತಕ್ಕದ್ದು ಶಬ್ದಬ್ರಹ್ಮ ಒಂದೇ ಎಂದು ವೇದವು ಮತ್ತೆ ಮತ್ತೆ ಸಾರಿದೆ. ಅದು ನಾನಾಶಕ್ತಿಗಳನ್ನಾಶ್ರಯಿಸಿ ನಾನಾರೂಪವಾಗಿರುತ್ತದೆ. (ಅನೇಕ ಪದಾರ್ಥಗಳನ್ನು ಸೃಜಿಸಬಲ್ಲ) ಶಕ್ತಿಗಳಿಂದಲೇ ಅದು ಒಂದೇ ಆಗಿ ಭಿನ್ನವಾಗ ದಿದ್ದರೂ ಭಿನ್ನವಾಗಿ ನಾನಾ ರೂಪಗಳಲ್ಲಿರುವಂತೆ ಕಂಡು ಬರುತ್ತದೆ.

**ವಿವರಣೆ** – 'ಏಕಮೇವಾದ್ವಿತೀಯಂ ಬ್ರಹ್ಮ', 'ಅದ್ವೈತ ಏಕ ಏವಾಭವತ್', 'ನೇಹ ನಾನಾಸ್ತಿ ಕಿಂಚನ'– ಮುಂತಾದ ಉಪನಿಷದ್ವಾಕ್ಯಗಳು ಬ್ರಹ್ಮವು ಒಂದೇ ಇದೆಯೆಂದೂ ಅದಕ್ಕೆ ಅತಿರಿಕ್ತವಾದ ವಸ್ತುವೇ ಇಲ್ಲವೆಂದೂ ಘೋಷಿಸುತ್ತವೆ. ಆದರೂ ಬ್ರಹ್ಮವು ಸರ್ವಶಕ್ತಿಸಮನ್ವಿತವಾದ್ದರಿಂದ ಪಂಚಮಹಾಭೂತಗಳ ರೂಪದಲ್ಲಿಯೂ ಮನುಷ್ಯ, ಮೃಗ, ಪಕ್ಷಿ, ಮರ, ಘಟ, ಪಟಾದಿಗಳ ರೂಪದಲ್ಲಿಯೂ ಕಾಣಿಸಿಕೊಳ್ಳಬಲ್ಲದು. ನಮ್ಮ ಭ್ರಮೆಯಿಂದ ಹಾಗೆ ತೋರುತ್ತದೆ. ಈ ಭ್ರಮೆಗೆ ಅವಿದ್ಯೆ ಎಂದು ಹೆಸರು. ಏವಂಚ ಶಬ್ದಬ್ರಹ್ಮ ಒಂದೇ ಇದೆ.

**ಅಧ್ಯಾಹಿತಕಲಾಂ ಯಸ್ಯ ಕಾಲಶಕ್ತಿಮುಪಾಶ್ರಿತಾಃ ।**
**ಜನ್ಮಾದಯೋ ವಿಕಾರಾಃ ಷಡ್ ಭಾವಭೇದಸ್ಯ ಯೋನಯಃ ॥ ೩ ॥**

ಶಬ್ದತತ್ತ್ವದ ಅನಂತಶಕ್ತಿಗಳಲ್ಲಿ ಕಾಲಶಕ್ತಿಯೆಂಬುದೊಂದು. ಇದರಲ್ಲಿ ನಿಮಿಷ, ಗಳಿಗೆ, ಘಂಟೆ, ದಿನ, ತಿಂಗಳು, ಋತು, ವರ್ಷ ಮುಂತಾದ ಕಲಾಭೇದಗಳು ಕಲ್ಪಿತವಾಗಿವೆ. ಇಂತಹ ಕಾಲಶಕ್ತಿಯನ್ನನುಸರಿಸಿ ಜನ್ಮ ಮುಂತಾದ ಆರು ವಿಕಾರಗಳುಂಟಾಗುತ್ತವೆ. ಇವು ಭಾವಪದಾರ್ಥಗಳ ನಾನಾಭೇದಕ್ಕೆ ಕಾರಣಗಳಾಗಿವೆ.

**ವಿವರಣೆ** – ಕಾಲವು ಅಖಂಡವಾದದ್ದು. ನಿಮಿಷ, ಘಂಟೆ ಮೊದಲಾದವು ವ್ಯವಹಾರಕ್ಕಾಗಿ ಕಲ್ಪಿತವಾಗಿವೆ. ಇದರಿಂದ ಸಕಲವಸ್ತುಗಳಿಗೂ ಆರು ವಿಕಾರ–ಗಳುಂಟಾಗುತ್ತವೆ. ಜಾಯತೇ, ಅಸ್ತಿ, ವರ್ಧತೇ, ವಿಪರಿಣಮತೇ, ಅಪಕ್ಷೀಯತೇ, ನಶ್ಯತಿ ಎಂದು ಷಡ್ ಭಾವವಿಕಾರಗಳನ್ನು ಯಾಸ್ಕರು ನಿರುಕ್ತದಲ್ಲಿ ಹೇಳಿದ್ದಾರೆ. ಹುಟ್ಟುವುದು, (ಒಂದಾನೊಂದು ರೂಪವನ್ನು ಧರಿಸಿ) ಇರುವುದು, ಬೆಳೆಯುವುದು, ರೂಪಾಂತರದಿಂದ ಪರಿಣಮಿಸುವುದು, ಕ್ಷಯಿಸುವುದು, ನಾಶವಾಗುವುದು – ಎಂಬಿವೇ ಆರು ವಿಕಾರಗಳು. ರೂಪಾಂತರಗೊಳ್ಳುವುದಕ್ಕೆ ವಿಕಾರವೆಂದು ಹೆಸರು. ಬೀಜದಿಂದ ಮೊಳಕೆ ಹುಟ್ಟುತ್ತದೆ. ಒಂದಾನೊಂದು ಆಕೃತಿಯನ್ನು ಧರಿಸಿ ಇರುತ್ತದೆ.

ಆಮೇಲೆ ಬೆಳೆದು ಮರವಾಗುತ್ತದೆ. ವಿಶಾಲವಾಗಿ ಹರಡಿ ಪರಿಣಮಿಸುತ್ತದೆ. ಅನಂತರ ಕ್ಷಯಿಸುತ್ತದೆ. ಕಡೆಗೆ ನಾಶವಾಗುತ್ತದೆ. ಭಾವವೆಂದರೆ ವಸ್ತು ಮಾತ್ರವೆಂದು ಕೆಲವರ ಅಭಿಪ್ರಾಯ. ನಾಗೇಶಭಟ್ಟರು ತಮ್ಮ ಲಘುಮಂಜೂಷಾದಲ್ಲಿ ಭಾವವೆಂದರೆ ಪರಬ್ರಹ್ಮವೆಂದು ಹೇಳುತ್ತಾರೆ. ಆದ್ದರಿಂದಲೇ ರೂಪಾಂತರದಿಂದ ಎಂದರೆ ಗಡಿಗೆ ಮುಂತಾದ ಪದಾರ್ಥರೂಪದಿಂದ ಬ್ರಹ್ಮವು ಇದೆಯೆಂಬುದು ಒಂದು ವಿಕಾರವೆಂಬ ಮಾತು ಉಪಪನ್ನವಾಗುತ್ತದೆ.

**ಏಕಸ್ಯ ಸರ್ವಬೀಜಸ್ಯ ಯಸ್ಯ ಚೇಯಮನೇಕಧಾ ।**
**ಭೋಕ್ತೃಭೋಕ್ತವ್ಯರೂಪೇಣ ಭೋಗರೂಪೇಣ ಚ ಸ್ಥಿತಿಃ ॥೪॥**

ಅದ್ವಿತೀಯವೂ ಸಮಸ್ತವಸ್ತುಗಳಿಗೆ ಕಾರಣವೂ ಆದ ಶಬ್ದಬ್ರಹ್ಮವು ತನ್ನ ವಿಚಿತ್ರಶಕ್ತಿಯಿಂದ, ಭೋಕ್ತೃ–ಭೋಕ್ತವ್ಯ–ಭೋಗರೂಪದಲ್ಲಿ ಅನೇಕ ಪ್ರಕಾರವಾಗಿ ಲೋಕದಲ್ಲಿ ಇದ್ದುಕೊಂಡಿದೆ.

**ವಿವರಣೆ** – ಶಬ್ದ–ಸ್ಪರ್ಶ–ರೂಪ–ರಸ–ಗಂಧಗಳೆಂಬ ಪಂಚ ವಿಷಯಗಳನ್ನು ಸೇವಿಸಿ ಸುಖದುಃಖಗಳನ್ನು ಭೋಗಿಸತಕ್ಕ ಜೀವಾತ್ಮನು ಭೋಕ್ತೃ. ಶಬ್ದಾದಿ ವಿಷಯಗಳೂ ಅವುಗಳಿಗೆ ಆಶ್ರಯವಾದ ವಸ್ತುಗಳೂ ಭೋಕ್ತವ್ಯ. ಸುಖದುಃಖಗಳ ಅನುಭವವೇ ಭೋಗ. ಜಗತ್ತು ಈ ಮೂರು ವಸ್ತುಗಳ ರೂಪದಲ್ಲಿದೆ. ಇವು ಅಸಂಖ್ಯಾತವಾಗಿ ತೋರುತ್ತವೆ. ಬ್ರಹ್ಮವು ಒಂದೇ ಆದರೂ ಅನಿರ್ವಚನೀಯವಾದ ತನ್ನ ಮಾಯಾ ಶಕ್ತಿಯಿಂದ ಹೀಗೆ ಅನೇಕ ಪ್ರಕಾರವಾಗಿರುತ್ತದೆ.

**ಪ್ರಾಪ್ತ್ಯುಪಾಯೋಽನುಕಾರಶ್ಚ ತಸ್ಯ ವೇದೋ ಮಹರ್ಷಿಭಿಃ ।**
**ಏಕೋಽಪ್ಯನೇಕವರ್ತ್ಮೇವ ಸಮಾಮ್ನಾತಃ ಪೃಥಕ್‌ಪೃಥಕ್ ॥೫॥**

ಅದರ ಪ್ರಾಪ್ತಿಗೆ ಮಾರ್ಗವಾದದ್ದು ವೇದ. ವೇದವು ಶಬ್ದಬ್ರಹ್ಮದ ಪ್ರತಿಕೃತಿಯಾಗಿದೆ. ಅದು ಒಂದೇ ಆಗಿದ್ದರೂ ಅನೇಕ ರೂಪವಾಗಿದೆಯೋ ಎಂಬಂತೆ, (ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವಣವೇದ ಎಂಬ ಹೆಸರುಗಳಿಂದ) ಬೇರೆಬೇರೆಯಾಗಿ ವಿಭಾಗಿಸಿ, ಅಧ್ಯಯನ ಮಾಡಿ, ಮಹರ್ಷಿಗಳು ಉಪದೇಶಿಸಿದ್ದಾರೆ.

**ವಿವರಣೆ** – ಶಬ್ದಬ್ರಹ್ಮವು ಪರಾವಾಕ್, ವೇದವು ವೈಖರೀ ವಾಕ್. ಇದನ್ನು ಕಿವಿಯಿಂದ ಕೇಳಬಹುದು. ಆದ್ದರಿಂದ ವೇದವು ಶಬ್ದಬ್ರಹ್ಮದ ಪ್ರತಿಕೃತಿ – ಪ್ರತಿಮೆಯಾಗುತ್ತದೆ. ಈ ಪ್ರತಿಮೆಯ ಮೂಲವು ಅನಾದಿನಿಧನವಾದ್ದರಿಂದ

ನಿತ್ಯವಾಗಿದೆ. ಅದನ್ನು ಯಾರೂ ರಚಿಸಲಿಲ್ಲ. ಒಂದೇ ವೇದವನ್ನು ನಾಲ್ಕಾಗಿಯೂ ಕಠ, ಕಾಲಾಪ, ತೈತ್ತಿರೀಯ, ವಾಜಸನೇಯ–ಮುಂತಾದ ಶಾಖೆಯುಳ್ಳದ್ದನ್ನಾಗಿಯೂ ಅಧ್ಯಯನಸೌಕರ್ಯಕ್ಕಾಗಿ ಮಹರ್ಷಿಗಳು ವಿಂಗಡಿಸಿ ಅಭ್ಯಾಸ ಮಾಡಿದರು.

**ಭೇದಾನಾಂ ಬಹುಮಾರ್ಗತ್ವಂ ಕರ್ಮಣ್ಯೇಕತ್ರ ಚಾಂಗತಾ ।**
**ಶಬ್ದಾನಾಂ ಯತಶಕ್ತಿತ್ವಂ ತಸ್ಯ ಶಾಖಾಸು ದೃಶ್ಯತೇ ॥ ೬ ॥**

ಋಗ್ವೇದ ಮುಂತಾದ ವೇದಭೇದಗಳಲ್ಲಿಯೂ ಬಹಳ ಶಾಖಾಭೇದ–ಗಳಿವೆ. ಆದರೆ ಒಂದು ವೈದಿಕಕರ್ಮದಲ್ಲಿ ಎಲ್ಲ ವೇದಶಾಖೆಗಳೂ ಅಂಗವಾಗಿ ಉಪಕಾರಕವಾಗಬಹುದು. ವೇದದ ವಿವಿಧ ಶಾಖೆಗಳಲ್ಲಿರುವ ಶಬ್ದಗಳಿಗೆ ಅಭ್ಯುದಯವನ್ನುಂಟುಮಾಡುವ ಶಕ್ತಿಯು ಆಯಾ ಶಾಖೆಗೆ ನಿಯತವಾಗಿರುವುದು ಕಂಡು ಬರುತ್ತದೆ.

**ವಿವರಣೆ** – ಋಗ್ವೇದದಲ್ಲಿ ಇಪ್ಪತ್ತೊಂದು ಶಾಖೆಗಳಿವೆ, ಯಜುರ್ವೇದದಲ್ಲಿ ನೂರೊಂದು ಶಾಖೆಗಳಿವೆ. ಸಾಮವೇದದಲ್ಲಿ ಒಂದು ಸಾವಿರ ಒಳಭೇದಗಳೂ ಅಥರ್ವಣವೇದದಲ್ಲಿ ಒಂಬತ್ತು ಭೇದಗಳೂ ಇವೆ. ಇಷ್ಟಾದರೂ ವಿವಾಹಾದಿ ವೈದಿಕಕರ್ಮದಲ್ಲಿ ಎಲ್ಲ ವೇದಗಳ ಮಂತ್ರಗಳೂ ಅಂಗವಾಗಿ ಉಪಕಾರಕವಾಗುತ್ತವೆ. ಕೆಲವು ವೇದಶಾಖೆಗಳಲ್ಲಿ ಶಬ್ದಗಳ ಆನುಪೂರ್ವಿಯೂ ಸ್ವರವೂ ಅಲ್ಲಲ್ಲಿ ಬೇರೆಯಾಗುತ್ತದೆ. ಆದರೆ ಆ ರೀತಿಯ ಉಚ್ಚಾರಣೆ ಆಯಾ ವೇದಶಾಖೆಗೆ ಮಾತ್ರ ಮೀಸಲು. ಆ ವೇದವನ್ನು ಹೇಳುವಾಗ ಅಲ್ಲಿಯ ಕ್ರಮವನ್ನು ಮಾತ್ರ ಅನುಸರಿಸಬೇಕು.

**ಸ್ಮೃತಯೋ ಬಹುರೂಪಾಶ್ಚ ದೃಷ್ಟಾದೃಷ್ಟಪ್ರಯೋಜನಾಃ ।**
**ತಮೇವಾಶ್ರಿತ್ಯ ಲಿಂಗೇಭ್ಯೋ ವೇದವಿದ್ಭಿಃ ಪ್ರಕಲ್ಪಿತಾಃ ॥ ೭ ॥**

ಮನು, ಯಾಜ್ಞವಲ್ಕ್ಯ – ಮೊದಲಾದ ವೇದವಿದರು ವೇದವನ್ನೇ ಆಧರಿಸಿ, ಅದರಲ್ಲಿರುವ ಕೆಲವು ಸೂಚನೆಗಳಿಂದ ಅನೇಕ ವಿಧವಾದ ಧರ್ಮಶಾಸ್ತ್ರಗಳನ್ನು ರಚಿಸಿದ್ದಾರೆ. ಅವುಗಳ ಕೆಲವು ಆಚರಣೆಗಳಿಗೆ ಫಲವು ಇಲ್ಲಿಯೇ ಗೋಚರಿಸುತ್ತದೆ. ಕೆಲವು ಆಚರಣೆಗಳಿಗೆ ಫಲವು ಈಗಲೇ ಗೋಚರಿಸುವುದಿಲ್ಲ.

**ವಿವರಣೆ** – ಧರ್ಮಶಾಸ್ತ್ರಗಳು ವೇದಮೂಲಕವಾಗಿಯೇ ಬಂದಿವೆ. ಅವು ಹೇಳುವ ವಿಧಿನಿಷೇಧಗಳಿಗೆ ಅನೇಕ ಸ್ಥಳಗಳಲ್ಲಿ ವೇದದ ಆಧಾರ ನೇರವಾಗಿ

ದೊರೆಯುತ್ತದೆ. ಕೆಲವಕ್ಕೆ ವೇದದಲ್ಲಿ ಆಧಾರವು ದೊರೆಯದಿದ್ದರೂ ಅವುಗಳಿಗೆ ವೇದಜ್ಞರಾದ ಶಿಷ್ಟರ ಆಚಾರವೇ ಪ್ರಮಾಣವಾಗಿರುತ್ತದೆ. ವೇದವು ಅನಂತವಾದ್ದ-ರಿಂದ ಕೆಲವು ವೇದವಾಕ್ಯಗಳು ಈಗ ಲುಪ್ತವಾಗಿರಬಹುದು. ಶಿಷ್ಟರ ಆಚಾರವು ವೇದಮೂಲಕವಾಗಿಯೇ ಬಂದಿರುತ್ತದೆಯಾದ್ದರಿಂದ ಈ ವಿಧಿನಿಷೇಧಗಳೂ ವೇದಸಂಮತವೆಂದು ತಿಳಿಯಬೇಕು.

೧. ಗುರುವಿನ ಸೇವೆಯನ್ನು ಮಾಡಬೇಕು – ಎಂಬುದು ವಿಧಿ. ಸೇವೆಯಿಂದ ಸಂಪ್ರೀತನಾದ ಗುರು ಶಿಷ್ಯನಿಗೆ ಚೆನ್ನಾಗಿ ಪಾಠಹೇಳುತ್ತಾನೆ. ಇಲ್ಲಿ ಪ್ರಯೋಜನವು ದೃಷ್ಟವಾಗಿದೆ.

೨. ಗೃಹಸ್ಥನು ಅಗ್ನಿಹೋತ್ರವನ್ನು ನಡೆಸಿ ಹೋಮ ಮಾಡುತ್ತಿರಬೇಕು – ಅಗ್ನಿಹೋತ್ರದ ಪ್ರಯೋಜನವು ಜನ್ಮಾಂತರದಲ್ಲಿ ದೊರೆಯುತ್ತದೆ. ಇದು ನಮಗೆ ಅದೃಷ್ಟವಾದದ್ದು.

**ತಸ್ಯಾರ್ಥವಾದರೂಪಾಣಿ ನಿಶ್ಚಿತ್ಯ ಸ್ವವಿಕಲ್ಪಜಾಃ ।**
**ಏಕತ್ವಿನಾಂ ದ್ವೈತಿನಾಂ ಚ ಪ್ರವಾದಾ ಬಹುಧಾ ಮತಾಃ ॥ ೮ ॥**

ವೈದಿಕಮತದಲ್ಲಿ ಕೆಲವರು ಏಕತ್ವವಾದಿಗಳಾದ ಅದ್ವೈತಿಗಳು, ಕೆಲವರು ಅನೇಕತ್ವವಾದಿಗಳಾದ ದ್ವೈತಿಗಳು. ಇವರ ದರ್ಶನಗಳು ವಿಪುಲವಾಗಿವೆ (ದ್ವೈತ – ಅದ್ವೈತವಾದಗಳಿಗೆ ನಿಮಿತ್ತವೇನೆಂದರೆ) ಈ ಜನರು ತಮ್ಮ ಬುದ್ಧಿಭೇದಕ್ಕೆ ಅನುಗುಣವಾಗಿ ಕೆಲವು ವೇದವಾಕ್ಯಗಳು ಅರ್ಥವಾದಕ್ಕೆ ಸಮಾನವಾದವುಗಳೆಂದು ತಿಳಿಯುತ್ತಾರೆ.

**ವಿವರಣೆ** – ವೇದದಲ್ಲಿ ಸ್ತುತಿವಾಕ್ಯಗಳೂ ನಿಂದಾವಾಕ್ಯಗಳೂ ಅಲ್ಲಲ್ಲಿ ಕಂಡು ಬರುತ್ತವೆ. ಅವು ನಮಗೆ ಯಾವುದೇ ವಸ್ತುವಿನ ನೂತನ ಜ್ಞಾನವನ್ನು ಉಂಟು ಮಾಡುವುದಿಲ್ಲ ಅಥವಾ ಒಂದು ಕ್ರಿಯೆಯಲ್ಲಿ ನಮ್ಮನ್ನು ತೊಡಗಿಸುವುದೂ ಇಲ್ಲ. ಅಂತಹ ವಾಕ್ಯಗಳಿಗೆ ಅರ್ಥವಾದಗಳೆಂದು ಹೆಸರು. ಅರ್ಥವಾದಕ್ಕೆ ಹೆಚ್ಚಿನ ಮಹತ್ತ್ವವಿಲ್ಲ. ಉಪನಿಷತ್ತುಗಳಲ್ಲಿ ಅದ್ವೈತ ಪ್ರತಿಪಾದಕ ಶ್ರುತಿಗಳೂ ಇವೆ. ದ್ವೈತ ಪ್ರತಿಪಾದಕ ಶ್ರುತಿಗಳೂ ಇವೆ.

ಅದ್ವೈತಿಗಳ ವಾದ ಹೀಗೆ – ವೇದದಲ್ಲಿ ಅದ್ವೈತವನ್ನು ಬೋಧಿಸುವ ವಾಕ್ಯಗಳು ಪುಷ್ಕಳವಾಗಿವೆ. ದ್ವೈತವಾದರೋ ಲೋಕದಲ್ಲಿ ಸಾಮಾನ್ಯರಿಗೂ ಕಾಣತಕ್ಕದ್ದು. ಅದನ್ನು ವೇದವು ತಿಳಿಸಿಕೊಡಬೇಕಾಗಿಲ್ಲ. ದ್ವೈತಶ್ರುತಿಗಳು ನಮಗೆ ಗೊತ್ತಿರುವುದನ್ನೇ ಹೇಳುವುದರಿಂದ ಪ್ರಮಾಣವಲ್ಲ, ಅರ್ಥವಾದದಂತೆ ಅವಕ್ಕೆ

ಮಹತ್ತ್ವವಿಲ್ಲ. ಸಂಭಾಷಣೆಗಾಗಿಯೋ ವರ್ಣನೆಗಾಗಿಯೋ ದ್ವೈತ ವಾಕ್ಯಗಳಿವೆ. ಅವನ್ನು ಉಪೇಕ್ಷಿಸಬಹುದು. ಅವುಗಳ ಸಂಖ್ಯೆಯೂ ಬಹಳ ಕಡಿಮೆ.

ದ್ವೈತಿಗಳ ವಾದ ಹೀಗೆ – ಅದ್ವೈತವು ಪ್ರತ್ಯಕ್ಷ ವಿರೋಧಿಯಾಗಿದೆ. ಅನುಭವಕ್ಕೆ ವಿರುದ್ಧವಾದದ್ದು ಪ್ರಮಾಣವಲ್ಲ, ವೈರಾಗ್ಯವನ್ನು ಬೋಧಿಸುವುದಕ್ಕಾಗಿ ಅದ್ವೈತ ವಾಕ್ಯವು ಬಂದಿದೆ. 'ಇರುವುದೆಲ್ಲ ಒಂದೇ, ಯಾರು ಯಾರಿಗಾಗಿ ದುಡಿಯಬೇಕು?' ಎಂದು ಈ ವಾಕ್ಯಗಳು ವೈರಾಗ್ಯವನ್ನು ಘೋಷಿಸುತ್ತವೆ. ಆದ್ದರಿಂದ ಅರ್ಥವಾದದ ಹಾಗೆ ಅದ್ವೈತವಾಕ್ಯಕ್ಕೆ ಮಹತ್ತ್ವವನ್ನು ಕೊಡಬೇಕಾಗಿಲ್ಲ.

ಹೀಗೆ ತಮಗೆ ತೋರಿದ್ದನ್ನು ಹೇಳುತ್ತಿರುವುದರಿಂದ ನಾನಾ ದರ್ಶನಗಳು ಹುಟ್ಟಿಕೊಂಡಿವೆ.

**ಸತ್ಯಾ ವಿಶುದ್ಧಿಸ್ತತ್ರೋಕ್ತಾ ವಿದ್ಯೈವೈಕಪದಾಗಮಾ ।**
**ಯುಕ್ತಾ ಪ್ರಣವರೂಪೇಣ ಸರ್ವವಾದಾವಿರೋಧಿನೀ ॥ ೯ ॥**

ಆದರೆ (ರಾಗದ್ವೇಷಾದಿಗಳಲ್ಲಿಲ್ಲದ್ದರಿಂದ) ಶುದ್ಧವೂ ಪರಮಾರ್ಥ ಸತ್ಯವೂ ಆದ (ಅದ್ವೈತ) ವಿದ್ಯೆಯೇ ವೇದದಲ್ಲಿ ಉಕ್ತವಾದದ್ದು. ಆ ವಿದ್ಯೆ–ಯಲ್ಲಿ 'ಓಂ' ಎಂಬ ಒಂದು ಪದವೇ ಬ್ರಹ್ಮಪ್ರಾಪ್ತಿಗೆ ಉಪಾಯವಾಗಿರುತ್ತದೆ. ಆ ವಿದ್ಯೆಯು ಪ್ರಣವರೂಪದಿಂದಿದ್ದು ಸಮಸ್ತವಾದಗಳೊಡನೆ ವಿರೋಧವನ್ನು ಕಟ್ಟಿಕೊಳ್ಳದೆ ಸಮಂಜಸವಾಗಿದೆ.

**ವಿವರಣೆ** – ಈ ಸಿದ್ಧಾಂತದಲ್ಲಿ ಓಂಕಾರವು ಪರಮಾತ್ಮ ವಾಚಕವಾದ್ದರಿಂದ ಪರಮಾತ್ಮನನ್ನು ಶಿವ, ವಿಷ್ಣು, ಬ್ರಹ್ಮ, ಈಶ್ವರ – ಎಂದು ಯಾವ ಶಬ್ದಗಳಿಂದ ಕರೆದರೂ ಅದ್ವೈತಕ್ಕೆ ವಿರೋಧವಿಲ್ಲ. ವ್ಯವಹಾರ ದಶೆಯಲ್ಲಿ ದ್ವೈತವು ಸರ್ವರಿಗೂ ಆವಶ್ಯಕ. ಈಶ್ವರಾರ್ಚನೆ, ದಾನ ಧರ್ಮಾದಿ ಪುಣ್ಯಕಾರ್ಯಗಳು ದ್ವೈತದಶೆ–ಯಲ್ಲಿಯೇ ನಡೆಯುತ್ತವೆ. ಅದ್ವೈತಿಯೂ ವ್ಯವಹಾರದಲ್ಲಿ ದ್ವೈತವನ್ನೊಪ್ಪುತ್ತಾನೆ. ಜಗತ್ತಿಗೆ ಪರಮಾಣು ಕಾರಣವೆಂದು ತಾರ್ಕಿಕನೂ ಪ್ರಕೃತಿಯು ಕಾರಣವೆಂದು ಸಾಂಖ್ಯನೂ ಹೇಳುತ್ತಾನೆ. ಅವರ ಮತದಲ್ಲಿ ಪರಸ್ಪರ ವಿರೋಧ ಇದೆ. ಅದ್ವೈತಿ–ಯಾದರೋ ಪರಮಾಣು, ಪ್ರಕೃತಿಗಳು ಮೂಲತಃ ಬ್ರಹ್ಮವೇ ಆದ್ದರಿಂದ ಬ್ರಹ್ಮ–ಕಾರಣತಾವಾದದಲ್ಲಿ ತಮಗೆ ವಿರೋಧವೇನೂ ಬರುವುದಿಲ್ಲವೆನ್ನುತ್ತಾರೆ. ಮೋಕ್ಷಕ್ಕೆ ಜ್ಞಾನವು ಕಾರಣವೆಂದು ಅದ್ವೈತಿಗಳ ಮತ. ಕರ್ಮ, ಉಪಾಸನೆ, ಭಕ್ತಿ, ಪ್ರಪತ್ತಿ ಎಂಬಿವು ಕಾರಣವೆಂದು ದ್ವೈತದರ್ಶನಗಳು ಹೇಳುತ್ತವೆ. ಕರ್ಮಾದಿಗಳೆಲ್ಲವೂ ಪರಂಪರೆಯಿಂದ ಮೋಕ್ಷಕ್ಕೆ ಕಾರಣಗಳೇ. ಅವುಗಳಿಂದ ಆತ್ಮಜ್ಞಾನ ಹುಟ್ಟಿ ಮೋಕ್ಷವು

ದೊರೆಯುತ್ತದೆಯೆಂದು ಅದ್ವೈತಿಗಳ ಹೇಳಿಕೆ. ಹೀಗೆ ಎಲ್ಲ ವಾದಗಳನ್ನು ಅದ್ವೈತ–ದರ್ಶನದಲ್ಲಿ ಸಮನ್ವಯಗೊಳಿಸಬಹುದು. ದ್ವೈತವು ಯೋಗ್ಯತೆ, ಅಧಿಕಾರಗಳನ್ನು ಪರಿಶೀಲಿಸಿ ಸಾಧಕನಿಗೆ ಬೋಧಿಸಿದ ಮಾರ್ಗವೆಲ್ಲವೂ ಸೋಪಾನಕ್ರಮದಿಂದ ಸಿದ್ಧಿಗೆ ಕಾರಣವಾಗಿದೆಯೆಂದು ಒಪ್ಪುವುದರಿಂದ ಅದ್ವೈತಕ್ಕೆ ಬೇರೆ ಯಾವ ದರ್ಶನದಿಂದಲೂ ಭಯವಿಲ್ಲ. ಪರಮಾರ್ಥದಶೆಯಲ್ಲಿ ಅದ್ವೈತ. ವ್ಯವಹಾರ ದಶೆಯಲ್ಲಿ ದ್ವೈತ. ಆದ್ದರಿಂದ ವಿರೋಧವೂ ಇಲ್ಲ. ಈ ವಿಷಯವನ್ನು ಗೌಡಪಾದರು ಮಾಂಡೂಕ್ಯಕಾರಿಕೆಯಲ್ಲಿಯೂ ಹೇಳಿದ್ದಾರೆ.

ಸ್ವಸಿದ್ಧಾಂತವ್ಯವಸ್ಥಾಸು ದ್ವೈತಿನೋ ನಿಶ್ಚಿತಾ ದೃಢಂ ।
ಪರಸ್ಪರಂ ವಿರುಧ್ಯಂತೇ ತೈರಯಂ ನ ವಿರುಧ್ಯತೇ ॥
ಅದ್ವೈತಂ ಪರಮಾರ್ಥೋ ಹಿ ದ್ವೈತಂ ತದ್ಭೇದ ಉಚ್ಯತೇ ॥
– ಮಾಂ. ಕಾ. ೩–೧೭, ೧೮

**ವಿಧಾತುಸ್ತಸ್ಯ ಲೋಕಾನಾಮಂಗೋಪಾಂಗನಿಬಂಧನಾಃ ।**
**ವಿದ್ಯಾಭೇದಾಃ ಪ್ರತಾಯಂತೇ ಜ್ಞಾನಸಂಸ್ಕಾರಹೇತವಃ ॥ ೧೦ ॥**

ಪ್ರಣವರೂಪವಾದ ಆ ವೇದವು ಸಮಸ್ತಲೋಕಗಳಿಗೆ ಉಪದೇಷ್ಟೃವೂ ಸೃಷ್ಟಿಕರ್ತೃವೂ ಆಗಿದೆ. ವೇದದ ಅಂಗ–ಉಪಾಂಗ ಮೂಲವಾದ ವ್ಯಾಕರಣ ಶಾಸ್ತ್ರ ಮುಂತಾದ ವಿದ್ಯಾಭೇದಗಳು ವಿಸ್ತಾರವಾಗಿ ಬೆಳೆದಿವೆ. ಅವು ಮಾನವ–ನಿಗೆ ಉತ್ತಮಜ್ಞಾನವನ್ನೂ ಸಂಸ್ಕಾರವಿಶೇಷವನ್ನೂ ಉಂಟುಮಾಡುತ್ತವೆ.

**ವಿವರಣೆ** – ಶಬ್ದಬ್ರಹ್ಮವಾದ ಓಂಕಾರದ ವೈಖರೀಸ್ವರೂಪವೇ ವೇದ. ವೇದಾಂಗಗಳು ಶಿಕ್ಷಾ, ವ್ಯಾಕರಣ, ಛಂದಸ್ಸು, ನಿರುಕ್ತ, ಜ್ಯೌತಿಷ ಮತ್ತು ಕಲ್ಪ. ಉಪಾಂಗಗಳು ಆಯುರ್ವೇದ, ಧನುರ್ವೇದ, ಗಾಂಧರ್ವವೇದ ಮತ್ತು ಅರ್ಥಶಾಸ್ತ್ರ. 'ಓಂಕಾರ ಏವ ಸರ್ವಾ ವಾಕ್' 'ಓಮಿತ್ಯೇತದಕ್ಷರಮಿದಂ ಸರ್ವಂ' 'ವಾಚಾರಂಭಣಂ ವಿಕಾರೋ ನಾಮಧೇಯಂ' ಮುಂತಾದ ಶ್ರುತಿಗಳು ಈ ಶ್ಲೋಕಕ್ಕೆ ಆಧಾರ. ಮಾಂಡೂಕ್ಯೋಪನಿಷತ್, ಸೂತಸಂಹಿತಾ, ಭಾಗವತ – ಮೊದಲಾದ ಗ್ರಂಥಗಳಲ್ಲಿ ಹೆಚ್ಚಿನ ವಿವರಣೆ ಸಿಗುತ್ತದೆ.

**ಆಸನ್ನಂ ಬ್ರಹ್ಮಣಸ್ತಸ್ಯ ತಪಸಾಮುತ್ತಮಂ ತಪಃ ।**
**ಪ್ರಥಮಂ ಛಂದಸಾಮಂಗಂ ಪ್ರಾಹುರ್ವ್ಯಾಕರಣಂ ಬುಧಾಃ ॥ ೧೧ ॥**

ವ್ಯಾಕರಣಶಾಸ್ತ್ರವು ವೇದರೂಪದಲ್ಲಿರುವ ಶಬ್ದಬ್ರಹ್ಮಕ್ಕೆ ಸಾಕ್ಷಾತ್

ಉಪಕಾರಕವಾದ ಹತ್ತಿರದ ಅಂಗ. ವ್ಯಾಕರಣಾಧ್ಯಯನವು ತಪಸ್ಸುಗಳಲ್ಲಿ ಶ್ರೇಷ್ಠವಾದ ತಪಸ್ಸು. ಈ ಶಾಸ್ತ್ರವು ವೇದಗಳಿಗೆ ಮುಖ್ಯವಾದ ಅಂಗ. ವಿದ್ವಾಂಸರಾದ ಮಹರ್ಷಿಗಳೇ ಈ ಮಾತನ್ನು ಹೇಳಿದ್ದಾರೆ.

**ವಿವರಣೆ** – ವೇದಾರ್ಥವನ್ನರಿಯಲು ವ್ಯಾಕರಣವು ತುಂಬ ಸಹಾಯ ಮಾಡುತ್ತದೆ. ಲೋಕದಲ್ಲಿ ಬಳಕೆಯಲ್ಲಿಲ್ಲದ ಶಬ್ದರೂಪವನ್ನು ತಿಳಿಸಿಕೊಡುತ್ತದೆ. ಉದಾತ್ತಾದಿ ಸ್ವರಭೇದದಿಂದ ಹೇಗೆ ಅರ್ಥವು ಬೇರೆಯಾಗುತ್ತದೆಯೆಂಬುದನ್ನು ಹೇಳಿಕೊಡುತ್ತದೆ. ಯಜ್ಞಪ್ರಕರಣದಲ್ಲಿ ಕೆಲವು ಮಂತ್ರಗಳ ಸ್ವರೂಪವನ್ನು ಊಹಿಸಿ–ಕೊಳ್ಳಬೇಕಾಗುತ್ತದೆ. ಆಗ ಊಹಿಸಬೇಕಾದ ಶಬ್ದವು ಯಾವ ರೀತಿಯಲ್ಲಿದೆ–ಯೆಂಬುದನ್ನು ವ್ಯಾಕರಣದಿಂದಲೇ ತಿಳಿಯಬೇಕು. ವೇದಪುರುಷನಿಗೆ ವ್ಯಾಕರಣವು ಮುಖವಿದ್ದಂತೆ. 'ಮುಖಂ ವ್ಯಾಕರಣಂ ಪ್ರೋಕ್ತಂ' ಎಂದು ಹೇಳಿದ್ದಾರೆ. 'ಪ್ರಧಾನಂ ಚ ಷಡಂಗೇಷು ವ್ಯಾಕರಣಂ' ಎಂದು ಪತಂಜಲಿಮುನಿಗಳು ಹೇಳುತ್ತಾರೆ. ವ್ಯಾಕರಣಾಧ್ಯಯನವು ಮುಖ್ಯವಾದ ತಪಸ್ಸು. ಇದರಿಂದ ದೃಷ್ಟವಾದ ಯಶಸ್ಸು, ಧನ ಮುಂತಾದ ಫಲವೂ ದೊರೆಯುತ್ತದೆ. ಶಬ್ದದ ವ್ಯುತ್ಪತ್ತಿಯನ್ನು ತಿಳಿದು ಸಾಧುಶಬ್ದ ವನ್ನು ಪ್ರಯೋಗಿಸುವುದರಿಂದ ಪುಣ್ಯವೆಂಬ ಅದೃಷ್ಟ ಫಲವೂ ಉಂಟು. 'ಏಕಃ ಶಬ್ದಃ ಸಮ್ಯಗ್‌ಜ್ಞಾತಃ ಶಾಸ್ತ್ರಾನ್ವಿತಃ ಸುಪ್ರಯುಕ್ತಃ ಸ್ವರ್ಗೇ ಲೋಕೇ ಕಾಮಧುಗ್ ಭವತಿ' ಎಂದು ಮಹಾಭಾಷ್ಯದಲ್ಲಿ ಹೇಳಿದೆ (ಏಕಃ ಪೂರ್ವಪರಯೋಃ ೬–೧–೮೪).

**ಪ್ರಾಪ್ತರೂಪವಿಭಾಗಾಯಾ ಯೋ ವಾಚಃ ಪರಮೋ ರಸಃ ।**
**ಯತ್ತತ್‌ಪುಣ್ಯತಮಂ ಜ್ಯೋತಿಸ್ತಸ್ಯ ಮಾರ್ಗೋऽಯಮಾಂಜಸಃ ॥೧೨॥**

(ಆಂತರಿಕವಾದ ಶಬ್ದತತ್ತ್ವವು ಅರ್ಥಬೋಧನೆಗಾಗಿ) ಘಟ, ಪಟ–ಮುಂತಾದ ನಾನಾ ರೂಪಭೇದಗಳನ್ನು ಪಡೆದು ವೈಖರೀ ರೂಪದಲ್ಲಿರುತ್ತದೆ. ಅಂತಹ ವಾಕ್ಕಿನಲ್ಲಿ ಪರಮಸಾರವಾದದ್ದು ಸಾಧುಶಬ್ದ ಸಮೂಹ. ಅದು ಪವಿತ್ರತಮವಾದ ಜ್ಯೋತಿಯೇ ಆಗಿದೆ. ಆ ಜ್ಯೋತಿಯನ್ನರಿಯಲು ವ್ಯಾಕರಣವು ಸರಳವಾದ ಮಾರ್ಗ, ಬೇರೆ ಮಾರ್ಗವಿಲ್ಲ.

**ವಿವರಣೆ** – ಶಬ್ದತತ್ತ್ವವು ವರ್ಣವಿಭಾಗವಿಲ್ಲದೆ ಅಖಂಡವಾಗಿರುತ್ತದೆ. ಅದೇ ನಾವು ಮಾತಾಡುವ ಶಬ್ದರೂಪವಾಗಿ ವಿವರ್ತ ಹೊಂದುತ್ತದೆ. ಈ ಶಬ್ದಗಳನ್ನು ಅಜ್ಞರೂ ಅಶಕ್ತರೂ ಆದ ಜನರು ಬಳಸುತ್ತ ಅಪಭ್ರಂಶಗಳನ್ನಾಗಿ ಮಾಡಿಬಿಡುತ್ತಾರೆ. ಆಗ ಸಾಧುಶಬ್ದ ಯಾವುದು ? ಅಸಾಧುಶಬ್ದ ಯಾವುದು? ಎಂದು ತಿಳಿಯಲು ವ್ಯಾಕರಣಶಾಸ್ತ್ರ ಒಂದೇ ಸರಳವಾದ ಮಾರ್ಗ. ಈ ಸಾಧುಶಬ್ದವು ಪುಣ್ಯತಮವಾದ

ಜ್ಯೋತಿ. ಜ್ಯೋತಿಯೆಂದರೆ ಅರ್ಥಪ್ರಕಾಶಕವಾದದ್ದು. ಅಗ್ನಿ, ಬುದ್ಧಿ, ಶಬ್ದ – ಇವು ಮೂರನ್ನು ಜ್ಯೋತಿಗಳೆಂದು ವೇದವು ಹೇಳಿದೆ. ಅಗ್ನಿಯೂ ಬುದ್ಧಿಯೂ ತಿಳಿಸಲಾರದ ವಸ್ತುಗಳನ್ನು ಶಬ್ದವು ತಿಳಿಸಿಕೊಡುತ್ತದೆ. ಶಬ್ದವು ಪ್ರಕಾಶಪಡಿಸದೆ ಇರತಕ್ಕ ವಸ್ತುವೇ ಇಲ್ಲ.

ಆದ್ದರಿಂದ ಶಬ್ದವು ಶ್ರೇಷ್ಠವಾದ ಜ್ಯೋತಿ. ಇದನ್ನರಿಯಲು ವ್ಯಾಕರಣವೇ ಉತ್ತಮವಾದ ಮಾರ್ಗ. ಶಬ್ದಗಳು ಅನಂತವಾದ್ದರಿಂದ ಅವುಗಳನ್ನು ಪಟ್ಟಿಮಾಡಿ ಗಟ್ಟಿ ಮಾಡಲು ಯಾರಿಗೂ ಸಾಧ್ಯವಿಲ್ಲ. ವ್ಯಾಕರಣದ ನಿಯಮಗಳಿಂದ ಸಮಸ್ತ ಶಬ್ದಗಳ ಸ್ವರೂಪವನ್ನು ಗೊತ್ತುಪಡಿಸಲು ಸಾಧ್ಯ.

**ಅರ್ಥಪ್ರವೃತ್ತಿತತ್ತ್ವಾನಾಂ ಶಬ್ದಾ ಏವ ನಿಬಂಧನಂ ।**
**ತತ್ತ್ವಾವಬೋಧಃ ಶಬ್ದಾನಾಂ ನಾಸ್ತಿ ವ್ಯಾಕರಣಾದೃತೇ ॥ ೧೩ ॥**

ಗೋವು ಮುಂತಾದ ಪದಾರ್ಥಗಳನ್ನು ವ್ಯವಹಾರದಲ್ಲಿ ಬಳಸುವಾಗ ಅವುಗಳಲ್ಲಿರುವ ಜಾತಿ, ಕ್ರಿಯಾ, ಗುಣ, ಸಂಜ್ಞೆಗಳು ಕಾರಣಗಳು. ಅವುಗಳನ್ನು ತಿಳಿಸಿ ಕೊಡಲು ಶಬ್ದಗಳೇ ಆಧಾರ. ಶಬ್ದಗಳ ಸಾಧುತ್ವವನ್ನು ತಿಳಿಯಲು ವ್ಯಾಕರಣಶಾಸ್ತ್ರದ ಹೊರತಾಗಿ ಇನ್ನಾವ ಸಾಧನವೂ ಇಲ್ಲ.

**ವಿವರಣೆ** – ಪದಾರ್ಥದ ಮುಖ್ಯಧರ್ಮವನ್ನು ತಿಳಿದೇ ನಾವು ವ್ಯವಹರಿಸು–ತ್ತೇವೆ. ಜಾತಿ, ಗುಣ, ಕ್ರಿಯಾ, ಸಂಜ್ಞಾ ಇವು ನಾಲ್ಕು ಪದಾರ್ಥಧರ್ಮಗಳು. ಇವನ್ನು ಪ್ರವೃತ್ತಿನಿಮಿತ್ತ ಎಂದು ಶಾಸ್ತ್ರಕಾರರು ಹೇಳುತ್ತಾರೆ. ಗೋ, ಮನುಷ್ಯ, ಘಟ ಮುಂತಾದವುಗಳಲ್ಲಿ ಗೋತ್ವ, ಮನುಷ್ಯತ್ವ, ಘಟತ್ವ ಎಂಬ ಜಾತಿಗಳು ಅನುಕ್ರಮ–ವಾಗಿ ಇರುತ್ತವೆ. ಈ ಶಬ್ದಗಳಿಗೆ ಜಾತಿಶಬ್ದಗಳೆಂದು ಹೆಸರು. ಶುಕ್ಲ, ಕೃಷ್ಣ, ರಕ್ತ ಮುಂತಾದವು ಗುಣಶಬ್ದಗಳು. ಶುಕ್ಲತ್ವ ಎಂದರೆ ಬಿಳಿಯ ಬಣ್ಣವೆಂದರ್ಥ, ಇದು ಬಟ್ಟೆ ಮೊದಲಾದ್ದರಲ್ಲಿದೆ. ಈ ಶಬ್ದಗಳು ಗುಣ ಶಬ್ದಗಳು. ಪಾಚಕ, ಉಪನ್ಯಾಸಕ, ಲೇಖಕ ಮುಂತಾದವು ಕ್ರಿಯಾ ಶಬ್ದಗಳು. ರಾಮ, ಕೃಷ್ಣ, ಚೈತ್ರ ಮೊದಲಾದವು ಸಂಜ್ಞಾಶಬ್ದಗಳು. ಅರ್ಥದಲ್ಲಿರುವ ಈ ಧರ್ಮದ ಸ್ವರೂಪವನ್ನು ಬೋಧಿಸಲು ಶಬ್ದಗಳು ಮಾತ್ರ ಸಮರ್ಥವಾಗಿವೆ. ಸಾಧುಶಬ್ದವಾವುದು? ಎಂದು ನಿರ್ಧರಿಸಲು ವ್ಯಾಕರಣ ಒಂದೇ ಅವಲಂಬನ.

**ತದ್ ದ್ವಾರಮಪವರ್ಗಸ್ಯ ವಾಙ್ಮಲಾನಾಂ ಚಿಕಿತ್ಸಿತಂ ।**
**ಪವಿತ್ರಂ ಸರ್ವವಿದ್ಯಾನಾಮಧಿವಿದ್ಯಂ ಪ್ರಕಾಶತೇ ॥ ೧೪ ॥**

ಆ ವ್ಯಾಕರಣವು ಮೋಕ್ಷಕ್ಕೆ ಬಾಗಿಲು. ವಾಕ್ಕಿನ ದೋಷಗಳಿಗೆ ಚಿಕಿತ್ಸಾ-ಶಾಸ್ತ್ರ. ಸರ್ವವಿದ್ಯೆಗಳಲ್ಲಿ ಪವಿತ್ರವಾದದ್ದು. ವಿದ್ಯೆಗಳ ನಡುವೆ ವಿಶೇಷವಾಗಿ ಪ್ರಕಾಶಿಸುತ್ತದೆ.

**ವಿವರಣೆ** – ಶಬ್ದಬ್ರಹ್ಮದೊಡನೆ ಸಾಯುಜ್ಯವನ್ನೈಯುವುದೇ ಮೋಕ್ಷ. ಅದಕ್ಕೆ ವ್ಯಾಕರಣವು ತೆರೆದ ಬಾಗಿಲು. ಮಾತಿನಲ್ಲಿ ಬರುವ ಅಪಶಬ್ದದ ಕೊಳೆಯನ್ನು ಇದು ಹೋಗಲಾಡಿಸುತ್ತದೆ. ವ್ಯಾಕರಣವು ಪರಮಪವಿತ್ರವೆನ್ನುವುದನ್ನು ಈ ಪ್ರಾಚೀನ ಶ್ಲೋಕ ಹೇಳುತ್ತದೆ –

ಆಪಃ ಪವಿತ್ರಂ ಪರಮಂ ಪೃಥಿವ್ಯಾಂ
ಅಪಾಂ ಪವಿತ್ರಂ ಪರಮಂ ಚ ಮಂತ್ರಾಃ ।
ತೇಷಾಂ ಚ ಸಾಮರ್ಗ್ಯಜುಷಾಂ ಪವಿತ್ರಂ
ಮಹರ್ಷಯೋ ವ್ಯಾಕರಣಂ ನಿರಾಹುಃ ॥

'ಈ ಜಗತ್ತಿನಲ್ಲಿ ಎಲ್ಲವನ್ನು ಶುದ್ಧಿಗೊಳಿಸಬಲ್ಲ ಜಲವು ಪವಿತ್ರವಾದದ್ದು. ಜಲವನ್ನು ಶುದ್ಧಿಗೊಳಿಸತಕ್ಕವು ವೇದಮಂತ್ರಗಳು. ಋಗ್ವೇದಾದಿ ಮಂತ್ರಗಳಿಗೂ ಪವಿತ್ರವಾದದ್ದು ವ್ಯಾಕರಣಶಾಸ್ತ್ರವೆಂದು ಮಹರ್ಷಿಗಳು ನಿಶ್ಚಯಿಸಿ ಹೇಳಿದ್ದಾರೆ.'

**ಯಥಾರ್ಥಜಾತಯಃ ಸರ್ವಾಃ ಶಬ್ದಾಕೃತಿನಿಬಂಧನಾಃ ।**
**ತಥೈವ ಲೋಕೇ ವಿದ್ಯಾನಾಮೇಷಾ ವಿದ್ಯಾ ಪರಾಯಣಮ್ ॥ ೧೫ ॥**

ಸಮಸ್ತಪದಾರ್ಥಗಳೂ ಶಬ್ದಗಳಿಗೆ ಅಧೀನವಾಗಿ ಶಬ್ದಗಳಿಂದಲೇ ಗೋಚರಿಸುತ್ತವೆ. ಹಾಗೆಯೇ ಲೋಕದಲ್ಲಿ ಸಕಲ ವಿದ್ಯೆಗಳಿಗೂ ವ್ಯಾಕರಣ ವಿದ್ಯೆಯು ಆಶ್ರಯದಾತ್ರಿಯಾಗಿ ಪರಾಯಣವಾಗಿದೆ.

**ವಿವರಣೆ** – ಹಿಂದೆ ಹೇಳಿದ ಗೋತ್ವ, ಶುಕ್ಲತ್ವ, ಮೊದಲಾದ ಅರ್ಥಧರ್ಮವು ಎಂದರೆ ಪ್ರವೃತ್ತಿನಿಮಿತ್ತವು ಶಬ್ದಗಳಿಂದಲೇ ಗೋಚರಿಸುತ್ತದೆ. ಅದನ್ನು ಪ್ರಕಾಶಪಡಿ-ಸಲು ಶಬ್ದವು ಶಕ್ತವಾಗಿದೆ. ಈ ಶಬ್ದದಲ್ಲಿ ಶಕ್ತತ್ವವಿದೆ. ಏವಂಚ ಅರ್ಥಜ್ಞಾನವು ಶಬ್ದಾಧೀನವಾದದ್ದು. ಸಕಲ ವಿದ್ಯೆಗಳು ಶಬ್ದರೂಪದಲ್ಲಿಯೇ ಇರುವುದರಿಂದ ಶಬ್ದವು ಯಾವ ಅರ್ಥವನ್ನು ಬೋಧಿಸಲು ಸಮರ್ಥವೆಂಬುದನ್ನು ವ್ಯಾಕರಣ-ದಿಂದಲೇ ತಿಳಿಯಬೇಕಾಗಿದೆ. ಶಬ್ದಾರ್ಥಕೋಶ, ಲೋಕವ್ಯವಹಾರಾದಿಗಳಿಂದ ಗೊತ್ತಾಗುವ ಶಬ್ದದ ಸಾಮರ್ಥ್ಯವು ಪರಿಮಿತವಾದದ್ದು. ಅದಕ್ಕೂ ವ್ಯಾಕರಣದ ಬಲದಿಂದಲೇ ಪ್ರಾಮಾಣ್ಯವು ಬರುತ್ತದೆ.

**ಇದಮಾದ್ಯಂ ಪದಸ್ಥಾನಂ ಸಿದ್ಧಿಸೋಪಾನಪರ್ವಣಾಂ ।**
**ಇಯಂ ಸಾ ಮೋಕ್ಷಮಾಣಾನಾಮಜಿಹ್ಮಾ ರಾಜಪದ್ಧತಿಃ ॥೧೬॥**

ಮೋಕ್ಷವೆಂಬ ಸಿದ್ಧಿಯನ್ನು ಪಡೆಯಲು ಕಟ್ಟಿರುವ ಏಣಿಯ ಮೆಟ್ಟಿಲುಗಳಲ್ಲಿ ಈ ಶಾಸ್ತ್ರವು ಮೊದಲನೆಯ ಮೆಟ್ಟಿಲು. ಮುಮುಕ್ಷುಗಳಿಗೆ ಇದು ನೇರವಾದ ರಾಜಮಾರ್ಗ.

**ವಿವರಣೆ** – ವ್ಯಾಕರಣಶಾಸ್ತ್ರವನ್ನು ಮೊದಲು ಕಲಿತು ಅನಂತರ ಇತರ ಶಾಸ್ತ್ರ–ಗಳನ್ನು ಕಲಿಯಬೇಕು. ಶಬ್ದಾರ್ಥಜ್ಞಾನಕ್ಕೆ ವ್ಯಾಕರಣವು ಅತ್ಯಂತ ಉಪಯೋಗಿ–ಯಾದದ್ದು. ಇತರಭಾಷೆಗಳ ವ್ಯಾಕರಣದಂತೆ ಸಂಸ್ಕೃತ ವ್ಯಾಕರಣವಲ್ಲ. ಪದ, ಪದಾರ್ಥ, ವಾಕ್ಯಾರ್ಥಗಳನ್ನು ನಿಷ್ಕೃಷ್ಟವಾಗಿ ತಿಳಿಯಲು ವ್ಯಾಕರಣಜ್ಞಾನವು ಅನಿವಾರ್ಯ. ಉಳಿದ ಶಾಸ್ತ್ರಗಳ ಸಿದ್ಧಾಂತದಲ್ಲಿ ಮತಭೇಧವಿರುತ್ತದೆ. ಇದರ ಸಿದ್ಧಾಂತವಾದರೋ ಏಕರೂಪವಾಗಿದೆಯಾದ್ದರಿಂದ ಇದು ನೇರವಾದ ರಾಜಮಾರ್ಗ.

**ಅತ್ರಾತೀತವಿಪರ್ಯಾಸಃ ಕೇವಲಾಮನುಪಶ್ಯತಿ ।**
**ಛಂದಸ್ಯಶ್ಛಂದಸಾಂ ಯೋನಿಮಾತ್ಮಾ ಛಂದೋಮಯೀಂ ತನುಮ್ ॥೧೭**

ಶಬ್ದಾರ್ಥವನ್ನು ತಪ್ಪಾಗಿ ತಿಳಿದಿರುವುದು ವ್ಯಾಕರಣಾಧ್ಯಯನದಿಂದ ತೊಲಗುತ್ತದೆ. ಆತನು ಸರಿಯಾದ ವೇದಾರ್ಥವನ್ನು ತಿಳಿಯಲು ಸಮರ್ಥ–ನಾಗುತ್ತಾನೆ. ಹಾಗೆ ತಿಳಿದುಕೊಂಡ ಜೀವಾತ್ಮನು ವೇದಗಳಿಗೆ ಮೂಲ ಕಾರಣವೂ ಅತ್ಯಂತ ಪರಿಶುದ್ಧವೂ ಛಂದೋರೂಪವೂ ಆದ ಸ್ವಸ್ವರೂಪವನ್ನು ಸಾಕ್ಷಾತ್ಕರಿಸಿಕೊಳ್ಳುತ್ತಾನೆ.

**ವಿವರಣೆ** – ಶಬ್ದಬ್ರಹ್ಮವೇ ವಿವರ್ತದಿಂದ ಜೀವಾತ್ಮವೆನಿಸಿದೆ. 'ಆತ್ಮಾ ವಾ ಅರೇ ದ್ರಷ್ಟವ್ಯಃ' ಇತ್ಯಾದಿ ಶ್ರುತಿಯು ತನ್ನ ನಿಜಸ್ವರೂಪವನ್ನು ಕಂಡುಕೊಳ್ಳಬೇಕೆಂದು ಬೋಧಿಸುತ್ತದೆ. ಸತ್ಯಾತ್ಮದರ್ಶನವೇ ಮೋಕ್ಷ. ಶಬ್ದಬ್ರಹ್ಮವಾದ ಪರಾವಾಕ್ ಓಂಕಾರ ರೂಪವಾಗಿ, ವೇದಸ್ವರೂಪವನ್ನು ತಳೆದು, ಜೀವನೂ ಜಗತ್ತೂ ಆಗಿದೆ ಎಂದು ಹಿಂದೆ ತಿಳಿಸಿದೆ.

**ಪ್ರತ್ಯಸ್ತಮಿತಭೇದಾಯಾ ಯದ್ವಾಚೋ ರೂಪಮುತ್ತಮಂ ।**
**ತದಸ್ಮಿನ್ನೇವ ತಮಸಿ ಜ್ಯೋತಿಃ ಶುದ್ಧಂ ವಿವರ್ತತೇ ॥ ೧೮ ॥**

ಶಬ್ದದ ಮೂಲವಾದ ಅದರ ಶುದ್ಧಸ್ವರೂಪವೇ ಪರಬ್ರಹ್ಮ. ಅದರಲ್ಲಿ ಅ ಆ ಇ ಈ ಮುಂತಾದ ಯಾವ ಭೇದವೂ ಇಲ್ಲ. ಮಾಯಾಸಂಬಂಧರಹಿತ–ವಾದ ಆ ಶುದ್ಧ ಜ್ಯೋತಿಯು ಈ ಅಜ್ಞಾನವೆಂಬ ಅಂಧಕಾರದಲ್ಲಿದ್ದು ರೂಪಾಂತರದಿಂದ ಕಾಣಿಸಿಕೊಳ್ಳುತ್ತದೆ.

**ವಿವರಣೆ** – ಮಬ್ಬುಗತ್ತಲೆಯಿಂದ ಹಗ್ಗವು ಹಾವಾಗಿ ಕಾಣಿಸಿಕೊಳ್ಳುವಂತೆ, ನಮ್ಮ ಅಜ್ಞಾನದಿಂದ ಶಬ್ದಬ್ರಹ್ಮವು ಕಿವಿಗೆ ಕೇಳಿಸುವ ವಾಕ್ಯವಾಗಿ ತೋರುತ್ತದೆ. ಸ್ವರಭೇದವೂ ಶಬ್ದದ ಮೂಲವಾದ ಶುದ್ಧಸ್ವರೂಪದಲ್ಲಿಲ್ಲ. ಅ, ಆ, ಇ, ಈ ಮುಂತಾದ ವರ್ಣಗಳೂ ಅದರಲ್ಲಿಲ್ಲ. ನಮ್ಮ ಕಿವಿಗೆ ಕೇಳಿಸುವುದು ಶಬ್ದ ಬ್ರಹ್ಮವಲ್ಲ – ಅದರ ವಿವರ್ತವು ನಮಗೆ ಕೇಳಿಸುತ್ತದೆ.

**ವೈಕೃತಂ ಸಮತಿಕ್ರಾಂತಾ ಮೂರ್ತಿವ್ಯಾಪಾರದರ್ಶನಂ ।**
**ವ್ಯತೀತ್ಯಾಲೋಕತಮಸೀ ಪ್ರಕಾಶಂ ಯಮುಪಾಸತೇ ॥ ೧೯ ॥**

ಗೋವು, ಘಟ, ಪಟಾದಿ ವಸ್ತುಗಳಿಗೆ ಆಕಾರವೂ ಕ್ರಿಯೆಯೂ ಇರುವುದು ಗೋಚರಿಸುತ್ತದೆಯಷ್ಟೆ. ಹಾಗೆ ಗೋಚರಿಸುವುದು ವಿವರ್ತವೆಂಬ ವಿಕೃತಿಯಿಂದ ಆದದ್ದು. ಶಾಸ್ತ್ರಜ್ಞಾನವು ಆಲೋಕ; ಅಜ್ಞಾನವು ತಮಸ್ಸು. ಪ್ರಕಾಶರೂಪವಾದ ಆ ಪರಬ್ರಹ್ಮವು ಶಾಸ್ತ್ರಜ್ಞಾನ – ಅಜ್ಞಾನಗಳನ್ನು ಮೀರಿದ್ದು (ಅದು ಸ್ವಯಂಪ್ರಕಾಶ). ಇವೆರಡರ ಪ್ರಕ್ರಿಯೆಯನ್ನು ದಾಟಿದ ಯೋಗಿಗಳು ಯಾವುದನ್ನು ಉಪಾಸನೆ ಮಾಡುತ್ತಾರೋ ಅದೇ ಪರಬ್ರಹ್ಮ.

**ವಿವರಣೆ** – 'ಯತೋ ವಾಚೋ ನಿವರ್ತಂತೇ' 'ಯದ್ವಾಚಾ ಅನಭ್ಯುದಿತಂ' ಇತ್ಯಾದಿ ಶ್ರುತಿಗಳು ಮಾತಿಗೆ ಬ್ರಹ್ಮವು ಗೋಚರವಲ್ಲವೆಂದು ತಿಳಿಸುತ್ತವೆ. ಶಾಸ್ತ್ರ–ದಿಂದಾಗತಕ್ಕದ್ದು ಬ್ರಹ್ಮದ ಪರೋಕ್ಷಜ್ಞಾನ. ಅದು ಸಾಕ್ಷಾತ್ಕಾರವಲ್ಲ. ಶಾಸ್ತ್ರಜ್ಞಾನವಾದ ಮೇಲೆ ವಿಶಿಷ್ಟ ಸಾಧನೆಯಿಂದ ಬ್ರಹ್ಮಸಾಕ್ಷಾತ್ಕಾರವಾಗುತ್ತದೆ. ಬ್ರಹ್ಮವು ಸ್ವಯಂಪ್ರಕಾಶ. ದೀಪವನ್ನು ತೋರಿಸಲು ಇನ್ನೊಂದು ದೀಪ ಬೇಕಾಗಿಲ್ಲವಷ್ಟೆ.

**ಯತ್ರ ವಾಚೋ ನಿಮಿತ್ತಾನಿ ಚಿಹ್ನಾನೀವಾಕ್ಷರಸ್ಮೃತೇಃ ।**
**ಶಬ್ದಪೂರ್ವೇಣ ಯೋಗೇನ ಭಾಸಂತೇ ಪ್ರತಿಬಿಂಬವತ್ ॥ ೨೦ ॥**

ಲಿಪಿಗಳು ಅ, ಆ, ಇ, ಈ – ಮುಂತಾದ ಅಕ್ಷರದ ಚಿಹ್ನೆಗಳು. ಅವುಗಳಿಂದ ನಿಜವಾದ ಅಕ್ಷರದ ಸ್ಮರಣೆಯಾಗುತ್ತದೆ. ಹಾಗೆಯೇ ಮಾತು–ಗಳು ಶಬ್ದಬ್ರಹ್ಮವನ್ನು ಅಭಿವ್ಯಂಜಿಸುವ ನಿಮಿತ್ತಗಳು. ಶಬ್ದಬ್ರಹ್ಮದಿಂದಲೇ

ಜನಿಸಿದ ವಾಕ್ಯೋಚ್ಚಾರಣೆಯಿಂದ ಈ ಮಾತುಗಳು ಸ್ವಚ್ಛವಾದ ಬ್ರಹ್ಮವಸ್ತುವಿ–ನಲ್ಲಿ ಪ್ರತಿಬಿಂಬಗಳಂತೆ ತೋರಿ ಬರುತ್ತವೆ.

**ವಿವರಣೆ** – ಲಿಪಿಯು ಅಕ್ಷರವಲ್ಲ. ಬಾಯಿಂದ ಉಚ್ಚರಿಸಲ್ಪಡತಕ್ಕದ್ದು ಅಕ್ಷರ. ಲಿಪಿಯು ಅಕ್ಷರದ ಸ್ಮಾರಕ. ಹಾಗೆ ನಮ್ಮ ಕಿವಿಗೆ ಕೇಳುವ ಶಬ್ದಗಳು ಮೂಲಸ್ವರೂಪವಾದ ಶಬ್ದಬ್ರಹ್ಮದ ಅಭಿವ್ಯಂಜಕಗಳು. ಸ್ವಚ್ಛವಾದ ಗಾಜಿನಲ್ಲಿ ತೋರುವ ಪ್ರತಿಬಿಂಬಗಳಂತೆ ಶುದ್ಧವಾದ ಶಬ್ದಬ್ರಹ್ಮದಲ್ಲಿ ಅಕ್ಷರ, ಶಬ್ದ, ವಾಕ್ಯಗಳು ತೋರುತ್ತವೆ. ಪ್ರತಿಬಿಂಬವು ಬಿಂಬವಿದೆಯೆಂಬುದಕ್ಕೆ ಅಭಿವ್ಯಂಜಕ. ಅಂತೆಯೇ ಈ ಶಬ್ದಗಳು ಬ್ರಹ್ಮವಿದೆಯೆಂಬುದಕ್ಕೆ ಅಭಿವ್ಯಂಜಕಗಳು.

**ಅಥರ್ವಣಾಮಂಗಿರಸಾಂ ಸಾಮ್ನಾಮೃಗ್ಯಜುಷಸ್ಯ ಚ ।**
**ಯಸ್ಮಿನ್ನುಚ್ಚಾವಚಾ ವರ್ಣಾಃ ಪೃಥಕ್‌ಸ್ಥಿತಿಪರಿಗ್ರಹಾಃ ॥ ೨೧ ॥**

ಅಂಗಿರಸ್ ಎಂಬ ಋಷಿಯಿಂದ ದೃಷ್ಟವಾದ ಅಥರ್ವವೇದ, ಸಾಮವೇದ, ಋಗ್ವೇದ, ಯಜುರ್ವೇದಗಳಲ್ಲಿರುವ ಉದಾತ್ತ, ಅನುದಾತ್ತ, ಸ್ವರಿತ – ಮುಂತಾದ ವರ್ಣಧರ್ಮಗಳು ಶಬ್ದಬ್ರಹ್ಮಕ್ಕಿಂತ ಬೇರೆಯಾಗಿರುವ ಅಕ್ಷರಗಳನ್ನು ಆಶ್ರಯಿಸಿಕೊಂಡಿರುತ್ತವೆ.

**ವಿವರಣೆ** – ಉದಾತ್ತ, ಅನುದಾತ್ತ – ಮೊದಲಾದವು ವರ್ಣಧರ್ಮಗಳು. ಅವು ಅ, ಇ, ಉ – ಮುಂತಾದ ಸ್ವರಗಳನ್ನು ಆಶ್ರಯಿಸಿಕೊಂಡಿರುತ್ತವೆ. ಅವೂ ಸಹ ಶಬ್ದಬ್ರಹ್ಮದಲ್ಲಿಲ್ಲ – ಎಂದು ಅಭಿಪ್ರಾಯ.

**ಯದೇಕಂ ಪ್ರಕ್ರಿಯಾಭೇದೈರ್ಬಹುಧಾ ಪ್ರವಿಭಜ್ಯತೇ ।**
**ತದ್ವ್ಯಾಕರಣಮಾಗಮ್ಯ ಪರಂ ಬ್ರಹ್ಮಾಭಿಗಮ್ಯತೇ ॥ ೨೨ ॥**

ಅದ್ವಿತೀಯವಾಗಿ ಒಂದೇ ಇರುವ ಪರಬ್ರಹ್ಮವನ್ನು ಶಾಸ್ತ್ರಕಾರರು ನಾನಾ ಪ್ರಕ್ರಿಯೆಗಳಿಂದ ಬಹುಪ್ರಕಾರವಾಗಿ ನಿರೂಪಿಸಿದ್ದಾರೆ. ವ್ಯಾಕರಣಶಾಸ್ತ್ರವನ್ನು ಅಧ್ಯಯನ ಮಾಡಿ ಆ ಬ್ರಹ್ಮವಸ್ತುವನ್ನು ಪಡೆಯಬಹುದು.

**ವಿವರಣೆ** – ಸಾಂಖ್ಯ, ಯೋಗ, ನ್ಯಾಯ, ತಂತ್ರಾದಿಗಳಲ್ಲಿ ಈ ಬ್ರಹ್ಮವಸ್ತುವನ್ನೇ ಸಗುಣ, ನಿರ್ಗುಣ, ಉದಾಸೀನ, ಸಾಕಾರ, ನಿರಾಕಾರ – ಇತ್ಯಾದಿಯಾಗಿ ವರ್ಣಿಸಿ ಹೇಳಿದ್ದಾರೆ. ಅದೆಲ್ಲವೂ ಅದ್ವೈತದಲ್ಲಿ ಉಪಸಂಹಾರವಾಗುತ್ತದೆ. ಹಿಂದೆ ಹೇಳಿದಂತೆ ವ್ಯಾಕರಣಶಾಸ್ತ್ರವು ಬ್ರಹ್ಮಜ್ಞಾನಕ್ಕೆ ಸಾಧನ.

**ಟಿಪ್ಪಣಿ** – ೧೮ನೆಯ ಶ್ಲೋಕದಿಂದ ಇದುವರೆಗೆ ಹೇಳಿದ್ದೆಲ್ಲವೂ ಈ ಶ್ಲೋಕದ

'ಪರಂಬ್ರಹ್ಮ' ಎಂಬುದರೊಡನೆ ಅನ್ವಿತವಾಗಿ ಏಕವಾಕ್ಯವಾಗಿದೆ. ಇದುವರೆಗೆ ವ್ಯಾಕ–ರಣದ ಮುಖ್ಯಪ್ರಯೋಜನ ಬ್ರಹ್ಮಜ್ಞಾನವೆಂದು ಭೂಮಿಕೆಯನ್ನು ರಚಿಸಲಾಯಿತು. ಇನ್ನು ಮುಂದೆ ವ್ಯಾಕರಣಶಾಸ್ತ್ರದ ದಾರ್ಶನಿಕರ ಪ್ರಕ್ರಿಯೆ ಆರಂಭವಾಗುತ್ತದೆ.

**ನಿತ್ಯಾಃ ಶಬ್ದಾರ್ಥಸಂಬಂಧಾಸ್ತತ್ರಾಮ್ನಾತಾ ಮಹರ್ಷಿಭಿಃ ।**
**ಸೂತ್ರಾಣಾಮನುತಂತ್ರಾಣಾಂ ಭಾಷ್ಯಾಣಾಂ ಚ ಪ್ರಣೇತೃಭಿಃ ॥ ೨೩ ॥**

ವ್ಯಾಕರಣಶಾಸ್ತ್ರದಲ್ಲಿ ಸೂತ್ರಗಳನ್ನು ರಚಿಸಿದ ಪಾಣಿನಿಮಹರ್ಷಿಗಳೂ ವಾರ್ತಿಕಗಳನ್ನು ಬರೆದ ಕಾತ್ಯಾಯನರೂ ಭಾಷ್ಯಕರ್ತರಾದ ಪತಂಜಲಿ–ಮುನಿಗಳೂ ಸಹ ಶಬ್ದ, ಅರ್ಥ, ಶಬ್ದಾರ್ಥಗಳ ಸಂಬಂಧ – ಇವು ಮೂರು ನಿತ್ಯವಾದವುಗಳೆಂದು ಹೇಳಿದ್ದಾರೆ. ಅನುತಂತ್ರ – ವಾರ್ತಿಕ.

**ವಿವರಣೆ** – ಪಾಣಿನಿಮಹರ್ಷಿಗಳು ವ್ಯಾಕರಣಸೂತ್ರಗಳನ್ನು ರಚಿಸಿದ್ದಾರೆ. ಈ ಗ್ರಂಥಕ್ಕೆ ಅಷ್ಟಾಧ್ಯಾಯಿಯೆಂದು ಹೆಸರು. ಇದರಲ್ಲಿ ಒಟ್ಟು ೩೯೮೩ ಸೂತ್ರಗಳಿವೆ. ಇವುಗಳಿಗೆ ವ್ಯಾಖ್ಯಾನರೂಪವಾಗಿ ಸೂತ್ರಶೈಲಿಯಲ್ಲಿ ಕಾತ್ಯಾಯನಮುನಿಗಳು ವಾರ್ತಿಕಗಳನ್ನು ಬರೆದಿದ್ದಾರೆ. ಸೂತ್ರ, ವಾರ್ತಿಕಗಳೆರಡರ ಮೇಲೆ ಪತಂಜಲಿಗಳು ವಿಸ್ತಾರವಾದ ಭಾಷ್ಯವನ್ನು ವಿರಚಿಸಿದ್ದಾರೆ.

'ಪೃಷೋದರಾದೀನಿ ಯಥೋಪದಿಷ್ಟಂ', 'ತದಶಿಷ್ಯಂ ಸಂಜ್ಞಾ ಪ್ರಮಾಣತ್ವಾತ್' ಮುಂತಾದ ಸೂತ್ರಗಳಲ್ಲಿ ಶಬ್ದಾರ್ಥಗಳೂ ಅವುಗಳ ಪರಸ್ಪರ ಸಂಬಂಧವೂ ನಿತ್ಯವೆಂದು ಸೂಚಿತವಾಗಿದೆ. 'ಸಿದ್ಧೇ ಶಬ್ದಾರ್ಥಸಂಬಂಧೇ', 'ಸಿದ್ಧಂ ತು ನಿತ್ಯಶಬ್ದತ್ವಾತ್' ಮುಂತಾದ ವಾರ್ತಿಕಗಳಲ್ಲಿ ಇದನ್ನು ಸ್ಪಷ್ಟವಾಗಿ ಬರೆಯಲಾಗಿದೆ. ಭಾಷ್ಯಕಾರರಂತೂ ಈ ವಿಷಯವನ್ನು ಅನೇಕ ಸ್ಥಳಗಳಲ್ಲಿ ವಿವರಿಸಿದ್ದಾರೆ.

ಶಬ್ದವು ಹುಟ್ಟುತ್ತದೆ, ನಾಶವಾಗುತ್ತದೆ. ಆದ್ದರಿಂದ ನಿತ್ಯವಲ್ಲವೆಂದು ತಾರ್ಕಿಕರು ಹೇಳುತ್ತಾರೆ. ಶಬ್ದದಲ್ಲಿರುವ ವರ್ಣವು ನಿತ್ಯ, ವರ್ಣಗಳ ಜೋಡಣೆಯಾದ ಶಬ್ದ–ಜಾಲವು ನಿತ್ಯವಲ್ಲ ಎಂದು ಮೀಮಾಂಸಕರ ಅಭಿಪ್ರಾಯ. ಬ್ರಹ್ಮಾತಿರಿಕ್ತವಾದದ್ದೆಲ್ಲವೂ ಮಿಥ್ಯೆಯೆಂದು ಅದ್ವೈತವೇದಾಂತಿಗಳ ಸಿದ್ಧಾಂತ. ವೈಯಾಕರಣರಂತೆ ಶಬ್ದವು ನಿತ್ಯವೆಂಬುದನ್ನು ಯೋಗಶಾಸ್ತ್ರವೂ ಭಾಗವತ ಪುರಾಣವೂ ಯಾಸ್ಕರ ನಿರುಕ್ತವೂ ಕೆಲವು ತಂತ್ರಗ್ರಂಥಗಳೂ ಒಪ್ಪಿಕೊಂಡಿವೆ. ಕಿವಿಗೆ ಕೇಳತಕ್ಕ ವೈಖರೀರೂಪವಾದ ವರ್ಣಾತ್ಮಕಧ್ವನಿಯೇ ಶಬ್ದವೆಂದು ನಂಬಿದವರಿಗೆ ಶಬ್ದವು ಅನಿತ್ಯವಾಗುತ್ತದೆ. ವರ್ಣಾತ್ಮಕ ಧ್ವನಿಯು ಶಬ್ದವೆನ್ನುವುದು ಗೌಣಪಕ್ಷ. ಅದರಿಂದ ಅಖಂಡವಾದ

'ಸ್ಫೋಟ'ವೆಂಬುದು ಅಭಿವ್ಯಕ್ತವಾಗುತ್ತದೆ. ಅದೇ ನಿಜವಾದ ಶಬ್ದ – ಎಂಬ ಮತದಲ್ಲಿ ಶಬ್ದವು ನಿತ್ಯವಾಗುತ್ತದೆ.

'ಸ್ಫುಟತಿ ಅರ್ಥಃ ಅಸ್ಮಾದಿತಿ ಸ್ಫೋಟಃ' ಇದರಿಂದ ಅರ್ಥವು ಸ್ಫುಟವಾಗಿ ಹೊಳೆಯುತ್ತದೆ ಎಂದು ಸ್ಫೋಟ ಶಬ್ದದ ವ್ಯುತ್ಪತ್ತಿ. ಸ್ಫೋಟವೇ ಅರ್ಥಬೋಧಕ. ದೀಪವು ಕತ್ತಲಿನಲ್ಲಿದ್ದ ಗಡಿಗೆಯನ್ನು ಅಭಿವ್ಯಂಜಿಸುವಂತೆ, ವೈಖರೀಧ್ವನಿಯು ಸ್ಫೋಟವನ್ನು ಅಭಿವ್ಯಂಜಿಸುತ್ತದೆ. ಇದರ ವಿವರ ಮುಂದೆ ಬರುವುದು.

ಶಬ್ದ, ಅರ್ಥ, ಅವೆರಡರ ಸಂಬಂಧ–ಇವು ಮೂರು ನಿತ್ಯವೆಂದು ಹೇಳಿ–ದ್ದಾಯಿತು. ವ್ಯಾಕರಣಶಾಸ್ತ್ರದ ಅಧ್ಯಯನದಿಂದಾಗುವ ಪ್ರಯೋಜನವೇನೆಂಬುದನ್ನು ಹೇಳಬೇಕಾಗಿದೆ. ಈ ನಾಲ್ಕು ವಿಷಯಗಳನ್ನು ಈ ವಾಕ್ಯಪದೀಯ ಗ್ರಂಥದಲ್ಲಿ ವಿವೇಚಿಸಲಾಗಿದೆ. ಈ ನಾಲ್ಕರಲ್ಲಿ ಒಂದೊಂದರಲ್ಲಿಯೂ ಎರಡು ಭೇದಗಳಿರು–ವುದರಿಂದ ಒಟ್ಟು ಎಂಟು ವಿಷಯಗಳಾಗುತ್ತವೆ. ಅವು ಯಾವುವೆಂದರೆ –

**ಅಪೋದ್ಧಾರಪದಾರ್ಥಾ ಯೇ ಯೇ ಚಾರ್ಥಾಃ ಸ್ಥಿತಲಕ್ಷಣಾಃ ।**
**ಅನ್ವಾಖ್ಯೇಯಾಶ್ಚ ಯೇ ಶಬ್ದಾ ಯೇ ಚಾಪಿ ಪ್ರತಿಪಾದಕಾಃ ॥ ೨೪ ॥**

ಅಪೋದ್ಧಾರಪದಾರ್ಥ, ಸ್ಥಿತಲಕ್ಷಣ – ಎಂಬ ಎರಡು ಬಗೆಯ ಅರ್ಥಗಳು, ಅನ್ವಾಖ್ಯೇಯ, ಪ್ರತಿಪಾದಕ – ಎಂಬ ಎರಡು ಬಗೆಯ ಶಬ್ದಗಳು.

**ಕಾರ್ಯಕಾರಣಭಾವೇನ ಯೋಗ್ಯಭಾವೇನ ಚ ಸ್ಥಿತಾಃ ।**
**ಧರ್ಮೇ ಚ ಪ್ರತ್ಯಯೇ ಚಾಂಗಂ ಸಂಬಂಧಾಃ ಸಾಧ್ವಸಾಧುಷು ॥೨೫॥**

ಕಾರ್ಯಕಾರಣಭಾವ, ಯೋಗ್ಯಭಾವ – ಎಂಬ ಎರಡು ಬಗೆಯ ಶಬ್ದಾರ್ಥ ಸಂಬಂಧಗಳು; ಧರ್ಮ, ಅರ್ಥಜ್ಞಾನ ಎಂಬೆರಡು ಪ್ರಯೋಜನಗಳು, ಹೀಗೆ ಎಂಟು ವಿಷಯಗಳು. ಸಂಬಂಧವು ಸಾಧುಶಬ್ದಗಳಿಗೂ ಇದೆ. ಅಸಾಧು ಶಬ್ದಗಳಿಗೂ ಇದೆ.

**ತೇ ಲಿಂಗೈಶ್ಚ ಸ್ವಶಬ್ದೈಶ್ಚ ಶಾಸ್ತ್ರೇಽಸ್ಮಿನ್ನುಪವರ್ಣಿತಾಃ ।**
**ಸ್ಮೃತ್ಯರ್ಥಮನುಗಮ್ಯಂತೇ ಕೇಚಿದೇವ ಯಥಾಗಮಮ್ ॥ ೨೬ ॥**

ಪ್ರಕೃತಿ ಪ್ರತ್ಯಯಾರ್ಥಗಳನ್ನು ಹೇಳುವ ಸೂಚಕಲಿಂಗಗಳಿಂದಲೂ ಸಾಕ್ಷಾತ್ ಸ್ವೀಯ ಶಬ್ದಗಳಿಂದಲೂ ಇವೆಲ್ಲವನ್ನು ಈ ಶಾಸ್ತ್ರದಲ್ಲಿ

ವರ್ಣಿಸಲಾಗಿದೆ. ಅವುಗಳಲ್ಲಿ ಲಾಘವಕ್ಕಾಗಿ ಸಾಧುಶಬ್ದಗಳಿಗೆ ಸಂಬಂಧಿಸಿದ ವಿಷಯವನ್ನು ಮಾತ್ರ ಪ್ರಾಚೀನ ಶಾಸ್ತ್ರಗಳನ್ನನುಸರಿಸಿ ಈ ವ್ಯಾಕರಣಶಾಸ್ತ್ರದಲ್ಲಿ ನಿರೂಪಿಸಲಾಗಿದೆ. (ಸುಲಭವಾಗಿ ತಿಳಿಯಲೆಂದು ಆ ವಿಚಾರಗಳನ್ನು ಸಂಗ್ರಹಿಸಿ ಶಾಸ್ತ್ರಾನುಸಾರವಾಗಿ ಈ ವಾಕ್ಯಪದೀಯದಲ್ಲಿ ನಿರೂಪಿಸಲಾಗಿದೆ).

**ವಿವರಣೆ** – ಅಪೋದ್ಧಾರಪದಾರ್ಥ, ಸ್ಥಿತಲಕ್ಷಣ – ಇವೆರಡು ಅರ್ಥಗಳು. ಅನ್ವಾಖ್ಯೇಯ, ಪ್ರತಿಪಾದಕ–ಇವೆರಡು ಶಬ್ದಗಳು.

೧. ಅಪೋದ್ಧಾರಪದಾರ್ಥ = ಅಪೋದ್ಧಾರವೆಂದರೆ ಪ್ರಕೃತಿ ಪ್ರತ್ಯಯಗಳೆಂಬ ವಿಭಜನೆ. ಇದರಿಂದ ಗೊತ್ತಾಗುವ ಅರ್ಥ ಅಪೋದ್ಧಾರಪದಾರ್ಥ. ಉದಾ: ದಶರಥ + ಇ = ದಾಶರಥಿ (ದಶರಥನ ಮಗ); ಕೃ+ತವ್ಯ=ಕರ್ತವ್ಯ (ಮಾಡಲ್ಪಡಬೇಕಾದದ್ದು).

೨. ಸ್ಥಿತಲಕ್ಷಣ = ಸ್ಥಿತಸ್ವರೂಪವುಳ್ಳ ಅರ್ಥ. ಪ್ರಕೃತಿ ಪ್ರತ್ಯಯ ವಿಭಾಗವಿಲ್ಲದೆ ತಿಳಿಯುವ ಅರ್ಥ. ಉದಾ : ಶ್ರೋತ್ರಿಯ = ವೇದಾಧ್ಯಯನ ಮಾಡಿದವನು.

೩. ಅನ್ವಾಖ್ಯೇಯ = ಪ್ರಕೃತಿ ಪ್ರತ್ಯಯಗಳ ವಿಭಜನೆಯಿಂದ ಅನುಶಾಸಿತವಾದ ಶಬ್ದ. ಉದಾ : ದಾಶರಥಿ, ಕರ್ತವ್ಯ, ಇಂದ್ರಾಣೀ, ರಾಮೇಣ.

೪. ಪ್ರತಿಪಾದಕ = ವಿಭಜನೆಯಿಲ್ಲದ ಅಖಂಡ ಶಬ್ದ. ಉದಾ: ವನ, ಜಲ, ಮಂಚ, ಹಸ್ತ.

೫. ಕಾರ್ಯಕಾರಣಭಾವಸಂಬಂಧ = ನಿಮಿತ್ತನಿಮಿತ್ತಿಭಾವವೆಂದರ್ಥ. ಮನಸ್ಸಿನಲ್ಲಿ ಸ್ಫುರಿಸುವ ಶಬ್ದವು ವೈಖರೀಶಬ್ದಕ್ಕೆ ನಿಮಿತ್ತ. ವೈಖರೀಶಬ್ದವು ನಿಮಿತ್ತಿ (ಕಾರ್ಯ). ಶ್ರೋತೃವಿಗೆ ಮಾತ್ರ ವೈಖರೀಶಬ್ದವು ನಿಮಿತ್ತ. ಅವನ ಅಂತರಂಗದಲ್ಲಿ ಸ್ಫುರಿಸುವ ಅರ್ಥಬೋಧಕವಾದ ಅಖಂಡಶಬ್ದವು ನಿಮಿತ್ತಿ (ಕಾರ್ಯ). ಇದು ಸಂಬಂಧ.

೬. ಯೋಗ್ಯತಾಸಂಬಂಧ = ಶಬ್ದ ಮತ್ತು ಅರ್ಥಗಳಿಗೆ ತಾದಾತ್ಮ್ಯ ಎಂಬ ಸಂಬಂಧವಿದೆ. ಘಟವೆಂಬ ಶಬ್ದ, ಘಟವೆಂಬ ಅರ್ಥ ಎಂದು ಅನುಭವವಿರು–ವುದರಿಂದ ಈ ಶಬ್ದಾರ್ಥಗಳು ಅಭಿನ್ನವಾಗಿ ತೋರುತ್ತವೆ. ಈ ತಾದಾತ್ಮ್ಯದಿಂದ ವಾಚ್ಯವಾಚಕಭಾವ ಎಂಬ ಶಕ್ತಿ ಸಂಬಂಧವು ಗೃಹೀತವಾಗುತ್ತದೆ. ಘಟಶಬ್ದದಲ್ಲಿ ವಾಚಕತ್ವವೂ ಗಡಿಗೆಯೆಂಬ ಅರ್ಥದಲ್ಲಿ ವಾಚ್ಯತ್ವವೂ ಇದೆ. ಈ ವಾಚ್ಯವಾಚಕಭಾವ ಸಂಬಂಧವನ್ನು ಶಕ್ತಿ, ಅಭಿಧಾ ಎನ್ನುತ್ತಾರೆ. ಶಬ್ದವು ಶಕ್ತ. ಅರ್ಥವು ಶಕ್ಯ ಅಥವಾ ಅಭಿಧೇಯ. ಈ ಎರಡು ಸಂಬಂಧಗಳನ್ನು ಇಲ್ಲಿ ಯೋಗ್ಯತಾ ಎಂದು ಕರೆಯಲಾಗಿದೆ.

೭. ಧರ್ಮ = ಸಾಧುಶಬ್ದಗಳನ್ನು ಪ್ರಕ್ರಿಯಾ ಪೂರ್ವಕವಾಗಿ ತಿಳಿಯುವ ಮೂಲಕ ಸಾಧುಶಬ್ದವನ್ನು ಪ್ರಯೋಗಿಸುವುದರಿಂದ ಪುಣ್ಯವಿದೆಯೆಂದು ಸಿದ್ಧಾಂತ. ಇದನ್ನು ಮುಂದೆ ವಿವರಿಸಲಾಗುತ್ತದೆ. ಇದೊಂದು ಪ್ರಯೋಜನ.

೮. ಅರ್ಥಜ್ಞಾನ = ಯಾವ ಶಬ್ದಕ್ಕೆ ಯಾವ ಅರ್ಥವೆಂದು ಸ್ಪಷ್ಟವಾಗಿ ತಿಳಿಯಲು ವ್ಯಾಕರಣಶಾಸ್ತ್ರವೇ ಮುಖ್ಯ ಸಾಧನ. ವಾಕ್ಯದಲ್ಲಿ ಸಹ ಪದಗಳ ಸಮೂಹವೇ ಇರುವುದರಿಂದ ಆಯಾ ಪದಾರ್ಥಗಳ ಸಂಬಂಧಜ್ಞಾನವು ವಾಕ್ಯಾರ್ಥಜ್ಞಾನಕ್ಕೆ ಅವಶ್ಯಬೇಕು. ಅರ್ಥಜ್ಞಾನವು ಪ್ರಯೋಜನ.

ಈ ಎಂಟು ವಿಷಯಗಳು ಒಂದೊಂದು ಪದದಲ್ಲಿರುವಂತೆ ವಾಕ್ಯದಲ್ಲಿಯೂ ಇವೆ. ಪೂರ್ಣಾರ್ಥವನ್ನು ಕೊಡತಕ್ಕದ್ದು ವಾಕ್ಯವೆಂಬ ಸಿದ್ಧಾಂತವೇ ಇದಕ್ಕೆ ಕಾರಣ.

೨೬ನೆಯ ಶ್ಲೋಕದಲ್ಲಿರುವ 'ಸ್ಮೃತ್ಯರ್ಥಂ' ಎಂಬುದಕ್ಕೆ ಲಾಘವದಿಂದ ವ್ಯಾಕರಣಸ್ಮೃತಿಯನ್ನು ರಚಿಸುವುದಕ್ಕಾಗಿ ಎಂಬ ಅರ್ಥವನ್ನು ಹೇಳಬಹುದು. ಲಾಘವವೆಂದರೆ ಸೌಲಭ್ಯ. ಸಾಧುಶಬ್ದಗಳನ್ನು ತಿಳಿಸುವುದು ಸುಲಭ. ಒಂದೊಂದು ಸಾಧುಶಬ್ದಕ್ಕೂ ಅಪಶಬ್ದಗಳು ವಿಪುಲವಾಗಿರುವುದರಿಂದ ಅಪಶಬ್ದಗಳು ಯಾವು-ವೆಂಬುದನ್ನು ತಿಳಿಸುವುದು ಸುಲಭವಲ್ಲ. ವ್ಯಾಕರಣಕ್ಕೆ ಅನುಗುಣವಾಗದಿದ್ದ ಶಬ್ದವೇ ಅಪಶಬ್ದವೆಂದು ತಿಳಿಯಬೇಕು.

ಈ ಎಂಟು ವಿಷಯಗಳನ್ನು ವಿವೇಚಿಸುವುದಕ್ಕಾಗಿ ವಾಕ್ಯಪದೀಯವು ಹೊರಟಿದೆ. ಇದೇ ವ್ಯಾಕರಣದರ್ಶನ. ಇದನ್ನರಿಯದಿದ್ದರೆ ವ್ಯಾಕರಣಶಾಸ್ತ್ರದ ಅಧ್ಯಯನ ಪೂರ್ಣವಾಗುವುದಿಲ್ಲ.

**ಶಿಷ್ಟೇಭ್ಯ ಆಗಮಾತ್ ಸಿದ್ಧಾಃ ಸಾಧವೋ ಧರ್ಮಸಾಧನಮ್ ।**
**ಅರ್ಥಪ್ರತ್ಯಾಯನಾಭೇದೇ ವಿಪರೀತಾಸ್ತ್ವಸಾಧವಃ ॥ ೨೭ ॥**

ಶಿಷ್ಟರಿಂದ ಬಂದ ವ್ಯಾಕರಣಶಾಸ್ತ್ರದಿಂದ ಸಿದ್ಧವಾಗುವ ಶಬ್ದಗಳು ಸಾಧು ಶಬ್ದಗಳು. ಆದ್ದರಿಂದಲೇ ಪುಣ್ಯಪ್ರಾಪ್ತಿಗೆ ಸಾಧನವಾಗುತ್ತವೆ. ಹಾಗಲ್ಲದೆ ವ್ಯಾಕರಣ ವಿರುದ್ಧವಾದ ಶಬ್ದಗಳು ಅಸಾಧುಶಬ್ದಗಳು-ಅಪಶಬ್ದಗಳು. ಅರ್ಥ ಬೋಧವು ಮಾತ್ರ ಸಾಧುಶಬ್ದ, ಅಪಶಬ್ದಗಳೆರಡರಿಂದಲೂ ಒಂದೇ ರೀತಿ ಆಗುತ್ತದೆ.

**ವಿವರಣೆ** – ಶಿಷ್ಟರೆಂದರೆ ಶಾಸ್ತ್ರವಿಹಿತರೀತಿಯಲ್ಲಿ ನಡೆಯತಕ್ಕವರೂ ವಿದ್ಯಾವಂತರೂ ಗುಣಾಢ್ಯರೂ ಆಚಾರಶೀಲರೂ ಲೋಭವರ್ಜಿತರೂ ಆದ

ಸಜ್ಜನರೆಂದು ಮಹಾಭಾಷ್ಯಕಾರರು ಹೇಳಿದ್ದಾರೆ. ಅವರಲ್ಲಿ ಪರಂಪರೆಯಿಂದ ಬಂದ ವ್ಯಾಕರಣಶಾಸ್ತ್ರವು ಪ್ರಮಾಣಭೂತವಾದದ್ದು. ಆದ್ದರಿಂದಲೇ ಅವರು ತೋರಿಸಿ ಕೊಟ್ಟ ಸಾಧುಶಬ್ದಗಳು ಪುಣ್ಯಜನಕವಾಗುತ್ತವೆ. 'ಶಾಸ್ತ್ರೇಣ ಧರ್ಮನಿಯಮಃ' ಎಂದು ವಾರ್ತಿಕಕಾರರು ಹೇಳಿದ್ದಾರೆ. ಭಾಷ್ಯಕಾರರೂ ಸಹ ಸಾಧುಶಬ್ದವನ್ನು ಸರಿಯಾಗಿ ಬಳಸಿದರೆ 'ಸ್ವರ್ಗೇ ಲೋಕೇ ಕಾಮಧುಗ್‌ಭವತಿ' ಎನ್ನುತ್ತಾರೆ. ಸಾಧುಶಬ್ದವನ್ನು ಉಚ್ಚರಿಸುವುದರಿಂದ ಪುಣ್ಯ ಬರುತ್ತದೆಯೆಂಬುದು ವ್ಯಾಕರಣಶಾಸ್ತ್ರ ಮರ್ಯಾದೆ. ಲೋಕವ್ಯವಹಾರದಲ್ಲಿ ಅಪಶಬ್ದಗಳನ್ನು ಬಳಸಿದರೆ ಪುಣ್ಯವೂ ಇಲ್ಲ, ಪಾಪವೂ ಇಲ್ಲ.

**ನಿತ್ಯತ್ವೇ ಕೃತಕತ್ವೇ ವಾ ತೇಷಾಮಾದಿರ್ನ ವಿದ್ಯತೇ ।**
**ಪ್ರಾಣಿನಾಮಿವ ಸಾ ಚೈಷಾ ವ್ಯವಸ್ಥಾನಿತ್ಯತೋಚ್ಯತೇ ॥ ೨೮ ॥**

ಶಬ್ದಗಳು ನಿತ್ಯವಾಗಲಿ, ಅನಿತ್ಯವಾಗಲಿ, ಅವುಗಳಿಗೆ ಆದಿಯೆಂಬು–ದಂತೂ ಇಲ್ಲ. ಮನುಷ್ಯಾದಿ ಜೀವಿಗಳಿಗೆ ಆದಿಯಿಲ್ಲದ ಹಾಗೆ. ಆದಿಯಿಲ್ಲದ ಮೇಲೆ ಅಂತ್ಯವೂ ಇಲ್ಲ. ಈ ನಿತ್ಯತೆಗೆ ವ್ಯವಸ್ಥಾನಿತ್ಯತೆ ಎಂದು ಹೆಸರು.

**ವಿವರಣೆ** – ಶಬ್ದವು ನಿತ್ಯ, ಅನಿತ್ಯ ಎಂದು ಎರಡು ಪಕ್ಷಗಳುಂಟು. ವೈಯಾ–ಕರಣರ ಮತದಲ್ಲಿ ಶಬ್ದವು ಕೂಟಸ್ಥನಿತ್ಯ. ಅದಕ್ಕೆ ಆದ್ಯಂತಗಳು ಇಲ್ಲವೇ ಇಲ್ಲ. ಶಬ್ದವು ಅನಿತ್ಯವೆಂಬ ಪಕ್ಷದವರೂ ಅದು ಅನಾದಿಯೆಂದು ಒಪ್ಪಬೇಕಾಗುತ್ತದೆ. ಈ ಸಂಸಾರದಲ್ಲಿ ಶಬ್ದವು ಯಾವಾಗ ಹುಟ್ಟಿತು ಎಂದು ಅವರು ಹೇಳಲಾರರು. ಯಾವಾಗ ಸಮಾಪ್ತವಾಗುತ್ತದೆಯೆಂದು ಅಂತ್ಯವನ್ನೂ ಹೇಳಲಾರರು. ಆದ್ಯಂತ–ಗಳನ್ನು ತಿಳಿಯಲು ಶಕ್ಯವಿಲ್ಲ ಎಂದರ್ಥ. ಇದೂ ಒಂದು ರೀತಿಯ ನಿತ್ಯತೆಯೇ. ಇದಕ್ಕೆ ವ್ಯವಹಾರನಿತ್ಯತೆ, ಪ್ರವಾಹನಿತ್ಯತೆ, ವ್ಯವಸ್ಥಾನಿತ್ಯತೆ ಎಂದು ಬೇರೆ ಬೇರೆ ಹೆಸರಿದೆ. ಪ್ರಾಣಿಗಳ ಆದ್ಯಂತಗಳನ್ನು ಮಾನವನು ತಿಳಿಯಲಾರ. ಆದ್ದರಿಂದ ಸಂಸಾರವು ಅನಾದಿ ಎಂದು ಪ್ರಸಿದ್ಧವಾಗಿದೆ. ಹೀಗೆ ಅನಾದಿಯಾಗಿ ಬಂದ ಶಬ್ದರೂಪವನ್ನು ವ್ಯಾಕರಣಶಾಸ್ತ್ರವು ಬೋಧಿಸುತ್ತದೆಯಾದ್ದರಿಂದ, ವ್ಯಾಕರಣಸಿದ್ಧ ಶಬ್ದವು ಸಾಧು, ಉಳಿದದ್ದು ಅಸಾಧು ಎಂದು ವ್ಯವಸ್ಥಿತವಾಗುತ್ತದೆ.

**ನಾನರ್ಥಿಕಾಮಿಮಾಂ ಕಶ್ಚಿತ್ ವ್ಯವಸ್ಥಾಂ ಕರ್ತುಮರ್ಹತಿ ।**
**ತಸ್ಮಾನ್ನಿಬಧ್ಯತೇ ಶಿಷ್ಟೈಃ ಸಾಧುತ್ವವಿಷಯಾ ಸ್ಮೃತಿಃ ॥ ೨೯ ॥**

ವ್ಯಾಕರಣಶಾಸ್ತ್ರವನ್ನು ಬಹುಪ್ರಯಾಸದಿಂದ ರಚಿಸಿದ್ದಾರೆ. ಇದಕ್ಕೆ ಸರಿಯಾದ ಪ್ರಯೋಜನವಿಲ್ಲದೆ ಹೋಗಿದ್ದರೆ ಯಾರೂ ಇಷ್ಟು ದೊಡ್ಡ

ವ್ಯವಸ್ಥೆಯನ್ನು ಮಾಡಲು ಕೈಹಾಕುತ್ತಿರಲಿಲ್ಲ. ಜನರಿಗೆ ಉತ್ತಮಪ್ರಯೋಜನ ಲಭಿಸುತ್ತದೆಯಾದ್ದರಿಂದ, ಪಾಣಿನಿ ಮುಂತಾದ ಶಿಷ್ಟಜನರು ಶಬ್ದ-ಸಾಧುತ್ವವನ್ನು ಬೋಧಿಸುವ ಈ ವ್ಯಾಕರಣಶಾಸ್ತ್ರವನ್ನು ರಚಿಸಿದ್ದಾರೆ.

**ವಿವರಣೆ** – ಅಪಶಬ್ದಗಳನ್ನು ಬಳಸಬಾರದು. ಸಾಧುಶಬ್ದಗಳನ್ನೇ ಬಳಸಬೇಕು. ಅದರಿಂದಾಗುವ ಪ್ರಯೋಜನಗಳೇನೆಂಬುದನ್ನು ಭಾಷ್ಯಕಾರರು ಮಹಾಭಾಷ್ಯದ ಪ್ರಥಮಾಹ್ನಿಕದಲ್ಲಿ ವಿಸ್ತಾರವಾಗಿ ನಿರೂಪಿಸಿದ್ದಾರೆ. ಅಂತಹ ಪ್ರಯೋಜನಗಳಿಲ್ಲದಿದ್ದರೆ, ಮಹರ್ಷಿಗಳು ಇಷ್ಟು ಕಷ್ಟ ಪಟ್ಟು ಈ ಶಾಸ್ತ್ರವನ್ನು ರಚಿಸಿರುವುದೇಕೆ? ಅಷ್ಟಾಧ್ಯಾಯಿಯಲ್ಲಿ ೩೯೮೩ ಸೂತ್ರಗಳಿವೆ. ಇವುಗಳಲ್ಲದೆ ಧಾತುಪಾಠದಲ್ಲಿ ಸುಮಾರು ಎರಡು ಸಾವಿರ ಧಾತುಗಳನ್ನು ವ್ಯವಸ್ಥಿತವಾಗಿ ನಿರೂ-ಪಿಸಿದ್ದಾರೆ. ಅಲ್ಲದೆ ಉಳಿದ ಗಣಪಾಠಗಳಲ್ಲಿ ಅಸಂಖ್ಯಾತಶಬ್ದಗಳ ಸಂಗ್ರಹವಿದೆ. ಅಷ್ಟಾಧ್ಯಾಯಿಯ ಮೇಲೆ ವಿಸ್ತಾರವಾದ ವಾರ್ತಿಕಗಳೂ ಹೊರಟಿವೆ. ಮಹಾಭಾಷ್ಯ-ವಂತೂ ಬಹುಪ್ರಯಾಸದಿಂದ ರಚಿತವಾದದ್ದು. ಅಲ್ಲದೆ ಪಾಣಿನಿಗೆ ಪೂರ್ವ-ದಲ್ಲಿಯೂ ಆಪಿಶಲಿ, ಕಾಶಕೃತ್ಸ್ನ, ಶಾಕಟಾಯನ, ಶಾಕಲ್ಯ ಮೊದಲಾದ ಋಷಿಗಳು ವ್ಯಾಕರಣಶಾಸ್ತ್ರಗಳನ್ನು ರಚಿಸಿದ್ದಾರೆ. ಇವೆಲ್ಲವೂ ಲೋಕೋಪಕಾರಕ್ಕಾಗಿಯೇ ರಚಿತವಾದವು. ಅವರೆಲ್ಲರ ಪಾರಂಪರಿಕ ಪರಿಶ್ರಮವೇ ವ್ಯಾಕರಣಾಧ್ಯಯನಕ್ಕಿರುವ ಮಹತ್ತ್ವವನ್ನು ಸೂಚಿಸುತ್ತದೆ.

**ನ ಚಾಗಮಾದೃತೇ ಧರ್ಮಸ್ತರ್ಕೇಣ ವ್ಯವತಿಷ್ಠತೇ ।**
**ಋಷೀಣಾಮಪಿ ಯದ್‌ಜ್ಞಾನಂ ತದಪ್ಯಾಗಮಪೂರ್ವಕಮ್ ॥ ೩೦ ॥**

'ಇದು ಧರ್ಮ, ಇದು ಅಧರ್ಮ' ಎಂಬ ವ್ಯವಸ್ಥೆ ವೇದದಿಂದ ಮಾತ್ರ ಆಗುತ್ತದೆಯೇ ಹೊರತು ತರ್ಕದಿಂದಲ್ಲ. ಋಷಿಗಳಿಗಿದ್ದ ಧರ್ಮಜ್ಞಾನವೂ ಸಹ ವೇದದಿಂದಲೇ ಬಂದದ್ದು.

**ವಿವರಣೆ** – ಸಾಧುಶಬ್ದ ಪ್ರಯೋಗದಿಂದ ಧರ್ಮ ಬರುತ್ತದೆ ಎನ್ನವುದಕ್ಕೆ ಪ್ರಮಾಣವೇನು? ವೇದವೇ ಪ್ರಮಾಣ. 'ತಸ್ಮಾನ್ನಾಪಭ್ರಂಶಿತವೈ ನಾಪಭಾಷಿತವೈ' ಎನ್ನುತ್ತದೆ ವೇದ. ಸಾಧುಶಬ್ದ ಪ್ರಯೋಗವು 'ಸ್ವರ್ಗೇ ಲೋಕೇ ಕಾಮಧುಗ್ ಭವತಿ' ಎನ್ನುತ್ತದೆ. ಧರ್ಮದ ವ್ಯವಸ್ಥೆ ವೇದದಿಂದ ಮಾತ್ರ ಸಾಧ್ಯ. ತರ್ಕದಿಂದ ಯಾವುದೂ ನಿಶ್ಚಿತವಾಗುವುದಿಲ್ಲ. ಯುಕ್ತಿಗಳಿಗೆ ಅಂತ್ಯವಿಲ್ಲ. ಮನುಸ್ಮೃತಿ ಮುಂತಾದ ಧರ್ಮಶಾಸ್ತ್ರಗಳನ್ನು ಬರೆದವರೂ ವೇದದಿಂದ ಧರ್ಮಸ್ವರೂಪವನ್ನು ತಿಳಿದಿದ್ದರು. ಅವರು ತಾವೇ ಉತ್ಪ್ರೇಕ್ಷಿಸಿ ತೋರಿದಂತೆ ಧರ್ಮಶಾಸ್ತ್ರವನ್ನು ಬರೆದಿಲ್ಲ.

**ಧರ್ಮಸ್ಯ ಚಾವ್ಯವಚ್ಛಿನ್ನಾಃ ಪಂಥಾನೋ ಯೇ ವ್ಯವಸ್ಥಿತಾಃ ।**
**ನ ತಾನ್ ಲೋಕಪ್ರಸಿದ್ಧತ್ವಾತ್ ಕಶ್ಚಿತ್ತರ್ಕೇಣ ಬಾಧತೇ॥ ೩೧ ॥**

ಶಿಷ್ಟಜನರ ಧರ್ಮಾಚರಣೆಗಳು ಅವಿಚ್ಛಿನ್ನವಾಗಿ ಪರಂಪರೆಯಿಂದ ನಡೆದು ಬಂದು ವ್ಯವಸ್ಥಿತವಾಗಿವೆ. ಅವು ಲೋಕ ಪ್ರಸಿದ್ಧವಾಗಿರುವುದರಿಂದ ಯಾವ ವಿವೇಕಿಯೂ ಅವುಗಳನ್ನು ತರ್ಕ ಮಾಡಿ ದೂಷಿಸಲು ಪ್ರಯತ್ನಿಸುವುದಿಲ್ಲ.

**ವಿವರಣೆ** – ಸತ್ಯ, ಅಹಿಂಸೆ ಪರೋಪಕಾರ – ಮುಂತಾದವು ಧರ್ಮವೆಂದೂ ಸುಳ್ಳು, ಹಿಂಸೆ, ದ್ರೋಹ, ವ್ಯಭಿಚಾರ – ಮುಂತಾದವು ಅಧರ್ಮವೆಂದೂ ಲೋಕವು ಅಂಗೀಕರಿಸಿದೆ. ಇದಕ್ಕೆ ಶ್ರುತಿ, ಸ್ಮೃತಿ, ಶಿಷ್ಟಾಚಾರಗಳೇ ಕಾರಣ. ತರ್ಕದಿಂದ ಯಾವನೂ ಧರ್ಮವನ್ನು ಅಧರ್ಮವೆಂದೂ ಅಧರ್ಮವನ್ನು ಧರ್ಮವೆಂದೂ ಸಾಧಿಸಲಾರ. ಹಾಗೆ ವಾದಿಸತಕ್ಕವನನ್ನೇ ಲೋಕವು ಬಹಿಷ್ಕರಿಸುತ್ತದೆ. ಆದ್ದರಿಂದ ಧರ್ಮಾಧರ್ಮಗಳ ವ್ಯವಸ್ಥೆಗೆ ಶಾಸ್ತ್ರವು ನಿಯಾಮಕವೆಂದು ತಿಳಿಯಬೇಕು.

**ಅವಸ್ಥಾದೇಶಕಾಲಾನಾಂ ಭೇದಾದ್ ಭಿನ್ನಾಸು ಶಕ್ತಿಷು ।**
**ಭಾವಾನಾಮನುಮಾನೇನ ಪ್ರಸಿದ್ಧಿರತಿದುರ್ಲಭಾ ॥ ೩೨ ॥**

ಪದಾರ್ಥದಲ್ಲಿರುವ ಶಕ್ತಿಗಳು ಅವಸ್ಥೆ, ದೇಶ, ಕಾಲಗಳ ಭೇದದಿಂದ ಬದಲಾಯಿಸಿ ಬಿಡುತ್ತವೆ. ಆದ್ದರಿಂದ ತರ್ಕದ ಮೂಲಕ ವಸ್ತು ಸ್ವರೂಪವನ್ನು ನಿರ್ಣಯಿಸುವುದು ಸಾಧ್ಯವಾದದ್ದಲ್ಲ.

**ವಿವರಣೆ** – ಅನುಮಾನ = ತರ್ಕ. ವಸ್ತುಸ್ವಭಾವವು ದೇಶಕಾಲಾದಿಗಳಿಂದ ಬೇರೆಯಾಗಿಬಿಡುತ್ತದೆ. ಅನುಮಾನದಿಂದ ನಿರ್ಣಯಿಸಲು ಪ್ರಯತ್ನಿಸುವುದು ತಪ್ಪು. ಹೇಗೆಂದರೆ :

ಅವಸ್ಥಾಭೇದ – ಸ್ತ್ರೀ ಪುರುಷರು ಬಾಲ್ಯ, ಯೌವನ, ವಾರ್ಧಕ್ಯಗಳ ಅವಸ್ಥೆಗಳಲ್ಲಿ ಭಿನ್ನಭಿನ್ನ ರೂಪ, ಗುಣ, ಶಕ್ತಿಗಳನ್ನು ಪಡೆದಿರುತ್ತಾರೆ. ಅವರಿಗೆ ರೋಗ ಬಂದಾಗ ಒಂದೇ ಪ್ರಮಾಣದ ಒಂದೇ ಔಷಧವನ್ನು ಕೊಡುವುದು ತಪ್ಪಾಗುತ್ತದೆ. ಯಾವುದನ್ನು ಎಷ್ಟು ಕೊಡಬೇಕೆಂಬುದನ್ನು ವೈದ್ಯಶಾಸ್ತ್ರವೇ ಹೇಳಬೇಕು. ಹಿಪ್ಪಲಿಯು ಹಸಿಯಾಗಿದ್ದರೆ ಕಫವನ್ನು ಹೆಚ್ಚಿಸುತ್ತದೆ. ಒಣಗಿದ್ದರೆ ಕಫವನ್ನು ನಿವಾರಿಸುತ್ತದೆ. ಇದನ್ನು ತರ್ಕದಿಂದ ನಿರ್ಣಯಿಸಲಾಗುವುದಿಲ್ಲ.

ದೇಶಭೇದ – ಒಂದು ದೇಶದಲ್ಲಿ ಬೆಳೆದ ಹಣ್ಣುಗಳು ಇನ್ನೊಂದು ದೇಶದಲ್ಲಿ

ಬೆಳೆಯುವುದಿಲ್ಲ. ಬೆಳೆದರೂ ಸಮೃದ್ಧಿ, ರುಚಿ, ಆಕಾರಗಳು ಬೇರೆಯಾಗಿ ಬಿಡುತ್ತವೆ. ಇಂತಿಂತಹ ಸ್ಥಳದಲ್ಲಿ ಬೆಳೆದ ಮೂಲಿಕೆಗಳನ್ನೇ ಔಷಧಕ್ಕೆ ಬಳಸಬೇಕೆಂದು ವೈದ್ಯಶಾಸ್ತ್ರ ಹೇಳುತ್ತದೆ.

ಕಾಲಭೇದ – ಶೀತಕಾಲದ ವಸ್ತ್ರ, ಆಹಾರಗಳು ಬೇಸಿಗೆಕಾಲದಲ್ಲಿ ವಿರೋಧ–ವನ್ನುಂಟುಮಾಡುತ್ತವೆ.

ಹಿಂದಿನ ಕಾಲದಲ್ಲಿ ಎಣ್ಣೆಯಿಂದ ದೀಪವನ್ನು ಉರಿಸುತ್ತಿದ್ದರು. 'ಯತ್ರ ದೀಪಃ ತತ್ರ ತೈಲಂ' ಎಂದು ತಾರ್ಕಿಕನು ವ್ಯಾಪ್ತಿಯನ್ನು ಹೇಳಿ, ದೀಪವಿದ್ದಲ್ಲಿ ಎಣ್ಣೆ ಇರುತ್ತದೆಯೆಂದು ಅನುಮಾನದಿಂದ ನಿರ್ಧರಿಸುತ್ತಿದ್ದನು. ಈಗ ವಿದ್ಯುದ್ದೀಪ ಬಂದ ಮೇಲೆ ಅವನ ನಿರ್ಣಯ ತಪ್ಪಾಗಿ ಬಿಟ್ಟಿತು. ಮಾತಾಡುತ್ತಿದ್ದ ಕೋಣೆಯಲ್ಲಿ ಮನುಷ್ಯನಿದ್ದಾನೆಂದು ಹಿಂದೆ ನಿರ್ಧರಿಸಬಹುದಾಗಿತ್ತು. ಈಗ ಮನುಷ್ಯನಿಲ್ಲದಿದ್ದರೂ ರೇಡಿಯೋ ಇದ್ದರೆ ಮಾತು ಬರುತ್ತಲೇ ಇರುತ್ತದೆ. ನಮ್ಮ ಅನುಭವವೂ ಸಹ ದೋಷಯುಕ್ತವಾಗಿರುತ್ತದೆ. ನಾವು ಸ್ಪರ್ಶದಿಂದ ಇದು ತಣ್ಣೀರು, ಸ್ವಲ್ಪವೂ ಉಷ್ಣವೇ ಇಲ್ಲ ಎಂದು ಹೇಳುತ್ತೇವೆ. ತಣ್ಣೀರಿನಲ್ಲಿಯೂ ಉಷ್ಣತೆ ಇದೆಯೆಂದು ವಿಜ್ಞಾನಶಾಸ್ತ್ರ ಹೇಳುತ್ತದೆ. ಹೀಗೆ ತರ್ಕದಿಂದ ಇಂದ್ರಿಯ ಗೋಚರ ವಸ್ತುವನ್ನೇ ನಾವು ನಿರ್ಧರಿಸಲಾರೆವು. ಅತೀಂದ್ರಿಯವಾದ ಧರ್ಮವನ್ನು ನಿಶ್ಚಯಿಸಲು ಸಾಧ್ಯವೆ? ಆದ್ದರಿಂದ ಧರ್ಮದ ವಿಷಯದಲ್ಲಿ ಶಾಸ್ತ್ರವೇ ಪ್ರಮಾಣವೆಂದು ಅಭಿಪ್ರಾಯ.

**ನಿರ್ಜ್ಞಾತಶಕ್ತೇರ್ದ್ರವ್ಯಸ್ಯ ತಾಂ ತಾಮರ್ಥಕ್ರಿಯಾಂ ಪ್ರತಿ ।**
**ವಿಶಿಷ್ಟದ್ರವ್ಯಸಂಬಂಧೇ ಸಾ ಶಕ್ತಿಃ ಪ್ರತಿಬಧ್ಯತೇ ॥ ೩೩ ॥**

ಒಂದು ವಸ್ತುವಿಗೆ ಫಲಪ್ರದವಾದ ಒಂದು ಕ್ರಿಯೆಯನ್ನು ಮಾಡುವ ಶಕ್ತಿಯಿದೆಯೆಂದು ನಮಗೆ ತಿಳಿದಿರುತ್ತದೆ. ಆದರೂ ಇನ್ನೊಂದು ವಿಶಿಷ್ಟದ್ರವ್ಯದಲ್ಲಿ ಆ ಶಕ್ತಿಗೆ ಅಡ್ಡಿಯಾಗಿ ಫಲಪ್ರದವಾಗುವುದಿಲ್ಲ.

**ವಿವರಣೆ** – ಬೆಂಕಿಗೆ ಮರವನ್ನು ಸುಟ್ಟು ಬೂದಿ ಮಾಡುವ ಶಕ್ತಿಯಿದೆ. ಆದರೆ ಕಲ್ಲನ್ನು ಸುಟ್ಟು ಬೂದಿಮಾಡಲಾರದು. ಕಟ್ಟಿಗೆಯನ್ನು ಚಾಚಿದರೆ ಬೆಂಕಿ ಹತ್ತಿಕೊಳ್ಳುತ್ತದೆ. ಕಬ್ಬಿಣದ ಹಾರೆಗೆ ಹತ್ತಿಕೊಂಡು ಉರಿಯಲಾರದು. ವಿದ್ಯುಚ್ಛಕ್ತಿ ಹರಿಯುವ ತಂತಿಯನ್ನು ಮುಟ್ಟಿದರೆ ಅಪಘಾತವಾಗುತ್ತದೆ. ಆದರೆ ಸಿಲ್ಕ್ ಕಾರ್ಡನ್ನು ಮುಚ್ಚಿದರೆ ವಿದ್ಯುಚ್ಛಕ್ತಿಯಿದ್ದರೂ ಏನೂ ಆಗುವುದಿಲ್ಲ. ತಾತ್ಪರ್ಯವೇನೆಂದರೆ, ವಸ್ತು ಸ್ವಭಾವವು ಭಿನ್ನಭಿನ್ನವಾಗಿರುವುದರಿಂದ 'ಇದರಂತೆ ಅದು' ಎಂದು ಊಹಿಸುವುದಕ್ಕೆ ಆಗುವುದಿಲ್ಲ.

**ಯತ್ನೇನಾನುಮಿತೋಽಪ್ಯರ್ಥಃ ಕುಶಲೈರನುಮಾತೃಭಿಃ ।**
**ಅಭಿಯುಕ್ತತರೈರನ್ಯೈರನ್ಯಥೈವೋಪಪಾದ್ಯತೇ ॥ ೩೪ ॥**

ತರ್ಕಮಾಡತಕ್ಕವರು ಎಷ್ಟೇ ಸಮರ್ಥರಾಗಿರಲಿ ಬುದ್ಧಿಪರಿಶ್ರಮದಿಂದ ಅವರು ಅನುಮಾನಪ್ರಮಾಣವನ್ನಾಧರಿಸಿ ನಿಶ್ಚಯಿಸಿದ ಸಿದ್ಧಾಂತವೂ ನಿಲ್ಲುವುದಿಲ್ಲ. ತರ್ಕದಲ್ಲಿ ಅವರಿಗಿಂತ ಬುದ್ಧಿಶಾಲಿಗಳಾದವರು ಹಿಂದಿನ ಸಿದ್ಧಾಂತವನ್ನು ಖಂಡಿಸಿ ಬೇರೆ ರೀತಿಯಲ್ಲಿ ಉಪಪಾದಿಸುತ್ತಾರೆ.

**ವಿವರಣೆ** – ಕಣಾದ, ಗೌತಮ, ಕಪಿಲಾದಿಗಳು ತರ್ಕಬಲದಿಂದಲೇ ಇನ್ನೊಬ್ಬರ ಸಿದ್ಧಾಂತವನ್ನು ದೂಷಿಸಿ ತಮ್ಮ ಸಿದ್ಧಾಂತವನ್ನು ಮಂಡಿಸಿದ್ದಾರೆ. ಅವು ಪರಸ್ಪರ ವಿರುದ್ಧವಾಗಿವೆ. ತರ್ಕಕ್ಕೆ ಕೊನೆಯಿಲ್ಲವಾದ್ದರಿಂದ ಅತೀಂದ್ರಿಯವಾದ ವಿಷಯವು ಮನುಷ್ಯಬುದ್ಧಿಗೆ ನಿಲುಕತಕ್ಕದ್ದಲ್ಲ. ಅದನ್ನು ಈಶ್ವರೋಕ್ತವಾದ ವೇದದಿಂದಲೇ ನಿರ್ಣಯಿಸಬೇಕು. ಆದ್ದರಿಂದಲೇ ಬ್ರಹ್ಮಸೂತ್ರಕರ್ತರಾದ ಬಾದರಾಯಣಾಚಾರ್ಯರು 'ತರ್ಕಾಪ್ರತಿಷ್ಠಾನಾತ್ ... (ಬ್ರ. ಸೂ. ೨–೧–೧೧)' ಎಂದು ಸೂತ್ರಿಸಿ ತರ್ಕವನ್ನು ಅಲ್ಲಗಳೆದಿದ್ದಾರೆ.

ತರ್ಕಕ್ಕೆ ಮಿತಿಯಿಲ್ಲವೆನ್ನುವುದಕ್ಕೆ ಒಂದು ಉದಾಹರಣೆಯನ್ನು ಕೊಡ–ಬಹುದು. ತಾರ್ಕಿಕ :– ದ್ರವ್ಯವು ಗುಣಕ್ಕಿಂತ ಭಿನ್ನವಾದದ್ದು. ಆನೆಯ ರೂಪ, ಮಲ್ಲಿಗೆಯ ಗಂಧ, ಕಬ್ಬಿನ ಸಿಹಿ – ಇತ್ಯಾದಿ ಪ್ರಯೋಗಗಳಲ್ಲಿ ಆನೆ–ರೂಪ, ಮಲ್ಲಿಗೆ–ಗಂಧ, ಕಬ್ಬು–ಸಿಹಿ ಇವುಗಳಿಗೆ ಪರಸ್ಪರ ಭೇದವಿದೆ. ಹುಡುಗನ ಪುಸ್ತಕ, ರಾಜನ ರಾಜ್ಯ ಇವುಗಳಲ್ಲಿ ಪುಸ್ತಕಕ್ಕಿಂತ ಹುಡುಗ ಬೇರೆ, ರಾಜ್ಯಕ್ಕಿಂತ ರಾಜನು ಬೇರೆ ಎಂಬುದು ಸ್ಪಷ್ಟವಾಗಿದೆ. ವಿಶೇಷಣ ವಿಶೇಷ್ಯ ಭಾವವಿದ್ದಾಗ ವಿಶೇಷಣ ಬೇರೆ ವಿಶೇಷ್ಯ ಬೇರೆ ಎನ್ನಲೇ ಬೇಕು. ರೂಪವೇ ಆನೆಯಲ್ಲ. ಗಂಧವೇ ಮಲ್ಲಿಗೆಯಲ್ಲ, ಸಿಹಿಯೇ ಕಬ್ಬಲ್ಲ. ಗುಣವು ಬೇರೆ, ದ್ರವ್ಯ ಬೇರೆ ಎಂದು ಇದರಿಂದ ಸಿದ್ಧವಾಗುತ್ತದೆ.

ಸಾಂಖ್ಯ :– ಹಾಗಲ್ಲ; ದ್ರವ್ಯಗಳಿಗೆ ಭೇದವಿದ್ದರೆ ದ್ರವ್ಯವನ್ನು ಬಿಟ್ಟು ಗುಣವೂ ಗುಣವನ್ನು ಬಿಟ್ಟು ದ್ರವ್ಯವೂ ತೋರಬೇಕು. ರೂಪ, ಗಂಧ, ಸಿಹಿ, ಎಂಬವನ್ನು ಪ್ರತ್ಯೇಕವಾಗಿ ತೋರಿಸಲಾಗುವುದಿಲ್ಲ. ಗುಣಸಮೂಹವೇ ದ್ರವ್ಯ. ವಿಶೇಷಣ ವಿಶೇಷ್ಯಗಳು ಭಿನ್ನವಾಗಿರಬೇಕೆಂಬ ನಿಯಮವಿಲ್ಲ. ಉದಾ :– ಕಾಡಿನ ಮರಗಳು– ಇಲ್ಲಿ ಮರಗಳನ್ನು ಬಿಟ್ಟು ಕಾಡು ಎಲ್ಲಿದೆ? ಈ ಶ್ಲೋಕದ ಶಬ್ದಗಳು – ಇಲ್ಲಿ ಶಬ್ದಗಳನ್ನು ಬಿಟ್ಟು ಶ್ಲೋಕ ಎಲ್ಲಿದೆ? ನದಿಯ ಪ್ರವಾಹ–ಇಲ್ಲಿ ಪ್ರವಾಹವನ್ನು ಬಿಟ್ಟರೆ ನದಿ ಯಾವುದು? ಆದ್ದರಿಂದ ಗುಣಸಮೂಹವೇ ದ್ರವ್ಯ. ಅದು ಭಿನ್ನವಸ್ತುವಲ್ಲ. ಹೀಗೆ ವಾದ ಪ್ರತಿವಾದಗಳು ಬೆಳೆಯುತ್ತವೆ.

**ಪರೇಷಾಮಸಮಾಖ್ಯೇಯಮಭ್ಯಾಸಾದೇವ ಜಾಯತೇ ।**
**ಮಣಿರೂಪ್ಯಾದಿವಿಜ್ಞಾನಂ ತದ್ವಿದಾಂ ನಾನುಮಾನಿಕಮ್ ॥೩೫॥**

ರತ್ನ, ಚಿನ್ನದ ನಾಣ್ಯ – ಮುಂತಾದವುಗಳ ಯೋಗ್ಯತೆ ಏನೆಂಬುದು ಅದನ್ನು ಬಲ್ಲ ರತ್ನಪರೀಕ್ಷಕ, ಅಕ್ಕಸಾಲಿಗ – ಮೊದಲಾದವರಿಗೆ ನೋಡುತ್ತಲೇ ಗೊತ್ತಾಗಿ ಬಿಡುತ್ತದೆ. ಇದು ಅನುಮಾನಪ್ರಮಾಣದಿಂದ ತರ್ಕಿಸಿ ಆದದ್ದಲ್ಲ. ಅಭ್ಯಾಸ ಬಲದಿಂದಲೇ ಆದದ್ದು. ಇತರರಿಗೆ ಎಷ್ಟು ನೋಡಿದರೂ ಅವುಗಳ ಯೋಗ್ಯತೆ ಗೊತ್ತಾಗುವುದೇ ಇಲ್ಲ.

**ವಿವರಣೆ** – ರೂಪ್ಯ ಶಬ್ದಕ್ಕೆ ಚಿನ್ನದ ನಾಣ್ಯವೆಂದೂ ಅರ್ಥವಿದೆ. ಪ್ರತ್ಯಕ್ಷದಿಂದ, ತರ್ಕದಿಂದ ಆಗದ ಜ್ಞಾನ ಅಭ್ಯಾಸಬಲದಿಂದ ವಸ್ತುವನ್ನು ನೋಡಿದೊಡನೆ ಆಗುತ್ತದೆ. ಸಂಗೀತದಲ್ಲಿ ಹಾಡಿನ ರಾಗ, ತಾಳಗಳು ಕೇಳಿದವರಿಗೆಲ್ಲ ಗೊತ್ತಾಗುವುದಿಲ್ಲ. ಸಂಗೀತದ ಅಭ್ಯಾಸವಿದ್ದವರಿಗೆ ಮಾತ್ರ ಆಗುತ್ತದೆ. ಅಭ್ಯಾಸವೂ ಜ್ಞಾನಕ್ಕೆ ಒಂದು ಸಾಧನ. ಆದ್ದರಿಂದ ವಸ್ತುಜ್ಞಾನಕ್ಕೆ ಇಷ್ಟೇ ಪ್ರಮಾಣಗಳೆಂದು ಹೇಳುವುದು ಸರಿಯಲ್ಲ.

**ಪ್ರತ್ಯಕ್ಷಮನುಮಾನಂ ಚ ವ್ಯತಿಕ್ರಮ್ಯ ವ್ಯವಸ್ಥಿತಾಃ ।**
**ಪಿತೃರಕ್ಷಃಪಿಶಾಚಾನಾಂ ಕರ್ಮಜಾ ಏವ ಸಿದ್ಧಯಃ ॥ ೩೬ ॥**

ಪಿತೃದೇವತೆಗಳು, ರಾಕ್ಷಸರು, ಪಿಶಾಚಗಳು – ಇವರಿಗೆ ಒಂದು ಬಗೆಯ ಪರೋಕ್ಷಜ್ಞಾನವಿರುತ್ತದೆ. ಇದು ಪ್ರತ್ಯಕ್ಷಜ್ಞಾನವೂ ಅಲ್ಲ, ಆನುಮಾನಿಕವೂ ಅಲ್ಲ. ಇಂತಹ ಸಿದ್ಧಿಗಳು ಅವರಿಗೆ ಅವರು ಮಾಡಿದ ಕರ್ಮದಿಂದಲೇ ಪ್ರಾಪ್ತವಾದವುಗಳು (ಈ ಜ್ಞಾನವು ಲೌಕಿಕ ಪ್ರತ್ಯಕ್ಷವಲ್ಲ).

**ವಿವರಣೆ** – ಪಿಶಾಚಾದಿಗಳು ಸ್ವಪ್ನದಲ್ಲಿ ಬಂದು ಮಾತಾಡುತ್ತವೆಯೆಂದೂ ಒಬ್ಬರ ದೇಹದಲ್ಲಿ ಆವಿಷ್ಟವಾಗಿ ನಮ್ಮೆದುರಿಗೇ ಮಾತಾಡುತ್ತವೆಯೆಂದೂ ಹೇಳುತ್ತಾರೆ. ಆಧುನಿಕರಿಗೆ ಇದರಲ್ಲಿ ವಿಶ್ವಾಸವಿಲ್ಲದಿರಬಹುದು. ಗ್ರಂಥಕಾರನಾದ ಭರ್ತೃಹರಿಗೆ ಈ ಬಗೆಯ ಸಿದ್ಧಿಯಲ್ಲಿ ಸಂಪೂರ್ಣ ವಿಶ್ವಾಸವಿದೆ. ಈಗಲೂ ವಿಶ್ವಾಸವನ್ನಿಟ್ಟವರು ಬಹಳ ಜನರಿದ್ದಾರೆ.

**ಆವಿರ್ಭೂತಪ್ರಕಾಶಾನಾಮನುಪಪ್ಲುತಚೇತಸಾಂ ।**
**ಅತೀತಾನಾಗತಜ್ಞಾನಂ ಪ್ರತ್ಯಕ್ಷಾನ್ನ ವಿಶಿಷ್ಯತೇ ॥ ೩೭ ॥**

ಋಷಿಗಳ ಚಿತ್ತವು ರಜಸ್ತಮೋಗುಣಗಳಿಂದ ಆಕ್ರಾಂತವಾಗಿರುವುದಿಲ್ಲ–ವಾದ್ದರಿಂದ ಅವರಿಗೆ ದಿವ್ಯವಾದ ಜ್ಞಾನಪ್ರಕಾಶವು ಲಭಿಸಿರುತ್ತದೆ. ಭೂತ–ಭವಿಷ್ಯತ್ತುಗಳ ವಿಷಯದಲ್ಲಿ ಋಷಿಗಳ ಜ್ಞಾನವು ಪ್ರತ್ಯಕ್ಷಕ್ಕಿಂತ ಬೇರೆ ಏನೂ ಅಲ್ಲ, ಅದು ಪ್ರತ್ಯಕ್ಷವೇ ಸರಿ.

**ವಿವರಣೆ** – ಋಷಿಗಳು ತಪಸ್ಸಿನಿಂದ ರಜೋಗುಣ, ತಮೋಗುಣಗಳನ್ನು ದಾಟಿರುತ್ತಾರೆ. ಅವರ ಮನಸ್ಸು ಸಾತ್ತ್ವಿಕಗುಣ ಪೂರ್ಣವಾಗಿ ಶುದ್ಧವಾಗಿರುತ್ತದೆ. ದುರ್ಬೀನಿನ ಮೂಲಕ ನಾವು ದೂರದಲ್ಲಿರುವ ಸೂಕ್ಷ್ಮವಸ್ತುಗಳನ್ನು ನೋಡುವಂತೆ, ಅವರು ಭೂತ, ಭವಿಷ್ಯ ವಸ್ತುಗಳನ್ನು ನೋಡಬಲ್ಲರು. ಈ ಜ್ಞಾನಕ್ಕೆ ಯೋಗಜಪ್ರತ್ಯಕ್ಷವೆಂದು ಹೆಸರು. ನಮಗಾಗುವುದು ತಾರ್ಕಿಕಪ್ರತ್ಯಕ್ಷ. ಹಿಂದಿನ ಶ್ಲೋಕದಲ್ಲಿ ಹೇಳಿದ ಪಿಶಾಚಾದಿಗಳ ಜ್ಞಾನವು ತಾತ್ಕಾಲಿಕವೂ ಪರಿಮಿತವೂ ಆಗಿರುತ್ತದೆ. ಆರ್ಷಜ್ಞಾನವು ತಾತ್ಕಾಲಿಕವೂ ಅಲ್ಲ. ಪರಿಮಿತವೂ ಅಲ್ಲವೆಂಬುದಿಷ್ಟೇ ಭೇದ. ಉಭಯರ ಜ್ಞಾನವೂ ತಾರ್ಕಿಕಪ್ರತ್ಯಕ್ಷವಲ್ಲ. ಯೋಗಿಗಳಿಗೆ ಭೂತ ಭವಿಷ್ಯತ್ತಿನ ಜ್ಞಾನ ಬರುತ್ತದೆಯೆಂದು ಈ ಯೋಗಸೂತ್ರ ಹೇಳುತ್ತದೆ.

ಪರಿಣಾಮತ್ರಯಸಂಯಮಾದತೀತಾನಾಗತಜ್ಞಾನಮ್ ॥

–ಯೋ.ಸೂ. ೩–೧೬

**ಅತೀಂದ್ರಿಯಾನಸಂವೇದ್ಯಾನ್ ಪಶ್ಯಂತ್ಯಾರ್ಷೇಣ ಚಕ್ಷುಷಾ ।**
**ಯೇ ಭಾವಾನ್ ವಚನಂ ತೇಷಾಂ ನಾನುಮಾನೇನ ಬಾಧ್ಯತೇ ॥ ೩೮ ॥**

ನಮ್ಮ ನೇತ್ರಶ್ರೋತ್ರಾದಿ ಇಂದ್ರಿಯಗಳಿಗೆ ಗೋಚರವಾಗದ, ಅನು–ಮಾನಾದಿ ಪ್ರಮಾಣಗಳಿಗೂ ನಿಲುಕದ ಸೂಕ್ಷ್ಮವಸ್ತುಗಳಿವೆ. ಆ ವಸ್ತುಗಳನ್ನು ಋಷಿಗಳು ದಿವ್ಯವಾದ ತಮ್ಮ ಆರ್ಷನೇತ್ರದಿಂದ ನೋಡಬಲ್ಲರು. ಅವರ ಉಕ್ತಿಯನ್ನು ತರ್ಕದಿಂದ ತಳ್ಳಿಹಾಕಲಾಗುವುದಿಲ್ಲ.

**ಟಿಪ್ಪಣಿ** – ಶಬ್ದಬ್ರಹ್ಮ, ಪರಮಾಣು, ದೇವತೆಗಳು, ಸಂಸ್ಕಾರ, ಧರ್ಮ, ಆತಿವಾಹಿಕ ಶರೀರ ಮೊದಲಾದವು ಅತೀಂದ್ರಿಯಗಳಾದ ಸೂಕ್ಷ್ಮವಸ್ತುಗಳು. ಮನುಷ್ಯನು ಸತ್ತಮೇಲೆ ಪುನರ್ಜನ್ಮದ ದೇಹವನ್ನು ಪಡೆಯುವುದಕ್ಕೆ ಮೊದಲು ನಡುವೆ ಒಂದು ಆಂತರಾಲಿಕ ದೇಹವನ್ನು ಪಡೆಯುತ್ತಾನೆ. ಅದು ಆತಿವಾಹಿಕ ಶರೀರ.

**ಯೋ ಯಸ್ಯ ಸ್ವಮಿವ ಜ್ಞಾನಂ ದರ್ಶನಂ ನಾತಿಶಂಕತೇ ।**
**ಸ್ಥಿತಂ ಪ್ರತ್ಯಕ್ಷಪಕ್ಷೇ ತಂ ಕಥಮನ್ಯೋ ನಿವರ್ತಯೇತ್॥ ೩೯ ॥**

ಒಬ್ಬನು ತಾನೇ ಪ್ರತ್ಯಕ್ಷವಾಗಿ ಕಂಡದ್ದನ್ನು ದೃಢವಾಗಿ ನಂಬಿರುತ್ತಾನೆ. ಅದರ ವಿಷಯದಲ್ಲಿ ಅವನು ಸಂದೇಹ ಪಡುವುದೇ ಇಲ್ಲ. ಹಾಗೆಯೇ ಋಷಿಗಳ ದಿವ್ಯದರ್ಶನವು 'ನಾನು ಪ್ರತ್ಯಕ್ಷವಾಗಿ ನೋಡಿದಂತೆ ಸತ್ಯ' – ಎಂದು ಯಾವಾತನು ನಂಬಿರುತ್ತಾನೋ ಅವನ ನಂಬಿಕೆಯನ್ನು ಬೇರೆ ಯಾವನು ಬದಲಾಯಿಸಬಲ್ಲನು?

**ವಿವರಣೆ** – ಋಷಿಗಳ ದಿವ್ಯದರ್ಶನವು ಜನರ ನಂಬಿಕೆಯ ಮೇಲೆ ನಿಂತಿರುತ್ತದೆ. ಋಷಿಗಳು ಹೇಳಿದ್ದು ಸತ್ಯ. ಅದನ್ನು ನಾವು ಪೂರ್ತಿಯಾಗಿ ನಂಬುತ್ತೇವೆ. ಅವರು ಹೇಳಿದ್ದಕ್ಕೂ ನಾವೇ ಪ್ರತ್ಯಕ್ಷವಾಗಿ ಕಂಡದ್ದಕ್ಕೂ ವ್ಯತ್ಯಾಸವೇ ಇಲ್ಲ. ಇದು ನಮ್ಮ ದೃಢವಾದ ವಿಶ್ವಾಸ. ನಿಮ್ಮ ತರ್ಕ–ಗಿರ್ಕಗಳು ನಮ್ಮಲ್ಲಿ ನಡೆಯುವುದಿಲ್ಲ ಎಂದು ಅಭಿಪ್ರಾಯ.

**ಇದಂ ಪುಣ್ಯಮಿದಂ ಪಾಪಮಿತ್ಯೇತಸ್ಮಿನ್ ಪದದ್ವಯೇ ।**
**ಆಚಂಡಾಲಂ ಮನುಷ್ಯಾಣಾಮಲ್ಪಂ ಶಾಸ್ತ್ರಪ್ರಯೋಜನಮ್ ॥ ೪೦ ॥**

'ಇದು ಪುಣ್ಯ, ಇದು ಪಾಪ' ಎಂಬೆರಡು ಶಬ್ದಗಳ ವಿಷಯದಲ್ಲಿ ಚಂಡಾಲರಿಂದ ಹಿಡಿದು ಎಲ್ಲ ಮನುಷ್ಯರಿಗೂ ಶಾಸ್ತ್ರದಿಂದಾಗುವ ಪ್ರಯೋಜನವು ಅತ್ಯಲ್ಪ.

**ವಿವರಣೆ** – ಸತ್ಯ, ಪರೋಪಕಾರ, ದಯೆ – ಮೊದಲಾದವು ಪುಣ್ಯ ಕರ್ಮ–ಗಳು. ಸುಳ್ಳು, ಕಳ್ಳತನ, ಹಿಂಸೆ – ಮೊದಲಾದವು ಪಾಪಕರ್ಮಗಳು–ಎಂಬುದು ಪಾಮರರಿಗೂ ಗೊತ್ತಿದೆ. ಧರ್ಮಶಾಸ್ತ್ರವನ್ನೋದಿ ಇದನ್ನು ತಿಳಿದುಕೊಳ್ಳಬೇಕಾಗಿಲ್ಲ. ಕಳ್ಳನೂ ಸಹ ಕಳ್ಳತನವು ಕೆಟ್ಟದೆಂದು ಹೇಳುತ್ತಾನೆ. ಈ ದೇಶದಲ್ಲಿ ಶಾಸ್ತ್ರವು ಹೇಳಿದ ಶಿಷ್ಟಾಚಾರವು ಇಷ್ಟು ದೃಢವಾಗಿ ನೆಲೆಸಿದೆ. ಶಾಸ್ತ್ರದ ಪ್ರಭಾವ ಬಹು ದೊಡ್ಡದು. ಶಾಸ್ತ್ರವು ಸತ್ಯವಾದ್ದರಿಂದಲೇ ಜನರು ಪ್ರಭಾವಿತರಾಗಿದ್ದಾರೆ.

**ಚೈತನ್ಯಮಿವ ಯಶ್ಚಾಯಮವಿಚ್ಛೇದೇನ ವರ್ತತೇ ।**
**ಆಗಮಸ್ತಮುಪಾಸೀನೋ ಹೇತುವಾದೈರ್ನ ಬಾಧ್ಯತೇ॥ ೪೧ ॥**

ದೇಹದಲ್ಲಿರುವ ಆತ್ಮಚೈತನ್ಯದಂತೆ, ವೇದವು ಯಾವ ವಿಚ್ಛೇದವೂ ಇಲ್ಲದೆ ಸ್ವಯಂ ಪ್ರಮಾಣವಾಗಿರುತ್ತದೆ. ಈ ವೇದವನ್ನು ಯಾವಾತನು ಆಶ್ರಯಿಸಿ ನಂಬಿರುತ್ತಾನೋ ಆತನನ್ನು ತಾರ್ಕಿಕರ ಯಾವ ಹೇತುವಾದಗಳೂ ಬಾಧಿಸುವುದಿಲ್ಲ.

**ವಿವರಣೆ** – ದೇಹದಲ್ಲಿ 'ನಾನು, ನಾನು' ಎಂದು ಆತ್ಮಚೈತನ್ಯವು ಸ್ವಯಂ–ಪ್ರಕಾಶವಾಗಿ ನೆಲೆಸಿದೆ. ಎಲ್ಲರೂ 'ನಾನು ಇದ್ದೇನೆ' ಎಂದೇ ತಿಳಿದುಕೊಂಡಿದ್ದಾರೆ. 'ನಾನು ಇದ್ದೇನೆ' ಎಂಬುದನ್ನು ಬೇರೆಯವರು ತಿಳಿಸಿಕೊಡಬೇಕಾಗಿಲ್ಲ. 'ನಾನು' ಇದ್ದೇನೋ ಇಲ್ಲವೋ – ಎಂದು ಯಾರಿಗೂ ಸಂದೇಹ ಬರುವುದೂ ಇಲ್ಲ. 'ನಾನು ಇಲ್ಲ' ಎಂದು ವಿಪರೀತ ಜ್ಞಾನವೂ ಹುಟ್ಟುವುದಿಲ್ಲ. ಹಾಗೆ ವೇದವು ಸ್ವತಃ ಪ್ರಮಾಣವಾಗಿದ್ದು 'ಅದು ಪ್ರಮಾಣವೋ ಅಲ್ಲವೋ' ಎಂದು ಯಾವ ಶಿಷ್ಟನಿಗೂ ಸಂದೇಹ ಬರುವುದಿಲ್ಲ. 'ವೇದವು ಪ್ರಮಾಣವಲ್ಲ' ಎಂಬ ವಿಪರೀತಜ್ಞಾನವೂ ಅವನಿಗೆ ಹುಟ್ಟುವುದಿಲ್ಲ. ಆತ್ಮ ಚೈತನ್ಯದಂತೆ ಅದು ಅನಾದಿಯೂ ಅವಿಚ್ಛಿನ್ನವೂ ಆಗಿ ನಿತ್ಯವೆನಿಸಿಕೊಂಡಿದೆ. ಆದ್ದರಿಂದ ಸತ್ಯಾನ್ವೇಷಿಗೆ ಅಪೌರುಷೇಯವಾದ ಶ್ರುತಿಯೇ ಪರಮ ಪ್ರಮಾಣವಾಗಿರುತ್ತದೆ.

ಜೈನ ಬೌದ್ಧಾದಿಗಳು ವೇದವನ್ನು ನಂಬದಿರಬಹುದು. ಆವರೂ ಸಹ ವೇದವು ಹೇಳಿದ ಬಹಳ ವಿಷಯಗಳನ್ನು ತಮ್ಮ ಮತದಲ್ಲಿ ಸೇರಿಸಿಕೊಂಡಿದ್ದಾರೆ. ಜೈನರು ಚಾತುರ್ವರ್ಣ್ಯವನ್ನೊಪ್ಪಿದ್ದಾರೆ. ದೇವತೆಗಳಿಗೆ ಹೋಮಹವನಗಳನ್ನು ಮಾಡುತ್ತಾರೆ. ಜೈನಬೌದ್ಧಾದಿಗಳೆಲ್ಲರೂ ವೇದಬೋಧಿತವಾದ ಸತ್ಯ, ಅಹಿಂಸಾ, ಬ್ರಹ್ಮಚರ್ಯ, ತಪಸ್ಸು – ಮುಂತಾದುವನ್ನು ಒಪ್ಪಿಕೊಂಡಿದ್ದಾರೆ. ಇದು ಭಕ್ಷ್ಯ – ಇದು ಅಭಕ್ಷ್ಯ ಎಂಬುದೂ ಸಹ ಅವರಿಗೆ ವೇದ ಬೋಧಿತವೇ ಆಗಿದೆ. ಗುರು ಶುಶ್ರೂಷೆ ಮೊದಲಾದವು ಸಮಾನ. ಸ್ಪೃಶ್ಯ – ಅಸ್ಪೃಶ್ಯ ಭೇದವೂ ವೇದದಲ್ಲಿ ಹೇಳಿದಂತೆಯೇ ಇದೆ. ವೇದಬೋಧಿತ ತತ್ತ್ವವನ್ನು ಅವರಿಗೆ ಅಲ್ಲಗಳೆಯಲು ಸಾಧ್ಯವಾಗಲಿಲ್ಲ. ಕೆಲವೇ ಪ್ರಮೇಯಗಳನ್ನು ಮಾತ್ರ ಸ್ವತಃ ಕಲ್ಪಿಸಿಕೊಂಡಿದ್ದಾರೆ. ಆ ಕಲ್ಪನೆಗೆ ಮೂಲಭೂತವಾದ ಆಧಾರಗ್ರಂಥ ಯಾವುದು? ಎಂಬುದು ಪ್ರಶ್ನಾರ್ಥಕವಾಗಿ ಉಳಿದುಕೊಳ್ಳುತ್ತದೆ. ತರ್ಕವಾದಗಳಿಂದ ವೈದಿಕಸಿದ್ಧಾಂತವನ್ನು ದೂಷಿಸುವುದಕ್ಕಾಗುವುದಿಲ್ಲ. ಪ್ರಕೃತ ಶಬ್ದಬ್ರಹ್ಮವು ವೇದಬೋಧಿತವಾದ್ದರಿಂದ ಇದರಲ್ಲಿ ಶ್ರದ್ಧೆಯನ್ನಿಡಬೇಕು ಎಂದು ಅಭಿಪ್ರಾಯ.

**ಹಸ್ತಸ್ಪರ್ಶಾದಿವಾಂಧೇನ ವಿಷಮೇ ಪಥಿ ಧಾವತಾ ।**
**ಅನುಮಾನಪ್ರಧಾನೇನ ವಿನಿಪಾತೋ ನ ದುರ್ಲಭಃ ॥ ೪೨ ॥**

ಇಕ್ಕಟ್ಟಾದ ಏರುತಗ್ಗಿನ ದಾರಿಯಲ್ಲಿ ಕುರುಡನು ಕೈಯಿಂದ ಎಡಬಲ-ಗಳನ್ನು ಮುಟ್ಟಿ ತಡವರಿಸುತ್ತ ಓಡುತ್ತಿದ್ದರೆ ಅವನು ಉರುಳಿ ಬೀಳುವುದು ನಿಶ್ಚಯ. ಹಾಗೆಯೇ ಅನುಮಾನವನ್ನು ಪ್ರಧಾನವಾಗಿಟ್ಟುಕೊಂಡು ತರ್ಕದಿಂದ ತತ್ತ್ವಚಿಂತನೆಗೆ ಹೊರಟವನು ಒಂದೆಡೆ ಮುಗ್ಗರಿಸಿ ಬೀಳದೆ ಇರುವುದಿಲ್ಲ!

**ವಿವರಣೆ** – 'ವೇದವನ್ನೇ ನಂಬಬೇಕು, ತರ್ಕವೇ ಬೇಡ' ಎಂದು ಇದರ ಅಭಿಪ್ರಾಯವಲ್ಲ. ತರ್ಕವಿಲ್ಲದೆ ನಂಬಿದರೆ ಮೂಢನಂಬಿಕೆಯಾಗಿ ಬಿಡುತ್ತದೆ. ವ್ಯಾಕ-ರಣಶಾಸ್ತ್ರದಲ್ಲಿಯೇ ಬೇಕಾದಷ್ಟು ತರ್ಕವನ್ನು ಬಳಸಿದ್ದಾರೆ. 'ತರ್ಕಾಪ್ರತಿಷ್ಠಾನಾತ್ = ತರ್ಕಕ್ಕೆ ಅವಧಿ ಇಲ್ಲ' ಎಂದು ದೂರಿದ ಬ್ರಹ್ಮಸೂತ್ರವೇ ತರ್ಕಪ್ರಧಾನವಾಗಿದೆ. ವೇದಾಂತದರ್ಶನದಲ್ಲಿ ಅತಿಕರ್ಕಶ ತರ್ಕವನ್ನು ಬೆಳೆಸಿದ ವ್ಯಾಖ್ಯಾನ ಗ್ರಂಥಗಳಿವೆ. ಆದ್ದರಿಂದ ವೇದಕ್ಕೆ ಅನುಕೂಲವಾದ ತರ್ಕವನ್ನು ಮಾಡಬೇಕು. ಅದು ಸತ್ತರ್ಕ-ವೆನಿಸುತ್ತದೆ. ವೇದವಿರುದ್ಧವಾಗಿ ತರ್ಕವನ್ನು ಬಳಸಬಾರದು. ಅದು ದುಸ್ತರ್ಕ.

ಉಪನಿಷತ್ತಿನಲ್ಲಿ 'ಆತ್ಮಾ ವಾ ಅರೇ ದ್ರಷ್ಟವ್ಯಃ ಶ್ರೋತವ್ಯೋ ಮಂತವ್ಯೋ ನಿಧಿಧ್ಯಾಸಿತವ್ಯಃ' ಎಂದು ಹೇಳಿದೆ. 'ಆತ್ಮನನ್ನು ಸಾಕ್ಷಾತ್ಕರಿಸಿಕೊಳ್ಳಬೇಕು. ಆತ್ಮದ ವಿಷಯವಾಗಿ ಗುರುವಿನಿಂದ ಕೇಳಬೇಕು. ಮನನ ಮಾಡಬೇಕು. ಆತ್ಮವನ್ನೇ ಧ್ಯಾನಿಸುತ್ತಿರಬೇಕು' ಎಂದು ಉಪದೇಶವಿದೆ. ಇಲ್ಲಿ ಮನನ ಮಾಡಬೇಕೆಂದರೆ ಯುಕ್ತಿಗಳಿಂದ ಆತ್ಮಸ್ವರೂಪವನ್ನು ನಿರ್ಣಯಿಸಬೇಕು ಎಂದರ್ಥ. ಯುಕ್ತಿಯೇ ತರ್ಕ. ಇದನ್ನು 'ಶ್ರುತ್ಯನುಗೃಹೀತತರ್ಕ' ಎಂದು ಶ್ರೀಶಂಕರಾಚಾರ್ಯರು ಕರೆದಿದ್ದಾರೆ. ಇದೇ ಸತ್ತರ್ಕ. ಉದಾಹರಣೆಗೆ, ಪುನರ್ಜನ್ಮವಿದೆಯೆಂದು ವೇದದಲ್ಲಿ ಹೇಳಿದೆ. ಪುನರ್ಜನ್ಮವಿಲ್ಲವೆಂದೂ ವಾದಿಸಲು ಬರುತ್ತದೆ. ಅದು ದುಸ್ತರ್ಕವಾಗುತ್ತದೆ. ಪುನರ್ಜನ್ಮವಿದೆಯೆಂದು ವಾದಿಸಲು ಬೇಕಾದಷ್ಟು ಯುಕ್ತಿಗಳಿವೆ. ಆ ಯುಕ್ತಿ-ಗಳನ್ನುಪಯೋಗಿಸಿ ಪುನರ್ಜನ್ಮವಿದೆಯೆಂದು ದೃಢಪಡಿಸಿಕೊಳ್ಳಬೇಕು. ಹಾಗಿಲ್ಲದೆ ನಮ್ಮ ಇಷ್ಟದಂತೆ ವಾದಿಸುತ್ತ ಹೊರಟರೆ, ತರ್ಕಕ್ಕೆ ನಿಲುಗಡೆಯಿಲ್ಲವಾದ್ದರಿಂದ ಯಾವುದೂ ನಿರ್ಣಯವಾಗುವುದೇ ಇಲ್ಲ. ಅದರಿಂದ ಪ್ರಯೋಜನವೇನು? ಪುನ-ರ್ಜನ್ಮವಿದೆಯೆಂಬುದೇ ವಾದಕ್ಕೆ ಕಡೆಯ ನಿಲ್ದಾಣವಾಗತಕ್ಕದ್ದು. ವೇದಬೋಧಿತ ತತ್ತ್ವಗಳೆಲ್ಲವನ್ನೂ ವಾದದಿಂದ ವಿಚಾರಮಾಡಿ ದೃಢಪಡಿಸಿಕೊಳ್ಳಬೇಕೆಂದು ಎಲ್ಲ ಶಾಸ್ತ್ರಕಾರರ ಅಭಿಪ್ರಾಯ. ಮೂಢನಂಬಿಕೆಯನ್ನು ಶಾಸ್ತ್ರಕಾರರು ಎಲ್ಲಿಯೂ ಪ್ರೋತ್ಸಾಹಿಸುವುದಿಲ್ಲ.

**ತಸ್ಮಾದಕೃತಕಂ ಶಾಸ್ತ್ರಂ ಸ್ಮೃತಿಂ ಚ ಸನಿಬಂಧನಾಂ ।**
**ಆಶ್ರಿತ್ಯಾರಭ್ಯತೇ ಶಿಷ್ಟೈಃ ಶಬ್ದಾನಾಮನುಶಾಸನಮ್ ॥ ೪೩ ॥**

ಆದ್ದರಿಂದ ಅಪೌರುಷೇಯವಾದ ಶ್ರುತಿಯನ್ನೂ ಸಪ್ರಮಾಣವಾದ ಸ್ಮೃತಿಯನ್ನೂ ಆಶ್ರಯಿಸಿ ಶಿಷ್ಯರಾದ ಪಾಣಿನ್ಯಾದಿ ಮುನಿಗಳು ಶಬ್ದಾನು ಶಾಸನವೆಂಬ ವ್ಯಾಕರಣಶಾಸ್ತ್ರವನ್ನು ರಚಿಸಿದ್ದಾರೆ.

**ವಿವರಣೆ** – ಮನುಷ್ಯನು ಎಷ್ಟು ಬುದ್ಧಿಶಾಲಿಯಾದರೂ ಅವನಿಗೆ ಭ್ರಮಪ್ರಮಾದಾದಿಗಳು ಸಂಭವಿಸುವುದರಿಂದ ಆತನ ಮಾತು ಪೂರ್ಣ ವಿಶ್ವಾಸಾರ್ಹವಲ್ಲ. ವೇದವಾದರೋ ಮನುಷ್ಯರಚಿತವಲ್ಲವಾದ್ದರಿಂದ ಪೂರ್ಣವಾಗಿ ವಿಶ್ವಾಸಾರ್ಹ. ಇಲ್ಲಿ ಸ್ಮೃತಿಯೆಂದರೆ ಶಾಕಲ್ಯನೇ ಮೊದಲಾದವರು ಹಿಂದೆ ರಚಿಸಿದ್ದ ವ್ಯಾಕರಣಶಾಸ್ತ್ರ. ಅವರೂ ವೇದವನ್ನೇ ಆಶ್ರಯಿಸಿದ್ದರಿಂದ ಅವರ ಶಾಸ್ತ್ರವು ಪ್ರಾಮಾಣಿಕವಾದದ್ದು. ಪಾಣಿನಿಯ ಈ ಅಷ್ಟಾಧ್ಯಾಯಿಯಲ್ಲಿ ಶಾಕಲ್ಯ, ಶಾಕಟಾಯನ ಮುಂತಾದ ಪೂರ್ವಜರ ಸ್ಮರಣೆಯಿದೆ. ಆದ್ದರಿಂದ ಇದು ಅವಿಚ್ಛಿನ್ನವಾಗಿ ಪರಂಪರೆಯಿಂದ ಬಂದದ್ದು. ಪೂರ್ವಜರ ವ್ಯಾಕರಣದಲ್ಲಿ ಕೆಲವು ಶಬ್ದಗಳು ಬಿಟ್ಟುಹೋಗಿವೆ. ಶಿಷ್ಟಪ್ರಯೋಗವನ್ನು ಅನುಸರಿಸಿ ನಾವು ಕೆಲವು ಶಬ್ದಗಳನ್ನು ಹೊಸದಾಗಿ ಸೇರಿಸಿದ್ದೇವೆ. ಯಾವ ಶಬ್ದವೂ ನಮ್ಮಿಂದ ರಚಿತವಾದದ್ದಲ್ಲ – ಎಂದು ಅಭಿಪ್ರಾಯ.

**ದ್ವಾವುಪಾದಾನಶಬ್ದೇಷು ಶಬ್ದಂ ಶಬ್ದವಿದೋ ವಿದುಃ ।**
**ಏಕೋ ನಿಮಿತ್ತಂ ಶಬ್ದಾನಾಮಪರೋಽರ್ಥೇ ಪ್ರಯುಜ್ಯತೇ ॥ ೪೪ ॥**

ಅರ್ಥಬೋಧಕ್ಕೆ ಕಾರಣವಾದ ಶಬ್ದಗಳಲ್ಲಿ ಎರಡು ಭೇದಗಳಿವೆಯೆಂದು ಶಬ್ದಶಾಸ್ತ್ರಜ್ಞರಾದ ವೈಯಾಕರಣರು ತಿಳಿದಿದ್ದಾರೆ. ಅವುಗಳಲ್ಲಿ ಒಂದು ಶಬ್ದಗಳ ಸ್ಪಷ್ಟವಾದ ಅಭಿವ್ಯಕ್ತಿಗೆ ನಿಮಿತ್ತವಾದದ್ದು (ಇದೇ ಸ್ಫೋಟ). ಇನ್ನೊಂದು ಅರ್ಥಬೋಧಕ್ಕಾಗಿ ಉಚ್ಚರಿಸಲ್ಪಡುತ್ತದೆ (ಇದೇ ವೈಖರೀ ಶಬ್ದ).

**ವಿವರಣೆ** – ಪರಮೇಶ್ವರನ ಮಾಯೆಯಿಂದ ಬಿಂದುವೆಂಬ ಶಕ್ತಿತತ್ತ್ವವು ಹುಟ್ಟುತ್ತದೆ. ಈ ಬಿಂದುವಿನಿಂದ ಚೇತನಮಿಶ್ರವಾದ ನಾದವು ಹುಟ್ಟುತ್ತದೆ. ಈ ನಾದವನ್ನೇ ನಾವು ಶಬ್ದಬ್ರಹ್ಮವೆಂದು ಕರೆದಿದ್ದೇವೆ. ಇಲ್ಲಿ ಹುಟ್ಟುವುದೆಂದರೆ ಹೊಸದಾಗಿ ಹುಟ್ಟುವುದಲ್ಲ. ರೂಪಾಂತರದಿಂದ ಅಭಿವ್ಯಕ್ತವಾಗುವುದು ಎಂದರ್ಥ. ಆದ್ದರಿಂದ ಶಬ್ದಬ್ರಹ್ಮವು ಅನಾದಿನಿಧನ. ಇದನ್ನೇ ಪ್ರಣವವೆಂದೂ ಓಂಕಾರವೆಂದೂ ಹೇಳುತ್ತೇವೆ. ಇದು ನಾದರೂಪವಾದದ್ದು. ಸರ್ವವ್ಯಾಪಿಯಾದ ವಿಭು. ಅ ಆ ಇ ಈ ಮುಂತಾದ ಅಕ್ಷರಗಳಿಗೆ ನಿಮಿತ್ತ. ಇದೇ ಶಬ್ದತತ್ತ್ವ. ವಾಕ್ಯಪದೀಯದ ಪ್ರಥಮ ಶ್ಲೋಕದಲ್ಲಿ 'ಅನಾದಿ ನಿಧನಂ ಬ್ರಹ್ಮ' ಎಂದು ವರ್ಣಿಸಿದ್ದು ಇದನ್ನು. ಇದು

ಸರ್ವವ್ಯಾಪಿಯಾಗಿದ್ದರೂ ಮಾತಾಡಬೇಕೆಂದು ಇಚ್ಛೆಯಾದಾಗ ಮೂಲಾಧಾರ–ಚಕ್ರದಲ್ಲಿರುವ ವಾಯುವಿನಿಂದ ಅಭಿವ್ಯಕ್ತವಾಗುತ್ತದೆ. ಆಗ ಈ ಶಬ್ದತತ್ತ್ವವನ್ನೇ ರವ ಎಂದೂ ಪರಾವಾಕ್ ಎಂದೂ ಕರೆಯುತ್ತಾರೆ. ಮಾತಾಡುವಾಗ ನಮ್ಮ ಇಚ್ಛಾವಶ–ವಾಗಿ ಪ್ರೇರಿತವಾದ ವಾಯು ಇನ್ನೂ ಮೇಲಕ್ಕೇರಿ ನಾಭಿದೇಶದಲ್ಲಿ ಪರಾವಾಕ್ಕನ್ನೇ ಅಭಿವ್ಯಕ್ತಿಗೊಳಿಸುತ್ತದೆ. ಆಗ ಇದಕ್ಕೆ ಪಶ್ಯಂತೀ ಎಂದು ಹೆಸರು. ಇನ್ನೂ ವಾಯುವು ಮೇಲಕ್ಕೇರಿ ಹೃದಯದಲ್ಲಿ ಅಭಿವ್ಯಕ್ತಿಗೊಳಿಸಿದಾಗ ಇದು ಮಧ್ಯಮಾ ಎನಿಸಿಕೊಳ್ಳು–ತ್ತದೆ. ಅನಂತರ ಕಂಠದೇಶದಲ್ಲಿ (ಕಂಠ, ತಾಲು ಮುಂತಾದ ಸ್ಥಾನಗಳಲ್ಲಿ) ನಮ್ಮ ಪ್ರಯತ್ನ ವಿಶೇಷದಿಂದ ಅಭಿವ್ಯಕ್ತಿಗೊಂಡಾಗ ವೈಖರೀ ಎನಿಸುತ್ತದೆ.

ಇವುಗಳಲ್ಲಿ ಶಬ್ದಬ್ರಹ್ಮವಾದ ಪರಾವಾಕ್ ಸ್ಪಂದರಹಿತವಾದದ್ದು. ಜ್ಞಾನ ಸ್ವರೂಪ. ಪಶ್ಯಂತಿಯಲ್ಲಿ ಸ್ಪಂದಸಾಮಾನ್ಯವಿರುತ್ತದೆ, ಸ್ಪಂದವೆಂದರೆ ಚಲನೆ. ಇನ್ನೇನು ಹಾಲು ಉಕ್ಕುವ ಸ್ಥಿತಿಗೆ ಬಂದಿದೆ ಎಂಬಂತೆ ಪಶ್ಯಂತೀ ಇರುತ್ತದೆ. ಮಧ್ಯಮಾದಲ್ಲಿ ಸ್ಪಂದ ವಿಶೇಷವಿರುತ್ತದೆ. ಪರಾ, ಪಶ್ಯಂತೀ ಮಧ್ಯಮಾ ಇವು ಮೂರು ಯೋಗಿ–ಗಳಿಗೆ ಮಾತ್ರ ಗೋಚರ. ನಮ್ಮೆಲ್ಲರಿಗೆ ಗೋಚರವಾಗತಕ್ಕದ್ದು ವೈಖರಿಯೊಂದೇ. ಇವು ಮೂರಕ್ಕೂ ಸ್ಫೋಟವೆಂಬ ಹೆಸರಿದೆ. ಆದರೆ ಮಧ್ಯಮಾ ಶಬ್ದವೇ ನಮಗೆ ಕೇಳಿಸುವ ವೈಖರಿಗೆ ಮೂಲವಾದ್ದರಿಂದ ಮಧ್ಯಮಾವನ್ನು ವಿಶೇಷವಾಗಿ ಸ್ಫೋಟ ಎಂಬ ಹೆಸರಿನಿಂದ ಕರೆಯುತ್ತಾರೆ. ಸ್ಫುಟತಿ ಅರ್ಥಃ ಅನೇನ ಇತಿ ಸ್ಫೋಟಃ – ಎಂದು ಶಬ್ದದ ವ್ಯುತ್ಪತ್ತಿ. ಯಾವುದರಿಂದ ಅರ್ಥವು ಸ್ಫುಟವಾಗಿ ಗೊತ್ತಾಗುತ್ತದೆಯೋ ಅದು ಸ್ಫೋಟ. ಅರ್ಥವನ್ನು ಬೋಧಿಸುವ ವಾಚಕತ್ವ ಶಕ್ತಿಯು ಇದರಲ್ಲಿದೆ. ವೈಖರೀಶಬ್ದದೊಡನೆ ಸಾಕ್ಷಾತ್ ಸಂಬಂಧವಿರತಕ್ಕದ್ದು ಮಧ್ಯಮಾ ಶಬ್ದಕ್ಕೆ ಮಾತ್ರ. ಅದೇ ಅರ್ಥವಾಚಕ. ವೈಖರೀ ಶಬ್ದವು ವಾಚಕವಲ್ಲ. ವೈಖರಿಯಿಂದ ಮಧ್ಯಮಾ ಎಂಬ ಸ್ಫೋಟವು ವ್ಯಕ್ತವಾಗಿ ಅದರಿಂದ ನಮಗೆ ಅರ್ಥವು ಸ್ಫುರಿಸುತ್ತದೆ. ಅರ್ಥವು ಸ್ಫುರಿಸುವುದಕ್ಕೆ ಪಶ್ಯಂತೀ, ಪರಾಗಳವರೆಗೆ ಹೋಗಬೇಕಾಗಿಲ್ಲ. ವೈಯಾಕರಣರು ಪರಾ, ಪಶ್ಯಂತೀ, ವೈಖರೀ ಇವು ಮೂರನ್ನು ಮಾತ್ರ ವಿಚಾರ ಮಾಡಿದ್ದಾರೆ. ಪ್ರಪಂಚ ಅರ್ಥಬೋಧಕವಾದದ್ದು ಮಧ್ಯಮಾ ಎಂಬ ಸ್ಫೋಟವೇ. ಆದ್ದರಿಂದ ಪಶ್ಯಂತಿಯನ್ನು ಬಿಟ್ಟು ಮಧ್ಯಮಾ ಮತ್ತು ಅದಕ್ಕೆ ವ್ಯಂಜಕವಾದ ವೈಖರೀ ಈ ಎರಡನ್ನೇ ಈ ಶ್ಲೋಕದಲ್ಲಿ ಹೇಳಲಾಗಿದೆ.

ನಾಗೇಶಭಟ್ಟರು ಲಘುಮಂಜೂಷಾದಲ್ಲಿ ಹೇಳಿದ ಈ ವಾಕ್ಯಗಳನ್ನು ಗಮನಿಸಬೇಕು –

೧. ಸ ಚಾಯಂ ಸ್ಫೋಟಃ ಆಂತರಪ್ರಣವರೂಪ ಏವ । 'ಓಂಕಾರ ಏವ ಸರ್ವಾ ವಾಕ್ ...... ' ಇತಿ ಶ್ರುತೇಃ ।

೨. ತತ್ರ ಮಧ್ಯಮಾಯಾ ಯೋ ನಾದೋಽಂಶಃ ತಸ್ಯೈವ ಸ್ಫೋಟಾತ್ಮನೋ ವಾಚಕತ್ವೇನ ಅಕ್ಷತೇಃ ।

೩. ಏತದವಸ್ಥಾತ್ರಯಮಪಿ ಸೂಕ್ಷ್ಮತಮಸೂಕ್ಷ್ಮತರಸೂಕ್ಷ್ಮಪ್ರಣವರೂಪವಮ್। (ಅವಸ್ಥಾತ್ರಯ = ಪರಾ, ಪಶ್ಯಂತೀ, ಮಧ್ಯಮಾ)

(ಏವಂಚ ಮಧ್ಯಮಾವಸ್ಥೆಯಲ್ಲಿರುವ ಸ್ಫೋಟವು ವಾಚಕವೆಂದು ತಿಳಿಯಬೇಕು)

೪. ಪ್ರಣವ ಏವ ವ್ಯಾನೋದಾನಾಭ್ಯಾಂ ವೈಖರೀರೂಪಂ ಪ್ರತಿಪದ್ಯತೇ । ಅತ ಏವ ಹರಿಣಾ ತ್ರಿವಿಧಾ ವಾಗ್ ವಿಷಯ ಇತ್ಯುಕ್ತಮ್ ।

ತ್ರಿವಿಧಾ = ಪಶ್ಯಂತೀ, ಮಧ್ಯಮಾ, ವೈಖರೀ, ಇವು ಮೂರು ವ್ಯಾಕರಣಕ್ಕೆ ವಿಷಯ. ಪಶ್ಯಂತಿಗೂ ಮೂಲವಾದ ಪರಾವಾಕ್ ವ್ಯಾಕರಣಕ್ಕೆ ವಿಷಯವಾದದ್ದಲ್ಲ.

**ಆತ್ಮಭೇದಸ್ತಯೋಃ ಕೇಚಿದಸ್ತೀತ್ಯಾಹುಃ ಪುರಾಣಗಾಃ ।**
**ಬುದ್ಧಿಭೇದಾದಭಿನ್ನಸ್ಯ ಭೇದಮೇಕೇ ಪ್ರಚಕ್ಷತೇ ॥ ೪೫ ॥**

ಈ ಸ್ಫೋಟ ಮತ್ತು ವೈಖರೀ ಶಬ್ದಗಳಿಗೆ ಸ್ವರೂಪ ಭೇದವಿದೆಯೆಂದು ಕೆಲವು ಪ್ರಾಚೀನರು ಹೇಳುತ್ತಾರೆ. ಇನ್ನು ಕೆಲವರು 'ಭೇದವಿಲ್ಲ; ಒಂದೇ ಆದ ಶಬ್ದಕ್ಕೆ ನಮ್ಮ ಬುದ್ಧಿಭೇದದಿಂದ ಔಪಾಧಿಕವಾದ ಭೇದವಿದೆ ಅಷ್ಟೆ' ಎನ್ನುತ್ತಾರೆ.

**ವಿವರಣೆ** – ಸ್ಫೋಟವು ವೈಖರೀಶಬ್ದಕ್ಕೆ ನಿಮಿತ್ತ. ವೈಖರೀಶಬ್ದವು ಅರ್ಥಪ್ರತಿಪಾದಕವೆಂದು ಹಿಂದೆ ಹೇಳಿದೆ. ಇಲ್ಲಿ ಸ್ವಲ್ಪ ಗೊಂದಲವಾಗುವ ಸಂಭವ ಇದೆ. ಇದನ್ನು ಪರಿಹರಿಸಿಕೊಳ್ಳಬೇಕು. ಸ್ಫೋಟವೇ ಸ್ಥೂಲಾವಸ್ಥೆಯಲ್ಲಿ ವೈಖರಿಯಾಗುತ್ತದೆ. ವಕ್ತೃವಿನ ಬುದ್ಧಿಗೆ ಮೊದಲು ಸ್ಫೋಟವು ಗೋಚರಿಸಿದಾಗ, ಅದರ ಅಭಿವ್ಯಕ್ತಿಗಾಗಿ ವೈಖರಿಯನ್ನು ಅವನು ಉಚ್ಚರಿಸುತ್ತಾನೆ. ಈ ಪರಿಸ್ಥಿತಿಯಲ್ಲಿ ಸ್ಫೋಟವು ವೈಖರೀ ಶಬ್ದಕ್ಕೆ ನಿಮಿತ್ತವಾಯಿತು, ಕಾರಣವಾಯಿತು. ವೈಖರಿಯು ಕಾರ್ಯವಾಯಿತು. ವೈಖರಿಯಿಂದ ಅರ್ಥಬೋಧವಾಗುತ್ತದೆ ಎಂದು ಹೇಳಬಹುದು. ಆದ್ದರಿಂದ ಅದು ಅರ್ಥಪ್ರತಿಪಾದಕ ಎಂಬುದು ಒಂದು ಬಗೆ.

ಮತ್ತೆ ವ್ಯಾಕರಣದರ್ಶನದಲ್ಲಿ ಸ್ಫೋಟವೇ ಅರ್ಥಬೋಧಕ, ಬೋಧಕವಾದ ವಾಚಕತ್ವಶಕ್ತಿ ಸ್ಫೋಟದಲ್ಲಿದೆ ಎಂಬುದು ಸಿದ್ಧಾಂತ. ಆಗ ವೈಖರಿಯಿಂದ ಶ್ರೋತೃವಿಗೆ ಸ್ಫೋಟವು ಗೋಚರಿಸಿ ಅದರಿಂದ ಅರ್ಥಬೋಧವಾಗುತ್ತದೆ. ಆಗ ವೈಖರಿಯು ಸ್ಫೋಟಕ್ಕೆ ನಿಮಿತ್ತವಾಗುತ್ತದೆ. ಆಗ ಸ್ಫೋಟವೇ ಕಾರ್ಯವಾಗುತ್ತದೆ. ಏವಂಚ ವಕ್ತೃವಿನ ದೃಷ್ಟಿಯಲ್ಲಿ ಸ್ಫೋಟವು ವೈಖರಿಗೆ ನಿಮಿತ್ತ. ಶ್ರೋತೃವಿನ ದೃಷ್ಟಿಯಲ್ಲಿ ವೈಖರಿಯು ಸ್ಫೋಟಕ್ಕೆ ನಿಮಿತ್ತ. ವಕ್ತೃಬುದ್ಧಿಸ್ಥವಾದ ಸ್ಫೋಟದಿಂದ ಹುಟ್ಟಿದ ವೈಖರೀಶಬ್ದದ ಮೂಲಕ ಶ್ರೋತೃಬುದ್ಧಿಸ್ಥವಾದ ಸ್ಫೋಟವು ವ್ಯಕ್ತವಾಗುತ್ತದೆ. ಇದನ್ನು ಸರಿಯಾಗಿ ನೆನಪಿನಲ್ಲಿಟ್ಟುಕೊಂಡರೆ ಯಾವ ಗೊಂದಲವೂ ಆಗುವುದಿಲ್ಲ. ಸ್ಫೋಟವು ನಿತ್ಯವಾದ್ದರಿಂದ ಹುಟ್ಟುವುದಿಲ್ಲ. ಅದೇ ಅರ್ಥ ಪ್ರತಿಪಾದಕ. ವಾಚಕತ್ವಶಕ್ತಿ ಅದರಲ್ಲೇ ಇದೆ, ವೈಖರಿಯಲ್ಲಿಲ್ಲ. ಸ್ಫೋಟವು ವ್ಯಂಜಕವಾದ ವೈಖರಿಯಿಂದ ವ್ಯಂಗ್ಯವಾಗುತ್ತದೆ, ಕತ್ತಲೆಯಲ್ಲಿ ಮೊದಲೇ ಇದ್ದ ಒಂದು ಪದಾರ್ಥವು ದೀಪದಿಂದ ತೋರಿಕೊಳ್ಳುವಂತೆ.

ಸ್ಫೋಟ ಮತ್ತು ವೈಖರೀ ಶಬ್ದಗಳಿಗೆ ಭೇದವಿದೆಯೆ ಇಲ್ಲವೆ? ಎಂಬುದನ್ನು ಈ ಶ್ಲೋಕದಲ್ಲಿ ಹೇಳಿದ್ದಾರೆ. 'ವ್ಯಂಜಕವಾದ ವೈಖರಿಗೂ ವ್ಯಂಗ್ಯವಾದ ಸ್ಫೋಟಕ್ಕೂ ಭೇದವಿದೆ. ವೈಖರಿಯನ್ನು ಕಿವಿಯಿಂದ ಕೇಳಬಹುದು. ಸ್ಫೋಟವನ್ನು ಕಿವಿಯಿಂದ ಕೇಳಲಾಗುವುದಿಲ್ಲ. ಇವುಗಳ ಸ್ವರೂಪವೇ ಭಿನ್ನ' ಎಂಬುದು ಒಂದು ಪಕ್ಷ. 'ಇವುಗಳಿಗೆ ಭೇದವಿಲ್ಲ. ಚಿನ್ನವೇ ಉಂಗುರವಾದಂತೆ ಸ್ಫೋಟವೇ ವೈಖರಿಯಾಗಿದೆ. ಅಕ್ಷರಗಳ ಉಚ್ಚಾರಣೆಯೆಂಬ ಉಪಾಧಿಯಿಂದ ವೈಖರಿಯು ಕೇಳಿಸುತ್ತದೆ. ಬಾಲಕನು ಯುವಕನಾದರೆ ಆ ಮನುಷ್ಯನೇ ಬೇರೆಯಾಗಿ ಬಿಡುವುದಿಲ್ಲ' ಎಂದು ಇನ್ನೊಂದು ಪಕ್ಷ.

**ಅರಣಿಸ್ಥಂ ಯಥಾ ಜ್ಯೋತಿಃ ಪ್ರಕಾಶಾಂತರಕಾರಣಂ ।**
**ತದ್ವಚ್ಛಬ್ದೋಽಪಿ ಬುದ್ಧಿಸ್ಥಃ ಶ್ರುತೀನಾಂ ಕಾರಣಂ ಪೃಥಕ್॥೪೬॥**

ಕಟ್ಟಿಗೆ ತುಂಡಿನಲ್ಲಿರುವ ಜ್ಯೋತಿಯು ಸ್ಫುಟವಾದ ಇನ್ನೊಂದು ಪ್ರಕಾಶಕ್ಕೆ ಕಾರಣವಾಗುತ್ತದೆ. ಹಾಗೆ ಬುದ್ಧಿಯಲ್ಲಿರುವ ಸ್ಫೋಟವೆಂಬ ಶಬ್ದವು ನಾನಾ ಬಗೆಯ ಘಟಪಟಾದಿ ಶಬ್ದಗಳಿಗೆ ಕಾರಣವಾಗುತ್ತದೆ.

**ವಿವರಣೆ** – ಹಿಂದಿನ ಕಾಲದಲ್ಲಿ ಎರಡು ಕಟ್ಟಿಗೆ ತುಂಡುಗಳನ್ನು ತೀಡಿ, ಬೆಂಕಿಯನ್ನು ಹುಟ್ಟಿಸಿಕೊಳ್ಳುತ್ತಿದ್ದರು. ಆ ಕಟ್ಟಿಗೆ ತುಂಡಿಗೆ ಅರಣಿಯೆಂದು ಹೆಸರು. ಅದರಲ್ಲಿ ಅಗ್ನಿ ಸೂಕ್ಷ್ಮರೂಪದಲ್ಲಿರುತ್ತದೆ. ಘರ್ಷಣೆಯಿಂದ ಸ್ಥೂಲವಾಗಿ ಗೋಚರಿಸಿ

ನಾನಾ ವಸ್ತುಗಳನ್ನು ಪ್ರಕಾಶಪಡಿಸುತ್ತದೆ. ಹಾಗೆಯೇ ವಕ್ತೃವಿನ ಬುದ್ಧಿಯಲ್ಲಿರುವ ಸ್ಫೋಟವು ಕಂಠ, ತಾಲು, ಓಷ್ಠ ಮುಂತಾದ ಅವಯವಗಳ ಅಭಿಘಾತದಿಂದ ವೈಖರಿಯಾಗಿ ನಾನಾ ಪದಾರ್ಥಗಳ ಜ್ಞಾನವನ್ನುಂಟು ಮಾಡುತ್ತದೆ.

**ಟಿಪ್ಪಣಿ**–ವ್ಯಾಕರಣದರ್ಶನದಲ್ಲಿ ಶಬ್ದವೆಂದರೆ ಪ್ರಾಯೇಣ ಸ್ಫೋಟವೇ. ಕೆಲವು ಸ್ಥಳದಲ್ಲಿ ವೈಖರೀಶಬ್ದವೂ ಆಗುತ್ತದೆ. ಸಂದರ್ಭಾನುಸಾರವಾಗಿ ಅದು ಯಾವುದೆಂದು ಗೊತ್ತು ಮಾಡಿಕೊಳ್ಳಬಹುದು.

**ವಿತರ್ಕಿತಃ ಪುರಾ ಬುದ್ಧ್ಯಾ ಕ್ವಚಿದರ್ಥೇ ನಿವೇಶಿತಃ ।**
**ಕರಣೇಭ್ಯೋ ವಿವೃತ್ತೇನ ಧ್ವನಿನಾ ಸೋಽನುಗೃಹ್ಯತೇ ॥ ೪೭ ॥**

ಶಬ್ದವು (ಸ್ಫೋಟವು) ಮೊದಲು ವಕ್ತಾರನ ಬುದ್ಧಿಗೆ ವಿಷಯವಾಗಿ ಒಂದಾನೊಂದು ಅರ್ಥದಲ್ಲಿ ವಿನಿಯೋಗ ಹೊಂದುತ್ತದೆ. ಆಗ ತಾಲ್ವಾದಿ–ಸ್ಥಾನಗಳಿಂದಲೂ ಪ್ರಯತ್ನದಿಂದಲೂ ಹೊರಟ ಧ್ವನಿಯು ಆ ಶಬ್ದವನ್ನು ಪ್ರಕಾಶಗೊಳಿಸಿ ಉಪಕರಿಸುತ್ತದೆ.

**ವಿವರಣೆ** – ಒಂದು ಅರ್ಥವನ್ನು ತಿಳಿಸುವುದಕ್ಕಾಗಿ ವಕ್ತಾರನು ಶಬ್ದವನ್ನು ಉಚ್ಚರಿಸುತ್ತಾನಷ್ಟೆ. ಆಗ ಮಧ್ಯಮಾರೂಪವಾದ ಸ್ಫೋಟವು ಹೊಳೆಯುತ್ತದೆ. ಅನಂತರ ವೈಖರೀ ಧ್ವನಿಯನ್ನು ಉಚ್ಚರಿಸುತ್ತಾನೆ. ಆ ಧ್ವನಿ ಅಕ್ಷರಾತ್ಮಕವಾದದ್ದು. ಅದು ಕಂಠ, ತಾಲು ಮೊದಲಾದ ಸ್ಥಾನಗಳಲ್ಲಿ ಬಾಹ್ಯ ಮತ್ತು ಆಭ್ಯಂತರ ಪ್ರಯತ್ನ–ಗಳಿಂದ ಹೊರಬರುತ್ತದೆ. ಇದೇ ವೈಖರೀಶಬ್ದ. ಇದರಿಂದ ವಕ್ತೃಬುದ್ಧಿಸ್ಥವಾದ ಸ್ಫೋಟವು ಅಭಿವ್ಯಕ್ತವಾಗಿ ಶ್ರೋತಾರನಿಗೆ ತಿಳಿದು ಅರ್ಥಬೋಧವಾಗುತ್ತದೆ. ಮೊದಲು ಶ್ರೋತಾರನು ವೈಖರಿಯನ್ನು ಕೇಳುತ್ತಾನೆ. ಆಮೇಲೆ ಅವನಿಗೆ ಅಭಿವ್ಯಕ್ತವಾದ ಸ್ಫೋಟವು ಅರ್ಥವನ್ನು ಬೋಧಿಸುತ್ತದೆ ಎಂದು ಅಭಿಪ್ರಾಯ.

**ಟಿಪ್ಪಣಿ** – ಈ ಶ್ಲೋಕದಲ್ಲಿ ಹೇಳಿದ ಧ್ವನಿ ಶಬ್ದಕ್ಕೆ ಅ, ಆ, ಇ, ಈ, ಕ, ಖ ಮುಂತಾದ ಅಕ್ಷರವೆಂದರ್ಥ. ಕರಣಗಳೆಂದರೆ ಪ್ರಯತ್ನಗಳು. ಅಕ್ಷರಗಳು ಬೇರೆ ಬೇರೆ ಸ್ಥಳಗಳಲ್ಲಿ ಈ ಪ್ರಯತ್ನಗಳಿಂದ ಹುಟ್ಟುತ್ತವೆ.

ಸ್ಥಾನಗಳು – ಕಂಠ, ತಾಲು, ಮೂರ್ಧಾ, ದಂತ, ಓಷ್ಠ, ಜಿಹ್ವಾಮೂಲ, ನಾಸಿಕಾ, ಕಂಠೋಷ್ಠ ಮತ್ತು ದಂತೋಷ್ಠ.

ಪ್ರಯತ್ನಗಳು – ಇವುಗಳಲ್ಲಿ ಬಾಹ್ಯ, ಆಭ್ಯಂತರ ಎಂದು ಎರಡು ವಿಧ.

ಬಾಹ್ಯದಲ್ಲಿ ಹನ್ನೊಂದು ವಿಧಗಳಿವೆ. ಆಭ್ಯಂತರದಲ್ಲಿ ನಾಲ್ಕು ವಿಧಗಳು. ಇವೆಲ್ಲವುಗಳ ವಿವರವು ಶಿಕ್ಷಾಶಾಸ್ತ್ರದಲ್ಲಿ ದೊರೆಯುತ್ತದೆ.

**ನಾದಸ್ಯ ಕ್ರಮಜನ್ಯತ್ವಾನ್ನ ಪೂರ್ವೋ ನಾಪರಶ್ಚ ಸಃ ।**
**ಅಕ್ರಮಃ ಕ್ರಮರೂಪೇಣ ಭೇದವಾನಿವ ಜಾಯತೇ ॥ ೪೮ ॥**

(ನಾದ, ಧ್ವನಿ, ವರ್ಣ, ಅಕ್ಷರ ಇವು ಇಲ್ಲಿ ಪರ್ಯಾಯ ಪದಗಳು) ನಾದವು ಒಂದೊಂದಾಗಿ ಕ್ರಮದಿಂದ ಹುಟ್ಟುತ್ತದೆಯಾದ್ದರಿಂದ ಸಕ್ರಮ. ಸ್ಫೋಟವಾದರೋ ಸಕ್ರಮವಾದ ನಾದದಿಂದ ಅಭಿವ್ಯಂಗ್ಯವಾದ ಕಾರಣ ಸ್ಫೋಟವೂ ಕ್ರಮವುಳ್ಳದ್ದಾಗಿ ನಾನಾ ಭೇದ ಉಳ್ಳದ್ದೋ ಎಂಬಂತೆ ಕಾಣುತ್ತದೆ.

**ವಿವರಣೆ** – ನಾದವು ಕ್ರಮವಾಗಿ ಹುಟ್ಟುವುದರಿಂದ ಅದರಲ್ಲಿ ಕ್ರಮವಿದೆ. ಸ್ಫೋಟವು ಒಂದೇ ಸಲ ಅಭಿವ್ಯಕ್ತವಾಗುವುದರಿಂದ ಕ್ರಮವಿಲ್ಲ. ಹ್ರಸ್ವ, ದೀರ್ಘ, ಅಲ್ಪಪ್ರಾಣ, ಮಹಾಪ್ರಾಣ, ಉದಾತ್ತ, ಅನುದಾತ್ತ ಮೊದಲಾದವೆಲ್ಲವು ನಾದಧರ್ಮಗಳು. ಸ್ಫೋಟದಲ್ಲಿ ಇದಾವುದೂ ಇಲ್ಲ. ವ್ಯಂಜಕವಾದ ನಾದದ ಧರ್ಮ ವ್ಯಂಗ್ಯದಲ್ಲಿರುವಂತೆ ಭಾಸವಾಗುತ್ತದೆ. ಅದು ಭ್ರಮೆಯೇ ಸರಿ.

**ಪ್ರತಿಬಿಂಬಂ ಯಥಾನ್ಯತ್ರ ಸ್ಥಿತಂ ತೋಯಕ್ರಿಯಾವಶಾತ್ ।**
**ತತ್ಪ್ರವೃತ್ತಿಮಿವಾನ್ವೇತಿ ಸ ಧರ್ಮಃ ಸ್ಫೋಟನಾದಯೋಃ ॥೪೯॥**

ಚಂದ್ರನ ಪ್ರತಿಬಿಂಬವು ತನಗಿಂತ ಬೇರೆಯಾದ ಜಲದಲ್ಲಿ ಕಾಣಿಸಿ-ಕೊಳ್ಳುತ್ತದೆ. ಅದು ಜಲದ ಕ್ರಿಯೆಗೆ ಅನುಗುಣವಾಗಿ ಜಲದ ಚಾಂಚಲ್ಯಾದಿ ಧರ್ಮವನ್ನನುಸರಿಸಿ ಅಲ್ಲಾಡುತ್ತಿದೆಯೋ ಎಂಬಂತೆ ಕಾಣುತ್ತದೆ. ಈ ನಾದಸ್ಫೋಟಗಳಿಗೆ ಜಲಪ್ರತಿಬಿಂಬಗಳ ಸಾದೃಶ್ಯವಿದೆ.

**ವಿವರಣೆ** – ನೀರು ಅಲ್ಲಾಡಿದಾಗ ಅದರಲ್ಲಿ ಕಾಣಿಸುವ ಪ್ರತಿಬಿಂಬವೂ ಅಲ್ಲಾಡಿದಂತೆ ಕಾಣುತ್ತದೆ. ಜಲವು ಪ್ರತಿಬಿಂಬಕ್ಕೆ ಉಪಾಧಿ. ಉಪಾಧಿಯ ಧರ್ಮವು ಉಪಧೇಯವಾದ ಪ್ರತಿಬಿಂಬದಲ್ಲಿ ತೋರಿದೆಯೇ ಹೊರತು ವಾಸ್ತವವಾಗಿ ಅದರಲ್ಲಿಲ್ಲ. ಹಾಗೆಯೇ ನಾದಧರ್ಮವು ಸ್ಫೋಟದಲ್ಲಿ ತೋರುತ್ತದೆ. ಬಣ್ಣ ಬಣ್ಣದ ಕಾಗದದ ಮೇಲಿಟ್ಟ ಗಾಜು ಬಣ್ಣ ಬಣ್ಣವಾಗಿ ಕಾಣುತ್ತದೆ. ಭೂತಗನ್ನಡಿಯಲ್ಲಿ ಮುಖವು ವಿಕಾರವಾಗಿ ಕಾಣುತ್ತದೆ. ಹಾಗೆಯೇ ಇದು.

**ಆತ್ಮರೂಪಂ ಯಥಾ ಜ್ಞಾನೇ ಜ್ಞೇಯರೂಪಂ ಚ ದೃಶ್ಯತೇ ।**
**ಅರ್ಥರೂಪಂ ತಥಾ ಶಬ್ದೇ ಸ್ವರೂಪಂ ಚ ಪ್ರಕಾಶತೇ॥ ೫೦ ॥**

ಒಂದು ಪದಾರ್ಥದ ಜ್ಞಾನವಾದಾಗ ಸ್ವಸ್ವರೂಪವಾದ ಜ್ಞಾನವೂ ಜ್ಞೇಯವಾದ ಘಟಾದಿಪದಾರ್ಥವೂ ಒಟ್ಟಿಗೆ ಗೋಚರಿಸುತ್ತವೆ. ಹಾಗೆಯೇ ಶಬ್ದವನ್ನುಚ್ಚರಿಸಿದಾಗ ಆ ಶಬ್ದವೂ ಅರ್ಥರೂಪವಾದ ಘಟಾದಿಪದಾರ್ಥವೂ ಒಟ್ಟಿಗೆ ಗೋಚರಿಸುತ್ತವೆ.

**ವಿವರಣೆ** – ಜ್ಞಾನವು ಯಾವಾಗಲೂ ಜ್ಞೇಯವಾದ ವಿಷಯವನ್ನು ಕಚ್ಚಿಕೊಂಡೇ ಇರುತ್ತದೆ. 'ನನಗೆ ಒಂದು ಜ್ಞಾನ ಬಂದಿದೆ. ಯಾವುದರ ಜ್ಞಾನ ಎಂಬುದು ಗೊತ್ತಿಲ್ಲ' ಎಂದು ಯಾರೂ ಹೇಳುವುದಿಲ್ಲ. ಜ್ಞೇಯವಾದ ವಿಷಯ–ವಿಲ್ಲದೆ ಕೇವಲ ಜ್ಞಾನ ಎಂಬುದಿಲ್ಲ. ಆದ್ದರಿಂದ 'ಜ್ಞಾನವು ಸದಾ ಸವಿಷಯಕ' ಎಂದೂ ಜ್ಞಾನವು 'ಜ್ಞೇಯಪರತಂತ್ರ' ಎಂದೂ ಪ್ರಸಿದ್ಧಿಯಿದೆ. ನನಗೆ 'ಘಟಜ್ಞಾನ–ವಾಗಿದೆ' ಎಂಬ ಅನುಭವದಲ್ಲಿ 'ಘಟ, ಜ್ಞಾನ' ಇವೆರಡೂ ವಿಷಯಗಳಾಗುತ್ತವೆ. ಅಂತೆಯೇ 'ಘಟ' ಎಂದು ಒಬ್ಬನು ಹೇಳಿದಾಗ ಘಟ ಶಬ್ದವೂ ಗಡಿಗೆಯೂ ಎರಡೂ ಗೋಚರಿಸುತ್ತವೆ. ಶಬ್ದವು ಅರ್ಥದೊಡನೆ ತಾದಾತ್ಮ್ಯ ಹೊಂದಿರುತ್ತದೆ. ಒಂದು ವಸ್ತುವನ್ನು ಕಂಡಾಗ ವಾಚಕವಾದ ಶಬ್ದವೂ ಜೊತೆಗೇ ಗೋಚರಿಸುತ್ತದೆ. ಆದ್ದರಿಂದ ಶಬ್ದಾರ್ಥಗಳ ಸಂಬಂಧ ನಿತ್ಯವಾದದ್ದೆಂದು ಸಿದ್ಧವಾಗುತ್ತದೆ.

**ಆಂಡಭಾವಮಿವಾಪನ್ನೋ ಯಃ ಕ್ರತುಃ ಶಬ್ದಸಂಜ್ಞಕಃ ।**
**ವೃತ್ತಿಸ್ತಸ್ಯ ಕ್ರಿಯಾರೂಪಾ ಭಾಗಶೋ ಭಜತೇ ಕ್ರಮಮ್ ॥೫೧॥**

ಈ ವೈಖರೀ ಶಬ್ದ ವಿಷಯಕವಾದ ಜ್ಞಾನವು ಮೊಟ್ಟೆಯೊಳಗಿನ ದ್ರವದಂತೆ ಅತಿ ಸೂಕ್ಷ್ಮವಾಗಿರುತ್ತದೆ (ಸಂಸ್ಕಾರ ರೂಪವಾಗಿ ಶ್ರೋತೃವಿನ ಅಂತಃಕರಣದಲ್ಲಿ ನೆಲೆಸಿರುತ್ತದೆ). ಅದಕ್ಕೆ ಸಂಬಂಧಿಸಿದ ಅಂತಃಕರಣ–ವೃತ್ತಿಯು ಕ್ರಿಯಾರೂಪವನ್ನು ತಳೆದು ಒಂದೊಂದು ಭಾಗವಾಗಿ ಕ್ರಮವನ್ನು ಪಡೆಯುತ್ತದೆ (ವೈಖರೀರೂಪದಲ್ಲಿ ಪ್ರಕಟವಾಗುತ್ತದೆ).

**ವಿವರಣೆ** – ಕ್ರತುವೆಂದರೆ ಜ್ಞಾನ. ಶ್ರೋತೃವು ಕ್ರಮ ವಿಶಿಷ್ಟವಾದ ಮತ್ತು ಹ್ರಸ್ವದೀರ್ಘಾದಿ ನಾನಾಧರ್ಮಗಳನ್ನು ಪಡೆದ ಬಾಹ್ಯಶಬ್ದವನ್ನು ಕೇಳಿದ ಮೇಲೆ ಅದು ಸಂಸ್ಕಾರ ರೂಪದಲ್ಲಿ ಶ್ರೋತೃವಿನ ಅಂತಃಕರಣದಲ್ಲಿ ನೆಲೆಸುತ್ತದೆ. ಒಂದು ನವಿಲಿನ ಮೊಟ್ಟೆಯ ದ್ರವದಲ್ಲಿ ನವಿಲುಮರಿಯ ಕಣ್ಣು, ಕೊಕ್ಕು, ಕಾಲು, ನಾನಾ ಬಣ್ಣದ ಗರಿಗಳು ಸೂಕ್ಷ್ಮರೂಪದಲ್ಲಿರುತ್ತವೆ. ಅವು ಕ್ರಮವಾಗಿ ನವಿಲಿನಲ್ಲಿ ಕಾಣಿಸಿಕೊಳ್ಳುತ್ತವೆ. ಹಾಗೆ ಈ ಶಬ್ದ ಸಂಸ್ಕಾರವು ಮುಂದೆ ಶ್ರೋತೃವು ಉಚ್ಚಾರಣೆ ಮಾಡಿದಾಗ ಕ್ರಮವಾಗಿ ಪ್ರಕಟವಾಗುತ್ತದೆಯೆಂದು ಅಭಿಪ್ರಾಯ. ಶ್ಲೋಕದಲ್ಲಿ

ಶಬ್ದಸಂಜ್ಞಕ ಕ್ರತು ಎಂದಿದೆ. ಶಬ್ದವೆಂಬ ಜ್ಞಾನವೆಂದು ಶಬ್ದಾರ್ಥವಾಗುತ್ತದೆ. ಶಬ್ದವು ಜ್ಞಾನರೂಪವೆಂಬುದು ವೈಯಾಕರಣರಿಗೆ ಸಂಮತ. ಶಬ್ದ, ಅರ್ಥ, ಜ್ಞಾನ ಇವು–ಗಳಿಗೆ ಅಭೇದವನ್ನು ಅವರು ಒಪ್ಪುತ್ತಾರೆ. ಘಟವೆಂಬ ಶಬ್ದ, ಘಟವೆಂಬ ಅರ್ಥ, ಘಟವೆಂಬ ಜ್ಞಾನ ಎಂದು ಒಂದೇ ಬಗೆಯ ಪ್ರತೀತಿ ಇರುವುದೇ ಅದಕ್ಕೆ ನಿಮಿತ್ತ.

ವಕ್ತಾರನ ದೃಷ್ಟಿಯಲ್ಲಿ ಸ್ಫೋಟವು ಆತನೇ ಹೇಳುವ ವೈಖರೀ ಶಬ್ದಕ್ಕೆ ನಿಮಿತ್ತ. ಶ್ರೋತಾರನ ದೃಷ್ಟಿಯಲ್ಲಿ ಅವನು ಕೇಳಿದ ವೈಖರೀ ನಾದವು ಆತನ ಬುದ್ಧಿಸ್ಥವಾದ ಸ್ಫೋಟಕ್ಕೆ ನಿಮಿತ್ತ. ಅವನು ಮಾತನಾಡುವಾಗ ಅದೇ ಸ್ಫೋಟವು ಮತ್ತೆ ವೈಖರೀ–ನಾದಕ್ಕೆ ನಿಮಿತ್ತವಾಗುತ್ತದೆ. ಹೀಗೆ ಸಾಪೇಕ್ಷವಾಗಿ ಪರಸ್ಪರ ನಿಮಿತ್ತವಾಗಬಹುದು.

**ಯಥೈಕಬುದ್ಧಿವಿಷಯಾ ಮೂರ್ತಿರಾಕ್ರಿಯತೇ ಪಟೇ ।**
**ಮೂರ್ತ್ಯಂತರಸ್ಯ ತ್ರಿತಯಮೇವಂ ಶಬ್ದೇಽಪಿ ದೃಶ್ಯತೇ ॥೫೨॥**

ಒಬ್ಬ ಚಿತ್ರಗಾರನು ಒಂದು ವಸ್ತುವಿನ ಆಕೃತಿಯನ್ನು ಏಕಬುದ್ಧಿಗೆ ಗೋಚರವಾಗುವಂತೆ ಸ್ಮರಿಸಿಕೊಳ್ಳುತ್ತಾನೆ. ಅನಂತರ ಅದೇ ಬಗೆಯ ಆಕೃತಿಯನ್ನು ಚಿತ್ರಿಸುತ್ತಾನೆ. ಇಲ್ಲಿರುವ ಸಕ್ರಮ, ಅಕ್ರಮ, ಸಕ್ರಮಗಳೆಂಬ – ಮೂರು ಬಗೆಯ ಜ್ಞಾನವು ಶಬ್ದದಲ್ಲಿಯೂ ಕಂಡು ಬರುತ್ತದೆ.

**ವಿವರಣೆ** – ಒಬ್ಬ ಚಿತ್ರಗಾರನು ಒಬ್ಬ ಮನುಷ್ಯನ ಚಿತ್ರವನ್ನು ಬರೆಯಬೇಕಾ–ದರೆ ಆತನ ಮುಖ, ಕಣ್ಣು, ಬಾಯಿ, ಕೈ ಕಾಲು – ಮುಂತಾದವನ್ನು ಕ್ರಮವಾಗಿ ನೋಡುತ್ತಾನೆ. ಅವನು ಎಷ್ಟು ಮನುಷ್ಯಾವಯವಗಳನ್ನು ನೋಡಿರುತ್ತಾನೋ ಅಷ್ಟು ಅವಯವ ಜ್ಞಾನಗಳು ಕ್ರಮವಾಗಿ ಹುಟ್ಟಿರುತ್ತವೆ. ಮನೆಗೆ ಹೋಗಿ ಆ ವ್ಯಕ್ತಿಯ ಚಿತ್ರವನ್ನು ಬರೆಯಲು ಕುಳಿತಾಗ ಆ ಮನುಷ್ಯಾಕೃತಿಯು ಒಟ್ಟಿಗೆ ಅವನ ಸ್ಮರಣೆಗೆ ಬರುತ್ತದೆ. ಎಲ್ಲ ಅವಯವಕ್ರಮ ಇರುವುದಿಲ್ಲ. ಅವಯವ ಸಮುದಾಯದ ಈ ಜ್ಞಾನವನ್ನು ಏಕಬುದ್ಧಿಯೆಂದೂ ಸಮುದಾಯಾವಲಂಬನ ಬುದ್ಧಿಯೆಂದೂ ಕರೆಯುತ್ತಾರೆ. ಇದರಲ್ಲಿ ಅವಯವ ಕ್ರಮ ಇಲ್ಲ. ಅನಂತರ ಚಿತ್ರವನ್ನು ಬರೆಯುವಾಗ ಒಂದೊಂದೇ ಅವಯವವನ್ನು ಸ್ಮರಿಸಿಕೊಂಡು ಬರೆಯುತ್ತಾನೆ. ಇಲ್ಲಿ ಚಿತ್ರಗಾರನ ಜ್ಞಾನ ಸಕ್ರಮ. ಇಲ್ಲಿರುವ ಸಕ್ರಮ, ಅಕ್ರಮ, ಸಕ್ರಮಗಳು ಶಬ್ದದಲ್ಲಿಯೂ ಕಂಡು ಬರುತ್ತವೆ. ಹೇಗೆಂದರೆ ಶ್ರೋತೃವು ಅಕ್ಷರಕ್ರಮವುಳ್ಳ ವೈಖರೀ ಶಬ್ದವನ್ನು ಕೇಳುತ್ತಾನೆ. ಒಂದೊಂದು ಅಕ್ಷರದ ಜ್ಞಾನವೂ ಪ್ರತ್ಯೇಕವಾಗಿ ಕ್ರಮವರಿತು ಹುಟ್ಟುತ್ತದೆ. ಅನಂತರ ಅದು ಸಮೂಹಾಲಂಬನವಾದ ಏಕಬುದ್ಧಿಗೆ ಗೋಚರವಾಗಿ ಮನಸ್ಸಿನಲ್ಲಿ ನಿಲ್ಲುತ್ತದೆ. ಆ ಸ್ಥಿತಿಯಲ್ಲಿ ಅದು ಅಕ್ರಮ. ಅನಂತರ ಮಾತಾಡುವಾಗ ಅದೇ ಶಬ್ದವು

ಸಕ್ರಮವಾಗಿ ಉಚ್ಚರಿಸಲ್ಪಡುತ್ತದೆ. ಶಬ್ದವನ್ನು ಕೇಳಿದಾಗ ಗ್ರಾಹ್ಯವಾಗುತ್ತದೆ. ಉಚ್ಚ–ರಿಸಿದರೆ ಇನ್ನೊಬ್ಬನಿಗೆ ಸ್ವಸ್ವರೂಪವನ್ನು ಬೋಧಿಸುವುದರಿಂದ ಗ್ರಾಹಕವಾಗುತ್ತದೆ.

**ಯಥಾ ಪ್ರಯೋಕ್ತುಃ ಪ್ರಾಗ್ ಬುದ್ಧಿಃ ಶಬ್ದೇಷ್ವೇವ ಪ್ರವರ್ತತೇ ।**
**ವ್ಯವಸಾಯೋ ಗ್ರಹೀತೃಣಾಮೇವಂ ತೇಷ್ವೇವ ಜಾಯತೇ ॥ ೫೩ ॥**

ವಕ್ತಾರನು ಮಾತಾಡುವುದಕ್ಕೆ ಮೊದಲು ಅರ್ಥಬೋಧಕವಾದ ಯಾವ ಶಬ್ದವನ್ನು ಹೇಗೆ ಹೇಳಬೇಕೆಂದು ಶಬ್ದದ ಕಡೆಗೆ ಗಮನವನ್ನಿಡುತ್ತಾನೆ. ಅವನ ಬುದ್ಧಿಯು ಶಬ್ದಗಳ ಕಡೆಗೆ ಪ್ರವರ್ತಿಸುತ್ತದೆ. ಹಾಗೆಯೇ ಶ್ರೋತೃವೂ ಸಹ ಅರ್ಥವನ್ನು ತಿಳಿಯುವುದಕ್ಕಾಗಿ ವಕ್ತಾರನು ಹೇಳುವ ಶಬ್ದವನ್ನು ಮೊದಲು ಗಮನಿಸುತ್ತಾನೆ. ಅವನ ಪ್ರಯತ್ನವೂ ಮೊದಲು ಶಬ್ದಗಳ ಕಡೆಗೇ ಇರುತ್ತದೆ.

**ವಿವರಣೆ** – ಅರ್ಥದ ಹಿಂದೆ ಶಬ್ದವಿರುತ್ತದೆ. ಶಬ್ದಪೂರ್ವಕವಾಗಿಯೇ ಅರ್ಥಜ್ಞಾನವಾಗುವುದರಿಂದ, ಜ್ಞಾನದಲ್ಲಿ ಅರ್ಥದ ಜೊತೆಗೆ ಶಬ್ದವೂ ವಿಷಯ–ವಾಗುತ್ತದೆ. ಹಾಲಿನ ಜೊತೆಗೆ ಅದನ್ನು ಧರಿಸಿದ ಪಾತ್ರೆಯನ್ನು ತರಲೇಬೇಕು. ಬರಿಯ ಹಾಲನ್ನು ತರಲಾಗುವುದಿಲ್ಲ ಹಾಗೆಯೇ ಇದು. ಅರ್ಥದ ಜೊತೆಗೆ ಅದನ್ನು ಹೊತ್ತಿರುವ ಶಬ್ದವೂ ಉಪಸ್ಥಿತವಾಗಬೇಕು.

**ಅರ್ಥೋಪಸರ್ಜನೀಭೂತಾನಭಿಧೇಯೇಷು ಕೇಷುಚಿತ್ ।**
**ಚರಿತಾರ್ಥಾನ್ ಪರಾರ್ಥತ್ವಾತ್ ನ ಲೋಕಃ ಪ್ರತಿಪದ್ಯತೇ ॥ ೫೪ ॥**

ಶಬ್ದಗಳು ಅರ್ಥಬೋಧೆಗಾಗಿ ಹೊರಟಿರುವುದರಿಂದ ಅಭಿಧೇಯವಾದ ಅರ್ಥವನ್ನು ಬೋಧಿಸಿದೊಡನೆ ಅವು ಚರಿತಾರ್ಥವಾಗುತ್ತವೆ. ಅವುಗಳ ಕರ್ತವ್ಯವು ಮುಗಿಯುತ್ತದೆ. ಹೀಗೆ ಅನ್ಯಕಾರ್ಯಕ್ಕಾಗಿ ಬಂದ ಶಬ್ದಗಳು ಮುಖ್ಯವಾಗದೆ ಉಪಸರ್ಜನಗಳಾಗುತ್ತವೆ, ಗೌಣವಾಗುತ್ತವೆ. ಆದ್ದರಿಂದ ಜನರು ಶಬ್ದಗಳನ್ನು ಕ್ರಿಯಾಂಗವಾಗಿ ಲೆಕ್ಕಕ್ಕೆ ತೆಗೆದುಕೊಳ್ಳುವುದಿಲ್ಲ.

**ವಿವರಣೆ** – ಅರ್ಥದ ಜೊತೆಗೆ ಶಬ್ದವೂ ವಿಷಯವಾಗಿ ಗೋಚರಿಸುತ್ತದೆ ಎಂದು ಹಿಂದೆ ಹೇಳಿದೆ. ಹಾಗಾದರೆ 'ಗಜವನ್ನು ನೋಡು' ಎಂದು ಹೇಳಿದಾಗ ಆನೆಯನ್ನು ನೋಡು ಎಂದು ಅರ್ಥವಾಗುತ್ತದೆ. 'ಗಜ' ಎಂಬ ಶಬ್ದವನ್ನು ನೋಡು ಎಂದೇಕೆ ಅರ್ಥವಾಗುವುದಿಲ್ಲ? ಎಂಬ ಪ್ರಶ್ನೆಗೆ ಇಲ್ಲಿ ಉತ್ತರವಿದೆ. ಅರ್ಥವನ್ನು ತಿಳಿಸುವುದಕ್ಕೆ ಅನಿವಾರ್ಯವಾದ್ದರಿಂದ ಶಬ್ದವು ಪ್ರವೇಶಿಸುತ್ತದೆ. ಅದರ ಕೆಲಸ ಅರ್ಥವನ್ನು ತಿಳಿಸಿಕೊಡುವುದು. ಆ ಕ್ರಿಯೆ ಮುಗಿದ ಮೇಲೆ ಇನ್ನೊಂದು

ಕ್ರಿಯೆಯೊಡನೆ ಸಂಬಂಧಿಸುವುದಿಲ್ಲ. ಹಾಲನ್ನು ತರಲು ಪಾತ್ರೆ ಅನಿವಾರ್ಯ. 'ಇದನ್ನು ಕುಡಿ' ಎಂದು ಹಾಲಿನ ಪಾತ್ರೆಯನ್ನು ಕೊಟ್ಟಾಗ ಪಾತ್ರೆಯನ್ನು ಕುಡಿಯಬೇಕೆಂದು ಯಾರೂ ತಿಳಿಯುವುದಿಲ್ಲ. 'ಘಟಂ ಪಟಂ ಪಠತಿ' ಎಂದಾಗ ಘಟ ಶಬ್ದವನ್ನು ಪಟ ಎಂದು ಓದುತ್ತಾನೆ ಎಂದೂ ಅರ್ಥವಾಗುತ್ತದೆ. ಇದನ್ನು ನೆನಪಿನಲ್ಲಿಡಬೇಕು.

**ಗ್ರಾಹ್ಯತ್ವಂ ಗ್ರಾಹಕತ್ವಂ ಚ ದ್ವೇ ಶಕ್ತೀ ತೇಜಸೋ ಯಥಾ ।**
**ತಥೈವ ಸರ್ವಶಬ್ದಾನಾಮೇತೇ ಪೃಥಗಿವ ಸ್ಥಿತೇ ॥ ೫೫ ॥**

ದೀಪ ಮುಂತಾದ ತೇಜಸ್ಸಿಗೆ ಗ್ರಾಹ್ಯತ್ವ ಗ್ರಾಹಕತ್ವ ಎಂಬ ಎರಡು ಶಕ್ತಿಗಳಿವೆ. ಹಾಗೆಯೇ ಶಬ್ದಕ್ಕೆ ಈ ಎರಡು ಶಕ್ತಿಗಳೂ ಉಂಟು. ಅವೆರಡೂ ಒಂದೇ ಆಗಿ ಶಬ್ದಸ್ವರೂಪವೇ ಆಗಿದ್ದರೂ ಬೇರೆ ಬೇರೆಯಂತೆ ಕಾಣುತ್ತವೆ.

**ವಿವರಣೆ** – ಗ್ರಾಹ್ಯತ್ವ = ಪ್ರಕಾಶ್ಯತ್ವ, ಪ್ರಕಾಶಿಸಲ್ಪಡುವಿಕೆ, ಜ್ಞಾನಕ್ಕೆ ಗೋಚರಿಸುವಿಕೆ. ಗ್ರಾಹಕತ್ವ = ಪ್ರಕಾಶಕತ್ವ. ಇನ್ನೊಂದನ್ನು ಪ್ರಕಾಶಗೊಳಿಸುವ ಶಕ್ತಿ. ದೀಪವು ಘಟಾದಿಪದಾರ್ಥವನ್ನು ಕತ್ತಲೆಯಲ್ಲಿ ಪ್ರಕಾಶಗೊಳಿಸುತ್ತದೆ. ತಾನೂ ಕತ್ತಲೆಯಲ್ಲಿ ಇನ್ನೊಂದು ಬೆಳಕಿನ ಸಹಾಯವಿಲ್ಲದೆ ಪ್ರಕಾಶಿಸಿ ಗ್ರಾಹ್ಯವಾಗುತ್ತದೆ. ಅಂತೆಯೇ ಶಬ್ದವು ತನ್ನ ಸ್ವರೂಪವನ್ನು ತಾನೇ ತೋರಿಸಿಕೊಂಡು ಗ್ರಾಹ್ಯವಾಗುತ್ತದೆ. ಅರ್ಥವನ್ನು ಪ್ರಕಾಶಪಡಿಸಿ ಗ್ರಾಹಕವೂ ಆಗುತ್ತದೆ. ಉಳಿದ ವಸ್ತುಗಳು ಹಾಗಲ್ಲ. ಘಟವು ಗ್ರಾಹ್ಯವೇ ಹೊರತು ಗ್ರಾಹಕವಲ್ಲ. ಇಂದ್ರಿಯವು ಗ್ರಾಹಕವೇ ಹೊರತು ಸ್ವಯಂ ಗ್ರಾಹ್ಯವಲ್ಲ. ಕಣ್ಣೆಂಬ ಇಂದ್ರಿಯವನ್ನು ಕಣ್ಣಿಂದಲೇ ನೋಡಲಾರೆವು. ಆದ್ದರಿಂದ ಶಬ್ದವನ್ನು ಶಬ್ದಜ್ಯೋತಿಯೆಂದು ಕರೆಯುತ್ತಾರೆ. ಈ ಎರಡು ಶಕ್ತಿಗಳೂ ಎಂದರೆ ಪ್ರತಿಪಾದ್ಯ ಪ್ರತಿಪಾದಕ ಶಕ್ತಿಗಳು ಬೇರೆ ಬೇರೆಯೋ ಎಂಬಂತೆ ತೋರುತ್ತವೆ.

**ವಿಷಯತ್ವಮನಾಪನ್ನೈಃ ಶಬ್ದೈರ್ನಾರ್ಥಃ ಪ್ರಕಾಶ್ಯತೇ ।**
**ನ ಸತ್ತಯೈವ ತೇಽರ್ಥಾನಾಮಗೃಹೀತಾಃ ಪ್ರಕಾಶಕಾಃ ॥ ೫೬ ॥**

ಬುದ್ಧಿಗೆ ವಿಷಯವಾಗದಿರುವ ಶಬ್ದಗಳಿಂದ ಅರ್ಥದ ಜ್ಞಾನ ಹುಟ್ಟುವುದಿಲ್ಲ. ಶ್ರೋತೃವಿನಿಂದ ಶಬ್ದಗಳು ಗೃಹೀತವಾಗದಿದ್ದಾಗ, ಬರಿಯ ಇರುವಿಕೆಯಿಂದಲೇ ಅವು ಅರ್ಥವನ್ನು ತಿಳಿಸುವುದಿಲ್ಲ. ಗೃಹೀತವಾಗದೆ ಶಬ್ದಗಳು ಅರ್ಥಪ್ರಕಾಶಕಗಳಾಗುವುದಿಲ್ಲ.

**ವಿವರಣೆ** – ಶಬ್ದವು ನಿತ್ಯವಾದ ಮೇಲೆ ಸದಾ ಇದ್ದೇ ಇರುತ್ತದೆಯೆಂದಾ–ಯಿತು. ಹಾಗಾದರೆ ಶಬ್ದವನ್ನು ಯಾರೂ ಹೇಳದಿದ್ದಾಗ ಅಥವಾ ಹೇಳಿದ್ದು ಕೇಳಿಸದೆ ಇದ್ದಾಗ ಅರ್ಥಬೋಧವೇಕಾಗುವುದಿಲ್ಲ? ಎಂಬ ಶಂಕೆಗೆ ಇದು ಉತ್ತರ. ಇರುವ ಶಬ್ದವೇ ವೈಖರೀನಾದದಿಂದ ಅಭಿವ್ಯಕ್ತವಾದಾಗ ಬುದ್ಧಿಗ್ರಾಹ್ಯವಾಗುತ್ತದೆ. ಆಗ ಅದು ಅರ್ಥವನ್ನು ಬೋಧಿಸುತ್ತದೆ. ಶಬ್ದದಲ್ಲಿ ಗ್ರಾಹ್ಯತ್ವ, ಗ್ರಾಹಕತ್ವ ಎಂಬೆರಡು ಶಕ್ತಿಗಳಿವೆಯೆಂದು ತಿಳಿಸಿದ್ದೇವೆ. ಗ್ರಾಹ್ಯತ್ವ ಶಕ್ತಿಯಿಂದ ಅದು ಗೃಹೀತವಾದಾಗಲೇ ಗ್ರಾಹಕತ್ವಶಕ್ತಿಯು ಕೆಲಸಮಾಡುತ್ತದೆ. ಇದು ವಸ್ತುಸ್ವಭಾವ. ಯಾವುದರಲ್ಲಿ ಸ್ವಯಂ ಗ್ರಾಹ್ಯತ್ವವಿಲ್ಲವೋ ಅದು ಗೃಹೀತವಾಗದೆಯೇ ಅರ್ಥಪ್ರಕಾಶಕವಾಗುತ್ತದೆ. ಚಕ್ಷು–ರಿಂದ್ರಿಯ ಇದಕ್ಕೆ ಉದಾಹರಣೆ. ಅದು ತನ್ನ ಇರುವಿಕೆಯಿಂದಲೇ ಎದುರಿಗಿರುವ ವಸ್ತುಗಳ ಜ್ಞಾನವನ್ನುಂಟು ಮಾಡುತ್ತದೆ. ಇಂದ್ರಿಯವು ನಮ್ಮಿಂದ ಗೃಹೀತವಾಗ–ಬೇಕಾಗಿಲ್ಲ. ವಸ್ತುಸ್ವಭಾವಕ್ಕೆ ನಾವೇನೂ ಮಾಡಲಾಗುವುದಿಲ್ಲ.

**ಅತೋಽನಿರ್ಜ್ಞಾತರೂಪತ್ವಾತ್ ಕಿಮಾಹೇತ್ಯಭಿಧೀಯತೇ ।**
**ನೇಂದ್ರಿಯಾಣಾಂ ಪ್ರಕಾಶ್ಯೇಽರ್ಥೇ ಸ್ವರೂಪಂ ಗೃಹ್ಯತೇ ತಥಾ ॥ ೫೭ ॥**

ಆದ್ದರಿಂದಲೇ ಶಬ್ದವನ್ನು ಉಚ್ಚರಿಸಿದಾಗಲೂ ಸಹ ಸರಿಯಾಗಿ ಕೇಳಿಸ–ದಿದ್ದರೆ, 'ಏನು ಹೇಳುತ್ತೀಯೆ? ಏನು ಹೇಳುತ್ತಾನೆ ?' ಎಂದು ಶ್ರೋತೃವು ಕೇಳುತ್ತಾನೆ. ಚಕ್ಷುರಾದಿ ಇಂದ್ರಿಯಗಳು ಮಾತ್ರ ತಾವು ಪ್ರಕಾಶಿಸಬೇಕಾದ ರೂಪಾದಿ ವಿಷಯವನ್ನು ತಮ್ಮ ಇರುವಿಕೆಯಿಂದಲೇ ತಿಳಿಸಿಕೊಡುತ್ತವೆ. ಇಂದ್ರಿಯಗಳ ಸ್ವರೂಪವನ್ನು ಯಾರೂ ತಿಳಿಯಬೇಕಾಗಿಲ್ಲ.

**ವಿವರಣೆ** – ಶಬ್ದವು ಗೃಹೀತವಾಗಿಯೇ ಅರ್ಥವನ್ನು ತಿಳಿಸುತ್ತದೆಯೆಂಬು–ದನ್ನು ನೈಯಾಯಿಕರೂ ಒಪ್ಪಲೇಬೇಕಾಗುತ್ತದೆ. ಅಕ್ಷರಗಳನ್ನುಚ್ಚರಿಸಿದಾಗ ಶಬ್ದವು ಹುಟ್ಟುತ್ತದೆ–ಎಂದು ಅವರು ಹೇಳುತ್ತಾರೆ. ಅಕ್ಷರಗಳನ್ನುಚ್ಚರಿಸಿದರೂ, ಸರಿಯಾಗಿ ಕೇಳದಿದ್ದರೆ ಏಕೆ ಅರ್ಥವಾಗುವುದಿಲ್ಲ? ಆದ್ದರಿಂದ ಶಬ್ದವು ಬುದ್ಧಿಗೆ ಗೋಚರ–ವಾದರೆ ಮಾತ್ರ ಅರ್ಥಗ್ರಾಹಕವಾಗುತ್ತದೆ ಎಂದು ಎಲ್ಲರೂ ಅಂಗೀಕರಿಸಲೇಬೇಕು.

**ಭೇದೇನಾವಗೃಹೀತೌ ದ್ವೌ ಶಬ್ದಧರ್ಮಾವಪೋದ್ಧೃತೌ ।**
**ಭೇದಕಾರ್ಯೇಷು ಹೇತುತ್ವಮವಿರೋಧೇನ ಗಚ್ಛತಃ ॥ ೫೮ ॥**

ಶಾಸ್ತ್ರೀಯ ಕಾರ್ಯದಲ್ಲಿ ಕೆಲವು ಕಡೆ ಈ ಗ್ರಾಹ್ಯತ್ವ–ಗ್ರಾಹಕತ್ವಗಳೆಂಬ ಶಕ್ತಿಗಳನ್ನು ಬುದ್ಧಿಕಲ್ಪನೆಯ ಮೂಲಕ ಶಬ್ದದಿಂದ ಪೃಥಕ್ಕರಿಸಲಾಗುತ್ತದೆ. ಆಗ

ಸಂಜ್ಞಾಸಂಜ್ಞಿಭಾವ ಮುಂತಾದ ಭೇದಕಾರ್ಯಗಳಲ್ಲಿ ಈ ಶಕ್ತಿಗಳು ಯಾವ ವಿರೋಧವೂ ಇಲ್ಲದೆ ಹೇತುಗಳಾಗುತ್ತವೆ.

**ವಿವರಣೆ** – ಲೋಕದಲ್ಲಿ 'ಈ ಹುಡುಗನಿಗೆ ಚೈತ್ರನೆಂದು ಹೆಸರು' ಎಂದು ಹೇಳಿದಾಗ ಚೈತ್ರ ಎಂಬ ಶಬ್ದವು ಸಂಜ್ಞೆಯಾಗುತ್ತದೆ. ಹುಡುಗನು ಸಂಜ್ಞಿಯಾಗು–ತ್ತಾನೆ. ಸಂಜ್ಞಾ ಬೇರೆ ಸಂಜ್ಞಿ ಬೇರೆ. ಈ ಸಂಜ್ಞಾ ಸಂಜ್ಞಿ ಭಾವವು ಭೇದಾಶ್ರಿತವಾ–ದದ್ದು. ಶಾಸ್ತ್ರದಲ್ಲಾದರೋ ಒಂದೇ ಶಬ್ದವು ಸಂಜ್ಞೆಯೂ ಆಗುತ್ತದೆ, ಸಂಜ್ಞಿಯೂ ಆಗುತ್ತದೆ. ಇದು ವಿರುದ್ಧವಾದದ್ದಲ್ಲವೆ? ಎಂದು ಪ್ರಶ್ನೆ. ಉತ್ತರವೇನೆಂದರೆ, ಹಿಂದೆ ಹೇಳಿದ ಗ್ರಾಹ್ಯತ್ವ ಗ್ರಾಹಕತ್ವ ಶಕ್ತಿಗಳನ್ನು ಅಪೋದ್ಧಾರ ದೃಷ್ಟಿಯಿಂದ ಪೃಥಕ್ಕರಿಸ–ಲಾಗುತ್ತದೆ. ಗ್ರಾಹ್ಯತ್ವವಿರುವ ಶಬ್ದ ಬೇರೆ, ಗ್ರಾಹಕತ್ವವಿರುವ ಶಬ್ದ ಬೇರೆ ಎಂದು ಕಲ್ಪಿಸಿಕೊಂಡು ಈ ಭೇದ ವ್ಯವಹಾರವನ್ನು ನಿರ್ವಹಿಸಲಾಗುತ್ತದೆ. ಇಂತಹ ಕಲ್ಪನೆ ಲೋಕದಲ್ಲಿಯೂ ಉಂಟು. ವಿರೋಧವೇನೂ ಇಲ್ಲ. ಇದನ್ನೇ ಮುಂದಿನ ಎರಡು ಶ್ಲೋಕಗಳಲ್ಲಿ ಉದಾಹರಣೆಗಳ ಮೂಲಕ ಸ್ಪಷ್ಟಪಡಿಸಲಾಗುವುದು.

**ವೃದ್ಧ್ಯಾದಯೋ ಯಥಾ ಶಬ್ದಾಃ ಸ್ವರೂಪೋಪನಿಬಂಧನಾಃ ।**
**ಆದೈಚ್ಪ್ರತ್ಯಾಯಿತೈಃ ಶಬ್ದೈಃ ಸಂಬಂಧಂ ಯಾಂತಿ ಸಂಜ್ಞಿಭಿಃ ॥ ೫೯ ॥**

**ಅಗ್ನಿಶಬ್ದಸ್ತಥೈವಾಯಮಗ್ನಿಶಬ್ದನಿಬಂಧನಃ ।**
**ಅಗ್ನಿಶ್ರುತ್ಯೈತಿ ಸಂಬಂಧಮಗ್ನಿಶಬ್ದಾಭಿಧೇಯಯಾ ॥ ೬೦ ॥**

ವೃದ್ಧಿ, ಗುಣ ಮುಂತಾದ ಸಂಜ್ಞಾಶಬ್ದಗಳು ಸ್ವಸ್ವರೂಪವನ್ನು ಬೋಧಿ–ಸತಕ್ಕವುಗಳಾದರೂ 'ಆದೈಚ್' 'ಅದೇಜ್' ಮುಂತಾದವುಗಳಿಂದ ಬೋಧ್ಯ–ವಾದ 'ಆ, ಐ' 'ಅ, ಏ' ಮುಂತಾದ ಸಂಜ್ಞಿಗಳೊಡನೆ ಸಂಬಂಧವನ್ನು ಪಡೆಯುತ್ತವೆ.

ಹಾಗೆಯೇ 'ಅಗ್ನಿ' ಎಂಬ ಶಬ್ದವೂ ಸ್ವಸ್ವರೂಪಬೋಧಕವಾದ ಸಂಜ್ಞಾ–ಶಬ್ದವಾಗಿದೆ. ಅದು ಅಗ್ನಿಶಬ್ದದಿಂದ ಬೋಧ್ಯವಾದ 'ಅಗ್ನಿ' ಎಂಬ ಸಂಜ್ಞಿ ಶಬ್ದದೊಡನೆ ಸಂಬಂಧವನ್ನು ಪಡೆಯುತ್ತದೆ.

**ವಿವರಣೆ** – ವ್ಯಾಕರಣಶಾಸ್ತ್ರದಲ್ಲಿ 'ವೃದ್ಧಿರಾದೈಚ್' ಎಂಬ ಸೂತ್ರವಿದೆ. ಆ, ಐ, ಔ ಎಂಬ ವರ್ಣಗಳಿಗೆ ವೃದ್ಧಿಯೆಂದು ಹೆಸರು ಎಂದು ಸೂತ್ರಾರ್ಥ. ಒಂದು ಕಡೆ ವೃದ್ಧಿ ಬರುತ್ತದೆ ಎಂದರೆ ಆ, ಐ, ಔಗಳು ಬರುತ್ತವೆಯೆಂದು ಅಭಿಪ್ರಾಯ. ವೃದ್ಧಿ ಶಬ್ದವು ಸಂಜ್ಞೆ, ಆ ಐ ಔಗಳು ಸಂಜ್ಞಿ, ಹಾಗೆಯೇ 'ಅದೇಜ್ ಗುಣಃ' ಎಂದು

ಸೂತ್ರವಿದೆ. ಗುಣವೆಂದರೆ ಅ, ಏ, ಓ – ಎಂದರ್ಥ. ಈ ಸ್ಥಳಗಳಲ್ಲಿ ಸಂಜ್ಞಾ ಬೇರೆ, ಸಂಜ್ಞಿ ಬೇರೆ ಎಂಬುದು ಸ್ಪಷ್ಟವಾಗಿದೆ. ಆದ್ದರಿಂದ ಸಂಜ್ಞಾಸಂಜ್ಞಿ ಭಾವವು ಭೇದ ನಿಬಂಧನ ಎಂದು ಒಪ್ಪಬೇಕು.

ಆದರೆ 'ಅಗ್ನೇರ್ಢಕ್' ಎಂಬ ಸೂತ್ರದಲ್ಲಿ ಹಾಗಲ್ಲ. ಅಗ್ನಿಯೆಂದರೆ ಅಗ್ನಿಶಬ್ದ–ವೆಂದರ್ಥ. ಅದರ ಮೇಲೆ ಢಕ್ ಪ್ರತ್ಯಯ ಬರುತ್ತದೆ. 'ಪಕ್ಷಾತ್ತಿಃ' ಎಂದು ಇನ್ನೊಂದು ಸೂತ್ರ. ಅಲ್ಲಿ ಪಕ್ಷವೆಂದರೆ ಪಕ್ಷ ಶಬ್ದವೆಂದೇ ಅರ್ಥ. ಇಲ್ಲಿ 'ಸಂಜ್ಞಾ ಸಂಜ್ಞಿಭಾವ'ವು ಭೇದನಿಬಂಧನವಾಗಿಲ್ಲ. ಸಂಜ್ಞೆಯೂ ಒಂದೇ, ಸಂಜ್ಞಿಯೂ ಒಂದೇ ಆಗಿದೆಯೆಂದು ಶಂಕೆ. ಸಮಾಧಾನ ಹೀಗೆ – ಸೂತ್ರದಲ್ಲಿರುವ ಅಗ್ನಿ ಶಬ್ದದಲ್ಲಿ ಗ್ರಾಹಕತ್ವಶಕ್ತಿ ಇದೆ. ಯಾವುದರ ಮೇಲೆ ಪ್ರತ್ಯಯ ಬರುತ್ತದೆಯೋ ಆ ಅಗ್ನಿಶಬ್ದದಲ್ಲಿ ಗ್ರಾಹ್ಯತ್ವಶಕ್ತಿ ಇದೆ. ವಿಭಿನ್ನ ಶಕ್ತಿಗಳಿರುವುದರಿಂದ ಶಬ್ದಗಳೂ ವಿಭಿನ್ನಗಳೆಂದು ತಿಳಿಯಬೇಕು. ಸೂತ್ರದಲ್ಲಿರುವ ಶಬ್ದವು ಸಂಜ್ಞಾ. ಪ್ರತ್ಯಯವನ್ನು ಪಡೆಯತಕ್ಕ ಶಬ್ದವು ಸಂಜ್ಞಿ. ಹೀಗೆಯೇ ಪಕ್ಷ ಮುಂತಾದ ಶಬ್ದಗಳ ವಿಷಯದಲ್ಲಿಯೂ ತಿಳಿಯಬೇಕು.

ಆದರೆ ವೃದ್ಧಿ ಎಂದರೆ ವೃದ್ಧಿ ಶಬ್ದವೆಂದು ಅರ್ಥವಲ್ಲ. ಗುಣ ಎಂದರೆ ಗುಣಶಬ್ದವೆಂದು ಅರ್ಥವಲ್ಲ. ಈ ವ್ಯವಸ್ಥೆಯನ್ನು 'ಸ್ವಂ ರೂಪಂ ಶಬ್ದಸ್ಯಾಶಬ್ದ ಸಂಜ್ಞಾ' ಎಂಬ ಸೂತ್ರವು ಮಾಡುತ್ತದೆ. ಈ ರೀತಿಯಾದ ಕಾಲ್ಪನಿಕ ಭೇದವು ಲೋಕ ವ್ಯವಹಾರದಲ್ಲಿಯೂ ಇದೆ. ಜೀವಾತ್ಮನನ್ನೊಪ್ಪದ ನಾಸ್ತಿಕನು 'ನನ್ನ ದೇಹ' ಎಂದಾಗ ನಾನು ಯಾರು? ದೇಹ ಯಾವುದು? ಚಿನ್ನದ ಉಂಗುರ, ಕಲ್ಲಿನ ಪ್ರತಿಮೆ, ಇಲ್ಲಿ ಚಿನ್ನ – ಉಂಗುರಗಳಿಗೂ, ಕಲ್ಲು – ಪ್ರತಿಮೆಗಳಿಗೂ ಕಾಲ್ಪನಿಕ ಭೇದವನ್ನು ಇಟ್ಟುಕೊಳ್ಳಬೇಕು. ರಾಹುವಿನ ಶಿರಸ್ಸು ಎಂಬುದು ಗ್ರಂಥಕಾರರು ಕೊಡುವ ಉದಾಹರಣೆ. ರಾಹು ಎನ್ನುವುದು ಒಬ್ಬ ರಾಕ್ಷಸನ ಶಿರಸ್ಸೇ ಆಗಿದೆ. ರಾಹುವಿನ ಶಿರಸ್ಸು ಎನ್ನುವುದು ಹೇಗೆ? ಒಂದಾನೊಂದು ಅವಸ್ಥೆಯಿಂದ ಕೂಡಿದವನು ರಾಹು. ಬೇರೊಂದು ಅವಸ್ಥೆಯನ್ನು ಪಡೆದದ್ದು ಶಿರಸ್ಸು. ಆದ್ದರಿಂದ ಉಭಯ ಭೇದ.

**ಯೋ ಯ ಉಚ್ಚಾರ್ಯತೇ ಶಬ್ದೋ ನಿಯತಂ ನ ಸ ಕಾರ್ಯಭಾಕ್ ।**
**ಅನ್ಯಪ್ರತ್ಯಾಯನೇ ಶಕ್ತಿರ್ನ ತಸ್ಯ ಪ್ರತಿಬಧ್ಯತೇ ॥ ೬೧ ॥**

ಯಾವ ಯಾವ ಶಬ್ದವು ಉಚ್ಚರಿಸಲ್ಪಡುತ್ತದೆಯೋ ಅದು ಕಾರ್ಯ–ದೊಡನೆ ಸಂಬಂಧಿಸುವುದಿಲ್ಲವೆಂಬುದು ನಿಯಮ. ಹಾಗೆಯೇ ಉಚ್ಚಾರಿತ–ವಾದ ಎಲ್ಲ ಶಬ್ದಕ್ಕೂ ಇನ್ನೊಂದನ್ನು ಬೋಧಿಸುವ ಶಕ್ತಿಗೆ ತಡೆಯಿರುವುದಿಲ್ಲ.

**ವಿವರಣೆ** – 'ಅಗ್ನೇರ್ಢಕ್' ಎಂಬ ಸೂತ್ರದಲ್ಲಿ ಉಚ್ಚರಿತವಾದ ಅಗ್ನಿಶಬ್ದಕ್ಕೆ ಢಕ್‌ಪ್ರತ್ಯಯ ಬರುವುದಿಲ್ಲ. ಕಿಂತು ಅದರಿಂದ ಬೋಧಿತವಾದ ಇನ್ನೊಂದು ಅಗ್ನಿ ಶಬ್ದದ ಮೇಲೆ ಪ್ರತ್ಯಯವು ಉತ್ಪತ್ತಿಯಾಗುತ್ತದೆ. ಅಗ್ನಿಶಬ್ದದ ಉಚ್ಚಾರಣೆಯಿಂದ ಶ್ರೋತೃವಿಗೆ ತಿಳಿದ ಯಾವ ಅಗ್ನಿಶಬ್ದ ಉಂಟೋ ಅದನ್ನು ಉಚ್ಚರಿಸಿದಾಗಲೂ ಅದಕ್ಕಿಂತ ಮತ್ತೊಂದು ಶಬ್ದವು ಬೋಧಿತವಾಗುತ್ತದೆ. ಉಚ್ಚಾರಿತವಾದ ಶಬ್ದದ ಸ್ವಭಾವ ಇದು. ಅದು ಕೆಲವೆಡೆ ಅರ್ಥವನ್ನೂ ಕೆಲವೆಡೆ ತನ್ನಂತೆ ಇರತಕ್ಕ ಇನ್ನೊಂದು ಶಬ್ದವನ್ನೂ ಬೋಧಿಸುತ್ತದೆ. ಬೋಧಿತವಾದ್ದಕ್ಕೆ ಮಾತ್ರ ಕಾರ್ಯದ ಸಂಬಂಧವಾಗುತ್ತದೆ. ಇದಕ್ಕೆ ಕಾರಣ ಮುಂದಿನ ಶ್ಲೋಕದಲ್ಲಿದೆ.

**ಉಚ್ಚರನ್ ಪರತಂತ್ರತ್ವಾತ್ ಗುಣಃ ಕಾರ್ಯೈರ್ನ ಯುಜ್ಯತೇ ।**
**ತಸ್ಮಾತ್ತದರ್ಥೈಃ ಕಾರ್ಯಾಣಾಂ ಸಂಬಂಧಃ ಪರಿಕಲ್ಪ್ಯತೇ॥೬೨॥**

ಉಚ್ಚಾರಣೆಗೊಳ್ಳುವ ಶಬ್ದವು ಅರ್ಥಬೋಧನೆಗೋಸ್ಕರವಾದ್ದರಿಂದ ಅದು ಅರ್ಥಕ್ಕೆ ಅಧೀನವಾಗಿದೆ. ಆದ್ದರಿಂದ ಅಪ್ರಧಾನವೂ ವಿಶೇಷಣವೂ ಆದ ಶಬ್ದವು ಕ್ರಿಯಾ ಸಂಬಂಧವನ್ನು ಪಡೆಯುವುದಿಲ್ಲ. ಆದ ಕಾರಣ ಅದರ ಅರ್ಥಗಳಿಗೆ ಮಾತ್ರ ವಿಭಿನ್ನ ಕ್ರಿಯೆಗಳ ಸಂಬಂಧವಾಗುತ್ತದೆ.

**ವಿವರಣೆ** – 'ಜಲಮಾನಯ – ಜಲವನ್ನು ತಾ' ಎಂದಾಗ ಜಲಶಬ್ದವು ತನ್ನ ಅರ್ಥವಾದ ನೀರಿಗೆ ಅಧೀನವಾಗಿದೆ; ಎಂದರೆ ಅಪ್ರಧಾನವಾಗಿದೆ. ಆದ್ದರಿಂದಲೇ ನೀರನ್ನು ತರುತ್ತಾನೆ. ಜಲಶಬ್ದವನ್ನು ತರುವುದಿಲ್ಲ. ಶಾಸ್ತ್ರದಲ್ಲಿಯೂ ಶಬ್ದಗಳಿಂದ ಬೋಧ್ಯವಾದ ಅರ್ಥವನ್ನೇ ಗ್ರಹಿಸಬೇಕು. ವೃದ್ಧಿಶಬ್ದದ ಅರ್ಥ ಆ ಐ ಔ. 'ಅಗ್ನೇರ್ಢಕ್' ಎಂಬಲ್ಲಿ ಅಗ್ನಿಶಬ್ದದ ಅರ್ಥವು ಹಿಂದೆ ಪ್ರತಿಪಾದಿಸಿದಂತೆ ಅಗ್ನಿ ಶಬ್ದವೇ ಆಗುತ್ತದೆ. ಶಬ್ದವು ಶಬ್ದವನ್ನೇ ಬೋಧಿಸಿದರೆ ಅದು ಶಬ್ದಪರವೆಂದೂ ಅರ್ಥವನ್ನು ಬೋಧಿಸಿದರೆ ಅರ್ಥಪರವೆಂದೂ ವ್ಯವಹಾರ. ವೃದ್ಧಿ, ಗುಣ ಮುಂತಾದ ಶಾಸ್ತ್ರೀಯ ಸಂಜ್ಞೆಗಳನ್ನು ಬಿಟ್ಟು ಉಳಿದ ಶಬ್ದಗಳಿಗೆ ಕಾರ್ಯಾನ್ವಯವನ್ನು ಹೇಳಿದರೆ, ಆಗ ಕಾರ್ಯವು ಶಬ್ದಕ್ಕೆ ಬರುತ್ತದೆ. ಅಲ್ಲಿ ಅಗ್ನಿ, ಪಕ್ಷ – ಮೊದಲಾದವು ಶಬ್ದಪರಗಳೆಂದು ಅಭಿಪ್ರಾಯ.

ಶಾಸ್ತ್ರದಲ್ಲಿ ಉಚ್ಚಾರಿತವಾದದ್ದು ಶಬ್ದಪರವಾದರೂ ಲೋಕವ್ಯವಹಾರದಲ್ಲಿ ಉಚ್ಚಾರಿತವಾದಾಗ ಅರ್ಥಪರವಾಗಿಬಿಡುತ್ತದೆ. ಶಾಸ್ತ್ರೀಯ ಕಾರ್ಯದಲ್ಲಿ ಮಾತ್ರ ಶಬ್ದಪರವೆಂದು ತಿಳಿಯಬೇಕು. ಹೇಗೆಂದರೆ ಅಗ್ನೇರ್ಢಕ್ ಎಂಬ ಸೂತ್ರವನ್ನು ಉದಾಹರಿಸಲಾಯಿತಷ್ಟೆ. 'ಅಗ್ನಿಯು ಈ ಹವಿಸ್ಸಿಗೆ ದೇವತೆ ಎಂಬ ಅರ್ಥದಲ್ಲಿ ಅಗ್ನಿ

ಶಬ್ದದ ಮೇಲೆ ಢಕ್ ಪ್ರತ್ಯಯ ಬರುತ್ತದೆ' ಎಂದು ಸೂತ್ರಾರ್ಥ. 'ಅಗ್ನಿಃ ದೇವತಾ ಅಸ್ಯ ಹವಿಷಃ ಇತಿ ಆಗ್ನೇಯಂ ಹವಿಃ' ಎಂದು ಇದಕ್ಕೆ ಉದಾಹರಣೆ. 'ಅಗ್ನಿಃ ದೇವತಾ' ಎಂಬ ಈ ವಿಗ್ರಹವಾಕ್ಯದಲ್ಲಿ ಅಗ್ನಿಶಬ್ದವು ಅರ್ಥಪರ. ಸೂತ್ರೋದಾಹರಣೆಯಾದ 'ಆಗ್ನೇಯಂ' ಎಂಬಲ್ಲಿಯೂ ಅಗ್ನಿಪದವು ಅರ್ಥಪರ. ಈ ವ್ಯವಸ್ಥೆಯನ್ನು ವ್ಯಾಕರಣಶಾಸ್ತ್ರವೇ ಗೊತ್ತು ಮಾಡಿದ್ದರೂ ಇದು ಲೋಕಸ್ವಭಾವ ಸಿದ್ಧವೆಂದು ಮುಂದಿನ ಶ್ಲೋಕಗಳಲ್ಲಿ ಪ್ರತಿಪಾದಿಸಿದ್ದಾರೆ.

**ಸಾಮಾನ್ಯಮಾಶ್ರಿತಂ ಯದ್ಯದುಪಮಾನೋಪಮೇಯಯೋಃ ।**
**ತಸ್ಯ ತಸ್ಯೋಪಮಾನೇಷು ಧರ್ಮೋಽನ್ಯೋ ವ್ಯತಿರಿಚ್ಯತೇ ॥ ೬೩ ॥**

ಉಪಮಾನ, ಉಪಮೇಯ, ಸಾಧಾರಣಧರ್ಮ – ಇವು ಮೂರು ಉಪಮಾಲಂಕಾರದಲ್ಲಿರುತ್ತವೆ. ಉಪಮಾನ, ಉಪಮೇಯಗಳಿಗೆ ಸಾದೃಶ್ಯ–ಗಳನ್ನು ಸಿದ್ಧಪಡಿಸುವುದಕ್ಕಾಗಿ ಸಾಧಾರಣಧರ್ಮವನ್ನು ಆಶ್ರಯಿಸಬೇಕಾಗು–ತ್ತದೆ. ಉಭಯಗಳಲ್ಲಿರುವ ಸಾಧಾರಣಧರ್ಮಗಳನ್ನೇ ಪರಸ್ಪರ ಹೋಲಿಸಿ–ದಾಗ ಇನ್ನೊಂದು ಸಾಧಾರಣ ಧರ್ಮವನ್ನು ವಿವಿಕ್ತವಾಗಿ ತಿಳಿಯಬೇಕು.

**ವಿವರಣೆ** – 'ಅರ್ಜುನನಂತೆ ಪುಲಿಕೇಶಿಯು' ಶೂರ ಎಂದು ಹೇಳಿದಾಗ, ಶೂರ ಎನ್ನುವುದಕ್ಕೆ ಪುಲಿಕೇಶಿಯಲ್ಲಿ ಮಾತ್ರ ಅನ್ವಯವಿರುತ್ತದೆ. ಆದರೂ ಶೌರ್ಯ ಎಂಬ ಸಾಧಾರಣಧರ್ಮವು ಉಭಯರಲ್ಲಿಯೂ ಪ್ರತೀತವಾಗುತ್ತದೆ. ಇದು ಶಬ್ದಶಕ್ತಿ ಸ್ವಭಾವ. ಶೂರಶಬ್ದವನ್ನು ಹೇಳದಿದ್ದರೂ ಶೌರ್ಯವೆಂಬ ಸಾಮಾನ್ಯ ಧರ್ಮವು ಹೊಳೆಯುತ್ತದೆ. 'ಅರ್ಜುನನ ಶೌರ್ಯದಂತೆ ಪುಲಿಕೇಶಿಯ ಶೌರ್ಯ' ಎಂಬ ವಾಕ್ಯವನ್ನು ತೆಗೆದುಕೊಳ್ಳೋಣ. ಇಲ್ಲಿ ಹಿಂದಿನ ಸಾಧಾರಣ ಧರ್ಮವೇ ಉಪಮಾನವೂ ಉಪಮೇಯವೂ ಆಗಿದೆ. ಇಲ್ಲಿ ಸಾಧಾರಣಧರ್ಮ ಯಾವುದು? 'ಅತಿಶಯ' ಎಂದು ಊಹಿಸಿ ಕೊಳ್ಳಬಹುದು. ಅರ್ಜುನನ ಶೌರ್ಯದಲ್ಲಿ ಎಷ್ಟು ಅತಿಶಯವಿದೆಯೋ ಅಷ್ಟು ಅತಿಶಯವು ಪುಲಿಕೇಶಿಯ ಶೌರ್ಯದಲ್ಲಿದೆ–ಯೆಂದರ್ಥ. ಹೀಗೆಯೇ ಅರ್ಜುನನ ಶೌರ್ಯಾತಿಶಯದಂತೆ ಪುಲಿಕೇಶಿಯ ಶೌರ್ಯಾತಿಶಯ ಎಂದೂ ಹೇಳಬಹುದು. ಆಗ ಅತಿಶಯದಲ್ಲಿರುವ ಒಂದು ಪ್ರಸಿದ್ಧಿಯನ್ನೋ ಇನ್ನೊಂದು ಧರ್ಮವನ್ನೋ ಸಾಧಾರಣಧರ್ಮವೆಂದು ಕಲ್ಪಿಸಿಕೊಳ್ಳಬೇಕಾಗುತ್ತದೆ. ಹೀಗೆ ಉಪಮಾನೋಪಮೇಯಗಳ ಸ್ಥಾನದಲ್ಲಿಯೇ ಸಾಧಾರಣಧರ್ಮವು ಬಂದು ನಿಂತಾಗ ಸಾಧಾರಣಧರ್ಮವು ಬದಲಾವಣೆ ಹೊಂದುತ್ತದೆ.

**ಗುಣಃ ಪ್ರಕರ್ಷಹೇತುರ್ಯಃ ಸ್ವಾತಂತ್ರ್ಯೇಣೋಪದಿಶ್ಯತೇ ।**
**ತಸ್ಯಾಶ್ರಿತಾದ್ ಗುಣಾದೇವ ಪ್ರಕೃಷ್ಟತ್ವಂ ಪ್ರತೀಯತೇ ॥ ೬೪ ॥**

ಒಂದು ದ್ರವ್ಯದ ಪ್ರಕರ್ಷಕ್ಕೆ ಹೇತುವಾದದ್ದು ಅದರಲ್ಲಿ ವಿಶೇಷಣವಾಗಿ–ರುವ ಗುಣ. ದ್ರವ್ಯವನ್ನು ಬಿಟ್ಟು ಗುಣವನ್ನೇ ಸ್ವತಂತ್ರವಾಗಿ ಪ್ರಕೃಷ್ಟವೆಂದು ಹೇಳಿದಾಗ, ಆ ಗುಣದಲ್ಲಿ ವಿಶೇಷಣವಾದ ಇನ್ನೊಂದು ಗುಣದಿಂದಲೇ ಪ್ರಕರ್ಷವು ತೋರುತ್ತದೆ.

**ವಿವರಣೆ** – ಪ್ರಕರ್ಷ, ಉತ್ಕರ್ಷ, ಅತಿಶಯ, ಉತ್ತಮತ್ವ ಎಂದರೆ ಒಂದೇ ಅರ್ಥ. ದ್ರವ್ಯವೆಂದರೆ ವಿಶೇಷಣವಾದ ಒಂದು ಧರ್ಮವನ್ನುಳ್ಳ ವಸ್ತು. ಆ ವಸ್ತುವಿನಲ್ಲಿ ವಿಶೇಷಣವಾದ ಧರ್ಮವೇ ಗುಣ. ರೂಪ, ರಸ, ಗಂಧ – ಮುಂತಾದ ಗುಣವೆಂದು ತಿಳಿಯಬಾರದು. ಯಾವುದೇ ಒಂದು ದ್ರವ್ಯ ಸ್ವತಃ ಪ್ರಕೃಷ್ಟವೂ ಅಲ್ಲ ನಿಕೃಷ್ಟವೂ ಅಲ್ಲ. ಅದರಲ್ಲಿರುವ ಗುಣದಲ್ಲಿ ಪ್ರಕರ್ಷವಿರುತ್ತದೆ. ಅದರಿಂದ ದ್ರವ್ಯವು ಪ್ರಕೃಷ್ಟವೆನಿಸುತ್ತದೆ. ಹೀಗೆಯೇ ನಿಕೃಷ್ಟವೂ ಕೂಡ. ಒಂದು ವಸ್ತುವು ಇನ್ನೊಂದಕ್ಕಿಂತ ಉತ್ತಮವೆಂದರೆ ಹೇಗೆ? ಅದರಲ್ಲಿರುವ ಶುಭ್ರತೆಯಿಂದಲೋ ಉದ್ದ ಅಗಲಗಳಿಂ–ದಲೋ ಹೆಚ್ಚುಕಾಲದ ಬಾಳಿಕೆಯಿಂದಲೋ ಆ ವಸ್ತುವು ಉತ್ತಮವೆನಿಸುತ್ತದೆ. ಚೈತ್ರನು ಮೈತ್ರನಿಗಿಂತ ಉತ್ಕೃಷ್ಟ – ಎಂದರೆ ಅವನ ಬುದ್ಧಿಯಲ್ಲಿ ಮೈತ್ರನ ಬುದ್ಧಿಗಿಂತ ಉತ್ಕರ್ಷವಿದೆಯೆಂದರ್ಥ. ಆ ಹಳ್ಳಿಯಲ್ಲಿ ರಾಮಯ್ಯನೇ ದೊಡ್ಡ ಧನಿಕ ಎಂದರೆ ದೊಡ್ಡತನ ಧನದಲ್ಲಿ ತೋರುತ್ತದೆ. ಆದ್ದರಿಂದ ಒಂದು ದ್ರವ್ಯದ ಪ್ರಕರ್ಷಕ್ಕೆ ಅದರಲ್ಲಿ ವಿಶೇಷಣವಾದ ಗುಣವು ನಿಮಿತ್ತ. ಇಂತಹ ಗುಣಕ್ಕೆ ಸ್ವತಂತ್ರವಾಗಿ ಉತ್ಕರ್ಷವನ್ನು ಹೇಳಿದಾಗ, ಗುಣದಲ್ಲಿರುವ ಇನ್ನೊಂದು ಧರ್ಮದಲ್ಲಿ ಉತ್ಕರ್ಷ ತೋರುತ್ತದೆ. ಈ ವಸ್ತ್ರದ ಶುಭ್ರತೆಗಿಂತ ಅದರ ಶುಭ್ರತೆ ಉತ್ತಮ – ಎಂದಾಗ ಶುಭ್ರತೆಯಲ್ಲಿರುವ ಒಂದು ಚಾಕಚಕ್ಯವು ಅಧಿಕವಾಗಿದೆಯೆಂದು ಹೇಳಬೇಕು. ಚೈತ್ರನ ಬುದ್ಧಿ ಮೈತ್ರನ ಬುದ್ಧಿಗಿಂತ ಉತ್ತಮವೆಂದಾಗ ಬುದ್ಧಿಯಲ್ಲಿರುವ ಸೂಕ್ಷ್ಮತೆಯನ್ನೋ ಒಳ್ಳೆಯತನವನ್ನೋ ಉತ್ತಮವೆಂದು ಹೇಳಬೇಕಾಗುತ್ತದೆ. ತಾತ್ಪರ್ಯವೇನೆಂದರೆ, ಒಂದು ವಸ್ತುವಿಗೆ ಸಾದೃಶ್ಯವನ್ನೋ ಪ್ರಕರ್ಷವನ್ನೋ ಹೇಳಿದಾಗ ಮತ್ತೊಂದು ನಿಮಿತ್ತವನ್ನು ಹುಡುಕಿ ತಿಳಿಯಬೇಕು. ಹಾಗೆಯೇ ಪ್ರಕೃತದಲ್ಲಿಯೂ ಸಹ ಎಂದು ಮುಂದಿನ ಶ್ಲೋಕದಲ್ಲಿ ಹೇಳಿದೆ.

**ತಸ್ಯಾಭಿಧೇಯಭಾವೇನ ಯಃ ಶಬ್ದಃ ಸಮವಸ್ಥಿತಃ ।**
**ತಸ್ಯಾಪ್ಯುಚ್ಚಾರಣೇ ರೂಪಮನ್ಯತ್ತಸ್ಮಾದ್ ವಿವಿಚ್ಯತೇ ॥ ೬೫ ॥**

ಸೂತ್ರದಲ್ಲಿ ಉಚ್ಚಾರಿತವಾದ ಶಬ್ದಕ್ಕೆ ಅಭಿಧೇಯವೆಂದು ಯಾವ ಶಬ್ದವು ಸ್ವೀಕೃತವಾಗಿದೆಯೋ ಅದನ್ನು ಮತ್ತೆ ನಿದರ್ಶನಕ್ಕಾಗಿ ಉಚ್ಚರಿಸಿದಾಗ ಅದರ ಸ್ವರೂಪಕ್ಕಿಂತ ಬೇರೆಯಾದ ಅರ್ಥವು ಗೃಹೀತವಾಗುತ್ತದೆ.

**ವಿವರಣೆ** – ಅಭಿಧಾನ = ಶಬ್ದ. ಅಭಿಧೇಯ = ಅರ್ಥ. ಉಚ್ಚಾರಿತವಾದ ಶಬ್ದಕ್ಕೆ ಇನ್ನೊಂದು ಶಬ್ದವೇ ಅಭಿಧೇಯವಾಗಬಹುದೆಂದು ಹೇಳಿದ್ದಾಗಿದೆ. ಈ ಅಭಿಧೇಯವನ್ನು ಅಭಿಧಾನವಾಗಿ ಮತ್ತೆ ಬಳಸಿದಾಗ ಲೋಕಪ್ರಸಿದ್ಧವಾದ ಶಕ್ಯಾರ್ಥವು ಅಭಿಧೇಯವಾಗಬಹುದು. ಹೇಗೆಂದರೆ 'ಅಗ್ನೇರ್ಢಕ್' ಎಂಬ ಸೂತ್ರದಲ್ಲಿ ಅಗ್ನಿ ಶಬ್ದವು ಶಬ್ದಪರ. 'ಅಗ್ನಿಃ ದೇವತಾ ಅಸ್ಯ' ಎಂದು ವಿಗ್ರಹಿಸಿದಾಗ ಅಗ್ನಿಶಬ್ದಕ್ಕೆ ಅಗ್ನಿದೇವತೆಯೆಂದು ಶಕ್ಯಾರ್ಥವು ಗೃಹೀತವಾಗುತ್ತದೆ. 'ಆಗ್ನೇಯಂ ಹವಿಃ' ಎಂದು ಮತ್ತೆ ಪ್ರಯೋಗಿಸಿದಾಗಲೂ ಲೋಕಪ್ರಸಿದ್ಧವಾದ ಅಗ್ನಿದೇವತೆಯೇ ಅರ್ಥವೆಂದು ತಿಳಿಯಬೇಕು. ಅಭಿಧಾನ ಶಬ್ದವೇ ಮೊದಲು ಅಭಿಧಾನಶಬ್ದವನ್ನು ಬೋಧಿಸುವುದಿಲ್ಲ. ತನ್ನ ಸ್ವರೂಪಕ್ಕಿಂತ ಬೇರೆಯಾದ ಶಕ್ಯಾರ್ಥವನ್ನು ಬೋಧಿಸುತ್ತದೆಯೆಂದು ಒಟ್ಟು ತಾತ್ಪರ್ಯ.

**ಪ್ರಾಕ್ ಸಂಜ್ಞಿನಾಭಿಸಂಬಂಧಾತ್ ಸಂಜ್ಞಾರೂಪಪದಾರ್ಥಿಕಾ ।**
**ಷಷ್ಠ್ಯಾಶ್ಚ ಪ್ರಥಮಾಯಾಶ್ಚ ನಿಮಿತ್ತತ್ವಾಯ ಕಲ್ಪತೇ ॥ ೬೬ ॥**

ಸಂಜ್ಞಿಗಳೊಡನೆ ಸಂಬಂಧವಾಗುವುದಕ್ಕೆ ಮೊದಲು ಸಂಜ್ಞಾಶಬ್ದಕ್ಕೆ ಸ್ವರೂಪವೇ ಅರ್ಥ. ಅನಂತರ ಸಂಜ್ಞಿಯೊಡನೆ ಸಂಬಂಧವನ್ನು ಹೊಂದಿದ ಮೇಲೆ ಅದೇ ಸಂಜ್ಞಾ ಶಬ್ದವು ಸಂಜ್ಞಿಶಬ್ದದ ಮೇಲೆ ಬರುವ ಷಷ್ಠಿಗೂ ಪ್ರಥಮಾವಿಭಕ್ತಿಗೂ ನಿಮಿತ್ತವಾಗುತ್ತದೆ.

**ವಿವರಣೆ** – **'ವೃದ್ಧಿರಾದೈಚ್'** ಇದು ಸಂಜ್ಞಾ ಸೂತ್ರ. ಆದೈಚ್ ಎಂದರೆ ಆಕಾರ, ಐಕಾರ ಮತ್ತು ಔಕಾರಗಳು. ಈ ಮೂರು ವರ್ಣಗಳಿಗೆ ಈ ಸಂಜ್ಞಾಸೂತ್ರದಿಂದ **'ವೃದ್ಧಿ'** ಎಂಬ ಸಂಜ್ಞೆಯನ್ನು ವಿಧಿಸಲಾಗಿದೆ. ವೃದ್ಧಿ ಎಂಬ ಶಬ್ದವು ಮೊದಲು ಉಚ್ಚಾರಿತವಾಗಿ ಅನಂತರ ಆದೈಚ್‌ಗಳೊಡನೆ ಸಂಬಂಧ ಹೊಂದುತ್ತದೆ. ಅದಕ್ಕೆ ಮೊದಲು ವೃದ್ಧಿ ಶಬ್ದದ ಅರ್ಥ ಯಾವುದು? 'ವೃದ್ಧಿಃ' ಎಂಬಲ್ಲಿ ಪ್ರಥಮಾವಿಭಕ್ತಿ ಬರುತ್ತದೆ. ವೃದ್ಧಿಶಬ್ದಕ್ಕೆ ಒಂದು ಅರ್ಥವಿದ್ದರೆ ಆಗ ಪ್ರಾತಿಪದಿಕಸಂಜ್ಞೆ ಬಂದು ಪ್ರಥಮಾ ಬರಲು ಸಾಧ್ಯ. ಹೀಗೆಯೆ ಟಿ, ಘ, ಘು, ಭ – ಮುಂತಾದ ಸಂಜ್ಞಾಶಬ್ದಗಳು ವ್ಯಾಕರಣಶಾಸ್ತ್ರದಲ್ಲಿವೆ. ವೃದ್ಧಿಶಬ್ದಕ್ಕೆ ವೃದ್ಧಿಶಬ್ದವೇ ಅರ್ಥ, ಟಿ ಎಂಬುದಕ್ಕೆ **'ಟಿ'** ಶಬ್ದವೆಂದರ್ಥ. ಹೀಗೆ ಇವೆಲ್ಲವೂ ಶಬ್ದಪರಗಳಾದರೆ

ಅರ್ಥವತ್ತಾದ್ದರಿಂದ ಪ್ರಾತಿಪದಿಕಸಂಜ್ಞೆ ಬಂದು ಇವುಗಳ ಮೇಲೆ ಪ್ರಥಮಾ ವಿಭಕ್ತಿ ಹುಟ್ಟುತ್ತದೆ. ಇವು ಸಂಜ್ಞಾಶಬ್ದಗಳು. ಇವುಗಳಿಗೆ ಸಂಜ್ಞಿಗಳಾದ ಆದೈಚ್ ಮೊದಲಾದವುಗಳೊಡನೆ ಸಂಬಂಧವಾದಾಗ, ವೃದ್ಧಿಯೆಂದರೆ ಆದೈಚ್ ಎಂದರ್ಥ. ಶಬ್ದ ಬೇರೆ, ಅರ್ಥ ಬೇರೆಯಾದ್ದರಿಂದ 'ವೃದ್ಧಿಶಬ್ದವು ಆದೈಚ್ಗಳ ವಾಚಕವಾದ ಸಂಜ್ಞೆ' ಎಂದು ಹೇಳಬಹುದು. ಭೇದವಿದ್ದರೆ ಮಾತ್ರ ಷಷ್ಠೀ ಬರುತ್ತದೆ. ಇಲ್ಲಿ ಶಬ್ದ – ಅರ್ಥಗಳಿಗೆ ಭೇದವಿರುವುದು ಸ್ಪಷ್ಟ. 'ವೃದ್ಧಿಯೇ ಆದೈಚ್' 'ವೃದ್ಧಿಯೆಂದರೆ ಆದೈಚ್' ಎಂದೂ ಹೇಳಬಹುದು. ಇದು ಹೇಗೆ? ಇಲ್ಲಿ ಸಂಜ್ಞೆಗೆ ಪ್ರಥಮಾ ವಿಭಕ್ತಿ ಬಂದು ಸಂಜ್ಞಿಯೊಡನೆ ಅಭೇದವನ್ನು ಪಡೆದದ್ದು ಹೇಗೆ? ಉತ್ತರವೇನೆಂದರೆ ಇಲ್ಲಿ ಸಂಜ್ಞೆಗೂ ಸಂಜ್ಞಿಗೂ ಅಭೇದವನ್ನು ಆರೋಪ ಮಾಡಬೇಕು. ಅಭೇದವೆಂದರೆ ಇಲ್ಲಿ ತಾದಾತ್ಮ್ಯ. ವೃದ್ಧಿಯೇ ಆದೈಜ್, ಆದೈಚ್ ಎಂಬುದೇ ವೃದ್ಧಿ ಎಂದರ್ಥ. ಎರಡು ಬಗೆಯ ಪ್ರಯೋಗಗಳಲ್ಲಿಯೂ ವೃದ್ಧಿಶಬ್ದಕ್ಕೆ ವೃದ್ಧಿಶಬ್ದವೆಂದೇ ಅರ್ಥ. ಈ ರೀತಿಯಾದ ಅಭೇದಾರೋಪವು ಲೋಕದಲ್ಲಿಯೂ ಇದೆ. 'ಈ ಹುಡುಗನು ಸಿಂಹ, ಆತನು ಕತ್ತೆ' ಎಂಬಲ್ಲಿ ತಾದಾತ್ಮ್ಯಾರೋಪವಿದೆ. ಅಂತೆಯೇ 'ಅವನ ಮಗ ದೇವದತ್ತ' ಎಂಬಲ್ಲಿಯೂ ಆರೋಪವೇ. ಮಗನು ದೇವದತ್ತನಾಗುವುದು ಹೇಗೆ? ದೇವದತ್ತ ಎಂಬುದು ಸಂಜ್ಞಾಶಬ್ದ. ಮಗ ಎಂದರೆ ಒಬ್ಬ ವ್ಯಕ್ತಿ. ಇವರಿಗೆ ಅಭೇದಾರೋಪವನ್ನು ಮಾಡದೆ ಆ ರೀತಿ ಪ್ರಯೋಗವು ಶಕ್ಯವಲ್ಲ. 'ಮಗನ ಹೆಸರು ದೇವದತ್ತ' ಎಂಬಲ್ಲಿ ಆರೋಪವಿಲ್ಲ.

**ತತ್ರಾರ್ಥವತ್ತ್ವಾತ್ ಪ್ರಥಮಾ ಸಂಜ್ಞಾಶಬ್ದಾತ್ ವಿಧೀಯತೇ ।**
**ತಸ್ಯೇತಿ ವ್ಯತಿರೇಕಶ್ಚ ತದರ್ಥಾದೇವ ಜಾಯತೇ ॥ ೬೭ ॥**

'ವೃದ್ಧಿರಾದೈಚ್' ಮುಂತಾದ ಸ್ಥಳದಲ್ಲಿ ವೃದ್ಧಿ ಎಂಬ ಸಂಜ್ಞಾಶಬ್ದವು ಅರ್ಥವತ್ತಾದ್ದರಿಂದ ಪ್ರಥಮಾ ವಿಭಕ್ತಿ ಬರುತ್ತದೆ. 'ಆದೈಚ್‌ಗಳ' ಸಂಜ್ಞೆ ವೃದ್ಧಿ ಎಂಬಲ್ಲಿ ಸಂಜ್ಞಾ ಶಬ್ದವು ಸ್ವಸ್ವರೂಪಾರ್ಥಕವಾದ್ದರಿಂದಲೇ ಅರ್ಥವಾಚಕ ವಾದ ಆದೈಚ್ ಶಬ್ದದ ಮೇಲೆ ಷಷ್ಠೀ ಬರುತ್ತದೆ.

**ವಿವರಣೆ** – ಸಂಜ್ಞಾಶಬ್ದವು ಸರ್ವತ್ರ ಸ್ವಸ್ವರೂಪಬೋಧಕ. ಅರ್ಥದೊಡನೆ ಸಂಬಂಧವಾದಾಗ ತಾದಾತ್ಮ್ಯಾರೋಪದಿಂದ 'ಶಬ್ದವೇ ಅರ್ಥ, ಅರ್ಥವೇ ಶಬ್ದ' ಎಂಬ ದೃಷ್ಟಿಯಿಂದ ಪ್ರಥಮಾವಿಭಕ್ತಿ ಬರುತ್ತದೆ. ತಾದಾತ್ಮ್ಯವನ್ನು ಬಯಸದಿದ್ದಾಗ ಸಂಜ್ಞೆಗಳ ಮೇಲೆ ಭೇದವನ್ನು ಬೋಧಿಸುವುದಕ್ಕಾಗಿ ಷಷ್ಠೀ ವಿಭಕ್ತಿ ಬರುತ್ತದೆ. ಸಂಜ್ಞಾ ಎಂಬುದು ಶಬ್ದ. ಸಂಜ್ಞಿಯು ಆ ಶಬ್ದದ ಅರ್ಥ.

ಮುಂದಿನ ಶ್ಲೋಕಗಳಿಗೆ ಭೂಮಿಕೆಯಾಗಿ ಕೆಲವು ಅಂಶಗಳನ್ನೀಗ ತಿಳಿದುಕೊಂಡಿರಬೇಕು. ಒಬ್ಬ ಹಿರಿಯನು ಒಂದು ಕುದುರೆಯನ್ನು ತೋರಿಸಿ 'ಇದು ಅಶ್ವ' ಎಂದು ಹೇಳಿದರೆ, ಕಿರಿಯನು ಅಶ್ವವೆಂದರೇನೆಂದು ಅದರ ಅರ್ಥವನ್ನು ಗ್ರಹಿಸುತ್ತಾನೆ. ಒಂದೇ ಕುದುರೆಯನ್ನಲ್ಲ, ಯಾವ ಕುದುರೆಯನ್ನು ನೋಡಿದರೂ ಅದು ಅಶ್ವವೆಂದು ತಿಳಿಯುತ್ತಾನೆ. ಅಶ್ವಪದದಲ್ಲಿ ಎಲ್ಲ ಕುದುರೆಗಳನ್ನೂ ಬೋಧಿಸುವ ವಾಚಕತ್ವ ಶಕ್ತಿ ಇದೆಯೆಂದು ಅವನಿಗೆ ಗೊತ್ತಾಗುತ್ತದೆ. ಅಶ್ವಪದದ ಈ ಶಕ್ತಿ ಯಾವ ಅರ್ಥದಲ್ಲಿದೆಯೆಂದು ಕಿರಿಯನಿಂದ ಗೃಹೀತವಾಗುತ್ತದೆ? ಇಲ್ಲಿ ಮೂರು ವಾದಗಳುಂಟು–

೧. ಅಶ್ವಪದದ ಶಕ್ತಿ ಅಶ್ವವೆಂಬ ವ್ಯಕ್ತಿಯಲ್ಲಿದೆಯೆಂದು ಒಂದು ಪಕ್ಷ. ಹಾಗಾದರೆ ಜಗತ್ತಿನಲ್ಲಿರುವ ಎಲ್ಲ ಕುದುರೆಗಳನ್ನು ಅಶ್ವವೆಂದು ಕಿರಿಯನು ಹೇಗೆ ತಿಳಿಯುತ್ತಾನೆ? ಅವನು ನೋಡಿದ್ದು ಕುದುರೆಯೆಂಬ ಒಂದೇ ವ್ಯಕ್ತಿಯನ್ನಲ್ಲವೆ? ನಿಜ; ಅಶ್ವತ್ವವೆಂಬ ಜಾತಿಯು ಉಪಲಕ್ಷಣವಾಗಿ ಅವನಿಗೆ ತಿಳಿದು ಬರುತ್ತದೆ. ಅಶ್ವತ್ವವಿರುವ ಎಲ್ಲ ಪ್ರಾಣಿಯೂ ಅಶ್ವವೆಂದು ಗೊತ್ತಾಗುತ್ತದೆ. ಶಕ್ತಿ ಇರುವುದು ವ್ಯಕ್ತಿಯಲ್ಲಿ ಮಾತ್ರ. ಇದು ವ್ಯಕ್ತಿ ಶಕ್ತಿವಾದ, ಶಬ್ದವು ಶಕ್ತ, ವ್ಯಕ್ತಿಯು ಶಕ್ಯ.

೨. ಅಶ್ವಶಬ್ದದ ಶಕ್ತಿ 'ಅಶ್ವತ್ವ'ವೆಂಬ ಜಾತಿಯಲ್ಲಿ ಮಾತ್ರ. ಅಶ್ವವೆಂದರೆ ಅಶ್ವತ್ವವೆಂದರ್ಥ. ಇದು ಎಲ್ಲ ಕುದುರೆಗಳಲ್ಲಿಯೂ ಇದೆಯಾದ್ದರಿಂದ ಎಲ್ಲ ಕುದುರೆಗಳ ಬೋಧವೂ ಅಶ್ವಪದದಿಂದ ಆಗಬಹುದು. ಹಾಗಾದರೆ 'ಅಶ್ವವನ್ನು ಕಟ್ಟಿಹಾಕು. ಈ ಅಶ್ವವು ಬೆಳ್ಳಗಿದೆ. ಅಶ್ವವು ಓಡುತ್ತಿದೆ' ಎಂಬಲ್ಲಿ ಹೇಗೆ? ಅಶ್ವತ್ವವನ್ನು ಕಟ್ಟಲು ಸಾಧ್ಯವಿಲ್ಲ. ಅದು ಬೆಳ್ಳಗೂ ಇಲ್ಲ, ಅಶ್ವತ್ವಜಾತಿಯು ಓಡುವುದೂ ಇಲ್ಲ – ಎಂದು ಆಕ್ಷೇಪಿಸಿದರೆ, ಅಶ್ವವೆಂಬ ವ್ಯಕ್ತಿಯು ಲಕ್ಷಣಾವ್ಯಾಪಾರದಿಂದ ಗೊತ್ತಾಗುತ್ತದೆ. ಅಶ್ವತ್ವದಲ್ಲಿ ಕಟ್ಟಿಹಾಕು ಮುಂತಾದ್ದು ಅನ್ವಿತವಾಗುವುದಿಲ್ಲವಾದ್ದರಿಂದ ವ್ಯಕ್ತಿಯು ಆಕ್ಷಿಪ್ತವಾಗುತ್ತದೆ ಎಂದು ಉತ್ತರ ಹೇಳಬೇಕಾಗುತ್ತದೆ. ಇದು ಜಾತಿಶಕ್ತಿವಾದ. ಶಬ್ದವು ಶಕ್ತ. ಅರ್ಥವಾದ ಜಾತಿ ಶಕ್ಯವೆಂದು ಅಭಿಪ್ರಾಯ.

೩. ಜಾತಿವಿಶಿಷ್ಟವ್ಯಕ್ತಿಯಲ್ಲಿ ಶಕ್ತಿಯು ಗೃಹೀತವಾಗುತ್ತದೆಯೆಂದು ಇನ್ನೊಂದು ಪಕ್ಷ. ಇದರ ಪ್ರಕಾರ ಅಶ್ವಶಬ್ದಕ್ಕೆ ಅಶ್ವತ್ವವೆಂಬ ಜಾತಿ, ಅಶ್ವವೆಂಬ ವ್ಯಕ್ತಿ ಈ ಎರಡರಲ್ಲಿಯೂ ಶಕ್ತಿ ಇರುತ್ತದೆ. ಇದರಲ್ಲಿ ಮೇಲ್ಕಂಡ ದೋಷವೇನೂ ಬರುವುದಿಲ್ಲ. ಆದರೆ ಜಾತಿ, ವ್ಯಕ್ತಿ, ವೈಶಿಷ್ಟ್ಯ – ಎಂಬ ಮೂರು ಅಂಶಗಳಲ್ಲಿ ಶಕ್ತಿಯಿದೆಯೆಂದು ಹೇಳಬೇಕಾಗುತ್ತದೆ. ಇದು ಜಾತಿವಿಶಿಷ್ಟ ವ್ಯಕ್ತಿಶಕ್ತಿವಾದ.

ಲೋಕದಲ್ಲಿ ಸಂಜ್ಞಾಶಬ್ದಕ್ಕೆ ಮಾತ್ರ ಒಂದೇ ವ್ಯಕ್ತಿಯಲ್ಲಿ ಶಕ್ತಿ. 'ಇವನು ದೇವದತ್ತ' ಎಂದರೆ ಅವನೊಬ್ಬನೇ ದೇವದತ್ತನಾಗುತ್ತಾನೆ. ಅವನಂತಿರುವ ಮನುಷ್ಯರೆಲ್ಲರೂ ದೇವದತ್ತರಲ್ಲ. 'ದೇವದತ್ತತ್ವ' ಎಂಬ ಜಾತಿ ಇಲ್ಲ. ಇದು ಸಂಜ್ಞಾಶಬ್ದದ ವಿಶೇಷ.

**ಸ್ವಂ ರೂಪಮಿತಿ ಕೈಶ್ಚಿತ್ತು ವ್ಯಕ್ತಿಃ ಸಂಜ್ಞೋಪದಿಶ್ಯತೇ ।**
**ವ್ಯಕ್ತೇಃ ಕಾರ್ಯಾಣಿ ಸಂಸೃಷ್ಟಾ ಜಾತಿಸ್ತು ಪ್ರತಿಪದ್ಯತೇ ॥ ೬೮ ॥**

'ಸ್ವಂ ರೂಪಂ ಶಬ್ದಸ್ಯಾಶಬ್ದಸಂಜ್ಞಾ' ಎಂಬ ಪಾಣಿನಿಸೂತ್ರದಲ್ಲಿ (ಅಷ್ಟಾ ೧-೧-೬೮) ಅಗ್ನಿ ಮುಂತಾದ ಶಬ್ದಕ್ಕೆ ಸ್ವಸ್ವರೂಪವೇ ಅರ್ಥವೆಂದು ಹೇಳಿದೆ. ಇಲ್ಲಿ ಶಬ್ದವ್ಯಕ್ತಿಯೇ ಶಕ್ತವಾದ ಸಂಜ್ಞೆಯೆಂದೂ ಅಗ್ನಿಶಬ್ದತ್ವ ಮುಂತಾದ ಜಾತಿಯು ಶಕ್ಯವಾದ ಅರ್ಥವೆಂದೂ ಕೆಲವರು ಹೇಳುತ್ತಾರೆ. ಅವರ ಮತ-ದಲ್ಲಿ ವ್ಯಕ್ತಿಗೆ ಹೇಳಿದ ಕಾರ್ಯಗಳನ್ನು ಜಾತಿಯು ವ್ಯಕ್ತಿದ್ವಾರಾ ಪಡೆಯುತ್ತದೆ.

**ವಿವರಣೆ** – ಶಬ್ದಕ್ಕೆ ಶಬ್ದವೇ ಅರ್ಥ ಎಂಬ ಸಿದ್ಧಾಂತದಲ್ಲಿಯೂ ಈ ಜಾತಿ ಶಕ್ತಿವಾದ – ವ್ಯಕ್ತಿಶಕ್ತಿವಾದಗಳು ಬರುತ್ತವೆಯೆಂದು ತೋರಿಸುವುದಕ್ಕಾಗಿ ಈ ವಿಷಯವು ಪ್ರಸ್ತುತವಾಗಿದೆ. ಅಗ್ನಿ, ಘಟ ಮುಂತಾದ ಪದಾರ್ಥಗಳು ಹೇಗೆ ಅನಂತವಾಗಿವೆಯೋ ಹಾಗೆ ಅಗ್ನಿ, ಪಕ್ಷ ಮುಂತಾದ ಶಬ್ದಗಳೂ ಅನಂತವಾಗಿವೆ-ಯೆಂದು ಈ ವಾದಕ್ಕೆ ಅವಕಾಶವಾಗಿದೆ. 'ಸ್ವಂ ರೂಪಂ ..... ' ಎಂಬ ಸೂತ್ರದ ಪ್ರಕಾರ ಅಗ್ನಿ ಶಬ್ದವು ಸಕಲ ಅಗ್ನಿಶಬ್ದಗಳಿಗೂ ಸಂಜ್ಞಿಯಾಗಬೇಕು. ಅದಕ್ಕಾಗಿ ಅಗ್ನಿಶಬ್ದಕ್ಕೆ 'ಅಗ್ನಿಶಬ್ದತ್ವಜಾತಿ'ಯಲ್ಲಿ ಶಕ್ತಿಯೆಂದು ಜಾತಿಶಕ್ತಿವಾದಿಗಳ ಮತ. ಆಗ ಅಗ್ನಿಶಬ್ದತ್ವವಿರುವ ಸಕಲ ಅಗ್ನಿಶಬ್ದಗಳೂ ಸಂಜ್ಞಿಗಳಾಗುತ್ತವೆ. 'ಅಗ್ನೇರ್ಢಕ್' ಎಂಬ ಸೂತ್ರದಿಂದ ಆ ಜಾತಿಯಿರುವ ಸ್ಥಳದಲ್ಲೆಲ್ಲ ಢಕ್ ಪ್ರತ್ಯಯ ಬರಬಹುದು. ಇಲ್ಲೊಂದು ಶಂಕೆ ಹುಟ್ಟುತ್ತದೆ. ಪ್ರತ್ಯಯವು ಶಬ್ದಕ್ಕೆ ಪರವಾಗಿ ಬರಬೇಕು. ಜಾತಿಗೆ ಪ್ರತ್ಯಯವು ಪರವಾಗುವುದು ಹೇಗೆ? ಸಮಾಧಾನವೇನೆಂದರೆ ಹಿಂದೆ ಭೂಮಿಕೆ-ಯಲ್ಲಿ ಅಶ್ವತ್ವವನ್ನು ತರಲಾಗುವುದಿಲ್ಲವಾದ್ದರಿಂದ ವ್ಯಕ್ತಿಯು ಆಕ್ಷಿಪ್ತವಾಗುತ್ತದೆ ಎಂದು ಹೇಳಿದ್ದೇವೆ. ಅಂತೆಯೇ ಪ್ರತ್ಯಯ ಮುಂತಾದ ಕಾರ್ಯಗಳೆಲ್ಲವೂ ಆಕ್ಷಿಪ್ತವಾದ ಅಗ್ನಿಶಬ್ದಕ್ಕೆ ಬರುತ್ತದೆ. ಹಿಂದೆ ಹೇಳಿದ ಜಾತಿಶಕ್ತಿವಾದವು ಅರ್ಥಪರ; ಇದು ಶಬ್ದಪರ ಎಂಬುದಿಷ್ಟೇ ಭೇದ. ಪ್ರಕೃತದಲ್ಲಿ ಶಬ್ದವೇ ಶಬ್ದದ ಅರ್ಥವೆಂಬುದನ್ನು ಮರೆಯಬಾರದು. ಈ ವಾದದಲ್ಲಿ ಅಗ್ನಿಶಬ್ದವೆಂಬ ವ್ಯಕ್ತಿಯು ಶಕ್ತ. ಅಗ್ನಿಶಬ್ದತ್ವವು ಶಕ್ಯ.

**ಸಂಜ್ಞಿನೀಂ ವ್ಯಕ್ತಿಮಿಚ್ಛಂತಿ ಸೂತ್ರಗ್ರಾಹ್ಯಾಮಥಾಪರೇ ।**
**ಜಾತಿಪ್ರತ್ಯಾಯಿತಾ ವ್ಯಕ್ತಿಃ ಪ್ರದೇಶೇಷೂಪತಿಷ್ಠತೇ ॥ ೬೯ ॥**

ಇನ್ನು ಕೆಲವು ಆಚಾರ್ಯರು 'ಜಾತಿಯೇ ಸಂಜ್ಞಾ, ವ್ಯಕ್ತಿಯೇ ಸಂಜ್ಞಿ' ಎಂಬುದು ಆ ಸೂತ್ರದ ಅರ್ಥವೆನ್ನುತ್ತಾರೆ. 'ಅಗ್ನೇರ್ಢಕ್' ಮುಂತಾದ ವಿಧಿ–ಪ್ರದೇಶಗಳಲ್ಲಿ ಜಾತಿಯಿಂದ ಬೋಧ್ಯವಾದ ಶಬ್ದವ್ಯಕ್ತಿಯು ಉಪಸ್ಥಿತ–ವಾಗುತ್ತದೆಯೆಂದು ಅವರ ಅಭಿಪ್ರಾಯ.

**ವಿವರಣೆ** – ಮೇಲಿನ ಶ್ಲೋಕದಲ್ಲಿ ವ್ಯಕ್ತಿ ಶಬ್ದವು ಸ್ತ್ರೀಲಿಂಗವಾದ್ದರಿಂದ 'ಸಂಜ್ಞಿನೀ' ಎಂಬ ಸ್ತ್ರೀಲಿಂಗ ಶಬ್ದವನ್ನು ಪ್ರಯೋಗಿಸಲಾಗಿದೆ. ಸಂಜ್ಞಿ ಶಕ್ಯ–ಎಂದು ಅದರ ಅರ್ಥ. ಹಿಂದಿನ ಶ್ಲೋಕದ ಅಭಿಪ್ರಾಯ ಇಲ್ಲಿ ಪೂರ್ತಿ ತಲೆಕೆಳಗಾಗುತ್ತದೆ. ಹಿಂದಿನ ಶ್ಲೋಕದ ಪ್ರಕಾರ ಶಕ್ತವಾದ ಅಗ್ನಿಶಬ್ದವು ವ್ಯಕ್ತಿ. ಶಕ್ಯವಾದ ಅಗ್ನಿಶಬ್ದತ್ವವು ಜಾತಿ. ಈ ಶ್ಲೋಕದ ಪ್ರಕಾರ ಶಕ್ತವಾದದ್ದೇ ಶಬ್ದತ್ವವೆಂಬ ಜಾತಿ. ಶಕ್ಯವಾದದ್ದು ಅಗ್ನಿ ಶಬ್ದವೆಂಬ ವ್ಯಕ್ತಿ. ಜಾತಿಯೇ ವ್ಯಕ್ತಿಗೆ ಬೋಧಕವಾಯಿತು. ಆದ್ದರಿಂದ ಜಾತಿಯಿರುವ ಎಲ್ಲ ಅಗ್ನಿಶಬ್ದಗಳ ಮೇಲೂ ಪ್ರತ್ಯಯ ಬರಲು ಅಡ್ಡಿಯೇ ಇಲ್ಲ. ಜಾತಿಯೇ ವ್ಯಕ್ತಿಗೆ ಸಂಜ್ಞೆಯಾದ್ದರಿಂದ ಜಾತಿಗೆ ಪರವಾಗಿ ಪ್ರತ್ಯಯ ಹೇಗೆ ಬರುತ್ತದೆಯೆಂಬ ಶಂಕೆಯೇ ಹುಟ್ಟುವುದಿಲ್ಲ.

'ಸ್ವಂರೂಪಂ ..........' ಎಂಬ ಸೂತ್ರಕ್ಕೆ ಹೀಗೆ ಎರಡು ವಿಧದಲ್ಲಿ ಅರ್ಥ–ಮಾಡಲು ಬರುತ್ತದೆ. ಪ್ರಕೃತದಲ್ಲಿ ಅದನ್ನು ತಿಳಿಯುವುದು ಕ್ಲಿಷ್ಟವೆಂದೂ ಅನಾ–ವಶ್ಯಕವೆಂದೂ ಕೈಬಿಡಲಾಗಿದೆ.

**ಕಾರ್ಯತ್ವೇ ನಿತ್ಯತಾಯಾಂ ವಾ ಕೇಚಿದೇಕತ್ವವಾದಿನಃ ।**
**ಕಾರ್ಯತ್ವೇ ನಿತ್ಯತಾಯಾಂ ವಾ ಕೇಚಿನ್ನಾನಾತ್ವವಾದಿನಃ ॥೭೦॥**

ಶಬ್ದವು ಕಾರ್ಯವಾದದ್ದು, ಎಂದರೆ ಜನ್ಯವಾದದ್ದು, ಆದ್ದರಿಂದ ಅನಿತ್ಯವೆಂದು ಒಂದು ಪಕ್ಷವಿದೆ. ಶಬ್ದವು ಜನ್ಯವಲ್ಲ, ಅದು ನಿತ್ಯವಾದದ್ದು ಎಂದು ಇನ್ನೊಂದು ಪಕ್ಷವಿದೆ. ಈ ಎರಡು ಪಕ್ಷಗಳಲ್ಲಿಯೂ ಘಟ, ಪಟ – ಮುಂತಾದ ಶಬ್ದಗಳಿರುವುದು ಒಂದೊಂದೇ ಎಂದು ಏಕತ್ವವಾದಿಗಳು ಹೇಳುತ್ತಾರೆ. ಈ ಎರಡು ಪಕ್ಷಗಳಲ್ಲಿ ಒಂದೊಂದು ಶಬ್ದವೂ ಅನೇಕ ವಾಗುತ್ತದೆಯೆಂದು ನಾನಾತ್ವವಾದಿಗಳು ಹೇಳುತ್ತಾರೆ.

**ವಿವರಣೆ** – ಉಚ್ಚರಿಸಿದಾಗ ಶಬ್ದವು ಹುಟ್ಟುತ್ತದೆ. ಒಡನೆಯೇ ನಾಶವಾಗುತ್ತದೆ.

ಇನ್ನೊಂದು ಸಲ ಉಚ್ಚರಿಸಿದಾಗ ಹುಟ್ಟತಕ್ಕದ್ದು ಮತ್ತೊಂದು ಶಬ್ದ. ಆದ್ದರಿಂದ ಶಬ್ದವು ಅನಿತ್ಯ–ಎಂದು ತಾರ್ಕಿಕರು ಹೇಳುತ್ತಾರೆ. ಆದರೆ ನಾವು ಉಚ್ಚರಿಸತಕ್ಕದ್ದು ಧ್ವನಿ; ವೈಖರೀನಾದ. ಅದು ನಿಜವಾದ ಶಬ್ದವಲ್ಲ. ಧ್ವನಿಯಿಂದ ಅಖಂಡವಾದ ಶಬ್ದವು ಅಭಿವ್ಯಕ್ತವಾಗುತ್ತದೆ. ಅದೇ ಅರ್ಥಬೋಧಕವಾಗಿ ಶಬ್ದವೆನಿಸುತ್ತದೆ. ಅದಕ್ಕೆ ಸ್ಫೋಟ ಎಂಬ ಹೆಸರಿದೆ. ಶ್ರೋತ್ರಗ್ರಾಹ್ಯವಾದದ್ದು ಧ್ವನಿ. ಬುದ್ಧಿಗ್ರಾಹ್ಯವಾದದ್ದು ಶಬ್ದ. ಅದು ನಿತ್ಯವಾಗಿ ಇದ್ದೇ ಇರುತ್ತದೆ. ಉಚ್ಚಾರಿತವಾದ ಧ್ವನಿಯಿಂದ ಅದು ಪ್ರಕಾಶಗೊಳ್ಳುತ್ತದೆ. ಆದ್ದರಿಂದ ಶಬ್ದವು ನಿತ್ಯ – ಎಂದು ವೈಯಾಕರಣರು ಹೇಳುತ್ತಾರೆ. ಈ ಎರಡು ಪಕ್ಷಗಳಲ್ಲಿಯೂ ಶಬ್ದವು ಏಕವೆಂದೂ ಅನೇಕವೆಂದೂ ವ್ಯವಹಾರವಿದೆ. ಹೇಗೆಂದರೆ :

ಶಬ್ದವು ಅನಿತ್ಯವೆಂಬ ಪಕ್ಷದಲ್ಲಿ –

೧. ಆ ಶಬ್ದವೇ ಇದು, ನೀನು ಹೇಳಿದ ಘಟ ಪದವನ್ನೇ ನಾನು ಹೇಳಿದೆ, ನಿನ್ನೆ ಹೇಳಿದ ಶಬ್ದವನ್ನೇ ಈ ದಿನ ಹೇಳುತ್ತಾನೆ – ಎಂಬ ವ್ಯವಹಾರವಿರುವುದ–ರಿಂದ ಶಬ್ದವು ಏಕವೆನ್ನಬಹುದು. ಅದೇ ಶಬ್ದವನ್ನು ಚೈತ್ರನು ಗಟ್ಟಿಯಾಗಿ ಉಚ್ಚರಿಸುತ್ತಾನೆ – ಅದೇ ಶಬ್ದವನ್ನು ಮೈತ್ರನು ಮೆಲ್ಲಗೆ ಉಚ್ಚರಿಸುತ್ತಾನೆ ಎಂಬ ಅನುಭವವೂ ಇದಕ್ಕೆ ಸಾಧಕ.

೨. ಉಚ್ಚಾರಣೆ ಭಿನ್ನವಾದಾಗ ಶಬ್ದವೂ ಅನೇಕವೇ ಆಗುತ್ತದೆ. ಒಂದೇ ಶಬ್ದ–ವಾಗಿದ್ದರೆ ಸದಾ ಕೇಳಿಸಬೇಕಾಗಿತ್ತು. ಶಬ್ದವು ಹುಟ್ಟಿ ನಾಶವಾಗುವುದರಿಂದ ಕೇಳಿಸುವುದಿಲ್ಲ. ಇನ್ನೊಂದು ಸಲ ಉಚ್ಚರಿಸಿದಾಗ ಮತ್ತೊಂದು ಶಬ್ದ ಹುಟ್ಟುತ್ತದೆ. ಆದ್ದರಿಂದ ಶಬ್ದವು ಅನೇಕ. ಅದೇ ಶಬ್ದ ಇದು – ಇತ್ಯಾದಿ ವ್ಯವಹಾರವು ಸಾದೃಶ್ಯದಿಂದ ಬರುತ್ತದೆ. ಅವನು ಹೇಳಿದ ಶಬ್ದವನ್ನೇ ಇವನು ಹೇಳುತ್ತಾನೆ ಎನ್ನುವುದು ಗೌಣವ್ಯವಹಾರ.

ಶಬ್ದವು ನಿತ್ಯವೆಂಬ ಪಕ್ಷದಲ್ಲಿ –

೧. ಅವನು ಹೇಳಿದ ಘಟ ಶಬ್ದ ಕಠೋರವಾಗಿತ್ತು. ನೀನು ಹೇಳಿದ ಘಟಶಬ್ದ ಮೃದುವಾಗಿತ್ತು ಎಂಬ ವ್ಯವಹಾರವಿದೆ. ಈ ವಾಕ್ಯದಲ್ಲಿ ಎರಡು ಹರಿಶಬ್ದಗಳಿವೆ, ಮೂರು ಚಕಾರಗಳಿವೆ ಎಂದೂ ಹೇಳುತ್ತಾರೆ. ಏಕಕಾಲದಲ್ಲಿ ಒಂದೇ ರೀತಿಯ ವಾರ್ತೆಯು ಪ್ರಕಟವಾಗುತ್ತದೆ. ಒಂದೇ ಶಬ್ದವು ಅನೇಕ ರೇಡಿಯೋಗಳಲ್ಲಿ ಪ್ರಕಟವಾಗುವುದು ಹೇಗೆ? ಆದ್ದರಿಂದ ಶಬ್ದವು ಅನೇಕ.

೨. ಶಬ್ದವನ್ನು ಅಭಿವ್ಯಕ್ತಿಗೊಳಿಸುವ ಧ್ವನಿಯು ಕಠೋರವಾಗಿದ್ದರೆ ಶಬ್ದವು

ಕಠೋರವೆನ್ನುತ್ತಾರೆ. ಧ್ವನಿಯು ಮೃದುವಾಗಿದ್ದರೆ ಶಬ್ದವು ಮೃದು ಎನ್ನುತ್ತಾರೆ. ಕಠೋರತ್ವ ಮೃದುತ್ವ – ಎಂಬಿವೇ ಮೊದಲಾದ ಧರ್ಮಗಳು ಧ್ವನಿಗತವೇ ಹೊರತು ಶಬ್ದಗತವಲ್ಲ. ಒಂದು ವಾಕ್ಯದಲ್ಲಿ ಅಭಿವ್ಯಂಜಕ ಧ್ವನಿಯು ಎರಡು ಸಲ ಉಚ್ಚಾರಿತವಾದಾಗ ಎರಡು ಶಬ್ದಗಳಿವೆಯೆಂದೂ ಮೂರು ಸಲ ಉಚ್ಚಾರಿತವಾದಾಗ ಮೂರು ಶಬ್ದಗಳಿವೆಯೆಂದೂ ವ್ಯವಹಾರ ಬರುತ್ತದೆ. ಉಚ್ಚಾರಿತವಾದದ್ದು ಧ್ವನಿಯೇ ಹೊರತು ಶಬ್ದವಲ್ಲ. ಅನೇಕ ನೀರಿನ ಪಾತ್ರೆಗಳಲ್ಲಿ ಒಬ್ಬನೇ ಚಂದ್ರನು ಪ್ರತಿಬಿಂಬಿಸುತ್ತಾನೆ. ಇದರಿಂದ ಅನೇಕ ಚಂದ್ರರಿದ್ದಾರೆಂದು ಸಿದ್ಧವಾಗುವುದಿಲ್ಲ. ಅಂತೆಯೇ ಒಂದೇ ಶಬ್ದವು ಅನೇಕ ರೇಡಿಯೋಗಳಲ್ಲಿ ಕೇಳಿಸಿದ್ದರಿಂದ ಅನೇಕ ಶಬ್ದಗಳಿವೆಯೆಂದು ಸಿದ್ಧವಾಗು–ವುದಿಲ್ಲ. ವಾರ್ತಾ ಪ್ರಸಾರಕನು ಒಂದೇ ಸಲ ಉಚ್ಚರಿಸುತ್ತಾನೆಂಬುದು ನಮಗೆ ತಿಳಿದ ಸಂಗತಿಯೇ ಆಗಿದೆ. ಆದ್ದರಿಂದ ಶಬ್ದವು ಏಕವೇ. ಅನೇಕವೆಂಬುದು ಔಪಾಧಿಕ.

ಇದನ್ನು ತಿಳಿದಿರಬೇಕು – ಶಬ್ದದ ಅನಿತ್ಯತಾವಾದದಲ್ಲಿ ಶಬ್ದವು ಅನೇಕ–ವೆಂಬುದು ಮುಖ್ಯಪಕ್ಷ. ಶಬ್ದನಿತ್ಯತಾವಾದದಲ್ಲಿ ಶಬ್ದವು ಏಕವೆಂಬುದು ಮುಖ್ಯಪಕ್ಷ.

ಅಮರಕೋಶದ ನಾನಾರ್ಥವರ್ಗದಲ್ಲಿ ಒಂದು ಶಬ್ದಕ್ಕೆ ಅನೇಕಾರ್ಥಗಳಿವೆ–ಯೆಂದು ತಿಳಿಸಿದ್ದಾರೆ. ಹರಿ ಶಬ್ದಕ್ಕೆ ವಿಷ್ಣು, ಇಂದ್ರ, ಸಿಂಹ, ಕಪಿ ಮುಂತಾದ ಅರ್ಥಗಳಿವೆ. ಇಂತಹ ಕಡೆ ಶಬ್ದನಿತ್ಯತಾವಾದದಲ್ಲಿಯೂ ಅರ್ಥವು ಬೇರೆಯಾದಾಗ ಶಬ್ದವೂ ಬೇರೆಯೆಂದು ತಿಳಿಯಬೇಕು 'ಅರ್ಥಭೇದಾತ್ ಶಬ್ದಭೇದಃ' ಎಂದು ಸಿದ್ಧಾಂತ. ಈಗ ಮೀಮಾಂಸಕಮತವನ್ನು ಹೇಳುತ್ತಾರೆ –

**ಪದಭೇದೇಽಪಿ ವರ್ಣಾನಾಮೇಕತ್ವಂ ನ ನಿವರ್ತತೇ ।**
**ವಾಕ್ಯೇಷು ಪದಮೇಕಂ ಚ ಭಿನ್ನೇಷ್ವಪ್ಯುಪಲಭ್ಯತೇ ॥ ೭೧ ॥**

ಪದಗಳು ಬೇರೆ ಬೇರೆಯಾಗಿದ್ದರೂ ಅವುಗಳಲ್ಲಿರುವ ಏಕರೂಪವಾದ ವರ್ಣವು ಒಂದೇ ಆಗಿರುತ್ತದೆ. ಅದರ ಏಕತ್ವವೇನೂ ಹೋಗುವುದಿಲ್ಲ. ವಾಕ್ಯಗಳು ಬೇರೆ ಬೇರೆಯಾದರೂ ಒಂದೇ ಪದವು ಅವುಗಳಲ್ಲಿ ಉಪಲಬ್ಧವಾಗಬಹುದು.

**ವಿವರಣೆ** – ಮೀಮಾಂಸಕರ ಮತದಲ್ಲಿ ವರ್ಣವು ನಿತ್ಯ, ಪದವು ನಿತ್ಯವಲ್ಲ. ಅರ್ಕ, ಅಶ್ವ, ಅರ್ಥ – ಎಂಬ ಶಬ್ದಗಳಲ್ಲಿ ಕಾಣಿಸುವ ಅಕಾರ ಒಂದೇ ಆಗಿದೆ. ಬೇರೆ ಬೇರೆ ಉಚ್ಚಾರಮಾಡುವುದು ಧ್ವನಿಯನ್ನು, ವರ್ಣವನ್ನಲ್ಲ. ಧ್ವನಿಯಿಂದ

ವರ್ಣವು ಅಭಿವ್ಯಕ್ತವಾಗುತ್ತದೆ. ವರ್ಣಗಳ ಸಮೂಹವೇ ಪದವೆನಿಸುತ್ತದೆ. ಪದಗಳ ಸಮೂಹ ವಾಕ್ಯ. ವರ್ಣಕ್ಕೆ ಅತಿರಿಕ್ತವಾದ ಪದವಾಗಲಿ ವಾಕ್ಯವಾಗಲಿ ಇಲ್ಲ. ಬೇರೆ ಬೇರೆ ವಾಕ್ಯಗಳಲ್ಲಿ ಕಾಣಿಸುವ ಏಕರೂಪವಾದ ವರ್ಣವು ಭಿನ್ನವಲ್ಲ. ಒಂದೇ ವರ್ಣವನ್ನು ಅನೇಕ ಸಲ ಅಭಿವ್ಯಕ್ತಗೊಳಿಸಲಾಗಿದೆ ಎಂದು ತಿಳಿಯಬೇಕು.

ವೈಯಾಕರಣರು ಅಭಿವ್ಯಂಜಕ ಧ್ವನಿಯನ್ನು ಒಪ್ಪಿರುವಂತೆ ಮೀಮಾಂಸಕರೂ ಒಪ್ಪುತ್ತಾರೆ. ಮೀಮಾಂಸಕರು ಅಖಂಡವಾದ ಶಬ್ದವನ್ನಾಗಲಿ ವಾಕ್ಯವನ್ನಾಗಲಿ ಅಂಗೀಕರಿಸುವುದಿಲ್ಲ. ವೈಯಾಕರಣರು ಅಂಗೀಕರಿಸುತ್ತಾರೆ – ಎಂಬುದಿಷ್ಟೇ ಭೇದ.

ಮೀಮಾಂಸಕರೂ ಶಬ್ದನಿತ್ಯತಾವಾದಿಗಳೇ. ಅವರ ಮತದಲ್ಲಿ ಶಬ್ದವೆಂದರೆ ಒಂದು ವರ್ಣ ಅಥವಾ ಒಂದು ಅಕ್ಷರ ಎಂದು ತಿಳಿಯಬೇಕು. ಅದು ವ್ಯಂಗ್ಯವಾ–ದ್ದರಿಂದ ಬುದ್ಧಿಗ್ರಾಹ್ಯ, ಶ್ರೋತ್ರಗ್ರಾಹ್ಯವಲ್ಲ. ಕಿವಿಗೆ ಕೇಳಿಸತಕ್ಕದ್ದು ಧ್ವನಿ, ವರ್ಣವಲ್ಲ.

**ನ ವರ್ಣವ್ಯತಿರೇಕೇಣ ಪದಮನ್ಯಚ್ಚ ವಿದ್ಯತೇ ।**
**ವಾಕ್ಯಂ ವರ್ಣಪದಾಭ್ಯಾಂ ಚ ವ್ಯತಿರಿಕ್ತಂ ನ ಕಿಂಚನ ॥ ೭೨ ॥**

ವರ್ಣಗಳಿಲ್ಲದೆ ಪ್ರತ್ಯೇಕವಾದ ಪದವೆಂಬುದಿಲ್ಲ. ವರ್ಣಪದಗಳನ್ನು ಬಿಟ್ಟು ಅತಿರಿಕ್ತವಾದ ವಾಕ್ಯವೆಂಬುದೂ ಇಲ್ಲ.

**ವಿವರಣೆ** – ವರ್ಣಸಮೂಹವೇ ಪದ, ಪದಸಮೂಹವೇ ವಾಕ್ಯ – ಎನ್ನುವುದು ಲೋಕವ್ಯವಹಾರವನ್ನನುಸರಿಸಿ ಹೇಳಿದ್ದು. ವಾಸ್ತವವಾಗಿ ಸಮೂಹ–ವೆಂಬುದೇ ಇಲ್ಲಿ ಸಂಭವಿಸುವುದಿಲ್ಲ. ಹೇಗೆಂದರೆ ಹುಲ್ಲಿನ ಹೊರೆ, ಕಟ್ಟಿಗೆಯ ಹೊರೆ ಎನ್ನುವಾಗ ಎಲ್ಲ ಹುಲ್ಲುಕಡ್ಡಿಗಳೂ ಕಟ್ಟಿಗೆಯ ತುಂಡುಗಳೂ ಏಕಕಾಲ–ದಲ್ಲಿರುತ್ತವೆ. ಆಗಲೇ ಸಮೂಹವೆಂದು ಹೇಳಲು ಬರುತ್ತದೆ. ಪ್ರಕೃತದಲ್ಲಾದರೋ ಸಮೂಹ–ವೆನ್ನುವುದು ಸರಿಯಲ್ಲ. ಏಕಕಾಲದಲ್ಲಿ ಅನೇಕ ವರ್ಣಗಳಿರುವುದಿಲ್ಲ. ಅಶ್ವಃ ಎನ್ನುವಾಗ ಒಂದೊಂದು ವರ್ಣವೂ ಅಭಿವ್ಯಕ್ತವಾಗಿ ಮರೆಯಾಗಿ ಬಿಡುತ್ತದೆ. ಅನಂತರ ಆ ವರ್ಣಗಳ ಸ್ಮರಣೆಯಿಂದ ಅರ್ಥ ಪ್ರತೀತಿಯಾಗುತ್ತದೆ. ಏಕಕಾಲದಲ್ಲಿ ಅನೇಕ ವರ್ಣಗಳಿಲ್ಲದ ಪ್ರಯುಕ್ತ ವರ್ಣಸಮೂಹವೆಂಬ ಪದವಿಲ್ಲ. ಹೀಗೆಯೇ ವರ್ಣಪದಗಳಿಗಿಂತ ಬೇರೆಯಾದ ವಾಕ್ಯವನ್ನು ತೋರಿಸಲಾಗುವುದಿಲ್ಲ. ವರ್ಣಾತಿ–ರಿಕ್ತವಾದ ಪದವಾಗಲಿ ವಾಕ್ಯವಾಗಲಿ ಇಲ್ಲ. ಇದು ಮೀಮಾಂಸಕರ ಮತ. ಈಗ ವ್ಯಾಕರಣ ಸಿದ್ಧಾಂತವನ್ನು ಹೇಳುತ್ತಾರೆ.

**ಪದೇ ನ ವರ್ಣಾ ವಿದ್ಯಂತೇ ವರ್ಣೇಷ್ವವಯವಾ ನ ಚ ।**
**ವಾಕ್ಯಾತ್ ಪದಾನಾಮತ್ಯಂತಂ ಪ್ರವಿವೇಕೋ ನ ಕಶ್ಚನ॥ ೭೩ ॥**

ಒಂದು ಪದದಲ್ಲಿ ವರ್ಣಗಳೂ ಇಲ್ಲ. ವರ್ಣಗಳಿಗೆ ಅವಯವಗಳೂ ಇಲ್ಲ. ಒಂದು ವಾಕ್ಯಕ್ಕಿಂತ ಪದಗಳಿಗೆ ವಿಭಾಗವೂ ಕೂಡ ಸಿದ್ಧಾಂತ ರೀತಿಯಲ್ಲಿಲ್ಲ.

**ವಿವರಣೆ** – ಒಂದು ಶಬ್ದವು ಅಖಂಡವಾದದ್ದು, ಅದರಲ್ಲಿ ಅ, ಇ – ಮುಂತಾದ ಅಕ್ಷರವು ಕಲ್ಪಿತವೇ ಹೊರತು ವಾಸ್ತವವಲ್ಲ. ಅಂತೆಯೇ ವಾಕ್ಯವೂ ಅಖಂಡವಾದದ್ದು. ಅಕ್ಷರ, ಸಂಧಿಕಾರ್ಯ, ಪ್ರಕೃತಿ, ಪ್ರತ್ಯಯ, ಲೋಪ, ಆಗಮ, ಆದೇಶ – ಮೊದಲಾದ ಪ್ರಕ್ರಿಯೆಗಳು ಶಬ್ದದ ಸಾಧುತ್ವವನ್ನು ತೋರಿಸುವುದಕ್ಕಾಗಿ ವ್ಯಾಕರಣಶಾಸ್ತ್ರವು ಕಲ್ಪಿಸಿಕೊಂಡಿರುವ ಉಪಾಯಗಳು. ಪೂರ್ಣವಾದ ಅರ್ಥವನ್ನು ಕೊಡತಕ್ಕದ್ದು ವಾಕ್ಯ. ಅದೇ ಸತ್ಯವಾದದ್ದು. ಅದರ ಸಿದ್ಧಿಗಾಗಿ ಪದಗಳೆಂಬ ವಿಭಾಗ–ವನ್ನು ನಿರ್ಮಿಸಿಕೊಳ್ಳಲಾಗಿದೆ. ಪದದ ಸಿದ್ಧಿಗಾಗಿ ವರ್ಣಗಳನ್ನು ವಿಂಗಡಿಸಿಕೊಳ್ಳ–ಲಾಗಿದೆ. ಆ, ಏ, ಓ ಮೊದಲಾದವುಗಳಲ್ಲಿ ಕ್ರಮವಾಗಿ ಅ+ಅ=ಆ, ಅ+ಇ=ಏ, ಅ+ಉ=ಓ ಎಂಬುದೂ ಸಹ ಕಲ್ಪನೆಯೇ. ಅಖಂಡವಾದ ಪದವೆನ್ನುವುದು ಅಖಂಡವಾದ ವಾಕ್ಯದ ಸ್ವರೂಪವನ್ನು ತಿಳಿಸುವುದಕ್ಕಾಗಿ. ವರ್ಣಸ್ಫೋಟ, ಪದಸ್ಫೋಟ – ಎನ್ನುವುದು ಒಂದೊಂದು ಮೆಟ್ಟಿಲು ಇದ್ದಂತೆ. ವಾಕ್ಯಸ್ಫೋಟವೇ ಸತ್ಯವೆಂದು ನಿಷ್ಕರ್ಷೆ. ಮೀಮಾಂಸಕರು ವರ್ಣಕ್ಕೆ ನಿತ್ಯತ್ವವನ್ನು ಹೇಳುವುದರಿಂದ ವರ್ಣಸ್ಫೋಟವನ್ನು ಅವರು ಅಂಗೀಕರಿಸಿದಂತೆಯೇ ಸರಿ.

**ಭಿನ್ನಂ ದರ್ಶನಮಾಶ್ರಿತ್ಯ ವ್ಯವಹಾರೋಽನುಗಮ್ಯತೇ ।**
**ತತ್ರ ಯನ್ಮುಖ್ಯಮೇಕೇಷಾಂ ತತ್ರಾನ್ಯೇಷಾಂ ವಿಪರ್ಯಯಃ ॥ ೭೪ ॥**

ವಿಭಿನ್ನವಾದ ದರ್ಶನವನ್ನನುಸರಿಸಿ ಶಾಸ್ತ್ರಕಾರರ ಭಾಷಾ ವ್ಯವಹಾರ–ವನ್ನು ಸರಿಪಡಿಸಿಕೊಳ್ಳಬೇಕಾಗುತ್ತದೆ. ಅವರ ವ್ಯವಹಾರದಲ್ಲಿ ಯಾವುದನ್ನು ಕೆಲವರು ಮುಖ್ಯವಾದ ಸಿದ್ಧಾಂತವೆಂದೆಣಿಸುತ್ತಾರೋ ಅದರಲ್ಲಿ ಇತರರಿಗೆ ವಿರುದ್ಧವಾದ ಬೇರೊಂದು ಅಭಿಪ್ರಾಯವಿರುತ್ತದೆ.

**ವಿವರಣೆ** – ಶಾಸ್ತ್ರಕಾರರು ಒಂದು ವಿಷಯವನ್ನು ವಿವರಿಸುವಾಗ ಸೌಲಭ್ಯಕ್ಕಾಗಿ ಲೋಕವ್ಯವಹಾರದಂತೆ ದೃಷ್ಟಾಂತಾದಿಗಳನ್ನು ಕೊಟ್ಟು ಬರೆಯುತ್ತಾರೆ. ಅಷ್ಟು ಮಾತ್ರದಿಂದ ಒಂದು ಸಿದ್ಧಾಂತವನ್ನೇ ರೂಪಿಸುವುದು ಯುಕ್ತವಲ್ಲ. ಮಹಾಭಾಷ್ಯದಲ್ಲೊಂದು ಕಡೆ 'ಏಕಶ್ಚ ಶಬ್ದೋ ಬಹ್ವರ್ಥಃ' ಒಂದೇ ಶಬ್ದವು ಬಹಳ ಅರ್ಥವುಳ್ಳದ್ದು – ಎಂದು ಹೇಳಿದೆ. ಇದರಿಂದ ಅರ್ಥಗಳು ಎಷ್ಟಿದ್ದರೂ ಶಬ್ದ ಒಂದೇ ಎಂದು ಹೇಳಬಹುದಾಗಿದೆ. ಇನ್ನೊಂದು ಕಡೆ 'ಗೃಹಸಮುದಾಯವೆಂದು

ಅರ್ಥವಿರುವ ಗ್ರಾಮಶಬ್ದವನ್ನು ಇಲ್ಲಿ ತೆಗೆದುಕೊಂಡಿಲ್ಲ. ಗ್ರಾಮಕ್ಕೆ ಸೇರುವ ಅರಣ್ಯಾದಿ ಎಲ್ಲೆಗಳಿರುವ ಗ್ರಾಮಶಬ್ದವನ್ನಿಲ್ಲಿ ತೆಗೆದುಕೊಳ್ಳಲಾಗಿದೆ' ಎಂದು ಬರೆಯಲಾಗಿದೆ. ಇದರಿಂದ 'ಅರ್ಥಭೇದಾತ್ ಶಬ್ದಭೇದಃ' ಎಂದೂ ಹೇಳಬಹುದು. ಆದ ಕಾರಣ ಸ್ಪಷ್ಟನೆಗಾಗಿ ತಾರ್ಕಿಕ ವ್ಯವಹಾರದಂತೆ ಶಾಸ್ತ್ರಕಾರರು ಬರೆಯುತ್ತಾರೆ. ಅದೇ ಸಿದ್ಧಾಂತವಾಗುವುದಿಲ್ಲ. ಆದರೆ ವಾದಿಗಳು ತಮಗೆ ಬೇಕಾದ್ದನ್ನು ಮುಖ್ಯವೆಂದು ಗ್ರಹಿಸಿ ಬೇಡವಾದ್ದನ್ನು ಗೌಣ, ಔಪಚಾರಿಕ ಎಂದು ಬಿಡುತ್ತಾರೆ. ಕಂಠೋಕ್ತವಾಗಿ ಯಾವುದನ್ನು ಶಾಸ್ತ್ರಕಾರರು ಸ್ಫುಟವಾಗಿ ತಿಳಿಸುತ್ತಾರೋ ಅದು ಸಿದ್ಧಾಂತವೆಂದು ಭಾವಿಸಬೇಕು. ಶಬ್ದವು ನಿತ್ಯವೇ ಅನಿತ್ಯವೇ, ಶಬ್ದವು ಏಕವೇ ಅನೇಕವೇ – ಎಂಬುದನ್ನು ಕುರಿತು ವಿವಾದಗಳು ಈ ಕಾರಣದಿಂದ ಹುಟ್ಟಿವೆ.

**ಸ್ಫೋಟಸ್ಯಾಭಿನ್ನಕಾಲಸ್ಯ ಧ್ವನಿಕಾಲಾನುಪಾತಿನಃ ।**
**ಗ್ರಹಣೋಪಾಧಿಭೇದೇನ ವೃತ್ತಿಭೇದಂ ಪ್ರಚಕ್ಷತೇ ॥ ೭೫ ॥**

ಸ್ಫೋಟವೆಂಬ ಶಬ್ದತತ್ತ್ವಕ್ಕೆ ಸ್ವತಃ ಯಾವ ಕಾಲಭೇದವೂ ಇಲ್ಲ. ವ್ಯಂಜಕವಾದ ಧ್ವನಿಯ ಕಾಲವನ್ನನುಸರಿಸಿ ಸ್ಫೋಟವು ವ್ಯಕ್ತವಾಗುತ್ತದೆ ಅಷ್ಟೆ. ಅದನ್ನು ಗ್ರಹಿಸುವ ಬುದ್ಧಿಯೆಂಬ ಉಪಾಧಿಯು ಭಿನ್ನವಾಗುವುದರಿಂದ ದ್ರುತ, ಮಧ್ಯಮ, ವಿಲಂಬಿತಗಳೆಂಬ ವೃತ್ತಿಭೇದವನ್ನು ಹೇಳುತ್ತಾರೆ.

**ವಿವರಣೆ** – ನಿತ್ಯವಾದ ಪದಾರ್ಥಕ್ಕೆ ಕಾಲ ಪರಿಚ್ಛೇದವಿರುವುದಿಲ್ಲ. ಅದು ಹಿಂದೆ ಇತ್ತು, ಈಗ ಮಾತ್ರ ಇದೆ, ಮುಂದೆ ಇರುವುದು – ಎಂದು ಕಾಲ ಸಂಬಂಧವನ್ನು ಅದಕ್ಕೆ ಹೇಳಲಾಗುವುದಿಲ್ಲ. ಶಬ್ದವು ನಿತ್ಯವಾದದ್ದು. ಆದ್ದರಿಂದ ಅದನ್ನು ವ್ಯಂಜಿಸುವ ಧ್ವನಿಯಲ್ಲಿರುವ ಕಾಲವು ಶಬ್ದದಲ್ಲಿದೆಯೋ ಎಂಬಂತೆ ತೋರುತ್ತದೆ. ಧ್ವನಿಯ ಉಚ್ಚಾರಣೆಯೆಂಬ ಕ್ರಿಯೆಯೇ ವೃತ್ತಿ. ಅದು ದ್ರುತ, ಮಧ್ಯಮ, ವಿಲಂಬಿತ ಎಂದು ಮೂರು ವಿಧ. ಶೀಘ್ರೋಚ್ಚಾರಣೆಯಾದರೆ ದ್ರುತವೃತ್ತಿ. ಮಧ್ಯಮ ಗತಿಯಲ್ಲಾದರೆ ಮಧ್ಯಮ ವೃತ್ತಿ. ನಿಧಾನವಾಗಿ ಉಚ್ಚರಿಸಿದರೆ ವಿಲಂಬಿತವೃತ್ತಿ. ಈ ವೃತ್ತಿಗಳು ಧ್ವನಿಗೆ ಸಂಬಂಧಿಸಿದವು. ಧ್ವನಿಯನ್ನು ಶೀಘ್ರವಾಗಿ ಉಚ್ಚರಿಸಿದರೆ ಬುದ್ಧಿಯು ಶೀಘ್ರವಾಗಿ ಶಬ್ದವನ್ನು ಗ್ರಹಿಸುತ್ತದೆ. ವಿಲಂಬಿತವಾಗಿ ಉಚ್ಚರಿಸಿದರೆ ತಡವಾಗಿ ಗ್ರಹಿಸುತ್ತದೆ. ಬುದ್ಧಿಯೆಂಬುದೇ ಸ್ಫೋಟಕ್ಕೆ ಉಪಾಧಿ. ಧ್ವನಿಯನ್ನು ವ್ಯಂಜಕವಾದ್ದರಿಂದ ಉಪಾಧಿ ಎನ್ನಬಹುದು. ದ್ರುತ, ಮಧ್ಯಮ, ವಿಲಂಬಿತ ಎಂಬ ವ್ಯಾಪಾರಗಳು ಈ ಉಪಾಧಿಗಳಲ್ಲಿವೆಯೇ ಹೊರತು ಶಬ್ದದಲ್ಲಿಲ್ಲ. ದಾಸವಾಳದ ಹೂವನ್ನು ಗಾಜಿನ ಕೆಳಗಿಟ್ಟರೆ ಗಾಜು ಕೆಂಪಾಗಿ ಕಾಣುತ್ತದೆ. ಇಲ್ಲಿ ದಾಸವಾಳದ ಹೂ ಉಪಾಧಿ. ಉಪಾಧಿಯ ಗುಣವು ಉಪಾಧೇಯವಾದ ಗಾಜಿನಲ್ಲಿ

ಕಾಣಿಸುತ್ತದೆ. ಅಂತೆಯೇ ಉಪಾಧಿಧರ್ಮಗಳಾದ ವೃತ್ತಿಗಳು ಉಪಾಧೇಯವಾದ ಶಬ್ದದಲ್ಲಿರುವಂತೆ ಭಾಸವಾಗುತ್ತದೆ.

**ಸ್ವಭಾವಭೇದಾನ್ನಿತ್ಯತ್ವೇ ಹ್ರಸ್ವದೀರ್ಘಪ್ಲುತಾದಿಷು ।**
**ಪ್ರಾಕೃತಸ್ಯ ಧ್ವನೇಃ ಕಾಲಃ ಶಬ್ದಸ್ಯೇತ್ಯುಪಚರ್ಯತೇ ॥ ೭೬ ॥**

ಶಬ್ದವು ನಿತ್ಯವಾಗಿರುವಾಗ ಅದಕ್ಕೆ ಕಾಲಪರಿಚ್ಛೇದ ಬರುವುದಿಲ್ಲ. ಹ್ರಸ್ವ ದೀರ್ಘಪ್ಲುತಾದಿಗಳಲ್ಲಿರುವ ಸ್ವರೂಪಭೇದದಿಂದ ಶಬ್ದಾಭಿವ್ಯಂಜಕವಾದ ಪ್ರಾಕೃತಧ್ವನಿಯ ಕಾಲವು ವಿಭಿನ್ನವಾಗಿರುತ್ತದೆ. ಆ ಪ್ರಾಕೃತಧ್ವನಿಯ ಕಾಲವು ಶಬ್ದದಲ್ಲಿ ಆರೋಪಿತವಾಗುತ್ತದೆ.

**ವಿವರಣೆ** – ಧ್ವನಿಯು ಪ್ರಾಕೃತ, ವೈಕೃತ ಎಂದು ಎರಡು ವಿಧ. ಒಂದೇ ಧ್ವನಿಯ ಪ್ರಥಮಭಾಗವನ್ನು ಪ್ರಾಕೃತವೆಂದೂ ದ್ವಿತೀಯಾಂಶವನ್ನು ವೈಕೃತವೆಂದೂ ಪರಿಚಯಕ್ಕಾಗಿ ಹೇಳಬಹುದು. ವಸ್ತುತಃ ಅವು ಭಿನ್ನಧ್ವನಿಗಳು. ಪ್ರಾಕೃತಧ್ವನಿಯಿಂದ ಸ್ಫೋಟವು ಆಭಿವ್ಯಕ್ತವಾಗುತ್ತದೆ. ಅನಂತರ ವೈಕೃತ ಧ್ವನಿಯು ತಾನಿರುವವರೆಗೆ ಸ್ಫೋಟವನ್ನು ಪ್ರಕಾಶಿಸುತ್ತಿರುವುದು. ಆ ವಿಷಯ ಮುಂದಿನ ಶ್ಲೋಕದಲ್ಲಿ ಬರುತ್ತದೆ. ಅ ಎಂಬ ಒಂದು ಮಾತ್ರಾಕಾಲದ ವರ್ಣಕ್ಕೆ ಹ್ವಸ್ವವೆಂದು ಹೆಸರು. ಆ ಎಂಬ ದೀರ್ಘಕ್ಕೆ ಎರಡು ಮಾತ್ರಾಕಾಲ. ಆ ಎಂಬ ಪ್ಲುತಕ್ಕೆ ಮೂರು ಮಾತ್ರಾಕಾಲ.

ಏಕಮಾತ್ರೋ ಭವೇದ್ ಹ್ರಸ್ವಃ ದ್ವಿಮಾತ್ರೋ ದೀರ್ಘ ಉಚ್ಯತೇ ।
ತ್ರಿಮಾತ್ರಸ್ತು ಪ್ಲುತೋ ಜ್ಞೇಯೋ ವ್ಯಂಜನಂ ತ್ವರ್ಧಮಾತ್ರಕಮ್ ॥

ಹ್ರಸ್ವವನ್ನುಚ್ಚರಿಸಲು ಬೇಕಾದ ಕಾಲಕ್ಕಿಂತ ಎರಡರಷ್ಟು ಕಾಲ ದೀರ್ಘಕ್ಕೂ ಮೂರರಷ್ಟು ಕಾಲ ಪ್ಲುತಕ್ಕೂ ಬೇಕು. ಈ ಕಾಲವು ಪ್ರಾಕೃತಧ್ವನಿಗೇ ಹೊರತು ಅಭಿವ್ಯಕ್ತವಾದ ವರ್ಣಕ್ಕಲ್ಲ. ಧ್ವನಿಯು ಬೆಳಕು ಇದ್ದಂತೆ. ವರ್ಣವು ಬೆಳಕಿನಲ್ಲಿ ಕಾಣುವ ಬಂಡೆ ಇದ್ದಂತೆ. ಬೆಳಕು ಹರಡುವುದಕ್ಕೆ ಕಾಲಬೇಕೇ ಹೊರತು ಬಂಡೆಗಲ್ಲ.

**ಶಬ್ದಸ್ಯೋರ್ಧ್ವಮಭಿವ್ಯಕ್ತೇರ್ವೃತ್ತಿಭೇದೇ ತು ವೈಕೃತಾಃ ।**
**ಧ್ವನಯಃ ಸಮುಪೋಹಂತೇ ಸ್ಫೋಟಾತ್ಮಾ ತೈರ್ನ ಭಿದ್ಯತೇ ॥ ೭೭ ॥**

ಶಬ್ದವು ಅಭಿವ್ಯಕ್ತವಾದ ಮೇಲೆ ದ್ರುತ, ಮಧ್ಯಮ, ವಿಲಂಬಿತಗಳೆಂಬ ವೃತ್ತಿಭೇದವನ್ನುಂಟು ಮಾಡಲು ವೈಕೃತಧ್ವನಿಗಳು ಕಾರಣವಾಗುತ್ತವೆ. ಈ ಧ್ವನಿಗಳಿಂದ ಅಥವಾ ವೃತ್ತಿಗಳಿಂದ ಸ್ಫೋಟವೆಂಬ ಆತ್ಮದಲ್ಲಿ ಯಾವ ವ್ಯತ್ಯಾಸವೂ ಆಗುವುದಿಲ್ಲ.

**ವಿವರಣೆ** – ಶಬ್ದವೆಂದರೆ ಅಕ್ಷರ ಅಥವಾ ಒಂದು ಪದ. ಇದು ಪ್ರಾಕೃತ ಧ್ವನಿಯಿಂದ ಅಭಿವ್ಯಕ್ತವಾದ ಮೇಲೆ ಸಹ ಅಲ್ಪ ಪ್ರಮಾಣದಲ್ಲಾದರೂ ಇನ್ನೊಂದು ನಾದ ಇದ್ದೇ ಇರುತ್ತದೆ. ಇದೇ ವೈಕೃತಧ್ವನಿ. ಬೇಗಬೇಗನೆ ಶಬ್ದವನ್ನುಚ್ಚರಿಸಿದಾಗ ಈ ವೈಕೃತಧ್ವನಿಯು ಬೇಗನೆ ಮುಗಿದು ಹೋಗುತ್ತದೆ. ತ್ವರೆಯಿಂದ ಉಚ್ಚರಿಸಿದಾಗ ಉಚ್ಚಾರಣವ್ಯಾಪಾರಕ್ಕೆ ದ್ರುತವೃತ್ತಿಯೆಂದು ಹೆಸರು. ಅದು ಮಧ್ಯಮ ರೀತಿಯಲ್ಲಿ–ದ್ದಾಗ ಮಧ್ಯಮವೃತ್ತಿಯೆಂದೂ ನಿಧಾನವಾದಾಗ ವಿಲಂಬಿತ ವೃತ್ತಿಯೆಂದೂ ಹೆಸರು. ಈ ವೃತ್ತಿಗಳು ವೈಕೃತಧ್ವನಿಗೆ ಸಂಬಂಧಿಸಿದವು. ಇವುಗಳಿಂದ ಸ್ಫೋಟದ ಮೇಲೆ ಯಾವ ಪರಿಣಾಮವೂ ಆಗುವುದಿಲ್ಲ. ಹ್ರಸ್ವದೀರ್ಘಪ್ಲುತಗಳು ಪ್ರಾಕೃತಧ್ವನಿಯಿಂದ ಹುಟ್ಟಿದರೂ ದೀರ್ಘ,ಪ್ಲುತಗಳನ್ನು ಉಚ್ಚರಿಸಿದಾಗ ವೈಕೃತಧ್ವನಿಯ ಅಸ್ತಿತ್ವವು ಸ್ಪಷ್ಟವಾಗಿ ನಮಗೆ ಗೊತ್ತಾಗುತ್ತದೆ. ದ್ರುತಾದಿ ವೃತ್ತಿಗಳನ್ನು ಯಾವಾಗ ಅವಲಂಬಿಸಬೇಕೆಂಬುದನ್ನು ಈ ಶ್ಲೋಕ ಹೇಳುತ್ತದೆ.

ಅಭ್ಯಾಸಾರ್ಥೇ ದ್ರುತಾ ವೃತ್ತಿಃ ಪ್ರಯೋಗಾರ್ಥೇ ತು ಮಧ್ಯಮಾ ।
ಶಿಷ್ಯಾಣಾಮುಪದೇಶಾರ್ಥೇ ವೃತ್ತಿರಿಷ್ಟಾ ವಿಲಂಬಿತಾ ॥

ತಾನು ವ್ಯಾಸಂಗ ಮಾಡುವಾಗ ದ್ರುತವೃತ್ತಿ ಉತ್ತಮ. ಜನರೊಡನೆ ಮಾತಾಡುವಾಗ ಮಧ್ಯಮವೃತ್ತಿಯೂ ಶಿಷ್ಯರಿಗೆ ಪಾಠ ಹೇಳುವಾಗ ವಿಲಂಬಿತ ವೃತ್ತಿಯೂ ಉತ್ತಮವೆಂದು ತಾತ್ಪರ್ಯ.

ಶಬ್ದವು ಧ್ವನಿಯಿಂದ ಅಭಿವ್ಯಕ್ತವಾಗುವುದೆಂದು ಹೇಳಿದೆವಷ್ಟೆ. ಅಭಿವ್ಯಕ್ತಿಯ ವಿಧಾನದಲ್ಲಿ ಮೂರು ಮತಗಳುಂಟು –

**ಇಂದ್ರಿಯಸ್ಯೈವ ಸಂಸ್ಕಾರಃ ಶಬ್ದಸ್ಯೈವೋಭಯಸ್ಯ ವಾ ।**
**ಕ್ರಿಯತೇ ಧ್ವನಿಭಿರ್ವಾದಾಸ್ತ್ರಯೋಽಭಿವ್ಯಕ್ತಿವಾದಿನಾಮ್॥ ೭೮ ॥**

ಶಬ್ದವು ಅಭಿವ್ಯಕ್ತವಾಗುತ್ತದೆಯೆಂಬ ಅಭಿವ್ಯಕ್ತಿವಾದಿಗಳಲ್ಲಿ ಮೂರು ಬಗೆಯ ವಾದಗಳಿವೆ. ಧ್ವನಿಗಳಿಂದ ಶ್ರೋತ್ರೇಂದ್ರಿಯಕ್ಕೆ ಮಾತ್ರ ಒಂದು ಸಂಸ್ಕಾರ ಉಂಟಾಗುತ್ತದೆಯೆಂಬುದು ಮೊದಲನೆಯ ವಾದ. ಶಬ್ದಕ್ಕೆ ಮಾತ್ರ ಸಂಸ್ಕಾರವಾಗುತ್ತದೆಯೆಂಬುದು ಎರಡನೆಯ ವಾದ. ಶಬ್ದ, ಶ್ರೋತ್ರೇಂದ್ರಿಯ– ಈ ಉಭಯಕ್ಕೂ ಸಂಸ್ಕಾರವಾಗುತ್ತದೆಯೆಂಬುದು ಮೂರನೆಯ ವಾದ.

**ವಿವರಣೆ** – ಜ್ಞಾನೇಂದ್ರಿಯಕ್ಕೆ ವಿಷಯದ ಸಂಪರ್ಕವಾದಾಗ ಪದಾರ್ಥಜ್ಞಾನ–ವಾಗುತ್ತದೆ. ಆಗದಿದ್ದರೆ ಇಂದ್ರಿಯದಲ್ಲಿಯೋ ವಿಷಯದಲ್ಲಿಯೋ ದೋಷವಿದೆ–ಯೆಂದು ಸಿದ್ಧವಾಗುತ್ತದೆ. ಕಣ್ಣಿನಲ್ಲಿ ದೋಷವಿದ್ದರೆ ಹತ್ತಿರದ ಪದಾರ್ಥವೂ

ಕಾಣಿಸುವುದಿಲ್ಲ. ಇದು ಇಂದ್ರಿಯದ ದೋಷ. ರೇಡಿಯೋದ ಶಬ್ದ ಮೆಲ್ಲಗಿದ್ದರೆ ಕೇಳಿಸುವುದಿಲ್ಲ. ದೊಡ್ಡದು ಮಾಡಿದರೆ ಕೇಳಿಸುತ್ತದೆ. ಇದು ವಿಷಯ ದೋಷ. ಕಣ್ಣಿಗೂ ಒಂದು ಗಡಿಗೆಗೂ ನಡುವೆ ಪರದೆ ಇದ್ದರೆ ಗಡಿಗೆ ಕಾಣಿಸುವುದಿಲ್ಲ. ಇದು ಉಭಯ ದೋಷ. ಈ ದೋಷವು ಹೋದಾಗ ವಸ್ತುಜ್ಞಾನವಾಗುತ್ತದೆ. ದೋಷವನ್ನು ಹೋಗಲಾಡಿಸುವುದೇ ದೋಷಾಪನಯನ. ಗಂಧವನ್ನು ತೀಡಿದಾಗ ಸುವಾಸನೆ ಮೂಗಿಗೆ ಗೊತ್ತಾಗುತ್ತದೆ. ಇದು ವಿಷಯದಲ್ಲಿ ಗುಣಾಧಾನ. ಸಂಸ್ಕಾರವೆಂದರೆ ದೋಷಾಪನಯನ ಅಥವಾ ಗುಣಾಧಾನ.

ನಿತ್ಯವಾದ ಶಬ್ದವು ಸದಾ ಇದ್ದ ಮೇಲೆ ಅದು ತಾನಾಗಿಯೇ ನಮಗೇಕೆ ಗೋಚರಿಸುವುದಿಲ್ಲ? ಎಂಬ ಪ್ರಶ್ನೆಗೆ ಉತ್ತರವಾಗಿ ಈ ಶ್ಲೋಕ ಹೊರಟಿದೆ –

**ಇಂದ್ರಿಯಸ್ಯೈವ ಸಂಸ್ಕಾರಃ ಸಮಾಧಾನಾಂಜನಾದಿಭಿಃ ।**
**ವಿಷಯಸ್ಯ ತು ಸಂಸ್ಕಾರಸ್ತದ್ಗಂಧಪ್ರತಿಪತ್ತಯೇ ॥ ೭೯ ॥**

ಮನಸ್ಸಿನ ಏಕಾಗ್ರತೆ, ಅಂಜನವೆಂಬ ನೇತ್ರೌಷಧದ ಲೇಪ ಮುಂತಾ–ದವುಗಳಿಂದ ಇಂದ್ರಿಯಕ್ಕೆ ಮಾತ್ರ ಸಂಸ್ಕಾರವಾಗುತ್ತದೆ. ಗಂಧದ್ರವ್ಯದಲ್ಲಿರುವ ವಾಸನೆಯನ್ನು ತಿಳಿಯುವುದಕ್ಕಾಗಿ ವಿಷಯವಾದ ಗಂಧದ್ರವ್ಯವನ್ನೇ ಸಂಸ್ಕರಿಸಬೇಕಾಗುತ್ತದೆ.

**ವಿವರಣೆ** – ಹಿಂದೆ ಹೇಳಿದ ಮೂರು ವಾದಗಳಿಗೂ ದೃಷ್ಟಾಂತಗಳಿವೆ. ಮನುಷ್ಯನು ಅನ್ಯಮನಸ್ಕನಾಗಿದ್ದಾಗ ಎದುರಿಗಿದ್ದ ವಸ್ತುವೂ ಕಾಣುವುದಿಲ್ಲ. ಹತ್ತಿರದಲ್ಲಿ ಹೇಳಿದ ಶಬ್ದವೂ ಕೇಳಿಸುವುದಿಲ್ಲ. ಇಲ್ಲಿ ಮನಸ್ಸೆಂಬ ಇಂದ್ರಿಯಕ್ಕೆ ಏಕಾಗ್ರತೆಯೆಂಬ ಸಂಸ್ಕಾರವಾಗಬೇಕು. ಮನಸ್ಸನ್ನು ವಿಷಯದ ಕಡೆಗೆ ಎಳೆದು ನಿಲ್ಲಿಸುವುದು ಏಕಾಗ್ರತೆ. ಕಣ್ಣಿನಲ್ಲಿ ದೋಷವಿದ್ದರೆ ಔಷಧವನ್ನು ಲೇಪಿಸಬೇಕು. ಪರೆ ಇದ್ದರೆ ಶಸ್ತ್ರಚಿಕಿತ್ಸೆ ಮಾಡಬೇಕು. ಇದೆಲ್ಲವೂ ಇಂದ್ರಿಯದ ಸಂಸ್ಕಾರ. ಕಸ್ತೂರಿಯನ್ನು ತೀಡಿದರೆ ಮೂಗಿಗೆ ಸುವಾಸನೆ ಗೊತ್ತಾಗುತ್ತದೆ. ನೆಲಕ್ಕೆ ನೀರು ಚಿಮುಕಿಸಿದರೆ ನೆಲದ ವಾಸನೆ ತಿಳಿಯುತ್ತದೆ. ಊದಿನ ಕಡ್ಡಿಗೆ ಬೆಂಕಿಯನ್ನು ತಗಲಿಸಿದರೆ ಸುಗಂಧ ತಿಳಿಯುತ್ತದೆ. ಇದೆಲ್ಲವೂ ವಿಷಯ ಸಂಸ್ಕಾರ.

**ಚಕ್ಷುಷಃ ಪ್ರಾಪ್ಯಕಾರಿತ್ವೇ ತೇಜಸಾ ತು ದ್ವಯೋರಪಿ ।**
**ವಿಷಯೇಂದ್ರಿಯಯೋರಿಷ್ಟಃ ಸಂಸ್ಕಾರಃ ಸ ಕ್ರಮೋ ಧ್ವನೇಃ ॥ ೮೦ ॥**

ಚಕ್ಷುರಿಂದ್ರಿಯವು ಪ್ರಾಪ್ಯಕಾರಿಯೆಂಬ ಪಕ್ಷದಲ್ಲಿ ಇಂದ್ರಿಯ ವಿಷಯ–ಗಳೆರಡಕ್ಕೂ ತೇಜಸ್ಸಿನಿಂದ(ಬೆಳಕಿನಿಂದ) ಸಂಸ್ಕಾರವಾಗುತ್ತದೆಯೆಂಬುದು

ಸಂಮತ. ಈ ರೀತಿಯಾದ ಮೂರು ಬಗೆಯ ಸಂಸ್ಕಾರ ಕ್ರಮವು ಶಬ್ದಕ್ಕೆ ಹೇಗೋ ಹಾಗೆಯೇ ವ್ಯಂಜಕವಾದ ಧ್ವನಿಗೂ ಇರುತ್ತದೆ.

**ವಿವರಣೆ** – ಇಂದ್ರಿಯಗಳಿಂದ ಪದಾರ್ಥದ ಪ್ರತ್ಯಕ್ಷಜ್ಞಾನವಾಗಬೇಕಾದರೆ ಇಂದ್ರಿಯಕ್ಕೂ ವಿಷಯಕ್ಕೂ ಸಂಬಂಧವಾಗಬೇಕು. ಈ ಸಂಬಂಧವನ್ನು ಇಂದ್ರಿಯಾರ್ಥ ಸಂನಿಕರ್ಷವೆನ್ನುತ್ತಾರೆ. ರಸನೇಂದ್ರಿಯಕ್ಕೆ (ನಾಲಿಗೆಗೆ) ವಸ್ತುವಿನ ಸಂಬಂಧವಾದಾಗ ಅದರ ರಸ (ರುಚಿ) ತಿಳಿಯುತ್ತದೆ. ತ್ವಗಿಂದ್ರಿಯಕ್ಕೆ (ಚರ್ಮಕ್ಕೆ) ವಸ್ತುವಿನ ಸಂಯೋಗವಾದಾಗ ಸ್ಪರ್ಶಜ್ಞಾನವಾಗುತ್ತದೆ. ಘ್ರಾಣೇಂದ್ರಿಯಕ್ಕೆ (ಮೂಗಿಗೆ) ಹೂವಿನ ಸೂಕ್ಷ್ಮಕಣವು ಬಂದು ತಗುಲಿದಾಗ ಗಂಧಜ್ಞಾನವಾಗುತ್ತದೆ. ಶಬ್ದವು ತರಂಗರೂಪವಾಗಿ ಬಂದು ಶ್ರೋತ್ರೇಂದ್ರಿಯಕ್ಕೆ ಮುಟ್ಟಿದಾಗ ಶಬ್ದ ಜ್ಞಾನವಾಗುತ್ತದೆ. ಆದರೆ ಚಕ್ಷುರಿಂದ್ರಿಯದ ಪರಿಸ್ಥಿತಿ ಏನು? ದೂರದಲ್ಲಿರುವ ಮರ, ಬೆಟ್ಟಗಳು ಕಣ್ಣಿಗೆ ಕಾಣಿಸುತ್ತವೆ. ಇಲ್ಲಿ ಇಂದ್ರಿಯಾರ್ಥ ಸಂನಿಕರ್ಷ ಹೇಗಾಗುತ್ತದೆ? ಎಂಬ ಪ್ರಶ್ನೆ ಇದು. ಇದಕ್ಕೆ ಉತ್ತರವಾಗಿ ಚಕ್ಷುರಿಂದ್ರಿಯವು ಪ್ರಾಪ್ಯಕಾರಿ, ಅಪ್ರಾಪ್ಯಕಾರಿ ಎಂಬ ಎರಡು ಪಕ್ಷಗಳಿವೆ. ಪ್ರಾಪ್ಯ–ವಿಷಯದೇಶವನ್ನು ಸೇರಿ, ಕಾರಿ–ಜ್ಞಾನವೆಂಬ ಕಾರ್ಯವನ್ನು ಸಾಧಿಸತಕ್ಕದ್ದು ಪ್ರಾಪ್ಯಕಾರಿ. ಚಕ್ಷುರಿಂದ್ರಿಯವೇ ಮರ, ಬೆಟ್ಟ ಮುಂತಾದ ವಿಷಯದ ಬಳಿಗೆ ಹೋಗಿ ಅದರ ಸಂಬಂಧವನ್ನು ಪಡೆಯುತ್ತದೆಯೆಂದರ್ಥ. ಇಂದ್ರಿಯವೆಂದರೆ ಕಣ್ಣು, ಕಿವಿ, ಮೂಗು ಮುಂತಾದ ಸ್ಥೂಲ ವಸ್ತುವಲ್ಲ. ಅವು ಇಂದ್ರಿಯಕ್ಕೆ ಆಶ್ರಯಗಳು. ಅವುಗಳಲ್ಲಿ ಅತಿಸೂಕ್ಷ್ಮವಾದ ಇಂದ್ರಿಯಗಳಿರುತ್ತವೆ. ಇಂದ್ರಿಯವು ಕಣ್ಣಿಗೆ ಕಾಣಿಸತಕ್ಕದ್ದಲ್ಲ ಎಂಬುದು ಶಾಸ್ತ್ರಕಾರರ ಸಿದ್ಧಾಂತ. ಚಕ್ಷುರಿಂದ್ರಿಯವು ತೈಜಸ. ಅಗ್ನಿತತ್ತ್ವದಿಂದ ಅದು ನಿರ್ಮಿತವಾಗಿದೆ. ಸೂಕ್ಷ್ಮವಾದ ತೈಜಸ ಕಿರಣಗಳು ಬೆಳಕಿನಂತೆ ಶೀಘ್ರವಾಗಿ ಚಲಿಸುತ್ತವೆ. ಅವು ಬೆಳಕಿನ ವೇಗದಲ್ಲಿ ಮರ, ಬೆಟ್ಟ ಮುಂತಾದ ವಿಷಯಗಳ ಕಡೆ ಧಾವಿಸಿ ಹರಡಿಕೊಂಡಾಗ ಇಂದ್ರಿಯಕ್ಕೂ ವಿಷಯಕ್ಕೂ ಸಂನಿಕರ್ಷವಾಗುತ್ತದೆ. ಆಗ ವಸ್ತುವಿನ ರೂಪಜ್ಞಾನವಾಗುತ್ತದೆ. ಇದು ಪ್ರಾಪ್ಯಕಾರಿತ್ವ ಪಕ್ಷ. ಉಳಿದ ಯಾವ ಇಂದ್ರಿಯಗಳೂ ಪ್ರಾಪ್ಯಕಾರಿಗಳಲ್ಲ. ಹಾಗೆಯೇ ಚಕ್ಷುರಿಂದ್ರಿಯವೂ ಪ್ರಾಪ್ಯಕಾರಿಯಲ್ಲ. ಸ್ವಚ್ಛವಾದ ಗಾಜಿನಲ್ಲಿ ಅಥವಾ ನೀರಿನಲ್ಲಿ ವಸ್ತುಗಳು ಪ್ರತಿಬಿಂಬಿಸುವಂತೆ, ಸ್ವಚ್ಛವಾದ ಕಣ್ಣಿನ ಗೋಳಕದಲ್ಲಿ ಮರ, ಬೆಟ್ಟ ಮೊದಲಾದವು ಪ್ರತಿಬಿಂಬಿಸುತ್ತವೆ. ಬಿಂಬ ಪ್ರತಿಬಿಂಬಗಳಿಗೆ ಭೇದವಿಲ್ಲ. ಕಣ್ಣಿನ ಗೋಳಕದಲ್ಲಿ ವಸ್ತುವು ಪ್ರತಿಬಿಂಬಿಸಿದಾಗ ಚಕ್ಷುರಿಂದ್ರಿಯಕ್ಕೂ ವಿಷಯಕ್ಕೂ ಸಂನಿಕರ್ಷವಾಗುತ್ತದೆ. ಈ ಇಂದ್ರಿಯವೂ ಉಳಿದ ಇಂದ್ರಿಯಗಳಂತೆ ಅಪ್ರಾಪ್ಯಕಾರಿ ಎಂದು ಇನ್ನೊಂದು ಪಕ್ಷ.

ಇವುಗಳಲ್ಲಿ ಮೊದಲನೆಯ ಪ್ರಾಪ್ಯಕಾರಿತ್ವ ಪಕ್ಷದಲ್ಲಿ ಬೆಳಕು ಚಕ್ಷುರಿಂದ್ರಿಯ–

ವನ್ನೂ ವಿಷಯವನ್ನೂ ಸಂಸ್ಕರಿಸುತ್ತದೆ. ಆದ್ದರಿಂದ ಚಕ್ಷುರಿಂದ್ರಿಯವು ತನ್ನ ಸೂಕ್ಷ್ಮಕಿರಣಗಳನ್ನು ಹೊರಗೆ ಕಳಿಸಲು ಸಾಧ್ಯವಾಗುತ್ತದೆ. ಈ ಸೂಕ್ಷ್ಮಕಿರಣಗಳು ವಿಷಯದ ವಿಸ್ತಾರವನ್ನು ವ್ಯಾಪಿಸಬೇಕಾದರೆ ಬೆಳಕು ವಿಷಯವನ್ನು ಪೂರ್ತಿಯಾಗಿ ವ್ಯಾಪಿಸಬೇಕು. ಹೀಗೆ ವ್ಯಾಪಿಸುವುದೇ ವಿಷಯದ ಸಂಸ್ಕಾರ.

ಧ್ವನಿಯಿಂದ ವ್ಯಂಗ್ಯವಾದ ಶಬ್ದಸ್ಫೋಟದ ವಿಷಯದಲ್ಲಿ ಈಗ ಹೇಳಿದ ಮೂರು ಬಗೆಯ ಸಂಸ್ಕಾರ ಕ್ರಮವು ವ್ಯಂಜಕವಾದ ಧ್ವನಿಗೂ ಅನ್ವಯಿಸುತ್ತದೆ.

**ಸ್ಫೋಟರೂಪಾವಿಭಾಗೇನ ಧ್ವನೇರ್ಗ್ರಹಣಮಿಷ್ಯತೇ ।**
**ಕೈಶ್ಚಿದ್ ಧ್ವನಿರಸಂವೇದ್ಯಃ ಸ್ವತಂತ್ರೋಽನ್ಯೈಃ ಪ್ರಕಲ್ಪಿತಃ॥ ೮೧ ॥**

ಸ್ಫೋಟದಿಂದ ವಿಭಾಗ ಹೊಂದದೆ ಸ್ಫೋಟದೊಡನೆ ಸಂಮಿಶ್ರ-ವಾಗಿಯೇ ಧ್ವನಿಯು ಗೃಹೀತವಾಗುತ್ತದೆಯೆಂಬುದು ಕೆಲವರಿಗೆ ಸಂಮತ. ಧ್ವನಿಯು ಕೇಳಿಸವುದೇ ಇಲ್ಲ, ಧ್ವನಿಯಿಂದ ರೂಷಿತವಾದ ಸ್ಫೋಟವು ಮಾತ್ರ ತಿಳಿಯುತ್ತದೆಯೆಂದು ಇನ್ನು ಕೆಲವರ ಮತ. ಧ್ವನಿಯು ಸ್ಫೋಟ ಸಂಮಿಶ್ರ-ವಾಗದೆ ಸ್ವತಂತ್ರವಾಗಿ ಗೋಚರಿಸುತ್ತದೆಯೆಂದು ಅನ್ಯರು ನಿರೂಪಿಸಿದ್ದಾರೆ.

**ವಿವರಣೆ** – ಧ್ವನಿಗ್ರಹಣದ ವಿಷಯವಾಗಿ ಮೂರು ಮತಗಳಿವೆ. ಬೆಳಕು ಬಿದ್ದೊಡನೆ ಕತ್ತಲಲ್ಲಿರುವ ಕಂಬ ಕಾಣಿಸುತ್ತದೆ. ಬೆಳಕು ವ್ಯಂಜಕ; ಕಂಬ ವ್ಯಂಗ್ಯ. ಇವು ಬೇರೆ ಬೇರೆಯೆಂಬುದೇನೋ ತಿಳಿಯುತ್ತದೆ. ಆದರೆ ಬೆಳಕು ಪೃಥಕ್ ಆಗಿ ಗೋಚರಿಸುವುದಿಲ್ಲ. ಕಂಬದೊಡನೆ ಸೇರಿಕೊಂಡೇ ಗೋಚರಿಸುತ್ತದೆ. ಹಾಗೆ ಧ್ವನಿಯು ಸ್ಫೋಟದೊಡನೆ ಸಂಮಿಶ್ರವಾಗಿಯೇ ಗೋಚರಿಸುತ್ತದೆ ಎಂದು ಮೊದಲನೆಯ ಪಕ್ಷ. ಬಣ್ಣ ಹಚ್ಚಿದ ಗಾಜನ್ನು ನೋಡಿದಾಗ ಬಣ್ಣ, ಗಾಜು ಎರಡೂ ಒಟ್ಟಿಗೆ ಕಾಣಿಸುವಂತೆ ಧ್ವನಿಯೂ ಸ್ಫೋಟವೂ ಒಟ್ಟಿಗೆ ಗೋಚರಿಸುತ್ತವೆಯೆಂದು ಅಭಿಪ್ರಾಯ.

ಎರಡನೆಯ ಪಕ್ಷದಲ್ಲಿ ಸ್ಫೋಟವೊಂದೇ ಗೋಚರಿಸುತ್ತದೆ. ಧ್ವನಿಯು ಕೇಳಿಸುವುದಿಲ್ಲ. ನಮಗೆ ಕೇಳಿಸತಕ್ಕದ್ದು ಸ್ಫೋಟವೇ. ಅದು ವ್ಯಂಗ್ಯವಾದ್ದರಿಂದ ವ್ಯಂಜಕವಾದ ಧ್ವನಿ ಇದೆಯೆಂದು ಅನುಮಾನ ಪ್ರಮಾಣದಿಂದ ಗೊತ್ತಾಗುತ್ತದೆ.

ಮೂರನೆಯ ಪಕ್ಷದಲ್ಲಿ ಧ್ವನಿ ಸ್ಫೋಟಗಳೆರಡೂ ಬೇರೆ ಬೇರೆ ಗೋಚರಿಸುತ್ತದೆ. ಧ್ವನಿಯು ಶ್ರೋತ್ರೇಂದ್ರಿಯದಿಂದ ತಿಳಿಯುತ್ತದೆ. ಅನಂತರ ವ್ಯಂಗ್ಯವಾದ ಸ್ಫೋಟವು ಬುದ್ಧಿಗೆ ಗೋಚರಿಸುತ್ತದೆ. ಶ್ರೋತ್ರಗ್ರಾಹ್ಯವಾದ ಧ್ವನಿಯ ಮೂಲಕ ಸ್ಫೋಟವು

ಗೃಹೀತವಾಗುವುದರಿಂದ, ಪರಂಪರಾ ಸಂಬಂಧದಿಂದ ಸ್ಫೋಟವೂ ಶ್ರೋತ್ರಗ್ರಾಹ್ಯ–ವೆಂದು ಕೆಲವು ಕಡೆ ಹೇಳುವುದುಂಟು. ಭೇರೀ ಮೃದಂಗಗಳನ್ನು ಬಡಿದಾಗ, ಮೃಗ ಪಕ್ಷಿಗಳು ಕೂಗಿದಾಗ ಧ್ವನಿಯು ಮಾತ್ರ ಕೇಳಿಸುತ್ತದೆ. ಅದರಿಂದ ಯಾವ ಸ್ಫೋಟವೂ ವ್ಯಕ್ತವಾಗುವುದಿಲ್ಲ. ಮನುಷ್ಯರು ವರ್ಣಾತ್ಮಕವಾದ ಶಬ್ದವನ್ನುಚ್ಚರಿಸಿ–ದಾಗ ಧ್ವನಿ, ಸ್ಫೋಟಗಳೆರಡೂ ಗೊತ್ತಾಗುತ್ತವೆ. ಈ ಮೂರನೆಯ ಪಕ್ಷವೇ ವೈಯಾಕರಣರದು.

ಅಗ್ನಿಪದದಿಂದ ಅಖಂಡವಾದ ಅಗ್ನಿಶಬ್ದವೆಂಬ ಸ್ಫೋಟವು ಅಭಿವ್ಯಕ್ತವಾಗಿ ಅರ್ಥಪ್ರತೀತಿಯಾಗುತ್ತದೆ ಎಂದು ಹೇಳಿದ್ದಾಯಿತು. ಇದರ ಮೇಲೆ ಒಂದು ಶಂಕೆ ಏಳುತ್ತದೆ. ಸ್ಫೋಟದ ಅಭಿವ್ಯಕ್ತಿ ಯಾವಾಗ? ಅಗ್ನಿಪದದಲ್ಲಿರುವ ಮೊದಲನೆಯ ಅಕಾರವನ್ನುಚ್ಚರಿಸಿದ ಕೂಡಲೆ ಎಂದರೆ ಆ ಪದದ ಉಳಿದ ಅಕ್ಷರಗಳನ್ನು ಉಚ್ಚರಿಸುವುದು ವ್ಯರ್ಥವಾಗುತ್ತದೆ. ಕಡೆಯದಾದ ಇ ಕಾರವನ್ನುಚ್ಚರಿಸಿದ ಮೇಲೆ ಎಂದರೆ ಅದರ ಹಿಂದಿನ ಅಕ್ಷರಗಳು ವ್ಯರ್ಥವಾಗುತ್ತವೆ. ಗಿರಿ ಎಂದು ಹೇಳಿದಾಗ ಅಗ್ನಿಸ್ಫೋಟದ ಅಭಿವ್ಯಕ್ತಿಯಾಗಿ ಬೆಂಕಿಯೆಂಬ ಅರ್ಥ ತೋರಬೇಕಾದೀತು. ಅಕ್ಷರ ಸಮುದಾಯವನ್ನುಚ್ಚರಿಸಿದ ಕೂಡಲೆ ಎಂದರೆ ಸಮುದಾಯ ಎಲ್ಲಿದೆ? ಒಂದೊಂದು ಅಕ್ಷರವೂ ಹುಟ್ಟಿ ಮರು ಕ್ಷಣದಲ್ಲಿ ನಷ್ಟವಾಗುವುದರಿಂದ ಅಕ್ಷರ ಸಮುದಾಯವೇ ಇರುವುದಿಲ್ಲ. ಸಮುದಾಯವೆನ್ನುವ ಎಲ್ಲ ಅಕ್ಷರಗಳನ್ನು ಒಟ್ಟಿಗೆ ಉಚ್ಚರಿಸಲು ಸಾಧ್ಯವೂ ಇಲ್ಲ. ಆದ್ದರಿಂದ ಸ್ಫೋಟವು ಅಭಿವ್ಯಕ್ತಿಯಾಗುವುದು ಹೇಗೆ ಎಂಬ ಶಂಕೆಗೆ ಉತ್ತರ ಹೇಳುತ್ತಾರೆ –

**ಯಥಾನುವಾಕಃ ಶ್ಲೋಕೋ ವಾ ಸೋಢತ್ವಮುಪಗಚ್ಛತಿ ।**
**ಆವೃತ್ತ್ಯಾ ನ ತು ಸ ಗ್ರಂಥಃ ಪ್ರತ್ಯಾವೃತ್ತಿ ನಿರೂಪ್ಯತೇ ॥ ೮೨ ॥**

ವೇದದ ಒಂದು ಅನುವಾಕವನ್ನೋ ಅಥವಾ ಒಂದು ಶ್ಲೋಕವನ್ನೋ ಮತ್ತೆ ಮತ್ತೆ ಆವೃತ್ತಿ ಮಾಡಿದರೆ ಕಂಠಪಾಠವಾಗಿ ನೆನಪಿನಲ್ಲಿರುತ್ತದೆ – ನೆನಪಿನ ಸಾಧ್ಯತೆಯನ್ನು ಹೊಂದುತ್ತದೆ. ಆ ಗ್ರಂಥವು ಒಂದೊಂದು ಆವೃತ್ತಿ ಮಾಡಿದಾಗಲೂ ನೆನಪಿಗೆ ಬಂದುಬಿಡುವುದಿಲ್ಲ.

**ವಿವರಣೆ** – ವೇದಾಭ್ಯಾಸಮಾಡುವಾಗ ಆಚಾರ್ಯನು ಶಿಷ್ಯರಿಗೆ ಪ್ರತಿದಿನವೂ ಹೇಳಿದ ಅನುವಾಕವನ್ನೇ ಹೇಳಿಕೊಡುತ್ತ ಇರುತ್ತಾನೆ. ಕೆಲವು ದಿನ ಹೀಗೆ ಆವೃತ್ತಿ–ಯಾದಮೇಲೆ ಶಿಷ್ಯರ ಬಾಯಿಗೆ ಅದು ಬರುತ್ತದೆ. ಒಂದು ಶ್ಲೋಕವನ್ನು ಕಲಿಯು–ವಾಗಲೂ ಅನೇಕ ಸಲ ಹೇಳುತ್ತಿದ್ದರೆ ಕಂಠಪಾಠವಾಗುತ್ತದೆ. ಒಂದು ಶ್ಲೋಕವನ್ನು

ಹತ್ತು ಸಲ ಆವೃತ್ತಿಯಿಂದ ಉಚ್ಚರಿಸಿದರೆ ಅದು ನೆನಪಿನಲ್ಲುಳಿಯುತ್ತದೆ ಎಂದಿಟ್ಟು–ಕೊಳ್ಳೋಣ. ಹತ್ತರಲ್ಲಿ ಯಾವ ಆವೃತ್ತಿಯಿಂದ ಶ್ಲೋಕವು ನೆನಪಿನಲ್ಲುಳಿಯುತ್ತದೆ? ಮೊದಲನೆಯ ಆವೃತ್ತಿಯಿಂದಲೊ? ನಡುವಿನದರಿಂದಲೊ? ಕಡೆಯದರಿಂದಲೊ? ಎಲ್ಲ ಆವೃತ್ತಿಗಳೂ ಕಂಠಪಾಠವಾಗಲು ಸಹಾಯಮಾಡಿವೆ. ಒಂದೊಂದು ಆವೃತ್ತಿ–ಯಿಂದ ಮನಸ್ಸಿನ ಮೇಲೆ ಒಂದು ಸಂಸ್ಕಾರವಾಗುತ್ತದೆ. ಒಂದರ ಮೇಲೊಂದರಂತೆ ಆದ ಸಂಸ್ಕಾರಗಳು ಉಳಿದುಕೊಂಡಿರುತ್ತವೆ. ಈ ಸಂಸ್ಕಾರಗಳೆಲ್ಲವೂ ಕಡೆಯ ಆವೃತ್ತಿಯಿಂದಾದ ಸಂಸ್ಕಾರಕ್ಕೆ ನೆರವು ನೀಡುತ್ತವೆ. ಆಗ ಸಂಸ್ಕಾರವು ದೃಢವಾಗಲು ಮನಸ್ಸು ಸಂಪೂರ್ಣಶ್ಲೋಕವನ್ನು ಸ್ಮರಣೆಗೆ ತಂದುಕೊಳ್ಳಲು ಸಮರ್ಥವಾಗುತ್ತದೆ. ಸ್ಫೋಟದ ಅಭಿವ್ಯಕ್ತಿಯೂ ಇದೇ ಪ್ರಕಾರದಲ್ಲೆಂದು ಮುಂದಿನ ಶ್ಲೋಕದಲ್ಲಿ ತಿಳಿಸಲಾಗಿದೆ.

**ಪ್ರತ್ಯಯೈರನುಪಾಖ್ಯೇಯೈರ್ಗ್ರಹಣಾನುಗುಣೈಸ್ತಥಾ ।**
**ಧ್ವನಿಪ್ರಕಾಶಿತೇ ಶಬ್ದೇ ಸ್ವರೂಪಮವಧಾರ್ಯತೇ ॥ ೮೩ ॥**

ಪದದಲ್ಲಿರುವ ಅಕ್ಷರಗಳನ್ನು ಉಚ್ಚರಿಸುತ್ತ ಹೋದಂತೆ ಆ ಅಕ್ಷರದ ಜ್ಞಾನಗಳೂ ಹುಟ್ಟುತ್ತ ಹೋಗುತ್ತವೆ. ಅವೆಲ್ಲವೂ ಸ್ಫೋಟಗ್ರಹಣಕ್ಕೆ ಅನುಗುಣ–ವಾದವು. ಆದರೆ ಯಾವ ಅಕ್ಷರ ಜ್ಞಾನದಿಂದಲೇ ಸ್ಫೋಟಗ್ರಹಣವೆಂದು ನಿರ್ದೇಶಿಸಿ ಹೇಳಲು ಶಕ್ಯವಿಲ್ಲವಾದ್ದರಿಂದ ಆ ಜ್ಞಾನಗಳು ಅನುಪಾಖ್ಯೇಯ–ವಾಗಿರುತ್ತವೆ ಎಂದರೆ ನಿರ್ದೇಶಿಸಿ ತೋರಿಸಲು ಶಕ್ಯವಾಗದವು. ಇವುಗಳ ಸಹಕಾರದಿಂದ ಅಂತ್ಯಾಕ್ಷರದ ಉಚ್ಚಾರಣ ಧ್ವನಿಯು ಸ್ಫೋಟವೆಂಬ ಶಬ್ದ–ವನ್ನು ಪ್ರಕಾಶಗೊಳಿಸುತ್ತದೆ. ಆಗ ಅದರಲ್ಲಿ ಅಖಂಡವಾದ ಶಬ್ದಸ್ವರೂಪವು ಗೊತ್ತಾಗುತ್ತದೆ.

**ವಿವರಣೆ** – ಎಲ್ಲ ಅಕ್ಷರ ಜ್ಞಾನಗಳೂ ಸ್ಫೋಟಾಭಿವ್ಯಕ್ತಿಗೆ ಸಹಕಾರಿಗಳು. ಅವುಗಳ ನೆರವಿನಿಂದ ಪದದ ಕಡೆಯ ಅಕ್ಷರವು ಶಬ್ದಸ್ವರೂಪವನ್ನು ತಿಳಿಸಿಕೊಡು–ತ್ತದೆ. ಇಲ್ಲಿ ಅಕ್ಷರ ಜ್ಞಾನಗಳೆಂದರೆ ಜ್ಞಾನದಿಂದ ಬುದ್ಧಿಯಲ್ಲಿ ನಿಲ್ಲುವ ಸಂಸ್ಕಾರ–ವೆಂದರ್ಥ. ಅಕ್ಷರ ವಿಷಯಕವಾದ ಸಂಸ್ಕಾರವು ಕಡೆಯ ವರ್ಣವನ್ನು ಉಚ್ಚರಿಸು–ವವರೆಗೂ ಇರುವುದು. ಜ್ಞಾನವು ಅಷ್ಟುಹೊತ್ತು ಇರುವುದಿಲ್ಲ. ಏವಂಚ ಶಬ್ದಾಭಿ–ವ್ಯಕ್ತಿಗೆ ಎಲ್ಲ ವರ್ಣಗಳೂ ಆವಶ್ಯಕ. ಪದದಲ್ಲಿರುವ ಯಾವ ವರ್ಣವೂ ವ್ಯರ್ಥವಲ್ಲ.

**ನಾದೈರಾಹಿತಬೀಜಾಯಾಮಂತ್ಯೇನ ಧ್ವನಿನಾ ಸಹ ।**
**ಆವೃತ್ತಪರಿಪಾಕಾಯಾಂ ಬುದ್ಧೌ ಶಬ್ದೋऽವಧಾರ್ಯತೇ॥೮೪॥**

ಪೂರ್ವಪೂರ್ವ ಧ್ವನಿಗಳೆಂಬ ನಾದಗಳು ಬುದ್ಧಿಯಲ್ಲಿ ಸಂಸ್ಕಾರವೆಂಬ ಬೀಜವನ್ನು ನೆಡುತ್ತವೆ. ಮತ್ತೆ ಮತ್ತೆ ಉಂಟಾದ ಸಂಸ್ಕಾರಗಳಿಂದ ಫಲೋ–ನ್ಮುಖವಾದ ಬುದ್ಧಿಯಲ್ಲಿ ಅಂತ್ಯಧ್ವನಿಯೊಡನೆ ಶಬ್ದವು ಅಭಿವ್ಯಕ್ತವಾಗುತ್ತದೆ.

**ವಿವರಣೆ** – ಈ ಶ್ಲೋಕದಲ್ಲಿ 'ಅಂತ್ಯ ಧ್ವನಿಯಿಂದ ಸಹಿತವಾದ ಪೂರ್ವಪೂರ್ವ ಧ್ವನಿಗಳು ಬುದ್ಧಿಯಲ್ಲಿ ಸಂಸ್ಕಾರವೆಂಬ ಬೀಜವನ್ನು ನೆಡುತ್ತವೆ' ಎಂದೂ ಅರ್ಥ ಹೇಳಬಹುದು. ಇದೇ ಯುಕ್ತವೆಂದು ತೋರುತ್ತದೆ. ಅಂತ್ಯ ಧ್ವನಿಯಿಂದಲೂ ಸಂಸ್ಕಾರವಾಗುತ್ತದೆ. ಮೊದಲು ಹೇಳಿದ ಅರ್ಥದಲ್ಲಿ 'ಅಂತ್ಯ ಧ್ವನಿಯೊಡನೆ ಶಬ್ದವು ಅಭಿವ್ಯಕ್ತವಾಗುತ್ತದೆ' ಎಂದರೆ ಸ್ಫೋಟದ ಜೊತೆಗೆ ಧ್ವನಿಯೂ ತೋರುತ್ತದೆ ಎಂಬ ಅಭಿಪ್ರಾಯ ಬರುತ್ತದೆ. ಅದು ಸರಿಯಲ್ಲ ಅಥವಾ 'ಧ್ವನಿಯು ಕೇಳಿದೊಡನೆ ಶಬ್ದವು ಅಭಿವ್ಯಕ್ತವಾಗುತ್ತದೆ' ಎಂದು ತಾತ್ಪರ್ಯವನ್ನು ಹೇಳಬೇಕು. ಅಕ್ಷರಗಳನ್ನುಚ್ಚರಿಸುತ್ತ ಹೋದಂತೆ ಮಸುಕು ಮಸುಕಾಗಿ ತೋರುತ್ತಿದ್ದ ಸ್ಫೋಟವು ಕಡೆಯ ಅಕ್ಷರವನ್ನುಚ್ಚರಿಸಿದೊಡನೆ ಸ್ಪಷ್ಟವಾಗಿ ಹೊಳೆಯುತ್ತದೆ. ರತ್ನ ಪರೀಕ್ಷಕನು ರತ್ನವನ್ನು ನೋಡುತ್ತ ನೋಡುತ್ತ ಕಡೆಯ ನೋಟದಲ್ಲಿ ಅದರ ಯೋಗ್ಯತೆಯನ್ನು ನಿಷ್ಕರ್ಷಿಸುವಂತೆ ಇಲ್ಲಿಯೂ ಆಗುತ್ತದೆ. ಯಾವ ಅಕ್ಷರವೂ ವ್ಯರ್ಥವಲ್ಲ. ನಾದ, ವೈಖರೀನಾದ, ಧ್ವನಿ ಇವು ಒಂದೇ ಅರ್ಥದ ಶಬ್ದಗಳು. ವರ್ಣ, ಅಕ್ಷರ, ಶಬ್ದ ಇವನ್ನು ಧ್ವನಿಯೆಂಬ ಅರ್ಥದಲ್ಲಿಯೂ ಸ್ಫೋಟ ಎಂಬ ಅರ್ಥದಲ್ಲಿಯೂ ಪ್ರಯೋಗಿಸುವುದುಂಟು. ಸಂದರ್ಭಾನುಸಾರವಾಗಿ ನಿರ್ಣಯ ಮಾಡಿಕೊಳ್ಳಬೇಕು.

**ಅಸತಶ್ಚಾಂತರಾಲೇ ಯಾನ್ ಶಬ್ದಾನಸ್ತೀತಿ ಮನ್ಯತೇ ।**
**ಪ್ರತಿಪತ್ತುರಶಕ್ತಿಃ ಸಾ ಗ್ರಹಣೋಪಾಯ ಏವ ಸಃ ॥ ೮೫ ॥**

ಒಂದು ವಾಕ್ಯವನ್ನು ಹೇಳಿದಾಗ ಅದರಲ್ಲಿ ವರ್ಣಗಳಾಗಲಿ ಪದಗಳಾ–ಗಲಿ ಪ್ರತ್ಯೇಕವಾಗಿ ಇರುವುದಿಲ್ಲ. ಆದರೂ ಅವು ಇವೆಯೆಂದು ಶ್ರೋತಾರನು ತಿಳಿದುಕೊಳ್ಳುತ್ತಾನಲ್ಲ. ಆ ತಿಳುವಳಿಕೆ ವಾಕ್ಯಸ್ಫೋಟವನ್ನು ಗ್ರಹಿಸಲಾರದ ಆತನ ಅಸಾಮರ್ಥ್ಯದಿಂದ ಬಂದದ್ದು. ಆದರೂ ಅದು ವಾಕ್ಯಸ್ಫೋಟವನ್ನು ಗ್ರಹಿಸಲು ಸಾಧನವಾಗುತ್ತದೆ.

**ವಿವರಣೆ** – ವಾಕ್ಯಸ್ಫೋಟವು ಅಖಂಡವಾದ್ದರಿಂದ ಅದರಲ್ಲಿ ಪದವಾಗಲಿ, ವರ್ಣವಾಗಲಿ, ವರ್ಣಾವಯವವಾಗಲಿ ಇಲ್ಲವೆಂದು ಹಿಂದೆ ೭೩ನೆಯ ಶ್ಲೋಕದಲ್ಲಿ ಹೇಳಿದೆ. ಆದರೆ ಒಬ್ಬನು ವಾಕ್ಯವನ್ನು ಹೇಳುತ್ತಿರುವಾಗ ಅವೆಲ್ಲವೂ ಇರುವುದು ನಮಗೆ ಗೋಚರಿಸುತ್ತದೆ. ಸ್ಪಷ್ಟವಾಗಿ ಗೋಚರಿಸತಕ್ಕದ್ದೇ ಇಲ್ಲವೆಂದರೆ ಹೇಗೆ? ನಿಜ,

ಗೋಚರಿಸಿದ್ದೆಲ್ಲವೂ ಸತ್ಯವಾಗುವುದಿಲ್ಲ. ದೂರದಲ್ಲಿ ಹಗ್ಗವು ಹಾವಾಗಿ ಕಾಣುತ್ತದೆ. ಮರವು ಆನೆಯಾಗಿ ಕಾಣುತ್ತದೆ. ಹಾಗೆಯೇ ವಾಕ್ಯದಲ್ಲಿ ವರ್ಣ, ಪದಗಳಿವೆಯೆಂದು ತಿಳಿಯುವುದು ಭ್ರಮೆ. ವಾಕ್ಯಸ್ಫೋಟವನ್ನು ಮೊದಲು ಗ್ರಹಿಸಲಾರದ ಅಸಾಮರ್ಥ್ಯ–ದಿಂದ ಈ ಭ್ರಮೆ ಹುಟ್ಟಿರುತ್ತದೆ. ಈ ತಿಳಿವು ಸಹ ವಾಕ್ಯಸ್ಫೋಟವನ್ನು ಗ್ರಹಿಸಲು ಸಹಾಯ ಮಾಡುತ್ತದೆ. ಭ್ರಮೆಯು ಯಥಾರ್ಥಜ್ಞಾನಕ್ಕೆ ಸಾಧನವಾಗಬಹುದು. ಮರವನ್ನು ಆನೆಯೆಂದು ಭ್ರಮಿಸಿದಾಗ ಆನೆಯ ಸ್ಥೂಲಾಕಾರವು ಮರವೆಂಬ ನಿಶ್ಚಯಕ್ಕೆ ಕಾರಣವಾಗಬಹುದು. ಹಾವಿನ ಅಂಕುಡೊಂಕುಗಳು ಹಗ್ಗದ ಯಥಾ–ರ್ಥತೆಯನ್ನರಿಯಲು ಸಾಧನವಾಗುತ್ತವೆ. ಅನೇಕ ಸಂದರ್ಭಗಳಲ್ಲಿ ಲೋಕಾನು–ಭವವು ಸರಿಯಲ್ಲವೆಂದು ಶಾಸ್ತ್ರವು ತಿಳಿಸಿಕೊಡುತ್ತದೆ. ನೀರು ತಣ್ಣಗಿದೆಯೆಂದು ನಮಗೆ ತೋರುತ್ತದೆ. ವಿಜ್ಞಾನ ಶಾಸ್ತ್ರವು ಅದರಲ್ಲಿಯೂ ಉಷ್ಣತೆ ಇದೆಯೆಂದು ತಿಳಿಸುತ್ತದೆ.

**ಭೇದಾನುಕಾರೋ ಜ್ಞಾನಸ್ಯ ವಾಚಶ್ಚೋಪಪ್ಲವೋ ಧ್ರುವಃ ।**
**ಕ್ರಮೋಪಸೃಷ್ಟರೂಪಾ ವಾಗ್ ಜ್ಞಾನಂ ಜ್ಞೇಯವ್ಯಪಾಶ್ರಯಮ್ ॥ ೮೬ ॥**

ಜ್ಞಾನವು ಶುದ್ಧವಾಗಿದ್ದರೂ ಜ್ಞೇಯವಾದ ವಿಷಯಕ್ಕೆ ಅಧೀನವಾಗಿರು–ತ್ತದೆ. ಆದ್ದರಿಂದ ಜ್ಞಾನಕ್ಕೆ ಜ್ಞೇಯವಾದ ಘಟಪಟಾದಿಭೇದದ ಅನುಗಮ–ವಿರುತ್ತದೆ. ಅಂತೆಯೇ ಶುದ್ಧವಾದ ವಾಕ್ಕಿಗೆ ವ್ಯಂಜಕ ಧ್ವನಿಗಳ ಉಪಾಧಿ–ಸಂಬಂಧವು ಇದ್ದೇ ಇರುತ್ತದೆ. ಈ ವಾಕ್ ಎನ್ನುವುದು ಧ್ವನಿಗಳಲ್ಲಿರುವ ಕ್ರಮದಿಂದ ಉಪಸೃಷ್ಟವಾಗಿ ಗೋಚರಿಸುತ್ತದೆ.

**ವಿವರಣೆ** – ಜ್ಞಾನವು ಶುದ್ಧವಾದದ್ದು. ಆದರೂ ಜ್ಞೇಯವಾದ ವಿಷಯವನ್ನು ಅದು ಕಚ್ಚಿಕೊಂಡೇ ಬರುತ್ತದೆ. ಘಟಜ್ಞಾನವು ಘಟಾಕಾರವಾಗಿಯೂ ಪಟ ಜ್ಞಾನವು ಪಟಾಕಾರವಾಗಿಯೂ ಇರುತ್ತದೆ. ಸ್ಫೋಟವು ಶುದ್ಧವೂ ಅಖಂಡವೂ ಕ್ರಮ ರಹಿತವೂ ಆಗಿದೆ. ಆದರೆ ಧ್ವನಿಗಳಿಂದಲೇ ಅಭಿವ್ಯಕ್ತವಾಗಬೇಕಾದ್ದರಿಂದ ಧ್ವನಿ–ಯಿಲ್ಲದೆ ಅದು ಪ್ರಕಾಶಿಸುವುದಿಲ್ಲ. ಜ್ಞೇಯ ಸಂಬದ್ಧವಾಗಿಯೇ ಜ್ಞಾನವು ಬರುವಂತೆ, ಧ್ವನಿ ಸಂಬದ್ಧವಾಗಿಯೇ ಈ ವಾಕ್ ಬುದ್ಧಿಗೋಚರವಾಗುತ್ತದೆ. ಆದ್ದರಿಂದ ವ್ಯಂಜಕವಾದ ವಾಕ್ಯದಲ್ಲಿರುವ ವರ್ಣಪದಗಳಿಂದ ವಾಕ್ಯಸ್ಫೋಟವು ಸಂಸೃಷ್ಟ–ವಾಗಿರುತ್ತದೆ. ನಮಗೆ ತೋರುವ ವರ್ಣಗಳೂ ಪದಗಳೂ ವ್ಯಂಜಕ ಧ್ವನಿಗೆ ಇರತಕ್ಕವು. ವಾಕ್ಯಸ್ಫೋಟದಲ್ಲಿ ವಾಸ್ತವವಾಗಿ ಇವುಗಳಿಲ್ಲ. ಅಂತೆಯೇ ಈ ವರ್ಣ ಪದ ಧ್ವನಿಗಳು ಕ್ರಮವಾಗಿ ಒಂದಾದಮೇಲೊಂದರಂತೆ ಹುಟ್ಟುತ್ತವೆ. ಈ ಕ್ರಮವೂ ಸಹ ಕ್ರಮರಹಿತವಾದ ಸ್ಫೋಟದಲ್ಲಿರುವಂತೆ ಕಾಣುತ್ತದೆ.

**ಯಥಾದ್ಯಸಂಖ್ಯಾಗ್ರಹಣಮುಪಾಯಃ ಪ್ರತಿಪತ್ತಯೇ ।**
**ಸಂಖ್ಯಾಂತರಾಣಾಂ ಭೇದೇಽಪಿ ತಥಾ ಶಬ್ದಾಂತರಶ್ರುತಿಃ ॥೮೭॥**

ಒಂದು, ಎರಡು, ಮೂರು, ಮುಂತಾದ ಎಲ್ಲ ಸಂಖ್ಯೆಗಳು ಪರಸ್ಪರ ಭಿನ್ನವಾದವುಗಳು. ಆದರೂ ಐದು, ಹತ್ತು, ನೂರು ಮುಂತಾದ ಬೇರೆ ಸಂಖ್ಯೆಗಳನ್ನು ತಿಳಿಯುವುದಕ್ಕೆ ಅವುಗಳ ಹಿಂದಿರುವ ಸಂಖ್ಯೆಗಳು ಉಪ–ಯುಕ್ತವಾಗುತ್ತವೆ. ಹಾಗೆ ವಾಕ್ಯಸ್ಫೋಟದಿಂದ ವರ್ಣಪದಗಳು ಭಿನ್ನವಾದರೂ ಅವುಗಳ ಶ್ರವಣವು ವಾಕ್ಯಸ್ಫೋಟವನ್ನು ಗ್ರಹಿಸಲು ಸಹಾಯಮಾಡತಕ್ಕ ಉಪಾಯವಾಗಿರುತ್ತದೆ.

**ವಿವರಣೆ** – ಸಂಖ್ಯೆಯು ಸಾಪೇಕ್ಷಜ್ಞಾನಜನ್ಯವೆಂದು ನೈಯಾಯಿಕರ ಸಿದ್ಧಾಂತವಿದೆ. ಇನ್ನೊಂದು ಸಂಖ್ಯೆಯ ಅಪೇಕ್ಷಾಜ್ಞಾನದಿಂದಲೇ ಸಂಖ್ಯಾಜ್ಞಾನ–ವಾಗುತ್ತದೆಯೆಂದರ್ಥ. ಮೂರು ಎಂಬ ತ್ರಿತ್ವ ಸಂಖ್ಯೆಯನ್ನು ತಿಳಿಯಬೇಕಾದರೆ, ಇನ್ನು ಎರಡು ಸಂಖ್ಯೆಗಳ ಜ್ಞಾನ ಬೇಕು. 'ಇವನು ಹತ್ತನೆಯವನು' ಎಂದು ನಿರ್ಧರಿಸಬೇಕಾದರೆ ಬೇರೆಯಾಗಿ ಒಂಭತ್ತು ಜನರಿದ್ದಾರೆಂದು ತಿಳಿಯಲೇಬೇಕು. ಘಟ, ಪಟಾದಿಗಳು ಹಾಗಲ್ಲ. ಆ ವಸ್ತುಗಳನ್ನು ನೋಡಿದೊಡನೆ ಇದು ಘಟ ಇದು ಪಟ ಎಂದು ಗೊತ್ತಾಗುತ್ತದೆ. ಇಲ್ಲಿ ಐದು ಗೋಲಿಗಳಿವೆ ಎಂದಾಗ ಐದರ ಜ್ಞಾನವು ಒಂದು, ಎರಡು, ಮೂರು, ನಾಲ್ಕು ಎಂಬ ಹಿಂದಿನ ಸಂಖ್ಯೆಗಳ ಜ್ಞಾನದಿಂದಲೇ ಹುಟ್ಟುತ್ತದೆ. ಈ ಸಂಖ್ಯೆಗಳು ಪರಸ್ಪರ ಭಿನ್ನವಾದವು. ನೂರು ಎಂಬುದು ಹೀಗೆಯೇ ಉಳಿದ ಸಂಖ್ಯೆಗಳಿಗಿಂತ ಭಿನ್ನ. ಅದರ ಜ್ಞಾನಕ್ಕೆ ಉಳಿದ ಸಂಖ್ಯೆಗಳು ಸಹಾಯಕಗಳಾಗುತ್ತವೆ. ಹಾಗೆಯೇ ವರ್ಣಪದಗಳಿಗಿಂತ ವಾಕ್ಯಸ್ಫೋಟವು ಸಂಪೂರ್ಣಭಿನ್ನವಾದರೂ ಈ ವರ್ಣಪದಗಳು ಅದರ ಜ್ಞಾನಕ್ಕೆ ಕಾರಣವಾಗುತ್ತವೆ. ಆದ್ದರಿಂದ ಅವುಗಳ ಜ್ಞಾನವಾದ ಹೊರತು ವಾಕ್ಯಸ್ಫೋಟದ ಜ್ಞಾನ ಹುಟ್ಟುವುದಿಲ್ಲ.

**ಪ್ರತ್ಯೇಕಂ ವ್ಯಂಜಕಾ ಭಿನ್ನಾ ವರ್ಣವಾಕ್ಯಪದೇಷು ಯೇ ।**
**ತೇಷಾಮತ್ಯಂತಭೇದೇಽಪಿ ಸಂಕೀರ್ಣಾ ಇವ ಶಕ್ತಯಃ ॥೮೮॥**

ವರ್ಣ ಪದ ವಾಕ್ಯಗಳಲ್ಲಿರುವ ವ್ಯಂಜಕಗಳಾದ ಒಂದೊಂದೂ ವರ್ಣಾದಿಗಳು ಭಿನ್ನವಾಗಿವೆ. ಅವುಗಳಲ್ಲಿ ಅತ್ಯಂತ ಭೇದವಿದ್ದರೂ ಸಹ ಅವುಗಳಲ್ಲಿರುವ ವ್ಯಂಜಕ ಶಕ್ತಿಗಳು ಸಂಕೀರ್ಣವಾಗಿವೆಯೋ ಎಂಬಂತೆ 'ಅದೇ ಇದು, ಇದೇ ಅದು' ಎಂದು ಭ್ರಮೆಯಿಂದ ತೋರುತ್ತದೆ.

**ವಿವರಣೆ** – ವಾಕ್ಯಸ್ಫೋಟವೇ ಸತ್ಯವೆಂದು ನಿಷ್ಕರ್ಷೆಯಾಗಿದ್ದರೂ ಪ್ರಕ್ರಿಯಾರ್ಥವಾಗಿ ಪದಸ್ಫೋಟ, ವರ್ಣಸ್ಫೋಟಗಳನ್ನು ಒಪ್ಪಿಕೊಂಡಿದ್ದಾರೆ. ಉದ್ದವಾದ ಒಂದು ಕಬ್ಬಿಣದ ಸರಳಿನಲ್ಲಿ ತುಂಡುಗಳಲ್ಲದಿದ್ದರೂ ಒಂದು ಅಡಿ, ಒಂದು ಅಂಗುಲ ಎಂದು ಕಲ್ಪನೆಯಿಂದ ಮಾನಸಿಕವಾಗಿ ತುಂಡುಗಳನ್ನು ಮಾಡಿಕೊಳ್ಳಲು ಬರುತ್ತದೆ. ಕಲ್ಪಿತ ತುಂಡುಗಳಲ್ಲಿಯೂ ಅಖಂಡವಾದ ಸರಳಿನಲ್ಲಿರುವ ಕಬ್ಬಿಣದ ಗುಣಸ್ವಭಾವಗಳಿದ್ದೇ ಇರುತ್ತವೆ. ಹಾಗೆ ವಾಕ್ಯಸ್ಫೋಟವು ನಿತ್ಯವಾದ್ದರಿಂದ ಕಲ್ಪಿತಾವಯವಗಳಾದ ವರ್ಣ, ಪದಗಳೂ ನಿತ್ಯವಾಗಿ ಸ್ಫೋಟಗಳೆನಿಸುತ್ತವೆ. ಅವನ್ನು ಧ್ವನಿಗಳು ವ್ಯಂಜಿಸುತ್ತವೆ. ಆದ್ದರಿಂದ ವರ್ಣವು ನಿತ್ಯ, ಪದವು ನಿತ್ಯ ಎಂದೂ ಅಂಗೀಕರಿಸಬೇಕು. ಅಕಾರಾದಿ ವರ್ಣವನ್ನು ಅದರ ಧ್ವನಿಯು ವ್ಯಂಜಿಸುತ್ತದೆ. ಪದವನ್ನು ಪದಸಮೂಹವು ವ್ಯಂಜಿಸುತ್ತದೆ. ಈ ಧ್ವನಿಗಳೆಲ್ಲವೂ ಬೇರೆ ಬೇರೆಯಾದ್ದರಿಂದ ಇವುಗಳಲ್ಲಿರುವ ವ್ಯಂಜಕ ಶಕ್ತಿಗಳೂ ಬೇರೆ ಬೇರೆಯೆಂಬುದು ಸ್ಪಷ್ಟ. ಅವುಗಳಿಗೆ ಅತ್ಯಂತ ಸಾದೃಶ್ಯವಿರುವುದರಿಂದ 'ಅದೇ ಇದು, ಇದೇ ಅದು' ಎಂದು ಭ್ರಮೆ ಹುಟ್ಟುತ್ತದೆ. ವರ್ಣಗಳಲ್ಲಿ ಪದವ್ಯಂಜಕ ಶಕ್ತಿ ವರ್ಣವ್ಯಂಜಕ ಶಕ್ತಿಗಿಂತ ಪ್ರತ್ಯೇಕವಾಗಿದೆ. ವರ್ಣಗಳು ಪದವನ್ನು ವ್ಯಂಜಿಸಿದಾಗ ಪದವ್ಯಂಜಕಶಕ್ತಿಯೇ ವರ್ಣವ್ಯಂಜಕ ಶಕ್ತಿಯೆಂದು ಭ್ರಮಿಸಿ ವರ್ಣಗಳೂ ಅಭಿವ್ಯಕ್ತವಾದವೆಂದು ತಿಳಿದು, ಪದದಲ್ಲಿ ವರ್ಣಗಳಿವೆಯೆಂದು ಭ್ರಮಿಸುತ್ತಾರೆ. ಹಾಗೆಯೇ ಪದಗಳಲ್ಲಿರುವ ವಾಕ್ಯವ್ಯಂಜಕ ಶಕ್ತಿಯಿಂದ ವಾಕ್ಯವು ವ್ಯಕ್ತವಾದಾಗ ಆ ಶಕ್ತಿಯೇ ಪದವ್ಯಂಜಕ ಶಕ್ತಿಯೆಂದು ಭ್ರಮಿಸಿ ವಾಕ್ಯದಲ್ಲಿ ಪದಗಳಿವೆಯೆಂದು ಕಲ್ಪಿಸಿಕೊಳ್ಳುತ್ತಾರೆ. ಗೌಃ ಎಂದು ಹೇಳಿದಾಗ ಪದಶಕ್ತಿಯಿಂದ ಅಖಂಡವಾದ ಪದವು ಅಭಿವ್ಯಕ್ತವಾಗುತ್ತದೆ. ಬರಿಯ ಗಕಾರವನ್ನು ಉಚ್ಚರಿಸಿದಾಗ ವರ್ಣಶಕ್ತಿಯಿಂದ ಗವರ್ಣವು ಮಾತ್ರ ಸ್ಫುರಿಸುತ್ತದೆ. ಗೌಃ ಎಂದಾಗ ಪದಶಕ್ತಿಯನ್ನೇ ವರ್ಣಶಕ್ತಿ–ಯೆಂದು ಭ್ರಮಿಸುವುದರಿಂದ ಅಖಂಡಪದಸ್ಫೋಟದಲ್ಲಿ ಗಕಾರವಿದೆಯೆಂದು ಕಾಣುತ್ತದೆ. ಹಾಗೆಯೇ 'ಗಾಂ ಪಶ್ಯ' ಎಂಬ ವಾಕ್ಯವನ್ನು ಹೇಳಿದಾಗ ಅಖಂಡವಾಕ್ಯವೇ ಸ್ಫುರಿಸಿದರೂ ಆ ವಾಕ್ಯಶಕ್ತಿಯನ್ನು ಪದಶಕ್ತಿಯೊಡನೆ ಕಲಬೆರಕೆ ಮಾಡಿಕೊಂಡು 'ಗಾಂ' ಎಂಬ ಪದವು ಆ ವಾಕ್ಯದಲ್ಲಿದೆ ಎಂದು ಭ್ರಮಿಸುತ್ತಾರೆ. ಪರಮಾರ್ಥವಾಗಿ ವಾಕ್ಯದಲ್ಲಿ ಪದವೂ ಇಲ್ಲ, ವರ್ಣವೂ ಇಲ್ಲ, ವರ್ಣಾವಯವವೂ ಇಲ್ಲ. ವಾಕ್ಯದಲ್ಲಿ ಅಖಂಡ ವಾಕ್ಯವನ್ನು ವ್ಯಂಜಿಸುವ ಒಂದೇ ಶಕ್ತಿ ಇರುತ್ತದೆ.

**ಯಥೈವ ದರ್ಶನೈಃ ಪೂರ್ವೈರ್ದೂರಾತ್ ಸಂತಮಸೇಽಪಿ ವಾ ।**
**ಅನ್ಯಥಾಕೃತ್ಯ ವಿಷಯಮನ್ಯಥೈವಾಧ್ಯವಸ್ಯತಿ** ॥ ೮೯ ॥

ದೂರದಲ್ಲಿ ಅಥವಾ ಮಬ್ಬುಗತ್ತಲೆಯಲ್ಲಿ ಒಬ್ಬನು ಒಂದು ವಸ್ತುವನ್ನು ನೋಡುತ್ತಾನೆ. ಅನೇಕ ಸಲ ನೋಡಿದರೂ ಆ ವಿಷಯವನ್ನು ತಪ್ಪಾಗಿ ಅನ್ಯಥಾ ತಿಳಿದುಕೊಂಡು ಬಿಡುತ್ತಾನೆ. ಕಡೆಗೆ ಅಲ್ಲಿಯೇ ನಿಂತು ಪ್ರಣಿಧಾನ–ದಿಂದ ದಿಟ್ಟಿಸಿ ನೋಡಿದಾಗ ಅದು ಬೇರೆ ವಸ್ತುವೆಂದು ಯಥಾರ್ಥವಾಗಿ ತಿಳಿದುಕೊಳ್ಳುತ್ತಾನೆ.

**ವಿವರಣೆ** – ದೂರದಲ್ಲಿ ಅಥವಾ ಮಬ್ಬುಗತ್ತಲೆಯಲ್ಲಿ ನೋಡಿದಾಗ ಒಂದು ಪೊದೆ ಮನುಷ್ಯನಂತೆಯೂ ಹಗ್ಗವು ಹಾವಿನಂತೆಯೂ ಕಾಣಿಸುತ್ತದೆ. ಮತ್ತೆ ಮತ್ತೆ ನೋಡಿದರೂ ಹಾಗೆಯೇ ಕಾಣಿಸುತ್ತದೆ. ಕಡೆಗೆ ದಿಟ್ಟಿಸಿ ನೋಡಿ ತನಗೆ ಮೊದಲು ಕಂಡದ್ದು ತಪ್ಪು ಅಲ್ಲಿರುವುದು ಪೊದೆಯೆಂದೋ ಹಗ್ಗವೆಂದೋ ನಿಶ್ಚಯಿಸುತ್ತಾನೆ. ಹಾಗೆಯೇ ಒಂದು ವಾಕ್ಯವನ್ನು ಕೇಳುವಾಗ ಅದರಲ್ಲಿ ವರ್ಣಗಳಿವೆಯೆಂದೂ ಭಾವಿಸುತ್ತಾನೆ. ಕಡೆಯ ಪದದ ಕಡೆಯ ಅಕ್ಷರವನ್ನು ಕೇಳಿದಾಗ ಅಖಂಡ ವಾಕ್ಯಸ್ಫೋಟದ ಜ್ಞಾನವಾಗಿ ಒಂದು ಪೂರ್ಣಾರ್ಥವು ತಿಳಿದುಬರುತ್ತದೆ.

**ವ್ಯಜ್ಯಮಾನೇ ತಥಾ ವಾಕ್ಯೇ ವಾಕ್ಯಾಭಿವ್ಯಕ್ತಿಹೇತುಭಿಃ ।**
**ಭಾಗಾವಗ್ರಹರೂಪೇಣ ಪೂರ್ವಂ ಬುದ್ಧಿಃ ಪ್ರವರ್ತತೇ ॥೯೦॥**

ಅಖಂಡವಾಕ್ಯವನ್ನು ಅಭಿವ್ಯಂಜಿಸುವುದಕ್ಕೆ ಕಂಠ ತಾಲ್ವಾದಿಸ್ಥಾನಗಳಲ್ಲಿ ಪ್ರಯತ್ನ ಪೂರ್ವಕವಾಗಿ ಉಚ್ಚರಿಸಲ್ಪಡುವ ಧ್ವನಿಗಳು ಹೇತುಗಳು. ಅವು–ಗಳಿಂದ ಭಾಗರಹಿತವಾದ ಆ ವಾಕ್ಯಸ್ಫೋಟವು ಅಭಿವ್ಯಕ್ತವಾಗುತ್ತದೆ. ಹಾಗೆ ಅಭಿವ್ಯಕ್ತವಾಗುವುದಕ್ಕೆ ಮೊದಲು (ಪೊದೆಯಲ್ಲಿ ಮನುಷ್ಯನನ್ನೂ ಹಗ್ಗದಲ್ಲಿ ಹಾವನ್ನೂ ಕಂಡಂತೆ) ಭಾಗರಹಿತದಲ್ಲಿಯೂ ಭಾಗವನ್ನು ಗ್ರಹಿಸುತ್ತಿದ್ದೇವೆ ಎಂಬಂತೆ, ವರ್ಣಗಳೂ ಪದಗಳೂ ಇವೆಯೆಂಬ ಬುದ್ಧಿ ಹುಟ್ಟುತ್ತದೆ.

**ವಿವರಣೆ** – ಪೊದೆಯಲ್ಲಿ ಮನುಷ್ಯನನ್ನು ಹಗ್ಗದಲ್ಲಿ ಹಾವನ್ನು ಕಂಡ ಮೊದಲನೆಯ ನೋಟಗಳು ಬೇರೆ. ಪ್ರಣಿಧಾನದಿಂದ ದಿಟ್ಟಿಸಿ ನೋಡಿದಾಗ ಕಂಡ ಕಡೆಯ ನೋಟವು ಬೇರೆ. ಕಡೆಯ ನೋಟದಿಂದ ವಸ್ತುವಿನ ಯಥಾರ್ಥತೆ ಹಿಂದೆ ಹೇಳಿದಂತೆ ಗೊತ್ತಾಗುತ್ತದೆ. ವಾಕ್ಯಶಕ್ತಿಯಿಂದ ವಾಕ್ಯಸ್ಫೋಟವು ಕಡೆಯಲ್ಲೆ ಅಭಿವ್ಯಕ್ತವಾಗುತ್ತದೆ. ಶಕ್ತಿಸಾಂಕರ್ಯದಿಂದ ವಾಕ್ಯದಲ್ಲಿ ಪದಗಳೂ ವರ್ಣಗಳೂ ಇವೆಯೆಂದು ಭಾಸವಾಗುತ್ತದೆ.

**ಯಥಾನುಪೂರ್ವೀನಿಯಮೋ ವಿಕಾರೇ ಕ್ಷೀರಬೀಜಯೋಃ ।**
**ತಥೈವ ಪ್ರತಿಪತ್ತೄಣಾಂ ನಿಯತೋ ಬುದ್ಧಿಷು ಕ್ರಮಃ ॥ ೯೧ ॥**

ಹಾಲು, ಬೀಜಗಳು ವಿಕಾರವನ್ನು ಹೊಂದಿ ರೂಪಾಂತರವನ್ನು ಪಡೆಯಲು ಒಂದು ಕ್ರಮ ನಿಯಮವಿರುತ್ತದೆ. ಹಾಗೆಯೇ ಬೋದ್ಧೃಗಳಾದ ನಮಗೆ ವಾಕ್ಯಜ್ಞಾನವಾಗುವುದಕ್ಕೆ ಹುಟ್ಟುವ ಬುದ್ಧಿಗಳಲ್ಲಿ ಆನುಪೂರ್ವಿಯ ಕ್ರಮ ನಿಯಮವು ಕಡ್ಡಾಯವಾಗಿರುತ್ತದೆ.

**ವಿವರಣೆ –** ಹಿಂದೆ ಹೇಳಿದಂತೆ ಪೊದೆಯು ಮನುಷ್ಯನಂತೆ ತೋರಿ ಆಮೇಲೆ ಪೊದೆಯಾಗಿ ತೋರುತ್ತದೆಯೆಂಬ ನಿಯಮವೇನೂ ಇಲ್ಲ. ಒಬ್ಬನಿಗೆ ಮೊದಲು ಮನುಷ್ಯನಂತೆ ತೋರಿದರೆ ಇನ್ನೊಬ್ಬನಿಗೆ ಎಮ್ಮೆಯಂತೆ ತೋರಬಹುದು. ಮತ್ತೊಬ್ಬನಿಗೆ ಬಂಡೆಯಂತೆ ತೋರಬಹುದು. ಹಗ್ಗವೂ ಸಹ ಒಬ್ಬನಿಗೆ ಹಾವಿನಂತೆ ತೋರಿದರೆ ಇನ್ನೊಬ್ಬನಿಗೆ ದೊಣ್ಣೆಯಂತೆ ಕಾಣಬಹುದು. ಏವಂಚ ಅಲ್ಲಿ ಯಾವ ಕ್ರಮವೂ ಇಲ್ಲ. ವಾಕ್ಯಸ್ಫೋಟದಲ್ಲಾದರೋ ಒಂದು ಆನುಪೂರ್ವೀಕ್ರಮವು ಸಾರ್ವತ್ರಿಕವಾಗಿ ಉಂಟು. ವರ್ಣಗಳೂ ಪದಗಳೂ ಒಂದೇ ರೀತಿಯಾಗಿ ಒಂದೇ ಕ್ರಮದಲ್ಲಿ ಸರ್ವರಿಗೂ ತೋರುತ್ತವೆ. ಈ ವ್ಯತ್ಯಾಸಕ್ಕೆ ಕಾರಣವೇನು ಎಂಬ ಶಂಕೆ ಹುಟ್ಟುತ್ತದೆ. ಇದಕ್ಕೆ ಸಮಾಧಾನ ಹೀಗೆ – ವಸ್ತುಸ್ವಭಾವವು ಆಯಾ ವಸ್ತುವನ್ನನುಸರಿಸಿ ನಿಯತವಾಗಿರುತ್ತದೆ. ಹಾಲು ಮಜ್ಜಿಗೆಯಾಗಬೇಕಾದರೆ ಮೊದಲು ಸ್ವಲ್ಪ ಮಂದವಾಗಿ, ಮೊಸರಾಗಿ, ಆಮೇಲೆ ಮಜ್ಜಿಗೆಯಾಗುತ್ತದೆ. ಬೀಜವು ಸಸಿಯಾಗಬೇಕಾದರೆ ನೀರಿನಿಂದ ಉಬ್ಬಿ, ಒಡೆದು, ಮೊಳಕೆಯಾಗಿ, ಕಾಂಡವಾಗಿ ಆಮೇಲೆ ಸಸಿಯಾಗುತ್ತದೆ. ಈ ಆನುಪೂರ್ವೀಕ್ರಮವನ್ನು ಯಾರಿಂದಲೂ ತಪ್ಪಿಸಲಾಗುವುದಿಲ್ಲ. ಅಂತೆಯೇ ವಾಕ್ಯಸ್ಫೋಟವು ತೋರುವುದಕ್ಕೆ ಮೊದಲು ಬಾಹ್ಯ ದೃಷ್ಟಿಯುಳ್ಳ ನಮ್ಮೆಲ್ಲರಿಗೂ ವರ್ಣಗಳೂ, ಪದಗಳೂ, ಸಾರ್ವತ್ರಿಕವಾಗಿ ಒಂದೇ ಕ್ರಮದಲ್ಲಿರುವಂತೆ ಗೋಚರಿಸುತ್ತವೆ.

**ಭಾಗವತ್ಸ್ವಪಿ ತೇಷ್ವೇವ ರೂಪಭೇದೋ ಧ್ವನೇಃ ಕ್ರಮಾತ್ ।**
**ನಿರ್ಭಾಗೇಷ್ವಭ್ಯುಪಾಯೋ ವಾ ಭಾಗಭೇದಪ್ರಕಲ್ಪನಮ್ ॥೯೨॥**

(ವರ್ಣಗಳು ಮಾತ್ರ ಸತ್ಯವೆನ್ನುವ ಮೀಮಾಂಸಕ ಮತದಲ್ಲಿ) ವರ್ಣಗಳೆಂಬ ಭಾಗಗಳುಳ್ಳ ಪದ ವಾಕ್ಯಗಳಲ್ಲಿಯೂ ಅಭಿವ್ಯಂಜಕ ಧ್ವನಿಯ ಕ್ರಮದಿಂದಲೇ ಇದು ಪದ, ಇದು ವಾಕ್ಯವೆಂಬ ಸ್ವರೂಪ ಭೇದವನ್ನು ಅಂಗೀಕರಿಸಬೇಕಾಗುತ್ತದೆ. ಭಾಗರಹಿತವಾದ ಸ್ಫೋಟಗಳಲ್ಲಿಯೂ ಸಹ ಧ್ವನಿ ಕ್ರಮದಿಂದಲೇ ವರ್ಣವೆಂದೂ ಪದವೆಂದೂ ಕಲ್ಪಿಸುವುದು ವಾಕ್ಯ ಸ್ಫೋಟವನ್ನರಿಯಲು ಉಪಾಯವಾಗಿರುತ್ತದೆ.

**ವಿವರಣೆ** – ಮೀಮಾಂಸಕರ ಮತದಲ್ಲಿ ವರ್ಣಗಳು ನಿತ್ಯವಾದವು. ಅವು ನಾದಗಳಿಂದ (ಧ್ವನಿಗಳಿಂದ) ಅಭಿವ್ಯಕ್ತವಾಗುತ್ತವೆ. ವರ್ಣಸಮೂಹವೇ ಪದ, ಪದ ಸಮೂಹವೇ ವಾಕ್ಯ. ವಾಕ್ಯಸ್ಫೋಟವಾಗಲಿ ಪದಸ್ಫೋಟವಾಗಲಿ ಅವರ ಸಿದ್ಧಾಂತದಲ್ಲಿಲ್ಲ. ಆದರೆ ವರ್ಣಸ್ಫೋಟವನ್ನು ಒಪ್ಪಿಕೊಂಡಂತೆಯೇ ಆಗುತ್ತದೆ. ಅವರೂ ಸಹ ವರ್ಣ ವ್ಯಂಜಕ ಧ್ವನಿಗಳಲ್ಲಿ ಒಂದು ಕ್ರಮವಿದೆಯೆಂದೂ ಆ ಕ್ರಮವು ಪದದಲ್ಲಿಯೂ ವಾಕ್ಯದಲ್ಲಿಯೂ ತೋರುತ್ತದೆಯೆಂದು ಒಪ್ಪಿಕೊಳ್ಳಲೇಬೇಕು. ಆ ಕ್ರಮವೇ ವರ್ಣ ಸಮುದಾಯದಲ್ಲಿ ತೋರುತ್ತದೆಯೆಂದೂ ಹೇಳಬೇಕಾಗುತ್ತದೆ. ವ್ಯಂಗ್ಯವಾದ ನಿತ್ಯ ವರ್ಣಗಳಲ್ಲಿ ಅವರು ಕ್ರಮವನ್ನು ಹೇಳಲಾಗುವುದಿಲ್ಲ. ನಿತ್ಯ ವರ್ಣಗಳು ಯಾವಾಗಲೂ ಎಲ್ಲೆಡೆಯೂ ಇದ್ದೇ ಇರುತ್ತವೆ. ಅವುಗಳಲ್ಲಿ ಆನು–ಪೂರ್ವೀಕ್ರಮವೆಲ್ಲಿ ಬಂದಿತು? ಉಚ್ಚಾರಣಕ್ರಿಯಾಜನ್ಯವಾದಾಗಲೇ ಕ್ರಿಯಾನು–ಗುಣವಾಗಿ ಕ್ರಮವಿರಲು ಸಾಧ್ಯ. ಮೀಮಾಂಸಕರ ಮತದಲ್ಲಿ ವರ್ಣವು ವಿಭುವಾಗಿ ಸರ್ವವ್ಯಾಪಕವಾಗಿರುವುದರಿಂದ, ಮತ್ತು ಮೂರ್ತವಾದ ಆಕೃತಿಯಿಲ್ಲದ್ದರಿಂದ, ಕುರ್ಚಿಗಳನ್ನು ಎಳೆದು ತಂದು ಜೋಡಿಸುವಂತೆ ಅವನ್ನು ಜೋಡಿಸಲು ಸಾಧ್ಯವಿಲ್ಲ. ವರ್ಣವಿದೆಯೆಂಬುದು ಅಭಿವ್ಯಂಜಕ ಧ್ವನಿಯಿಂದಲೇ ತೋರಬೇಕು. ಆದ್ದರಿಂದ ಧ್ವನಿಗಳು ಯಾವ ಕ್ರಮದಿಂದ ಹುಟ್ಟುತ್ತವೆಯೋ ಆ ಕ್ರಮವನ್ನು ವರ್ಣಗಳಲ್ಲಿ ಆರೋಪಿಸಿ, ಅದರಿಂದ ಅರ್ಥಪ್ರತೀತಿಯೆಂದು ಒಪ್ಪಬೇಕು. ಕ್ರಮವನ್ನು ಒಪ್ಪದಿದ್ದರೆ ನದೀ–ದೀನ, ವೇಗ–ಗವೇ, ರಸಃ–ಸರಃ ಇತ್ಯಾದಿ ಸ್ಥಳಗಳಲ್ಲಿ ಗೊತ್ತಾದ ಅರ್ಥವೇ ಪ್ರತೀತವಾಗುತ್ತದೆಯೆಂಬುದಕ್ಕೆ ಕಾರಣವೇ ಇರುವುದಿಲ್ಲ. ನದೀ ಶಬ್ದದಲ್ಲಿರುವ ಅಕ್ಷರಗಳೇ ದೀನ ಶಬ್ದದಲ್ಲಿವೆ. ನದೀ ಎಂದರೆ ದೀನ ಎಂದೇಕೆ ಅರ್ಥವಾಗುವು–ದಿಲ್ಲ? ಆದ್ದರಿಂದ ವ್ಯಂಗ್ಯವಾದ ವರ್ಣಗಳಲ್ಲಿಯೂ ಧ್ವನಿಕ್ರಮವನ್ನು ಅಂಗೀಕರಿಸಬೇಕಾಗುತ್ತದೆ.

**ಅನೇಕವ್ಯಕ್ತ್ಯಭಿವ್ಯಂಗ್ಯಾ ಜಾತಿಃ ಸ್ಫೋಟ ಇತಿ ಸ್ಮೃತಾ ।**
**ಕೈಶ್ಚಿದ್ ವ್ಯಕ್ತಯ ಏವಾಸ್ಯಾಃ ಧ್ವನಿತ್ವೇನ ಪ್ರಕಲ್ಪಿತಾಃ ॥ ೯೩ ॥**

ಕೆಲವರು ಹೇಳುವುದೇನೆಂದರೆ: ಅನೇಕ ವರ್ಣವ್ಯಕ್ತಿಗಳಿಂದ ಶಬ್ದಗತ–ವಾದ ಜಾತಿಯು ಅಭಿವ್ಯಕ್ತವಾಗುತ್ತದೆ. ಶಬ್ದನಿಷ್ಠವಾದ ಜಾತಿಯೇ ಸ್ಫೋಟ. ಶಬ್ದ ವ್ಯಕ್ತಿಯಲ್ಲ. ಜಾತಿಯ ವ್ಯಂಜಕಗಳಾದ ವ್ಯಕ್ತಿಗಳಿಗೆ ಧ್ವನಿಯೆಂದು ಹೆಸರೂ ಉಂಟು.

**ವಿವರಣೆ** – ಘಟ, ಪಟ, ವೃಕ್ಷ, ಮನುಷ್ಯ – ಮುಂತಾದವುಗಳಲ್ಲಿ ಘಟತ್ವ ಮೊದಲಾದ ಧರ್ಮವನ್ನು ಶಾಸ್ತ್ರದಲ್ಲಿ ಒಪ್ಪಲಾಗಿದೆ. ಈ ಧರ್ಮವೇ ಜಾತಿ. ಘಟ ಮೊದಲಾದವು ವ್ಯಕ್ತಿಗಳು. ವ್ಯಕ್ತಿಗಳು ಅನಿತ್ಯ. ಅವುಗಳಲ್ಲಿರುವ ಜಾತಿಯು ಮಾತ್ರ

ನಿತ್ಯವೆಂದು ಅಂಗೀಕರಿಸಿದ್ದಾರೆ. ಮೀಮಾಂಸಕರ ಮತದಲ್ಲಿ ಒಂದು ಶಬ್ದಕ್ಕೆ ಜಾತಿಯೇ ಶಕ್ಯಾರ್ಥ, ವ್ಯಕ್ತಿಯಲ್ಲ. ಅದೇ ಪ್ರಕಾರ ಕೆಲವು ಸ್ಫೋಟವಾದಿಗಳು ಶಬ್ದನಿಷ್ಠ ಜಾತಿಯನ್ನು ವ್ಯಂಗ್ಯವೆಂದು ಅಂಗೀಕರಿಸಿ ಅದೇ ಸ್ಫೋಟವೆನ್ನುತ್ತಾರೆ. ವರ್ಣ–ಪದ–ವಾಕ್ಯಗಳು ಸ್ಫೋಟವಲ್ಲ. ಆಯಾ ವರ್ಣಾದಿಗಳಲ್ಲಿರುವ ಜಾತಿಯೇ ಸ್ಫೋಟ. ಅತ್ವ, ಇತ್ವ ಮೊದಲಾದವು ವರ್ಣ ಸ್ಫೋಟಗಳು. ಘಟತ್ವ, ಪಟತ್ವ ಮೊದಲಾದವು ಪದಸ್ಫೋಟಗಳು. ಇಲ್ಲಿ ಘಟತ್ವವೆಂದರೆ ಗಡಿಗೆಯೆಂಬ ಅರ್ಥದಲ್ಲಿ–ರುವ ಘಟತ್ವವಲ್ಲ. ಘಟ ಎಂಬ ಶಬ್ದದಲ್ಲಿರುವ ಘಟತ್ವ, ಘಟಶಬ್ದತ್ವ ಎಂದು ಹೇಳಬಹುದು. ಶಬ್ದತ್ವವೆಂಬ ಜಾತಿಯೂ ಅಲ್ಲ. ಅದು ಎಲ್ಲ ಶಬ್ದಗಳಲ್ಲಿಯೂ ಇರುತ್ತದೆ. ಅದೇ ಸ್ಫೋಟವೆಂದರೆ ಘಟ ಎಂದರೆ ಪಟವೆಂದೂ ಅರ್ಥವಾಗಬೇಕಾ–ದೀತು. ಘಟ ಶಬ್ದದಲ್ಲಿ ಮಾತ್ರ ಇರುವ ಶಬ್ದಗತವಾದ ಘಟತ್ವವು ಸ್ಫೋಟ. ಹೀಗೆಯೇ ವಾಕ್ಯದಲ್ಲಿಯೂ ಅನ್ವಯಿಸಿಕೊಳ್ಳಬೇಕು. ಇವರ ಮತದಲ್ಲಿ ಶಬ್ದವು ಅನಿತ್ಯವೇ ಸರಿ. ಜಾತಿ ಸ್ಫೋಟವು ಮಾತ್ರ ನಿತ್ಯ. ಜಾತಿಯು ನಿತ್ಯವೆಂದು ತಾರ್ಕಿಕರೂ ಅಂಗೀಕರಿಸಿದ್ದಾರೆ. ಈ ಪಕ್ಷದಲ್ಲಿ ವರ್ಣ–ಪದ–ವಾಕ್ಯಗಳೆಂಬ ಶಬ್ದವ್ಯಕ್ತಿಗಳೇ ಸ್ಫೋಟವನ್ನು ವ್ಯಂಜಿಸುವ ಧ್ವನಿಗಳು. ವೈಖರೀನಾದದಿಂದ ಘಟಾದಿಶಬ್ದವ್ಯಕ್ತಿಯು ವ್ಯಂಗ್ಯವಾಗುತ್ತದೆ. ಶಬ್ದವ್ಯಕ್ತಿಯಿಂದ ಆಯಾ ಶಬ್ದನಿಷ್ಠವಾದ ಘಟತ್ವಾದಿ ಸ್ಫೋಟಗಳು ವ್ಯಂಗ್ಯವಾಗುತ್ತವೆಯೆಂದು ತಾತ್ಪರ್ಯ. ಇದು ಜಾತಿಸ್ಫೋಟವಾದ.

ಹೀಗೆ ಪಕ್ಷ ಭೇದಗಳನ್ನು ತಿಳಿಸಿ ಈಗ ವಾಕ್ಯಪದೀಯ ಗ್ರಂಥಕಾರರು ತಮ್ಮ ಸಿದ್ಧಾಂತವನ್ನು ತಿಳಿಸುತ್ತಾರೆ –

**ಅವಿಕಾರಸ್ಯ ಶಬ್ದಸ್ಯ ನಿಮಿತ್ತೈರ್ವಿಕೃತೋ ಧ್ವನಿಃ ।**
**ಉಪಲಬ್ಧೌ ನಿಮಿತ್ತತ್ವಮುಪಯಾತಿ ಪ್ರಕಾಶವತ್ ॥ ೯೪ ॥**

ಉಚ್ಚಾರಿತವಾಗುವ ವೈಖರೀನಾದವೆಂಬ ಧ್ವನಿಯು ಅದರ ಸ್ಥಾನ ಪ್ರಯತ್ನಗಳ ಭೇದದಿಂದ ನಾನಾರೂಪವನ್ನು ಧರಿಸಿ ವಿಕೃತವಾಗಿರುತ್ತದೆ. ಇದು ವಿಕಾರರಹಿತವಾದ ಶಬ್ದತತ್ತ್ವದ ಉಪಲಬ್ಧಿಗೆ, ಬೆಳಕಿನಂತೆ ನಿಮಿತ್ತ–ವಾಗುತ್ತದೆ.

**ವಿವರಣೆ** – ಅನಾದಿನಿಧನವೂ ಪರಿಶುದ್ಧವೂ ವಿಕಾರರಹಿತವೂ ಆದ ಶಬ್ದತತ್ತ್ವವು ಅದ್ವಿತೀಯವಾಗಿ ಒಂದೇ ಒಂದು ಇದೆ. ಅದೊಂದೇ ಮನುಷ್ಯ, ಮೃಗ, ಪಕ್ಷಿ ಮುಂತಾದ ಅನಂತ ಶಬ್ದಗಳ ರೂಪದಲ್ಲಿ ತೋರುತ್ತದೆ. ಹಾಗೆ ತೋರುವುದಕ್ಕೆ ವಿಕೃತವಾದ ಧ್ವನಿಗಳೇ ಕಾರಣ. ಧ್ವನಿಗಳಲ್ಲಿ ಕಾಣುವ ನಾನಾ

ವರ್ಣಗಳೂ ಪದಗಳೂ ತಮ್ಮ ತಮ್ಮ ಆನುಪೂರ್ವಿಯೊಡನೆ ಈ ಶಬ್ದತತ್ತ್ವದಲ್ಲಿ ಪ್ರತಿಬಿಂಬಿತವಾಗುತ್ತವೆ. ಈ ಪ್ರತಿಬಿಂಬಗಳನ್ನು ನಾವು ಬೇರೆ ಬೇರೆಯಾದ ಅನಂತ ಶಬ್ದಗಳೆಂದು ತಿಳಿಯುತ್ತೇವೆ. ಆಯಾ ವರ್ಣಾನುಪೂರ್ವೀವಿಶಿಷ್ಟವಾದ ಪ್ರತಿಬಿಂಬ-ರೂಪ ಶಬ್ದಕ್ಕೆ ಕ್ಲೃಪ್ತವಾದ ಅರ್ಥವಿರುತ್ತದೆ. ಶಬ್ದತತ್ತ್ವವು ಧ್ವನಿ ಧರ್ಮಗಳಿಂದ ರೂಷಿತವಾಗಿ ನಮ್ಮ ಬುದ್ಧಿಗೆ ಗೋಚರಿಸಿ ಬೇರೆ ಬೇರೆ ಅರ್ಥವನ್ನು ಬೋಧಿಸುತ್ತದೆ. ಸ್ಫೋಟವೆಂದರೆ ಈ ಶಬ್ದತತ್ತ್ವ, ಇದೇ ಶಬ್ದಬ್ರಹ್ಮ.

ಧ್ವನಿಯು ಈ ಶಬ್ದತತ್ತ್ವವನ್ನು ಬೆಳಕಿನಂತೆ ಪ್ರಕಾಶಪಡಿಸುತ್ತದೆ. ಬೆಳಕು ಇರುವ ವಸ್ತುವನ್ನು ತೋರಿಸುತ್ತದೆಯೇ ಹೊರತು ಹೊಸ ವಸ್ತುವನ್ನು ನಿರ್ಮಿಸು-ವುದಿಲ್ಲ. ಬಿಳಿಯ ವಸ್ತುವು ಕೆಂಪು ದೀಪದಲ್ಲಿ ನೋಡಿದಾಗ ಕೆಂಪಾಗಿಯೂ ಹಳದಿ ಬಣ್ಣದ ದೀಪದಲ್ಲಿ ಹಳದಿಯಾಗಿಯೂ ನೀಲಿಬಣ್ಣದ ದೀಪದಲ್ಲಿ ನೀಲಿಯಾಗಿಯೂ ಕಾಣಿಸುತ್ತದೆ. ಈ ಬಣ್ಣವು ಬೆಳಕಿನ ಧರ್ಮ. ಹಾಗೆ ವಿಕಾರವು ಧ್ವನಿಯ ಧರ್ಮ. ತನ್ನ ಧರ್ಮವು ಶಬ್ದತತ್ತ್ವದಲ್ಲಿಯೇ ಇದೆಯೋ ಎಂಬಂತೆ ಧ್ವನಿಯು ಅದನ್ನು ತೋರಿಸುತ್ತದೆ.

**ನ ಚಾನಿತ್ಯೇಷ್ವಭಿವ್ಯಕ್ತಿರ್ನಿಯಮೇನ ವ್ಯವಸ್ಥಿತಾ ।**
**ಆಶ್ರಯೈರಪಿ ನಿತ್ಯಾನಾಂ ಜಾತೀನಾಂ ವ್ಯಕ್ತಿರಿಷ್ಯತೇ ॥ ೯೫ ॥**

ಅನಿತ್ಯ ವಸ್ತುಗಳಲ್ಲಿಯೇ ಅಭಿವ್ಯಕ್ತಿಯಾಗುತ್ತದೆಯೆಂಬುದು ನಿಯತವಾಗಿ ವ್ಯವಸ್ಥೆಗೊಂಡಿಲ್ಲ. ಏಕೆಂದರೆ ಜಾತ್ಯಾಶ್ರಯಗಳಾದ ವ್ಯಕ್ತಿಗಳಿಂದಲೂ ನಿತ್ಯ-ವಾದ ಜಾತಿಗಳ ಅಭಿವ್ಯಕ್ತಿಯಾಗುತ್ತದೆಯೆಂಬುದು ಸಂಮತವಾದದ್ದು.

**ವಿವರಣೆ** – ಧ್ವನಿಗಳಿಂದ ನಿತ್ಯವಾದ ಸ್ಫೋಟವು ಅಭಿವ್ಯಕ್ತವಾಗುತ್ತದೆ-ಯೆಂಬುದು ಸರಿಯಲ್ಲವೆಂದು ಶಂಕೆ. ಏಕೆಂದರೆ ಬೆಳಕಿನಿಂದ ಘಟ ಪಟಾದಿಗಳ ಅಭಿವ್ಯಕ್ತಿಯಾಗುತ್ತದೆ. ಘಟ ಪಟಾದಿಗಳು ಅನಿತ್ಯವೆಂಬುದು ಸ್ಪಷ್ಟ. ಎಲ್ಲೆಲ್ಲಿ ಅಭಿ-ವ್ಯಕ್ತಿ ಇದೆಯೋ ಅದೆಲ್ಲವೂ ಅನಿತ್ಯವೆಂದು ಹೇಳಬಹುದಾಗಿದೆ. ಏವಂಚ ಅಭಿವ್ಯಕ್ತಿ-ಗೊಳ್ಳುವ ಶಬ್ದತ್ವವೂ ಅನಿತ್ಯವಾಗಬೇಕಾಗುತ್ತದೆ. ಇದಕ್ಕೆ ಉತ್ತರ ಹೀಗೆ ಅಭಿವ್ಯಕ್ತಿ-ಗೊಳ್ಳುವುದೆಲ್ಲವೂ ಅನಿತ್ಯವೆಂಬ ನಿಯಮವಿಲ್ಲ. ಘಟಾದಿ ವ್ಯಕ್ತಿಗಳಿಂದ ನಿತ್ಯವಾದ ಘಟತ್ವ, ಪಟತ್ವ ಮುಂತಾದ ಜಾತಿಗಳು ಅಭಿವ್ಯಕ್ತಿಗೊಳ್ಳುವುದು ಕಂಡು ಬರುತ್ತದೆ. ಆದ್ದರಿಂದ ಶಬ್ದತತ್ತ್ವದಲ್ಲಿ ಅಭಿವ್ಯಕ್ತಿಯಾದರೂ ಅದು ಅನಿತ್ಯವಾಗಬೇಕಾದ್ದಿಲ್ಲ.

**ದೇಶಾದಿಭಿಶ್ಚ ಸಂಬಂಧೋ ದೃಷ್ಟಃ ಕಾಯವತಾಮಿಹ ।**
**ದೇಶಭೇದವಿಕಲ್ಪೇಽಪಿ ನ ಭೇದೋ ಧ್ವನಿಶಬ್ದಯೋಃ ॥ ೯೬ ॥**

ಈ ಲೋಕದಲ್ಲಿ ಮೂರ್ತಿಮತ್ತಾದ ವಸ್ತುಗಳಿಗೆ ದೇಶ, ದೂರ, ದಿಕ್ಕು – ಇವುಗಳ ಸಂಬಂಧ ಕಂಡು ಬರುತ್ತದೆ. (ಧ್ವನಿ ಮತ್ತು ಶಬ್ದಗಳು ಮೂರ್ತಿ–ಮತ್ತಾದ ಮೂರ್ತವಸ್ತುಗಳಲ್ಲ) ಒಂದು ವೇಳೆ ಧ್ವನಿ ಮತ್ತು ಶಬ್ದಗಳಿಗೆ ದೇಶ ಭೇದವಿದೆಯೆಂದು ಕಲ್ಪಿಸಿದರೂ ಅವುಗಳ ಅಧಿಕರಣದಲ್ಲಿ ಭೇದವಿರುವುದಿಲ್ಲ.

**ವಿವರಣೆ** – ಕಾಯವತ್ ಎಂದರೆ ಮೂರ್ತಿಮತ್ತಾದದ್ದು, ಮೂರ್ತದ್ರವ್ಯ ಎಂದರ್ಥ. ಯಾವುದರಲ್ಲಿ ಕ್ರಿಯೆಯಿದೆಯೋ ಅಥವಾ ಪರಿಚ್ಛಿನ್ನವಾದ ಒಂದು ಅಳತೆಯಿದೆಯೋ ಅದನ್ನು ಮೂರ್ತದ್ರವ್ಯ ಎನ್ನುತ್ತಾರೆ. ಈ ಶ್ಲೋಕದಲ್ಲಿ ಇನ್ನೊಂದು ಪೂರ್ವಪಕ್ಷ ಉಂಟು. ವ್ಯಂಜಕವೂ ವ್ಯಂಗ್ಯವೂ ಒಂದೇ ಸ್ಥಳದಲ್ಲಿರಬೇಕೆಂದು ನಿಯಮವಿದೆ. ಈ ಮನೆಯಲ್ಲಿರುವ ಗಡಿಯಾರವನ್ನು ಇನ್ನೊಂದು ದೂರದ ಮನೆಯಲ್ಲಿರುವ ದೀಪವು ಅಭಿವ್ಯಕ್ತಿಗೊಳಿಸುವುದಿಲ್ಲ. ವ್ಯಂಜಕವಾದ ಧ್ವನಿಯು ಉಚ್ಚಾರಣೆಗೆ ಸಾಧನಗಳಾದ ಕಂಠ, ತಾಲ್ವಾದಿದೇಶದಲ್ಲಿರುತ್ತದೆ. ಶಬ್ದವು ದೂರದಲ್ಲಿರತಕ್ಕವನ ಕಿವಿಗೆ ಕೇಳಿಸುತ್ತದೆ. ಹೀಗೆ ದೇಶಭೇದವಿರುವುದರಿಂದ ಧ್ವನಿಯು ಶಬ್ದವನ್ನು ಅಭಿವ್ಯಂಜಿಸಲಾರದು ಎಂದು ಪೂರ್ವಪಕ್ಷ.

ಇದಕ್ಕೆ ಉತ್ತರ ಪಕ್ಷ ಹೀಗೆ– ನಿಜ; ವ್ಯಂಗ್ಯವ್ಯಂಜಕಗಳಿಗೆ ದೇಶಭೇದವಿರ–ಬಾರದೆಂಬುದು ಮೂರ್ತದ್ರವ್ಯಗಳಿಗೆ ಮಾತ್ರ ಅನ್ವಯಿಸುತ್ತದೆ. ಉದಾಹರಿಸಿದ ಗಡಿಯಾರವೂ ದೀಪವೂ ಮೂರ್ತದ್ರವ್ಯಗಳು. ಧ್ವನಿ ಮತ್ತು ಶಬ್ದಗಳು ಮೂರ್ತಗಳಲ್ಲ. ನೀವು ಹೇಳುವ ನಿಯಮವು ಇಲ್ಲಿ ಅನ್ವಯಿಸುವುದಿಲ್ಲ. ಒಂದು ವೇಳೆ ಅಮೂರ್ತ ವಸ್ತುಗಳಿಗೂ ಈ ನಿಯಮವೇಕೆ ಅನ್ವಯಿಸುವುದಿಲ್ಲವೆಂದು ವಿಕಲ್ಪಿಸಿದರೂ ಉತ್ತರ ಇದೆ. ಧ್ವನಿಯೂ ಶಬ್ದವೂ ಒಂದೇ ಆಕಾಶದಲ್ಲಿದೆ, ಭೇದವಿಲ್ಲ ಎನ್ನಬಹುದು. ಅಲ್ಲದೆ ವೀಚೀತರಂಗನ್ಯಾಯದಿಂದ, ಧ್ವನಿಯಿಂದ ಮತ್ತೊಂದು ಧ್ವನಿ ಹುಟ್ಟುತ್ತ ಶ್ರೋತಾರನ ಕಿವಿಯ ಬಳಿಗೆ ಧ್ವನಿಯು ಹೋಗುತ್ತದೆ. ಆಗ ಧ್ವನಿ ಶಬ್ದಗಳಿಗೆ ದೇಶಭೇದ ಬರುವುದೇ ಇಲ್ಲ. ಅಲ್ಲದೆ ಧ್ವನಿಯು ಯಾವ ಬುದ್ಧಿಗೆ ಶ್ರೋತ್ರೇಂದ್ರಿಯದ ಮೂಲಕ ತಿಳಿಯುತ್ತದೆಯೇ ಅದೇ ಬುದ್ಧಿಯು ಶಬ್ದವನ್ನು ಗ್ರಹಿಸುತ್ತದೆ. ಒಂದೇ ಬುದ್ಧಿಯಲ್ಲಿ ವ್ಯಂಗ್ಯ ವ್ಯಂಜಕಗಳಿರುವಾಗ ದೇಶಭೇದವು ಸಂಭವಿಸುವುದೇ ಇಲ್ಲ.

**ಗ್ರಹಣಗ್ರಾಹ್ಯಯೋಃ ಸಿದ್ಧಾ ನಿಯತಾ ಯೋಗ್ಯತಾ ಯಥಾ ।**
**ವ್ಯಂಗ್ಯವ್ಯಂಜಕಭಾವೇನ ತಥೈವ ಸ್ಫೋಟನಾದಯೋಃ ॥ ೯೭ ॥**

ಗ್ರಾಹಕವಾದ ಚಕ್ಷುರಾದಿ ಇಂದ್ರಿಯಗಳಿಗೂ ಗ್ರಾಹ್ಯವಾದ ರೂಪಾದಿ

ವಿಷಯಗಳಿಗೂ ವ್ಯಂಗ್ಯ ವ್ಯಂಜಕಭಾವದಿಂದ ಪ್ರಕಾಶಪಡಿಸುವ ಯೋಗ್ಯತೆಯೂ ನಿಯತವಾಗಿದೆ. ಹಾಗೆಯೇ ಸ್ಫೋಟ-ನಾದಗಳಿಗೆ ವ್ಯಂಗ್ಯ-ವ್ಯಂಜಕಭಾವದಿಂದಾದ ಯೋಗ್ಯತೆಯು ಕ್ಲೃಪ್ತವಾಗಿದೆ.

**ವಿವರಣೆ** – ಈಗ ಇನ್ನೊಂದು ಪೂರ್ವಪಕ್ಷ: ಸ್ಫೋಟವು ವ್ಯಂಗ್ಯವೆಂದೂ ನಾದವು ವ್ಯಂಜಕವೆಂದೂ ಇವುಗಳಿಗೆ ವ್ಯಂಗ್ಯವ್ಯಂಜಕ ಭಾವಸಂಬಂಧವಿದೆ-ಯೆಂದೂ ಹೇಳುವುದು ಯುಕ್ತವಲ್ಲ. ವ್ಯಂಗ್ಯವ್ಯಂಜಕ ಭಾವಸಂಬಂಧವಿದ್ದಾಗ ಇದೇ ವ್ಯಂಜಕ, ಇದೇ ವ್ಯಂಗ್ಯ ಎಂಬ ನಿಯಮವಿರುವುದಿಲ್ಲ. ಮನೆ, ಮರ ಮೊದಲಾದ-ವನ್ನು ಸೂರ್ಯಪ್ರಕಾಶವೂ ವ್ಯಂಜಿಸುತ್ತದೆ. ಚಂದ್ರ, ನಕ್ಷತ್ರ, ದೀಪಗಳ ಪ್ರಕಾಶವೂ ವ್ಯಕ್ತಪಡಿಸುತ್ತದೆ. ಸೂರ್ಯನೇ ಅವನ್ನು ಪ್ರಕಾಶಿಸುತ್ತಾನೆಂಬ ನಿಯಮವಿಲ್ಲ. ಶೃಂಗಾರಾದಿ ರಸ, ಭಾವಗಳನ್ನು ಬೇರೆ ಬೇರೆ ಮಾತುಗಳೂ ಚೇಷ್ಟೆಗಳೂ ವ್ಯಕ್ತಪಡಿಸಬಲ್ಲವು. ಇದೇ ಮಾತು ಇದೇ ಚೇಷ್ಟೆ ಇದನ್ನೇ ವ್ಯಕ್ತಪಡಿಸುತ್ತದೆಯೆಂಬ ನಿಯಮವಿಲ್ಲ. ಸ್ಫೋಟವಾದಗಳಲ್ಲಿ ಮಾತ್ರ ಹಾಗಿಲ್ಲ. ಇಲ್ಲಿ ನಿಯಮವಿದೆ. ನದೀ ಎಂದು ಉಚ್ಚಾರಿತವಾಗುವ ನಾದವು ನದೀಶಬ್ದಸ್ಫೋಟವನ್ನು ಮಾತ್ರ ಅಭಿವ್ಯಂಜಿಸ-ಬಲ್ಲದು; ಪಟ, ವೃಕ್ಷಗಳ ಸ್ಫೋಟವನ್ನು ವ್ಯಂಜಿಸಲಾರದು. ದೀನ ಎಂದು ಆ ವರ್ಣಗಳನ್ನೇ ವ್ಯತ್ಯಾಸವಾಗಿ ಉಚ್ಚರಿಸಿದರೂ ನದೀಶಬ್ದ ಸ್ಫೋಟವು ಅಭಿವ್ಯಕ್ತವಾಗು ವುದಿಲ್ಲ. ಆದ್ದರಿಂದ ಸ್ಫೋಟನಾದಗಳಿಗೆ ಜನ್ಯಜನಕ ಸಂಬಂಧವನ್ನು ಹೇಳತಕ್ಕದ್ದು. ಅಲ್ಲಿ ನಿಯಮವಿದೆ. ನೂಲುಗಳಿಂದಲೇ ಬಟ್ಟೆ ಹುಟ್ಟುತ್ತದೆ. ಮಣ್ಣಿನಿಂದಲೇ ಗಡಿಗೆ ಹುಟ್ಟುತ್ತದೆ. ನೂಲು ಇಲ್ಲದೆ ಬಟ್ಟೆ ಜನ್ಯವಾಗುವುದಿಲ್ಲ. ಮಣ್ಣಿಲ್ಲದೆ ಗಡಿಗೆ ಉತ್ಪನ್ನ-ವಾಗುವುದಿಲ್ಲ ಎಂಬ ನಿಯಮ ಉಂಟು. ಆದ್ದರಿಂದ ಸ್ಫೋಟವು ಜನ್ಯವೆಂದೂ ನಾದವು ಜನಕವೆಂದೂ ಹೇಳಬೇಕು. ಜನ್ಯವಾದ್ದರಿಂದ ಸ್ಫೋಟವು ಅನಿತ್ಯವಾಗುತ್ತದೆ.

ಇದಕ್ಕೆ ಸಿದ್ಧಾಂತಿಯ ಉತ್ತರ : ವಸ್ತುಸ್ವಭಾವ ಬೇರೆ ಬೇರೆ ಇರುತ್ತದೆ. ವ್ಯಂಗ್ಯ ವ್ಯಂಜಕಭಾವವಿದ್ದರೂ ಇದೇ ವ್ಯಂಜಕ ಎಂಬ ನಿಯಮವಿರಬಹುದು. ಇಂದ್ರಿಯ-ಗಳಿಗೂ ವಿಷಯಗಳಿಗೂ ಇರುವ ವ್ಯಂಗ್ಯವ್ಯಂಜಕಭಾವವು ಕ್ಲೃಪ್ತವಾಗಿದೆ. ಚಕ್ಷು-ರಿಂದ್ರಿಯದಿಂದಲೇ ರೂಪವು (ಬಣ್ಣ) ವ್ಯಕ್ತವಾಗುತ್ತದೆ. ಚಕ್ಷುರಿಂದ್ರಿಯವೇ ರೂಪವನ್ನು ತಿಳಿಸುತ್ತದೆ. ಘ್ರಾಣೇಂದ್ರಿಯದಿಂದ ಗಂಧವೇ ಗೃಹೀತವಾಗುತ್ತದೆ. ಗಂಧಕ್ಕೆ ಘ್ರಾಣೇಂದ್ರಿಯವು ಮಾತ್ರ ಗ್ರಾಹಕವಾಗುತ್ತದೆ. ಇದು ವಸ್ತುಸ್ವಭಾವ. ಸ್ಫೋಟನಾದಗಳಿಗೆ ಹಾಗೆಯೇ ವ್ಯಂಗ್ಯ ವ್ಯಂಜಕಭಾವವು ನಿಯತವಾಗಿರುತ್ತದೆ.

**ಸದೃಶಗ್ರಹಣಾನಾಂ ಚ ಗಂಧಾದೀನಾಂ ಪ್ರಕಾಶಕಮ್ ।**
**ನಿಮಿತ್ತಂ ನಿಯತಂ ಲೋಕೇ ಪ್ರತಿದ್ರವ್ಯಮವಸ್ಥಿತಮ್ ॥ ೯೮ ॥**

ಗ್ರಾಹ್ಯಕ್ಕೆ ಸದೃಶವಾದ ಗುಣವುಳ್ಳ ಗ್ರಾಹಕೇಂದ್ರಿಯಗಳಿಗೆ ಗ್ರಾಹ್ಯವಾದ ಗಂಧಾದಿಗಳನ್ನು ಪ್ರಕಾಶಿಸಲು ಕಾರಣವಾದ ಶಕ್ತಿಯು ನಿಯತವಾಗಿದೆ. ಲೋಕದಲ್ಲಿ ಇದು ಪ್ರತಿಯೊಂದು ಇಂದ್ರಿಯ ದ್ರವ್ಯದಲ್ಲಿಯೂ ಇರುತ್ತದೆ.

**ವಿವರಣೆ** – ಚಕ್ಷುರಿಂದ್ರಿಯವು ಘಟ, ಪಟ, ವೃಕ್ಷ – ಮುಂತಾದ ಭಿನ್ನವಸ್ತುಗಳನ್ನು ವ್ಯಂಜಿಸುತ್ತದೆ. ಎರಡು ವಸ್ತುಗಳು ಸೇರಿಕೊಂಡಿದ್ದಲ್ಲಿ ಅವುಗಳ ಸಂಯೋಗವನ್ನು ತೋರಿಸುತ್ತದೆ. ಚಕ್ಷುರಿಂದ್ರಿಯವು ರೂಪವನ್ನೇ ತೋರಿಸುತ್ತದೆ–ಯೆಂಬ ನಿಯಮವೆಲ್ಲಿದೆ? ಎಂಬ ಶಂಕೆಗೆ ಇದು ಉತ್ತರ. ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳೆಂಬ ಪಂಚತನ್ಮಾತ್ರೆಗಳಿಂದ ಕ್ರಮವಾಗಿ ಆಕಾಶ, ವಾಯು, ಅಗ್ನಿ, ಜಲ, ಪೃಥ್ವಿ – ಎಂಬ ಪಂಚಮಹಾಭೂತಗಳು ಹುಟ್ಟಿವೆ. ಇವು ಸ್ಥೂಲವಾದವು. ಇವುಗಳಲ್ಲಿ ಸಂಮಿಶ್ರವಾದ ಶಬ್ದವೆಂಬ ಸೂಕ್ಷ್ಮಭೂತವು ಶ್ರೋತ್ರೇಂದ್ರಿಯದಲ್ಲಿದೆ. ಸ್ಪರ್ಶವು ತ್ವಗಿಂದ್ರಿಯದಲ್ಲಿ, ರೂಪವು ಚಕ್ಷುರಿಂದ್ರಿಯದಲ್ಲಿ, ರಸವು ಜಿಹ್ವೇಂದ್ರಿಯ–ದಲ್ಲಿ, ಗಂಧವು ಘ್ರಾಣದಲ್ಲಿ ಇವೆಯೆಂದು ಪಂಚೀಕರಣಪ್ರಕ್ರಿಯೆಯಲ್ಲಿ ವಿವರವಿದೆ (ವಿವರಗಳಿಗೆ ಪಂಚದಶಿಯನ್ನು ನೋಡಿ). ಪ್ರಕೃತ ವೃಕ್ಷಾದಿಗಳಲ್ಲಿರತಕ್ಕದ್ದು ಬಾಹ್ಯರೂಪ. ಅದಕ್ಕೆ ಸದೃಶವಾದ ಸೂಕ್ಷ್ಮರೂಪವು ಚಕ್ಷುರಿಂದ್ರಿಯದಲ್ಲಿದೆ. ಪುಷ್ಪಾದಿಗಳಲ್ಲಿರುವ ಗಂಧಕ್ಕೆ ಸದೃಶವಾದ ಗಂಧವು ಘ್ರಾಣೇಂದ್ರಿಯದಲ್ಲಿದೆ. ಹೀಗೆ ಉಳಿದ ಇಂದ್ರಿಯಗಳ ವಿವರವನ್ನು ತಿಳಿಯಬೇಕು. ಘ್ರಾಣೇಂದ್ರಿಯವು ಪುಷ್ಪದಲ್ಲಿರುವ ಪದಾರ್ಥಗಳಲ್ಲಿ ಗಂಧವನ್ನು ಮಾತ್ರ ತಿಳಿಸುತ್ತದೆ. ಆ ಗಂಧವು ಘ್ರಾಣೇಂದ್ರಿಯಕ್ಕೆ ಮಾತ್ರ ಗೋಚರವಾಗುತ್ತದೆ. ಈ ರೀತಿಯಾಗಿ ನಾವು ಹೇಳಿದ ನಿಯಮ ವೃಕ್ಷ, ಘಟ, ಪಟಾದಿಗಳಲ್ಲಿರುವ ರೂಪವನ್ನು ಚಕ್ಷುರಿಂದ್ರಿಯವು ಮಾತ್ರ ಗ್ರಹಿಸುತ್ತದೆ. ಆ ರೂಪವು ಚಕ್ಷುರಿಂದ್ರಿಯದಿಂದಲೇ ಗೋಚರವಾಗುತ್ತದೆ. ಇನ್ನು ಯಾವ ಇಂದ್ರಿಯಕ್ಕೂ ತಿಳಿಯುವುದಿಲ್ಲ. ಚಕ್ಷುರಿಂದ್ರಿಯವು ಎರಡು ವಸ್ತುಗಳ ಸಂಯೋಗವನ್ನು ವ್ಯಂಜಿಸಬಹುದು. ವಸ್ತುವಿನ ಆಕೃತಿಯನ್ನು ವ್ಯಂಜಿಸಬಹುದು. ರೂಪವನ್ನು ವ್ಯಂಜಿಸಲು ಚಕ್ಷುರಿಂದ್ರಿಯವೇ ಬೇಕು. ಯಾವುದಕ್ಕೆ ಯಾವುದು ವ್ಯಂಜಕವೆಂಬುದು ನಿಯತ. ವ್ಯಂಗ್ಯವು ಬೇರೆಯದೂ ಕೆಲವೆಡೆ ಆಗಬಹುದು. ವಿದ್ಯುಚ್ಛಕ್ತಿಯಿಂದಲೇ ದೂರದರ್ಶನವು ಕೆಲಸ ಮಾಡುತ್ತದೆಯೆಂಬುದು ನಿಯತ. ವಿದ್ಯುಚ್ಛಕ್ತಿಯಿಂದ ಇತರ ಕಾರ್ಯಗಳೂ ನಡೆಯುತ್ತವೆ. ಅಂತೆಯೇ ನಾದದಿಂದಲೇ ಶಬ್ದವು ಅಭಿವ್ಯಕ್ತವಾಗುತ್ತದೆಯೆಂಬುದು ನಿಯತ. ತ್ವಗಿಂದ್ರಿಯದಿಂದ ವಸ್ತು ಸಂಯೋಗವೂ ವಸ್ತುವಿನ ಆಕೃತಿಯೂ ತಿಳಿಯುತ್ತದೆ. ಶೀತೋಷ್ಣಗಳ ಸ್ಪರ್ಶ ಪ್ರತ್ಯಕ್ಷವು ಮಾತ್ರ ತ್ವಗಿಂದ್ರಿಯದಿಂದಲೇ ಆಗುತ್ತದೆಯೆಂಬುದು ನಿಯತ. ತ್ವಗಿಂದ್ರಿಯದಲ್ಲಿರುವ ಸೂಕ್ಷ್ಮಸ್ಪರ್ಶವು ಬಾಹ್ಯವಾದ ಸ್ಥೂಲಸ್ಪರ್ಶಕ್ಕೆ ನಿಮಿತ್ತ.

ವ್ಯಂಜಕವು ನಿಯತವೆಂದು ತಾತ್ಪರ್ಯ.

**ಪ್ರಕಾಶಕಾನಾಂ ಭೇದಾಂಶ್ಚ ಪ್ರಕಾಶ್ಯೋಽರ್ಥೋಽನುವರ್ತತೇ ।**
**ತೈಲೋದಕಾದಿ ಭೇದೇ ತತ್ ಪ್ರತ್ಯಕ್ಷಂ ಪ್ರತಿಬಿಂಬಕೇ ॥ ೯೯ ॥**

ಅಭಿವ್ಯಂಜಕಗಳಲ್ಲಿರುವ ಸಂಖ್ಯೆ, ದೊಡ್ಡದು, ಚಿಕ್ಕದು ಮುಂತಾದ ಭೇದಗಳನ್ನು ಅಭಿವ್ಯಂಗ್ಯವಾದ ಪದಾರ್ಥವು ಅನುಸರಿಸಿಕೊಂಡಿರುತ್ತದೆ. ಈ ಭೇದವು ಎಣ್ಣೆ, ನೀರು ಮುಂತಾದ ಅಭಿವ್ಯಂಜಕಗಳು ಭಿನ್ನವಾದಾಗ ಪ್ರತಿಬಿಂಬದಲ್ಲಿ ಪ್ರತ್ಯಕ್ಷವಾಗಿ ಕಂಡು ಬರುತ್ತದೆ.

**ವಿವರಣೆ** – ಈಗ ಇನ್ನೊಂದು ಪೂರ್ವಪಕ್ಷ : ಅಭಿವ್ಯಂಜಕವು ದೊಡ್ಡದೋ ಚಿಕ್ಕದೋ ಆದರೆ ಅಭಿವ್ಯಂಗ್ಯವು ದೊಡ್ಡದೋ ಚಿಕ್ಕದೋ ಆಗಿಬಿಡುವುದಿಲ್ಲ. ಘಟವು ದೊಡ್ಡದೀಪದಲ್ಲಿಯೂ ಚಿಕ್ಕದೀಪದಲ್ಲಿಯೂ ಒಂದೇ ಬಗೆಯಾಗಿ ತೋರುತ್ತದೆ. ಹಾಗೆಯೇ ಎರಡು ದೀಪಗಳಿದ್ದರೆ ಒಂದೇ ಘಟವು ಎರಡು ಘಟವಾಗಿ ಕಾಣುವು–ದಿಲ್ಲ. ಶಬ್ದವು ಹಾಗಲ್ಲ. ವ್ಯಂಜಕಧ್ವನಿಯ ಉಚ್ಚಾರಣೆ ದೊಡ್ಡದಾದರೆ ಸ್ಫೋಟವು ದೊಡ್ಡದಾಗಿ ಗೋಚರಿಸುತ್ತದೆ. ಧ್ವನಿಯು ಚಿಕ್ಕದಾದರೆ ಚಿಕ್ಕದಾಗಿ ಗೋಚರಿಸುತ್ತದೆ. ಅನೇಕರು ಧ್ವನಿಯನ್ನುಚ್ಚರಿಸಿದರೆ ಅನೇಕ ಶಬ್ದಗಳು ವ್ಯಕ್ತವಾಗುತ್ತವೆ. ಆದ್ದರಿಂದ ಶಬ್ದವು ಜನ್ಯವೇ ಹೊರತು ವ್ಯಂಗ್ಯವಲ್ಲ.

ಸಿದ್ಧಾಂತಿಯ ಉತ್ತರ : ಹಾಗೇನೂ ಇಲ್ಲ. ಕೆಲವು ವ್ಯಂಗ್ಯಗಳು ವ್ಯಂಜಕ–ಧರ್ಮವನ್ನು ಅನುಸರಿಸುತ್ತವೆ. ಕನ್ನಡಿ ಚಿಕ್ಕದಾಗಿದ್ದರೆ ನಮ್ಮ ಮುಖವು ಚಿಕ್ಕದಾಗಿ ಕಾಣಿಸುತ್ತದೆ. ದೊಡ್ಡದಾಗಿದ್ದರೆ ದೊಡ್ಡದಾಗಿ ಉದ್ದವಾಗಿದ್ದರೆ ಉದ್ದವಾಗಿ ಗೋಚರಿಸುತ್ತದೆ. ಮುಖವು ಎಣ್ಣೆಯಲ್ಲಿ ಮಲಿನವಾಗಿ ತಿಳಿನೀರಿನಲ್ಲಿ ಸ್ವಚ್ಛವಾಗಿ ತೋರುತ್ತದೆ. ಕೆಂಪು ದೀಪದಲ್ಲಿ ಬಿಳಿಯದು ಕೆಂಪಾಗಿ ತೋರುತ್ತದೆ. ಒಂದೇ ಸೂರ್ಯಮಂಡಲವು ನಾನಾ ಜಲಪಾತ್ರೆಗಳಲ್ಲಿ ನಾನಾ ಸಂಖ್ಯೆಯಲ್ಲಿ ಕಾಣಿಸುತ್ತದೆ. ಅಂತೆಯೇ ಧ್ವನಿಯ ಸಂಖ್ಯಾದಿ ಭೇದಗಳು ಸ್ಫೋಟದಲ್ಲಿಯೂ ತೋರುತ್ತವೆ.

**ವಿರುದ್ಧಪರಿಮಾಣೇಷು ವಜ್ರಾದರ್ಶಜಲಾದಿಷು ।**
**ಪರ್ವತಾದಿಸರೂಪಾಣಾಂ ಭೇದಾನಾಂ ನಾಸ್ತಿ ಸಂಭವಃ ॥ ೧೦೦ ॥**

ವಿರುದ್ಧವಾದ ಅಳತೆಯುಳ್ಳ ವಜ್ರ, ಕನ್ನಡಿ, ಜಲಾದಿಗಳಲ್ಲಿ ಪರ್ವತಾದಿ–ಗಳಿಗೆ ಸದೃಶಗಳಾದ ಅನ್ಯಪದಾರ್ಥಗಳ ಉತ್ಪತ್ತಿಗೆ ಸಂಭವವಿಲ್ಲ.

**ವಿವರಣೆ** – ಇನ್ನೊಂದು ಶಂಕೆ: ನೀವು ಹೇಳಿದ ಪ್ರತಿಬಿಂಬದ ದೃಷ್ಟಾಂತವು

ಸರಿಯಲ್ಲ. ಸೂರ್ಯಮಂಡಲಾದಿಗಳಿಗಿಂತ ಅವುಗಳ ಪ್ರತಿಬಿಂಬವು ಅನ್ಯವೇ ಸರಿ. ಬಿಂಬಕ್ಕೆ ಸದೃಶವಾದ ಇನ್ನೊಂದು ವಸ್ತು ಜಲಾದಿಗಳಲ್ಲಿ ಹುಟ್ಟುತ್ತದೆ. ಅದು ವಿಭಿನ್ನಾಕೃತಿಯನ್ನು ತಳೆಯಬಹುದು. ದಾರ್ಷ್ಟಾಂತಿಕದಲ್ಲಾದರೋ ಮೊದಲು ಇರುವ ಶಬ್ದವೇ ವ್ಯಂಗ್ಯವಾಗುತ್ತದೆ. ಹೊಸದಾಗಿ ಹುಟ್ಟುವುದಿಲ್ಲವೆನ್ನುತ್ತೀರಿ.

ಇದಕ್ಕೆ ಸಮಾಧಾನ : ಪ್ರತಿಬಿಂಬವು ಹೊಸದಾಗಿ ಹುಟ್ಟುವುದಿಲ್ಲ. ದೊಡ್ಡ ಪರ್ವತದ ಆಕೃತಿಯು ಚಿಕ್ಕದಾದ ಕನ್ನಡಿಯಲ್ಲಿ ಹುಟ್ಟುವುದು ಹೇಗೆ? ಅದಕ್ಕೆ ಬೇಕಾದ ಮಣ್ಣು ಬಂಡೆ ಮೊದಲಾದ ಸಾಮಗ್ರಿಗಳು ಕನ್ನಡಿಯಲ್ಲಿವೆಯೆ? ಆದ್ದರಿಂದ ಪ್ರತಿಬಿಂಬವು ಬಿಂಬಕ್ಕಿಂತ ಭಿನ್ನವಸ್ತುವಲ್ಲ. ಬಿಂಬವೇ ಜಲಾದ್ಯುಪಾಧಿ ಭೇದದಿಂದ ನಾನಾ ರೂಪವಾಗಿ ಕಾಣುತ್ತದೆಯೆನ್ನುವುದು ಯುಕ್ತ.

**ಟಿಪ್ಪಣಿ** – ಬಿಂಬ ಪ್ರತಿಬಿಂಬವಾದವೆಂಬ ವಾದವೇ ಉಂಟು. ಬಿಂಬಕ್ಕಿಂತ ಪ್ರತಿಬಿಂಬವು ಭಿನ್ನವಲ್ಲ, ಒಂದೇ ಎಂಬುದು ಒಂದು ಮತ. ಪ್ರತಿಬಿಂಬವು ಭಿನ್ನವಸ್ತು, ಅದು ಅನಿರ್ವಚನೀಯವೆಂದು ಇನ್ನೊಂದು ಮತ. ಅವೆರಡಕ್ಕೆ ಅಭೇದವನ್ನು ಸ್ವೀಕರಿಸಿರುವ ಪಕ್ಷದಲ್ಲಿ ಈ ದೃಷ್ಟಾಂತವು ಯುಕ್ತವಾಗಿ ಹೊಂದುತ್ತದೆ. ಛಾಯಾಚಿತ್ರವು ಬಿಂಬಕ್ಕಿಂತ ಭಿನ್ನವಾದದ್ದು. ಅದು ಯಾಂತ್ರಿಕವಾದ ಚಿತ್ರ ಲೇಖನ. ಅಭಿವ್ಯಂಜಕವು ಉಪಾಧಿಯಾಗಿ ತನ್ನ ನಾನಾ ಧರ್ಮಗಳನ್ನು ಉಪಾಧೇಯವಾದ ಶಬ್ದದಲ್ಲಿ ಕಾಣಿಸುವುದು ಸಹಜವೇ.

**ತಸ್ಮಾದಭಿನ್ನಕಾಲೇಷು ವರ್ಣವಾಕ್ಯಪದಾದಿಷು ।**
**ವೃತ್ತಿಕಾಲಃ ಸ್ವಕಾಲಶ್ಚ ನಾದಭೇದಾದ್ವಿಭಾವ್ಯತೇ ॥ ೧೦೧ ॥**

ಆದ್ದರಿಂದ (ವ್ಯಂಗ್ಯದಲ್ಲಿ ವ್ಯಂಜಕಧರ್ಮದ ಅನುಗಮವಿರುವುದರಿಂದ) ಸ್ವತಃ ಕಾಲಭೇದರಹಿತವಾದ ವರ್ಣ–ಪದ–ವಾಕ್ಯ ಸ್ಫೋಟಗಳಲ್ಲಿ ಪ್ರಾಕೃತ ವೈಕೃತ ನಾದಗಳ ಭೇದದಿಂದ ದ್ರುತಾದಿ ವೃತ್ತಿಗಳ ಕಾಲವೂ ಸ್ವಕಾಲವೆನಿಸುವ ಏಕಮಾತ್ರ ದ್ವಿಮಾತ್ರ ಇತ್ಯಾದಿ ಕಾಲಭೇದವೂ ಕಂಡುಬರುತ್ತವೆ.

**ವಿವರಣೆ** – ಸ್ಫೋಟವು ನಿತ್ಯವಾದ್ದರಿಂದ ಅದಕ್ಕೆ ಕಾಲದ ಅಳತೆ ಇಲ್ಲ. ಅದು ಕಾಲದಿಂದ ಪರಿಚ್ಛಿನ್ನವಲ್ಲ. ಹಿಂದೆ ಹೇಳಿದ ದ್ರುತ–ಮಧ್ಯಮ ವಿಲಂಬಿತವೆಂಬ ವೃತ್ತಿಭೇದಗಳೂ ಸ್ವತಃ ಇಲ್ಲ. ಏಕೆಂದರೆ ಸ್ಫೋಟವು ಸದಾ ಇದ್ದೇ ಇರುತ್ತದೆ. ಅದನ್ನು ದ್ರುತ, ಮಧ್ಯಮ, ವಿಲಂಬಿತ ಎಂದು ವಿಂಗಡಿಸಲಾಗುವುದಿಲ್ಲ. ನಮ್ಮ ಬುದ್ಧಿಯಲ್ಲಿ ಮಾತ್ರ ಅವು ಇರುತ್ತವೆ. ಹಾಗೆ ಇರುವುದಕ್ಕೆ ವೈಕೃತಧ್ವನಿ ಕಾರಣ. ಈ ಧ್ವನಿಯ ಧರ್ಮವನ್ನು ಸ್ಫೋಟದಲ್ಲಿ ಆರೋಪಿಸಿಕೊಳ್ಳುತ್ತೇವೆ. ಅಂತೆಯೇ ಏಕಮಾತ್ರ

ದ್ವಿಮಾತ್ರ ಎಂಬ ಪ್ರಾಕೃತಧ್ವನಿಯ ಧರ್ಮವೂ ಸ್ಫೋಟದಲ್ಲಿಲ್ಲ. ಮಾತ್ರಾ ಎಂಬುದೂ ಒಂದು ಸೂಕ್ಷ್ಮವಾದ ಕಾಲವೇ. ಹ್ರಸ್ವ ಅಕಾರಾದಿ ವರ್ಣವನ್ನು ಉಚ್ಚರಿಸಲು ಬೇಕಾದ ಕಾಲವನ್ನು ಮಾತ್ರಾ ಎನ್ನುತ್ತಾರೆ. ನಿತ್ಯವಾದ ಸ್ಫೋಟದಲ್ಲಿ ಕ್ಷಣಿಕಭೇದವೂ ಬರುವುದಿಲ್ಲ. ಪ್ರಾಕೃತಧ್ವನಿಯಿಂದ ಸ್ಫೋಟವು ಪ್ರಕಾಶಿತವಾಗುವುದರಿಂದ ಅದನ್ನು 'ಸ್ವಕಾಲ' ಎಂದು ಶ್ಲೋಕದಲ್ಲಿ ಹೇಳಲಾಗಿದೆ. ವೈಕೃತಧ್ವನಿಯು ಅಲ್ಪಕಾಲದವರೆಗೆ ಅಥವಾ ಸ್ವಲ್ಪ ದೀರ್ಘಕಾಲದವರೆಗೆ ಸ್ಫೋಟಬುದ್ಧಿಯನ್ನು ನಿಲ್ಲಿಸಲು ಸಹಾಯ ಮಾಡುತ್ತದೆ. ಏವಂಚ ಅತ್ಯಂತ ಪರಿಶುದ್ಧವೂ ನಿತ್ಯವೂ ಆದ ಶಬ್ದತತ್ತ್ವವೆಂಬ ಸ್ಫೋಟವಿದೆಯೆಂದು ಸ್ವಸಿದ್ಧಾಂತದಂತೆ ಸ್ಥಾಪಿಸಲಾಯಿತು. ಶಬ್ದವೂ ಜನ್ಯವೆಂಬ ಪಕ್ಷದಲ್ಲಿ –

**ಯಃ ಸಂಯೋಗವಿಭಾಗಾಭ್ಯಾಂ ಕರಣೈರುಪಜಾಯತೇ ।**
**ಸ ಸ್ಫೋಟಃ ಶಬ್ದಜಾಃ ಶಬ್ದಾ ಧ್ವನಯೋಽನ್ಯೈರುದಾಹೃತಾಃ ॥ ೧೦೨ ॥**

ಕಂಠ, ತಾಲ್ವಾದಿ ಸ್ಥಾನಗಳೆಂಬ ಸಾಧನಗಳಿಂದ ಸಂಯೋಗವಿಭಾಗಗಳ ಮೂಲಕ ಶಬ್ದವು ಹುಟ್ಟುತ್ತದೆ. ಅದು ಅರ್ಥಬೋಧಕವಾದ್ದರಿಂದ ಸ್ಫೋಟ–ವೆಂದು ಕರೆಯಬಹುದು. ಅದು ಹುಟ್ಟಿದ ಮೇಲೆ ವೀಚೀತರಂಗನ್ಯಾಯದಿಂದ ಶಬ್ದದ ಮೇಲೆ ಇನ್ನೊಂದರಂತೆ ಹುಟ್ಟುವ ಶಬ್ದಗಳಿಗೆ ಧ್ವನಿಗಳೆಂದು ಅನ್ಯತಾರ್ಕಿಕರು ಹೇಳುತ್ತಾರೆ.

**ವಿವರಣೆ** – ಶಬ್ದವು ನಿತ್ಯವಲ್ಲ. ಉಚ್ಚರಿಸಿದಾಗ ಹುಟ್ಟಿ ಒಡನೆಯೇ ನಾಶಹೊಂದುತ್ತದೆ – ಎಂದು ತಾರ್ಕಿಕರ ಸಿದ್ಧಾಂತ. ಮೊದಲು ಯಾವುದು ವಕ್ತಾರನಿಂದ ಉತ್ಪಾದಿತವಾಗುತ್ತದೆಯೋ ಅದೇ ಶಬ್ದ. ಅದನ್ನು ಸ್ಫೋಟವೆಂದು ಕರೆಯುವುದಾದರೆ ನಮ್ಮ ಆಕ್ಷೇಪಣೆ ಏನೂ ಇಲ್ಲ. ಉತ್ಪನ್ನವಾದ ಆ ಶಬ್ದದಿಂದ ಸುತ್ತಲೂ ಅನೇಕ ಶಬ್ದಗಳು ಹುಟ್ಟಿ ಅಲೆಗಳಂತೆ ಸುತ್ತಲೂ ಹರಡಿ ಕೇಳುವವರ ಕಿವಿಗಳಿಗೆ ಬಂದು ಸೇರುತ್ತವೆ. ಈ ಶಬ್ದಜನ್ಯ ಶಬ್ದಗಳಿಗೆ ಧ್ವನಿಗಳೆಂದು ಹೆಸರು. ಧ್ವನಿಯು ಶ್ರವಣೇಂದ್ರಿಯಕ್ಕೆ ತಲುಪಿದೊಡನೆ ಶಬ್ದಜ್ಞಾನವಾಗಿ ಅರ್ಥವು ತಿಳಿಯುತ್ತದೆ. ಹೊಸದಾಗಿ ಹುಟ್ಟುವ ಈ ಧ್ವನಿಗಳು ಮುಂದೆ ಚಲಿಸಿದಂತೆ ಕ್ಷೀಣಿಸುತ್ತವೆ ಎಂದು ವೈಶೇಷಿಕರು ಹೇಳುತ್ತಾರೆ. ಅವರ ಮತದಲ್ಲಿ ಭೇರೀ ಶಬ್ದವು ಕೇಳಿಸುತ್ತದೆ ಎನ್ನುವುದು ಔಪಚಾರಿಕ. ಭೇರೀ ಶಬ್ದಕ್ಕೂ ಕೇಳಿಸುವ ಧ್ವನಿಗೂ ನಡುವೆ ಅಸಂಖ್ಯಾತವಾದ ಧ್ವನಿಗಳು ಹುಟ್ಟಿ ನಶಿಸುತ್ತವೆ. ಮೊದಲು ಸಾಕ್ಷಾತ್ತಾಗಿ ಹುಟ್ಟಿದ್ದು ಶಬ್ದವೆಂದೂ ಅನಂತರ ಹುಟ್ಟಿದವು ತರಂಗರೂಪವಾದ ಶಬ್ದಗಳೆಂದೂ ಅವರ ಮತ. ಅರ್ಥಬೋಧವಾದದ್ದು ಕಿವಿಯ ಬಳಿ ಹುಟ್ಟಿದ ಶಬ್ದದಿಂದ. ಭೇರೀ

ಶಬ್ದವನ್ನು ಕೇಳಿದೆ–ಇತ್ಯಾದಿ ವ್ಯವಹಾರವು ಮೊದಲು ಹುಟ್ಟಿದ ಶಬ್ದಕ್ಕೂ ಕಡೆಯಲ್ಲಿ ಕೇಳಿದ ಧ್ವನಿಗೂ ಅಭೇದಾರೋಪವನ್ನು ಮಾಡಿಕೊಳ್ಳುವುದರಿಂದ ಬರುತ್ತದೆ.

ವೈಯಾಕರಣರ ಧ್ವನಿಯೇ ತಾರ್ಕಿಕರ ಬೋಧಕ ಶಬ್ದ. ಅವರ ಶಬ್ದವು ವೈಯಾಕರಣರಿಗೆ ಧ್ವನಿ. ಪ್ರಾಕೃತ–ವೈಕೃತ ಎಂಬ ಭೇದವನ್ನು ತಾರ್ಕಿಕರು ಹೇಳಿಲ್ಲ.

**ಅಲ್ಪೇ ಮಹತಿ ವಾ ಶಬ್ದೇ ಸ್ಫೋಟಕಾಲೋ ನ ಭಿದ್ಯತೇ ।**
**ಪರಸ್ತು ಶಬ್ದಸಂತಾನಃ ಪ್ರಚಯಾಪಚಯಾತ್ಮಕಃ ॥ ೧೦೩ ॥**

ಧ್ವನಿಯು ಚಿಕ್ಕದಾಗಿರಲಿ ದೊಡ್ಡದಾಗಿರಲಿ ಮೊದಲು ಉತ್ಪನ್ನವಾದ ಶಬ್ದದ ಕಾಲವು ಭಿನ್ನ ಭಿನ್ನವಾಗುವುದಿಲ್ಲ. ಪ್ರಥಮ ಶಬ್ದವು ಹುಟ್ಟಿದ ಮೇಲೆ ಜನಿಸುವ ಧ್ವನಿಸಂತಾನವು ವೃದ್ಧಿಹ್ರಾಸಗಳಿಂದ ಕೂಡಿರುತ್ತದೆ.

**ವಿವರಣೆ** – ಶಬ್ದವು ಜನ್ಯ, ಅನಿತ್ಯ ಎಂದು ಹೇಳತಕ್ಕವರೂ ಸಹ ಪ್ರಥಮೋತ್ಪನ್ನವಾದ ಅರ್ಥಬೋಧಕ ಶಬ್ದದಲ್ಲಿ ಕಾಲಭೇದವಿಲ್ಲ ಎನ್ನುತ್ತಾರೆ. ಅವರ ಮತದಲ್ಲಿ ಶಬ್ದವು ಗುಣವಾದ್ದರಿಂದ ಮತ್ತು ಅಮೂರ್ತವಾದ್ದರಿಂದ ಸಣ್ಣದು, ದೊಡ್ಡದು ಎಂಬ ಪರಿಮಾಣವನ್ನು ಅದರಲ್ಲಿ ಹೇಳಲು ಬರುವುದಿಲ್ಲ. ದೊಡ್ಡ ಶಬ್ದ, ಮೆಲ್ಲನೆಯ ಶಬ್ದ – ಎಂಬ ವ್ಯವಹಾರವು ಪ್ರಥಮೋತ್ಪನ್ನಶಬ್ದದಿಂದ ಹುಟ್ಟಿದ ಧ್ವನಿಸಂತಾನಕ್ಕೆ ಸಂಬಂಧಿಸಿದ್ದು. ಆ ಧ್ವನಿಸಂತಾನವು ಅಲ್ಪದೂರದವರೆಗೆ ಹೋಗುವಂತಿದ್ದರೆ ಶಬ್ದವು ಚಿಕ್ಕದೆಂದೂ ಹೆಚ್ಚು ದೂರದವರೆಗೆ ಹೋಗುವಂತಿದ್ದರೆ ದೊಡ್ಡದೆಂದೂ ವ್ಯವಹರಿಸುತ್ತಾರೆ. ದೂರವ್ಯಾಪ್ತಿಗೆ ಪ್ರಚಯವೆಂದೂ ಅಲ್ಪವ್ಯಾಪ್ತಿಗೆ ಅಪಚಯವೆಂದೂ ಹೆಸರು. ಮೊದಲು ಹುಟ್ಟಿದ ಶಬ್ದವು ಮುಂದಿನ ಧ್ವನಿಸಂತತಿಗೆ ಕಾರಣ. ಧ್ವನಿಸಂತತಿಯು ಕಾರ್ಯ. ಹ್ರಸ್ವ, ದೀರ್ಘ, ಅಲ್ಪಪ್ರಾಣ, ಮಹಾಪ್ರಾಣ ಎಂಬ ಭೇದಗಳೆಲ್ಲವೂ ಆಯಾ ಶಬ್ದಸ್ವರೂಪಗಳು. ಸ್ವತಃ ಅವುಗಳಿಗೆ ಕಾಲಕೃತವಾದ ಭೇದವಿಲ್ಲ. ಕಾರ್ಯಭೂತಧ್ವನಿಗಳ ಪ್ರಚಯಾಪಚಯಗಳಿಂದ ಮೂಲ ಶಬ್ದದಲ್ಲಿ ಅವು ಇವೆಯೆಂದು ತಿಳಿಯುತ್ತೇವೆ.

**ದೂರಾತ್ ಪ್ರಭೇವ ದೀಪಸ್ಯ ಧ್ವನಿಮಾತ್ರಂ ತು ಲಕ್ಷ್ಯತೇ ।**
**ಘಂಟಾದೀನಾಂ ಚ ಶಬ್ದೇಷು ವ್ಯಕ್ತೋ ಭೇದಃ ಸ ದೃಶ್ಯತೇ ॥ ೧೦೪ ॥**

ಶಬ್ದಾನಿತ್ಯವಾದಿಗಳಲ್ಲಿಯೇ ಕೆಲವರು ಹೇಳುವುದೇನೆಂದರೆ :– ದೂರ–ದಲ್ಲಿದ್ದಾಗ ದೀಪದ ಪ್ರಭೆಯು ಮಾತ್ರ ಗೋಚರಿಸುವಂತೆ, ದೂರದಿಂದ ಧ್ವನಿಯು ಮಾತ್ರ ಕೇಳಿಸುತ್ತದೆ, ಶಬ್ದವು ಕೇಳಿಸುವುದಿಲ್ಲ. ಘಂಟೆ, ಭೇರಿ, ತಾಳ

ಮೊದಲಾದವುಗಳ ಶಬ್ದದಲ್ಲಿ ಸ್ಫೋಟನಾದಗಳ ವ್ಯತ್ಯಾಸವು ಸ್ಪಷ್ಟವಾಗಿ ಕಾಣಿಸುತ್ತದೆ.

**ವಿವರಣೆ** – ಪ್ರಥಮ ಶಬ್ದವು ಹುಟ್ಟಿದ ಮೇಲೆ ಧ್ವನಿಗಳು ಹುಟ್ಟುವುದಿಲ್ಲ ಪ್ರಥಮ ಶಬ್ದದ ಜೊತೆಗೇ ಅವು ಹುಟ್ಟುತ್ತವೆ. ಹೂವಿನ ಜೊತೆಗೆ ಗಂಧವು ಹುಟ್ಟುತ್ತದೆ. ಮೊದಲು ಹೂವು ಹುಟ್ಟಿ ಆಮೇಲೆ ಗಂಧ ಹುಟ್ಟುವುದಿಲ್ಲ. ಅಂತೆಯೇ ಇದು. ಘಂಟೆಯನ್ನು ಬಾರಿಸಿದಾಗ ಅಭಿಘಾತವಾದೊಡನೆ ಹುಟ್ಟಿದ ಧ್ವನಿಯು ತಾರವಾಗಿರುತ್ತದೆ. ಅದೇ ಧ್ವನಿ ಕ್ರಮೇಣ ಕ್ಷೀಣಿಸುತ್ತದೆ. ಹಾಗೆ ಬಾಯಿಯಿಂದ ಉಚ್ಚರಿಸಿದ ಧ್ವನಿಯು ಮೊದಲು ಅಕ್ಷರಾತ್ಮಕವಾಗಿದ್ದು ಕ್ರಮೇಣ ದೂರ ಸಾಗಿ ತನ್ನ ಸ್ಪಷ್ಟತೆಯನ್ನು ಕಳೆದುಕೊಂಡು ಕೇವಲ ಧ್ವನ್ಯಾತ್ಮಕವಾಗಿ ಕೇಳುತ್ತದೆ.

**ದ್ರವ್ಯಾಭಿಘಾತಾತ್ ಪ್ರಚಿತೌ ಭಿನ್ನೌ ದೀರ್ಘಪ್ಲುತಾವಪಿ ।**
**ಕಂಪೇ ತೂಪರತೇ ಜಾತಾ ನಾದಾ ವೃತ್ತೇರ್ವಿಶೇಷಕಾಃ ॥ ೧೦೫ ॥**

ತಾಲ್ವಾದಿಸ್ಥಾನ ಮತ್ತು ಜಿಹ್ವಾಗ್ರಾದಿ ಕರಣವೆಂಬ ದ್ರವ್ಯಗಳ ಅಭಿಘಾತ–ದಿಂದ ಸ್ವರೂಪಭೇದ ಉಳ್ಳ ದೀರ್ಘಪ್ಲುತಗಳು ಉಚಿತ ರೀತಿಯಲ್ಲಿ ಪ್ರಚಯ ಹೊಂದುತ್ತವೆ. ಅಭಿಘಾತಜನ್ಯವಾದ ಸ್ಪಂದವು ನಿಂತ ಮೇಲೆ ಹುಟ್ಟುವ ನಾದಗಳಿಂದ ಹುಟ್ಟಿ ದ್ರುತಾದಿ ವ್ಯಕ್ತಿಗಳಿಗೆ ಭೇದ ವ್ಯವಸ್ಥಾಕಾರಿಗಳಾಗುತ್ತವೆ.

**ವಿವರಣೆ** – ಹಿಂದೆ ಹೇಳಿದ ವಿಚಾರವನ್ನೇ ಇಲ್ಲಿ ಸ್ಪಷ್ಟಮಾಡಲಾಗಿದೆ. ಅಭಿಘಾತದ ಒತ್ತಡವನ್ನನುಸರಿಸಿ, ಧ್ವನಿಯನ್ನು ಉತ್ಪತ್ತಿ ಮಾಡುವ ವಾಯುವಿನಲ್ಲಿ ಕಂಪನ ಉಂಟಾಗುತ್ತದೆ. ಶಬ್ದವು ಅನಿತ್ಯವೆಂಬ ಪಕ್ಷದಲ್ಲಿ ವಾಯುಕಂಪನಕ್ಕೆ ಅನುಗುಣವಾಗಿ ದೀರ್ಘವೋ ಪ್ಲುತವೋ ಹುಟ್ಟುತ್ತದೆ. ಅನಂತರವೂ ಮುಂದು–ವರಿಯುವ ಕಂಪನಗಳಿಂದ ದ್ರುತಾದಿವೃತ್ತಿಗಳು ತೋರುತ್ತವೆ. ಶಬ್ದವು ನಿತ್ಯವೆಂಬ ಪಕ್ಷದಲ್ಲಿ ವಾಯುಕಂಪನಗಳಿಂದ ಧ್ವನಿಯು ಹುಟ್ಟಿ ಹ್ರಸ್ವಾದಿ ವರ್ಣವನ್ನು ಅಭಿವ್ಯಂಜಿಸುತ್ತದೆ. ಇಲ್ಲಿ ತಿಳಿಯಬೇಕಾದ ವಿಷಯವಿಷ್ಟು – ನಿತ್ಯಶಬ್ದವೆಂಬ ಪಕ್ಷದಲ್ಲಿ ಮಾತ್ರಾ ಕಾಲಗಳು ಧ್ವನಿಗತವಾದವು. ಅವುಗಳನ್ನು ಶಬ್ದದಲ್ಲಿ ಆರೋಪಿಸಿ ಹ್ರಸ್ವ, ದೀರ್ಘ, ಪ್ಲುತ ಎಂದು ವ್ಯವಹರಿಸುತ್ತೇವೆ. ಅನಿತ್ಯಶಬ್ದಪಕ್ಷದಲ್ಲಿ ಪ್ರಥಮ ಧ್ವನಿಯೇ ಶಬ್ದವಾದ್ದರಿಂದ ಅಕಾರಾದಿಗಳಲ್ಲಿಯೇ ಹ್ರಸ್ವತ್ವಾದಿ ಧರ್ಮಗಳಿರುತ್ತವೆ. ಆರೋಪಿಸಬೇಕಾದ್ದಿಲ್ಲ. ಅನಂತರ ಮುಂದುವರಿಯುವ ಧ್ವನಿಗಳು ದ್ರುತಾದಿವೃತ್ತಿ–ಭೇದಗಳಿಗೆ ನಿಮಿತ್ತಗಳಾಗುತ್ತವೆ. ಮೂಲಶಬ್ದವಿಲ್ಲದಿದ್ದರೂ ಧ್ವನಿಯಿಂದ ಧ್ವನಿಗಳು ಅನುರಣನ ರೂಪದಲ್ಲಿ ಹುಟ್ಟುತ್ತವೆ.

**ಅನವಸ್ಥಿತಕಂಪೇಽಪಿ ಕರಣೇ ಧ್ವನಯೋಽಪರೇ ।**
**ಸ್ಫೋಟಾದೇವೋಪಜಾಯಂತೇ ಜ್ವಾಲಾ ಜ್ವಾಲಾಂತರಾದಿವ ॥ ೧೦೬ ॥**

ಇನ್ನು ಕೆಲವರು ಹೇಳುವುದೇನೆಂದರೆ, ಜಿಹ್ವಾಗ್ರವೇ ಮೊದಲಾದ ಸಾಧನದಲ್ಲಿ ಸ್ಪಂದವು ನಿಂತು ಹೋದರೂ ಉಳಿದ ಧ್ವನಿಗಳು ಮೂಲಶಬ್ದ-ವಾದ ಸ್ಫೋಟದಿಂದಲೇ ಹುಟ್ಟುತ್ತವೆ. ಮೂಲೇಂಧನದಿಂದ ಒಂದು ಜ್ವಾಲೆಯಾದ ಮೇಲೆ ಇನ್ನೊಂದು ಜ್ವಾಲೆಯು ಹುಟ್ಟುವಂತೆ ಸ್ಫೋಟದಿಂದಲೇ ಈ ಧ್ವನಿಗಳು ಜನಿಸುತ್ತವೆ.

**ವಿವರಣೆ** – ಸ್ಫೋಟವೆಂದರೆ ಶಬ್ದಾನಿತ್ಯವಾದಿಗಳಿಗೆ ಮೊದಲು ಹುಟ್ಟುವ ಶಬ್ದ. ಹಿಂದಿನ ಶ್ಲೋಕದಲ್ಲಿ ಒಂದು ನಾದದಿಂದ ಇನ್ನೊಂದು ಹುಟ್ಟುತ್ತದೆ. ಮೂಲಶಬ್ದವು ಇರುವುದಿಲ್ಲ ಎಂಬ ಅಭಿಪ್ರಾಯವನ್ನು ತಿಳಿಸಿದೆ. ಈ ಶ್ಲೋಕದಲ್ಲಿ ಮೂಲಶಬ್ದವು ಅನೇಕ ಕ್ಷಣದವರೆಗೆ ದೀಪವಿರುವಂತೆ ಇರುತ್ತದೆಯೆಂದೂ ಅದು ಇರುವವರೆಗೆ ನಾದಗಳು ಒಂದರಮೇಲೊಂದರಂತೆ ಹುಟ್ಟುತ್ತವೆಯೆಂದೂ ಹೇಳಿದೆ. ಇವೆಲ್ಲವೂ ಶಬ್ದವು ಅನಿತ್ಯವೆಂಬ ಪಕ್ಷದಲ್ಲಿ.

ಶಬ್ದದ ಮೂಲದ್ರವ್ಯದ ವಿಷಯದಲ್ಲಿ ಮತಭೇದಗಳುಂಟು –

**ವಾಯೋರಣೂನಾಂ ಜ್ಞಾನಸ್ಯ ಶಬ್ದತ್ವಾಪತ್ತಿರಿಷ್ಯತೇ ।**
**ಕೈಶ್ಚಿದ್ದರ್ಶನಭೇದೋಽತ್ರ ಪ್ರವಾದೇಷ್ವನವಸ್ಥಿತಃ ॥ ೧೦೭ ॥**

ವಾಯುವು ಶಬ್ದವಾಗುತ್ತದೆಯೆಂದು ಕೆಲವರೂ ಪರಮಾಣುಗಳು ಶಬ್ದವಾಗುತ್ತವೆಯೆಂದು ಕೆಲವರೂ ಜ್ಞಾನವೇ ಶಬ್ದವಾಗಿ ಪರಿಣಮಿಸುತ್ತದೆ-ಯೆಂದು ಮತ್ತೆ ಕೆಲವರೂ ಅಭಿಪ್ರಾಯಪಡುತ್ತಾರೆ. ಸಿದ್ಧಾಂತಗಳಲ್ಲಿ ಈ ವಿಚಾರವು ನಿಯತವಾಗಿಲ್ಲ. ವಿವರಣೆ ಮುಂದಿನ ಶ್ಲೋಕಗಳಲ್ಲಿದೆ.

**ಲಬ್ಧಕ್ರಿಯಃ ಪ್ರಯತ್ನೇನ ವಕ್ತುರಿಚ್ಛಾನುವರ್ತಿನಾ ।**
**ಸ್ಥಾನೇಷ್ವಭಿಹತೋ ವಾಯುಃ ಶಬ್ದತ್ವಂ ಪ್ರತಿಪದ್ಯತೇ॥ ೧೦೮ ॥**

ಮಾತಾಡತಕ್ಕವನು ಮೊದಲು ಶಬ್ದಪ್ರಯೋಗೇಚ್ಛೆಯಿಂದ ಪ್ರಯತ್ನಿಸು-ತ್ತಾನೆ. ಆ ಪ್ರಯತ್ನದಿಂದ ಪ್ರಾಣವಾಯುವಿನಲ್ಲಿ ಕ್ರಿಯೆ ಹುಟ್ಟುತ್ತದೆ. ಆ ವಾಯು ಕಂಠ ತಾಲ್ವಾದಿ ಸ್ಥಾನಗಳಲ್ಲಿ ಅಭಿಹತವಾಗಿ ಶಬ್ದಸ್ವರೂಪವನ್ನು ಪಡೆಯುತ್ತದೆ.

ಅ) ಶುಕ್ಲಯಜುಃಪ್ರಾತಿಶಾಖ್ಯದಲ್ಲಿ ಹೀಗೆ ಹೇಳಿದೆ –

೧. ವಾಯುಃ ಖಾತ್ ॥ (೧–೬)
ಆಕಾಶದಿಂದ ವಾಯು ಹುಟ್ಟುತ್ತದೆ.

೨. ಶಬ್ದಸ್ತತ್ ॥
ಶಬ್ದವು ವಾಯುಸ್ವರೂಪವಾದದ್ದು.

ಆ) ಶಿಕ್ಷಾವಾಕ್ಯ ಹೀಗಿದೆ –

'ಮನೋಽಭಿಹತಃ ಕಾಯಾಗ್ನಿಃ ಪ್ರಾಣಮುದೀರಯತಿ। ಸ ನಾಭೇರುದ್ಯನ್ ಮೂರ್ಧ್ನ್ಯಭಿಹತಃ ಪುನರುದ್ಯತಾ ಮರುತಾಭಿಹನ್ಯಮಾನೋ ಧ್ವನಿಃ ಸಂಪದ್ಯತೇ ಕ ಇತಿ ವಾ ಖ ಇತಿ ವಾ ॥

ಮನಸ್ಸಿನಿಂದ ಪ್ರೇರಿತವಾದ ಕಾಯಾಗ್ನಿಯು ಪ್ರಾಣವಾಯುವನ್ನು ಮೇಲಕ್ಕೆ ತಳ್ಳುತ್ತದೆ. ಅದು ನಾಭಿಯಿಂದ ಹೊರಟು ಮೂರ್ಧದಲ್ಲಿ ಅಭಿಹತವಾಗುತ್ತದೆ. ಆಗ ಮತ್ತೆ ಚದುರಿ ಮೇಲೆದ್ದ ವಾಯುವಿನ ಇನ್ನೊಂದು ಅಂಶದಿಂದ ಅಭಿಹತವಾಗಿ 'ಕ' ಎಂದೋ 'ಖ' ಎಂದೋ ಧ್ವನಿಯ ರೂಪವನ್ನು ಪಡೆಯುತ್ತದೆ.

ಇ) 'ಶಬ್ದಾರ್ಥಪ್ರತ್ಯಯಾನಾಮಿತರೇತರಾಧ್ಯಾಸಾತ್.....' ಎಂಬ ಯೋಗಸೂತ್ರದ (೩–೧೭) ಭಾಷ್ಯದಲ್ಲಿ ವಾಚಸ್ಪತಿಮಿಶ್ರರೂ ನಾಗೇಶಭಟ್ಟರೂ ಶಬ್ದವು ವಾಯುವಿನ ಪರಿಣತಿಭೇದವೆಂದು ಬರೆದಿದ್ದಾರೆ.

ಈ) ಮೀಮಾಂಸಕರು ಶಬ್ದವು ವಾಯುಗುಣವೆಂದೂ ಆಕಾಶ ಗುಣವಲ್ಲವೆಂದೂ ಹೇಳುತ್ತಾರೆ.

**ತಸ್ಯ ಕಾರಣಸಾಮರ್ಥ್ಯಾತ್ ವೇಗಪ್ರಚಯಧರ್ಮಣಃ ।**
**ಸನ್ನಿಪಾತಾದ್ ವಿಭಜ್ಯಂತೇ ಸಾರವತ್ಯೋಽಪಿ ಮೂರ್ತಯಃ ॥ ೧೦೯ ॥**

ವಕ್ತಾರನ ಪ್ರಯತ್ನವು ವಾಯುವಿನಲ್ಲುಂಟಾಗುವ ಕ್ರಿಯೆಗೆ ಕಾರಣ. ಈ ಕಾರಣದ ಸಾಮರ್ಥ್ಯದಿಂದ ವಾಯುವಿನಲ್ಲಿ ವೇಗವೂ ಪ್ರಚಯವೂ ಉಂಟಾಗುತ್ತವೆ. ಪ್ರಚಯವೆಂದರೆ ಸಾಂದ್ರತೆ. ಈ ವಾಯು ಕಂಠ ತಾಲ್ವಾದಿಸ್ಥಾನಗಳನ್ನು ಅಭಿಘಾತಿಸಿದಾಗ ಸಾಂದ್ರವಾದ ವಾಯುವಿನ ಕಠಿಣಾ–ಕೃತಿಗಳೂ ಸಹ ಒಡೆದು ವಿಭಿನ್ನವಾಗುತ್ತವೆ.

**ವಿವರಣೆ** – ವಾಯುವು ವಕ್ತಾರನ ಪ್ರಯತ್ನದಿಂದ ಮೇಲೆ ನುಗ್ಗಿದಾಗ ಅದರಲ್ಲಿ ವೇಗವೂ ಪ್ರಚಯವೂ ಉಂಟಾಗುತ್ತದೆ. ಅದು ಮೂರ್ಧದಿಂದ ಅಭಿಹತವಾಗಿ ಕಂಠ ತಾಲ್ವಾದಿಸ್ಥಾನಗಳಲ್ಲಿ ಪ್ರೇರಿತವಾದಾಗ ಅದರ ಸಾಂದ್ರವಾದ ಆಕೃತಿಯು ವಿಭಿನ್ನವಾಗುತ್ತದೆ. ವಿಭಕ್ತವಾದ ವಾಯುವಿನ ಅಂಶಗಳಲ್ಲಿ ಘರ್ಷಣೆ–ಯುಂಟಾಗಿ ಸ್ಥಾನ ಪ್ರಯತ್ನಗಳಿಗೆ ಅನುಗುಣವಾಗಿ ಅಕ್ಷರವಾಗಿ ವಾಯುವೇ ರೂಪಾಂತರವನ್ನು ಪಡೆಯುತ್ತದೆ. ವಾಯುವೇ ಶಬ್ದವಾಗುತ್ತದೆಯೆಂಬ ಪಕ್ಷವಿದು.

**ಟಿಪ್ಪಣಿ** – ವೃಷಭದೇವ ಮತ್ತು ಸೂರ್ಯನಾರಾಯಣ ಶುಕ್ಲರು ಈ ಶ್ಲೋಕದ ಎರಡನೆ ಸಾಲಿಗೆ ಈ ರೀತಿ ಅರ್ಥ ಬರೆದಿದ್ದಾರೆ – 'ವಾಯುವಿನ ಅಭಿಘಾತ–ವಾದಾಗ ಬೆಟ್ಟ, ಮರ–ಮುಂತಾದ ಬಲಶಾಲಿ ಆಕೃತಿಗಳೂ ವಿಭಕ್ತವಾಗಿ ಬಿಡುತ್ತವೆ. ಇನ್ನು ಕಂಠತಾಲ್ವಾದಿಗಳು ಸಡಲಿ ವಿಭಕ್ತವಾಗುವುದರಲ್ಲಿ ಆಶ್ಚರ್ಯವೇನು ?' ಹೀಗೆ ಅರ್ಥ ಮಾಡಲು ಸಾಧ್ಯವಿದೆಯಾದರೂ ಪ್ರಕೃತೋಪಯೋಗಿಯಲ್ಲ. ಏಕೆಂದರೆ ವಾಯುವೇ ಶಬ್ದವಾಗುತ್ತದೆಯೆಂದು ಇಲ್ಲಿ ಹೇಳಬೇಕಾಗಿದೆ. ಮೇಲೆ ನಾವು ಬರೆದ ಅರ್ಥ ರಘುನಾಥಶರ್ಮರ ಅಂಬಾಕರ್ತ್ರೀವ್ಯಾಖ್ಯಾನಕ್ಕೆ ಅನುಸಾರವಾಗಿದೆ. ಅದೇ ಯುಕ್ತವಾದದ್ದು.

**ಅಣವಃ ಸರ್ವಶಕ್ತಿತ್ವಾತ್ ಭೇದಸಂಸರ್ಗವೃತ್ತಯಃ ।**
**ಛಾಯಾತಪತಮಃಶಬ್ದಭಾವೇನ ಪರಿಣಾಮಿನಃ ॥ ೧೧೦ ॥**

ಅಣುಗಳಲ್ಲಿ ಸಮಸ್ತಶಕ್ತಿಗಳೂ ಇವೆ. ಅವು ನಾನಾವಿಧವಾದ ಸಂಯೋಗ ವಿಭಾಗಗಳನ್ನು ಪಡೆದು ನೆರಳು, ಬೆಳಕು, ಕತ್ತಲೆ ಮತ್ತು ಶಬ್ದಗಳ ರೂಪದಿಂದ ಪರಿಣಾಮ ಹೊಂದುತ್ತವೆ.

**ವಿವರಣೆ** – ಇದು ಜೈನಮತ. ಅಣುಗಳನ್ನು ಪುದ್ಗಲಗಳೆಂದು ಜೈನರು ಹೇಳುತ್ತಾರೆ. ಪೃಥ್ವಿ, ಜಲ, ಅಗ್ನಿ, ವಾಯು – ಇವೆಲ್ಲವೂ ಪುದ್ಗಲಮಯಗಳು. ಈ ಪುದ್ಗಲಗಳಿಗೆ ಸಮಸ್ತಶಕ್ತಿಗಳೂ ಇವೆ. ಸಂಯೋಗ ವಿಭಾಗಗಳ ಭೇದದಿಂದ ನಾನಾ ವಸ್ತುಗಳಾಗಿ ಪರಿಣಾಮ ಹೊಂದುತ್ತವೆ. ನೆರಳು, ಬೆಳಕು, ಕತ್ತಲೆಗಳೂ ಸಹ ಪುದ್ಗಲಗಳಿಂದಾದ ವಸ್ತುಗಳೆಂದು ಅವರ ಮತ. ಹಾಗೆ ಶಬ್ದವೂ ಸಹ ಪುದ್ಗಲಗಳಿಂದ (ಅಣುಗಳಿಂದ) ಉತ್ಪನ್ನವಾಗುತ್ತದೆ.

**ಸ್ವಶಕ್ತೌ ವ್ಯಜ್ಯಮಾನಾಯಾಂ ಪ್ರಯತ್ನೇನ ಸಮೀರಿತಾಃ ।**
**ಅಭ್ರಾಣೀವ ಪ್ರಚೀಯಂತೇ ಶಬ್ದಾಖ್ಯಾಃ ಪರಮಾಣವಃ ॥೧೧೧**

ವಕ್ತಾರನ ಉಚ್ಚಾರಣಪ್ರಯತ್ನದಿಂದ ಪರಮಾಣುಗಳಲ್ಲಿ ಪ್ರೇರಣ ಕ್ರಿಯೆಯುಂಟಾಗುತ್ತದೆ. ಆಗ ಅವುಗಳಲ್ಲಿರುವ ಶಬ್ದವಾಗಿ ಪರಿಣಮಿಸುವ ಶಕ್ತಿಯು ಪ್ರಕಟವಾಗಿ ಕಾರ್ಯೋನ್ಮುಖವಾಗುತ್ತದೆ. ಆಗ ಈ ಪರ–ಮಾಣುಗಳು ಮೋಡಗಳಂತೆ ಸಂಘಟಿಸಿ ಶಬ್ದವೆಂಬ ಹೆಸರನ್ನು ಪಡೆಯತ್ತವೆ.

**ವಿವರಣೆ** – ಜೈನದರ್ಶನದಲ್ಲಿ ಜೀವ, ಅಜೀವ ಎಂದು ಪದಾರ್ಥಗಳು ಎರಡುವಿಧ. ಜೀವವು ಚೇತನದ್ರವ್ಯ, ಅಜೀವವು ಅಚೇತನವಾದ ಜಡದ್ರವ್ಯ. ಅಜೀವ ದ್ರವ್ಯದಲ್ಲಿ ಪುದ್ಗಲ, ಧರ್ಮ, ಅಧರ್ಮ, ಆಕಾಶ, ಕಾಲ – ಎಂಬ ಐದು ವಿಧಗಳಿವೆ. ಪುದ್ಗಲವೆಂದರೆ ಪರಮಾಣುಪುಂಜ. ಧರ್ಮ, ಅಧರ್ಮ–ಎಂದರೆ ಪುಣ್ಯ ಪಾಪಗಳೆಂದು ಅರ್ಥವಲ್ಲ. ಇದೊಂದು ಪಾರಿಭಾಷಿಕ ಶಬ್ದ. ಜೀವ ಮತ್ತು ಪುದ್ಗಲಗಳ ಚಲನಕ್ಕೆ ಕಾರಣವಾದ ಒಂದು ಸ್ವತಂತ್ರ ದ್ರವ್ಯಕ್ಕೆ ಧರ್ಮವೆಂದು ಹೆಸರು. ಮೀನು ಈಜುವುದಕ್ಕೆ ನೀರು ಇದ್ದಂತೆ ಜೀವ ಪುದ್ಗಲಗಳ ಓಡಾಟಕ್ಕೆ ಇದು ಬೇಕು. ಜೀವ ಪುದ್ಗಲಗಳು ಒಂದೆಡೆ ನಿಲ್ಲುವುದಕ್ಕೆ ಬೇಕಾದ ದ್ರವ್ಯವೇ ಅಧರ್ಮ. ಧರ್ಮ, ಅಧರ್ಮಗಳು ಅಮೂರ್ತವೂ ನಿತ್ಯವೂ ಆಗಿವೆ. ಪಂಚಮಹಾಭೂತಗಳು ಪುದ್ಗಲದಿಂದಲೇ ಆಗಿವೆ. ಸ್ಪರ್ಶ, ರೂಪ, ರಸ, ಗಂಧ–ಎಂಬ ನಾಲ್ಕು ಗುಣಗಳಿವೆ. ಇವು ದ್ರವ್ಯವನ್ನು ಬಿಟ್ಟು ಪ್ರತ್ಯೇಕವಾಗಿರುವುದಿಲ್ಲ. ಶಬ್ದವು ಗುಣವಲ್ಲ, ಅದು ದ್ರವ್ಯ. ತಾಲ್ವಾದಿಸ್ಥಾನಗಳಲ್ಲಿ ವಾಯುವಿನಿಂದ ಅಭಿಘಾತವಾದಾಗ ಪುದ್ಗಲಗಳು ಸಂಯೋಗವಿಭಾಗಗಳಿಂದ ಸಾಂದ್ರೀಕೃತವಾಗಲು ಶಬ್ದದ್ರವ್ಯವು ಹುಟ್ಟುತ್ತದೆ ಎಂದು ಜೈನದರ್ಶನವು ಹೇಳುತ್ತದೆ.

**ಅಥಾಯಮಾಂತರೋ ಜ್ಞಾತಾ ಸೂಕ್ಷ್ಮವಾಗಾತ್ಮನಾ ಸ್ಥಿತಃ ।**
**ವ್ಯಕ್ತಯೇ ಸ್ವಸ್ಯ ರೂಪಸ್ಯ ಶಬ್ದತ್ವೇನ ವಿವರ್ತತೇ ॥ ೧೧೨ ॥**

ಇನ್ನು ಮುಖ್ಯ ಪಕ್ಷದಲ್ಲಿ, ದೇಹದ ಹೃದಯಾಕಾಶದಲ್ಲಿರುವ ಜ್ಞಾತೃವು ಸೂಕ್ಷ್ಮವಾದ ವಾಗ್ರೂಪದಲ್ಲಿದ್ದು ತನ್ನ ಸ್ವರೂಪವನ್ನು ಸ್ಪಷ್ಟಪಡಿಸುವುದಕ್ಕಾಗಿ ಸ್ಥೂಲ ಶಬ್ದರೂಪವಾಗಿ ಪರಿಣಮಿಸುತ್ತಾನೆ.

**ವಿವರಣೆ** – ಈ ಶ್ಲೋಕದಲ್ಲಿ ಜ್ಞಾನವೇ ಶಬ್ದವಾಗುತ್ತದೆಯೆಂಬ ಸಿದ್ಧಾಂತ ಪಕ್ಷವನ್ನು ಹೇಳಿದ್ದಾರೆ. ಶಬ್ದತತ್ತ್ವವೇ ವಾಕ್, ಮನಸ್ಸು – ಎಂದು ಪ್ರವಿಭಕ್ತವಾಗಿದೆ. ಮನಸ್ಸಿನಲ್ಲಿ ವೃತ್ತಿಜ್ಞಾನವುಂಟಾದಾಗ ಆ ಮನಸ್ಸೇ ಜ್ಞಾತೃವೆನಿಸುತ್ತದೆ. ಶಬ್ದತತ್ತ್ವ–ದಿಂದ ಹುಟ್ಟಿದ ಮನಸ್ಸಿನ ಜ್ಞಾನದಲ್ಲಿ ಶಬ್ದತತ್ತ್ವವು ಸೂಕ್ಷ್ಮವಾಗ್ರೂಪದಲ್ಲಿರುತ್ತದೆ. ಅದು ಶುದ್ಧವಾದ ಜ್ಞಾನಾತ್ಮನ ಪರಿಚ್ಛಿನ್ನವಾದ ಒಂದು ಅಂಶ. ಈ ಜ್ಞಾನಾತ್ಮವು

ಉಪಾಧಿವಶದಿಂದ ಭ್ರಮೆಯೋ ಪ್ರಮೆಯೋ ಆಗಿರಬಹುದು. ಈ ತನ್ನ ಸ್ವರೂಪವಾದ ಜ್ಞಾನವನ್ನು ಪ್ರಕಟಿಸುವುದಕ್ಕಾಗಿ ಪರಾವಾಗ್ರೂಪವಾಗಿರುವ ಜ್ಞಾನವೇ ಸ್ಥೂಲರೂಪವನ್ನು ಧರಿಸಿ ವೈಖರೀನಾದವಾಗಿ ವ್ಯಕ್ತವಾಗುತ್ತದೆ. ಹರಿಯುವ ನೀರಿಗೂ ಹೊಳೆಗೂ ಹೇಗೆ ಭೇದವಿಲ್ಲವೋ ಹಾಗೆ ಜ್ಞಾತೃವಿಗೂ ಜ್ಞಾನಕ್ಕೂ ಭೇದವಿಲ್ಲ. ಅಂತಃಕರಣ ವಿಶಿಷ್ಟನಾದ ಜೀವಾತ್ಮನೇ ಜ್ಞಾತೃವೆಂಬ ಪಕ್ಷದಲ್ಲಿಯೂ ಜೀವಾತ್ಮವೆಂದರೆ ಶಬ್ದತತ್ತ್ವವೇ ಆಗುತ್ತದೆ. 'ಸ ಏವ ಜೀವೋ ವಿವರ ಪ್ರಸೂತಿಃ ....... ' ಎಂಬ ಭಾಗವತಶ್ಲೋಕವು (೧೧-೧೨-೧೭) ಶಬ್ದಬ್ರಹ್ಮವೇ ಜೀವವೆಂದು ಸ್ಪಷ್ಟವಾಗಿ ತಿಳಿಸಿದೆ. ಶ್ರೋತಾರನಿಗೆ ವಕ್ತಾರನ ಜ್ಞಾನವು ಶಬ್ದರೂಪವಾಗಿ ಕೇಳಿಬಂದು ವಕ್ತಾರನ ಜ್ಞಾನವೇ ತಿಳಿಯುತ್ತದೆ.

ಅರ್ಥಪ್ರಕಾಶನ ಶಕ್ತಿಯು ವಕ್ತೃಬುದ್ಧಿಸ್ಥವಾದ ಸ್ಫೋಟದಲ್ಲಿದ್ದರೂ ಬಹಿಃ ಸ್ಥಿತವಾದ ವೈಖರೀಶಬ್ದದಲ್ಲಿ ಅದು ಪ್ರತಿಬಿಂಬಿಸಿರುವುದರಿಂದ ಶ್ರೋತಾರನಿಗೆ ಆ ಶಬ್ದದ ಅರ್ಥವು ಗೊತ್ತಾಗುತ್ತದೆ.

**ಟಿಪ್ಪಣಿ** – ಹೀಗೆ ಶಬ್ದವು ಹುಟ್ಟುವ ಬಗೆಯಲ್ಲಿ ಇನ್ನೂ ಕೆಲವು ಮತಭೇದಗಳಿವೆಯೆಂದು ಭರ್ತೃಹರಿಯ ಸ್ವೋಪಜ್ಞವೃತ್ತಿಯಲ್ಲಿ ಹೇಳಿದೆ.

**ಸ ಮನೋಭಾವಮಾಪದ್ಯ ತೇಜಸಾ ಪಾಕಮಾಗತಃ ।**
**ವಾಯುಮಾವಿಶತಿ ಪ್ರಾಣಮಥಾಸೌ ಸಮುದೀರ್ಯತೇ॥೧೧೩**

ಆ ಜ್ಞಾತೃವು ತನ್ನ ಸಾಮರ್ಥ್ಯದಿಂದ ವಿಷಯಗ್ರಹಣ ಸಾಮರ್ಥ್ಯವನ್ನು ಪಡೆದು ಮನೋರೂಪವನ್ನು ತಳೆಯುತ್ತದೆ. ಅನಂತರ ವಿವಕ್ಷೆಯಿಂದ ಪ್ರಾಣವಾಯುವನ್ನು ಪ್ರೇರಿಸುತ್ತದೆ. ಅದು ಊರ್ಧ್ವಮುಖವಾಗಿ ಹರಿದು ಶಬ್ದವಾಗಿ ಉಚ್ಚರಿಸಲ್ಪಡುತ್ತದೆ.

**ವಿವರಣೆ** – ೧೧೨ನೇ ಶ್ಲೋಕದಲ್ಲಿ ಜ್ಞಾತೃವು ಶಬ್ದವಾಗುತ್ತದೆಯೆಂದು ಹೇಳಿದ್ದಾರೆ. ಅದು ಶಬ್ದವಾಗುವ ಕ್ರಮವನ್ನು ೧೧೩, ೧೧೪, ೧೧೫ನೇ ಶ್ಲೋಕಗಳಲ್ಲಿ ವಿವರಿಸುತ್ತಾರೆ.

**ಅಂತಃಕರಣತತ್ತ್ವಸ್ಯ ವಾಯುರಾಶ್ರಯತಾಂ ಗತಃ ।**
**ತದ್ಧರ್ಮೇಣ ಸಮಾವಿಷ್ಟಸ್ತೇಜಸೈವ ವಿವರ್ತತೇ ॥ ೧೧೪ ॥**

ಅಂತಃಕರಣಕ್ಕೆ ಆಶ್ರಯವಾದ ಪ್ರಾಣವಾಯುವು ಅಂತಃಕರಣದ ಮನೋಧರ್ಮವನ್ನೇ ಪಡೆದು ಬುದ್ಧಿಯೆಂಬ ತೇಜಸ್ಸಿನ ಸಹಕಾರದಿಂದ

ಶಬ್ದರೂಪವಾಗಿ ವಿವರ್ತವನ್ನು ಹೊಂದುತ್ತದೆ.

**ವಿವರಣೆ** – ಒಂದೇ ವಸ್ತು ರೂಪಾಂತರಗೊಂಡು ಪರಿವರ್ತಿಸುವಾಗ ಹಿಂದಿನ ವಸ್ತುಧರ್ಮವನ್ನು ಪಡೆದುಕೊಂಡೇ ಇರುತ್ತದೆ. ಹಾಲು ಮೊಸರಾದಾಗ ಹಾಲಿನ ಗುಣವು ಅದರಲ್ಲಿ ಅನುವರ್ತಿಸುತ್ತದೆ. ದೇಹದಿಂದ ಪ್ರಾಣವಾಯು ಹೋದಮೇಲೆ ಅಂತಃಕರಣತತ್ತ್ವವು ಅಲ್ಲಿ ಇರುವುದಿಲ್ಲ. ಆದ್ದರಿಂದ ಅದಕ್ಕೆ ಪ್ರಾಣವಾಯು ಆಶ್ರಯವೆಂದು ಹೇಳಲಾಗಿದೆ. ತೇಜಸ್ಸೆಂದರೆ ದೇಹಾಗ್ನಿ ಎಂದೂ ಅರ್ಥ ಹೇಳಬಹುದು. ಜ್ಞಾತೃವಿನಲ್ಲಿರುವ ಒಂದು ಶಕ್ತಿವಿಶೇಷವೆಂದೂ ಹೇಳಬಹುದು.

**ವಿಭಜ್ಯ ಸ್ವಾತ್ಮನೋ ಗ್ರಂಥೀನ್ ಶ್ರುತಿರೂಪೈಃ ಪೃಥಗ್ವಿಧೈಃ ।**
**ಪ್ರಾಣೋ ವರ್ಣಾನಭಿವ್ಯಜ್ಯ ವರ್ಣೇಷ್ವೇವೋಪಲೀಯತೇ ॥೧೧೫ ॥**

ಮನೋಯುಕ್ತವಾದ ಈ ಪ್ರಾಣವಾಯುವು, ದಾರದಲ್ಲಿ ಸಿಕ್ಕಾದ ಗಂಟುಗಳಂತಿರುವ ಅಕಾರಾದಿ ವರ್ಣಗಳನ್ನು, ಮನಸ್ಸಿನಿಂದಲೇ ಒಂದೊಂದಾಗಿ ಬಿಡಿಸುತ್ತದೆ. ಅನಂತರ ಶ್ರವಣಾರ್ಹವಾದ ನಾನಾ ಬಗೆಯ ಧ್ವನಿಗಳಿಂದ ಆ ವರ್ಣಗಳನ್ನು ಪ್ರಕಾಶಪಡಿಸುತ್ತದೆ. ಕಡೆಗೆ ಆ ವರ್ಣಗಳಲ್ಲಿಯೇ ಅಡಗಿಹೋಗುತ್ತದೆ !

**ವಿವರಣೆ** – ಈ ವಾಯುವು ಕಂಠತಾಲ್ವಾದಿಸ್ಥಾನಗಳಲ್ಲಿ ಅಭಿಘಾತಮಾಡಿ ಧ್ವನಿಗಳನ್ನು ಹುಟ್ಟಿಸುತ್ತದೆ. ಈ ಧ್ವನಿಗಳು ಅಕಾರಾದಿವರ್ಣಗಳನ್ನೂ ಪದಗಳನ್ನೂ ವಾಕ್ಯಗಳನ್ನೂ ಅಭಿವ್ಯಂಜಿಸುತ್ತವೆ. ಶಬ್ದನಿತ್ಯತ್ವಪಕ್ಷದಲ್ಲಿ ಪ್ರಾಕೃತಧ್ವನಿಗಳನ್ನು ಹುಟ್ಟಿಸುತ್ತದೆ ಎಂದರ್ಥ. ಅನಿತ್ಯತ್ವಪಕ್ಷದಲ್ಲಿ ವರ್ಣಗಳನ್ನೇ ಹುಟ್ಟಿಸುತ್ತದೆ ಎಂದು ಹೇಳಬೇಕಾಗುತ್ತದೆ. ಅನಿತ್ಯತ್ವಪಕ್ಷದಲ್ಲಿ ಜ್ಞಾನವೇ ಶಬ್ದವಾಗುತ್ತದೆಯೆಂದು ಹೇಳಬೇಕಾದದ್ದಿಲ್ಲ. ವರ್ಣಗಳಲ್ಲಿ ಪ್ರಾಣವಾಯು ಅಡಗುತ್ತದೆಯೆಂದರೆ, ವರ್ಣಗಳನ್ನು ಅಭಿವ್ಯಂಜಿಸಿದ ಮೇಲೆ ಅದರ ಕಾರ್ಯ ಮುಗಿದು ಹೋಗುತ್ತದೆ. ತನ್ನ ಕಾರಣವಾದ ಅಂತಃಕರಣತತ್ತ್ವದಲ್ಲಿ ಸೇರಿಹೋಗುತ್ತದೆ ಎಂದರ್ಥ. ಪಾಣಿನೀಯ ಶಿಕ್ಷೆಯಲ್ಲಿ ಈ ವಿಚಾರವೇ ಬಂದಿದೆ –

> ಆತ್ಮಾ ಬುದ್ಧ್ಯಾ ಸಮೇತ್ಯಾರ್ಥಾನ್ ಮನೋ ಯುಂಕ್ತೇ ವಿವಕ್ಷಯಾ ।
> ಮನಃ ಕಾಯಾಗ್ನಿಮಾಹಂತಿ ಸ ಪ್ರೇರಯತಿ ಮಾರುತಮ್ ॥
> ಸೋದೀರ್ಣೋ ಮೂರ್ಧ್ನ್ಯಭಿಹತೋ ವಕ್ತ್ರಮಾಪದ್ಯ ಮಾರುತಃ ।
> ವರ್ಣಾನ್ ಜನಯತೇ ........ ॥

ಜ್ಞಾತೃವು–ಜೀವಾತ್ಮನು ತನ್ನ ಬುದ್ಧಿಯಿಂದ, ಹೇಳಬೇಕಾದ ಪದಾರ್ಥಗಳನ್ನು ಮೊದಲು ಗ್ರಹಿಸುತ್ತಾನೆ. ಅನಂತರ ಅದನ್ನು ಪ್ರಕಟಿಸಬೇಕೆಂಬ ಇಚ್ಛೆಯಿಂದ ಮನಸ್ಸನ್ನು ಪ್ರೇರಿಸುತ್ತಾನೆ. ಮನಸ್ಸು ದೇಹಾಗ್ನಿಯನ್ನು ಚೋದಿಸಿ ಪ್ರಯತ್ನ–ವನ್ನುಂಟುಮಾಡುತ್ತದೆ. ಅಗ್ನಿಯು ಪ್ರಾಣವಾಯುವನ್ನು ಪ್ರೇರಿಸುತ್ತದೆ. ವಾಯು ಮೇಲ್ಮುಖವಾಗಿ ಹೊರಟು ಮೂರ್ಧ ಸ್ಥಾನದಲ್ಲಿ – ತಾಲ್ವಾದಿಸ್ಥಾನಗಳಲ್ಲಿ ಅಭಿಘಾತವನ್ನು ಪಡೆದು ಧ್ವನಿಗಳನ್ನು ಉತ್ಪತ್ತಿಮಾಡುತ್ತದೆ.

ಜ್ಞಾನವು ಶಬ್ದವಾಗುತ್ತದೆಯೆಂಬ ವಿಚಾರವು 'ಆಖ್ಯಾತೋಪಯೋಗೇ' ಎಂಬ ಪಾಣಿನಿ ಸೂತ್ರದ ಮಹಾಭಾಷ್ಯದಲ್ಲಿ ಬಂದಿದೆ. ಅಲ್ಲಿ ಈ ಮಾತುಗಳಿವೆ :

'ಅಯಮಪಿ ಯೋಗಃ ಶಕ್ಯೋಽವಕ್ತುಮ್ । ಕಥಮುಪಾಧ್ಯಾಯಾದಧೀತೇ ಇತಿ? ಅಪಕ್ರಾಮತಿ ತಸ್ಮಾದಧ್ಯಯನಮ್, ಯದ್ಯಪಕ್ರಾಮತಿ ಕಿಂ ನಾತ್ಯಂತಾ–ಯಾಪಕ್ರಾಮತಿ? ಸಂತತತ್ವಾತ್ । ಅಥವಾ ಜ್ಯೋತಿರ್ವದ್ ಜ್ಞಾನಾನಿ ಭವಂತಿ'.

ಇಲ್ಲಿ ಕೈಯಟನು ತನ್ನ ಪ್ರದೀಪ ವ್ಯಾಖ್ಯಾನದಲ್ಲಿ 'ಉಪಾಧ್ಯಾಯಜ್ಞಾನಾನಿ ಭಿನ್ನಾನಿ ಭಿನ್ನಶಬ್ದರೂಪತಾಮಾಪದ್ಯಮಾನಾನಿ ಸಂತತಾನ್ಯುಚ್ಯಂತೇ। ಜ್ಞಾನಸ್ಯ ಶಬ್ದರೂಪಾಪತ್ತಿರಿತಿದರ್ಶನಂ ಭಾಷ್ಯಕಾರಸ್ಯ' ಎಂದು ಸ್ಪಷ್ಟವಾಗಿ ಬರೆದಿದ್ದಾನೆ. ಉಪಾಧ್ಯಾಯನ ಜ್ಞಾನಗಳು ಶಬ್ದಗಳಾಗಿ ಪರಿಣಮಿಸಿ ಜ್ವಾಲೆಯು ಒಂದರ ಮೇಲೊಂದು ಹುಟ್ಟುವಂತೆ ಹುಟ್ಟಿ ಶಿಷ್ಯನ ಕಿವಿಯನ್ನು ಮುಟ್ಟುತ್ತವೆ ಎಂದು ಭಾಷ್ಯದ ತಾತ್ಪರ್ಯ. ಇನ್ನೊಬ್ಬ ಶಿಕ್ಷಾಕಾರರ ಮತ ಹೀಗಿದೆ –

**ಅಜಸ್ರವೃತ್ತಿರ್ಯಃ ಶಬ್ದಃ ಸೂಕ್ಷ್ಮತ್ವಾನ್ನೋಪಲಭ್ಯತೇ ।**
**ವ್ಯಜನಾದ್ವಾಯುರಿವ ಸ ಸ್ವನಿಮಿತ್ತಾತ್ ಪ್ರತೀಯತೇ॥ ೧೧೬ ॥**

ಧ್ವನಿಯು ಎಲ್ಲ ಸ್ಥಳಗಳಲ್ಲಿಯೂ ಸದಾ ಇದ್ದೇ ಇರುತ್ತದೆ. ಅದು ಬಹಳ ಸೂಕ್ಷ್ಮವಾಗಿರುವುದರಿಂದ ಕೇಳಿಸುವುದಿಲ್ಲ. ಬೀಸಣಿಗೆಯನ್ನು ಬೀಸಿದಾಗ ಗಾಳಿಯು ಗೊತ್ತಾಗುವಂತೆ, ಧ್ವನಿಗೆ ಬೇಕಾದ ನಿಮಿತ್ತವು ಒದಗಿದರೆ ಧ್ವನಿಯು ತಿಳಿಯುತ್ತದೆ.

**ವಿವರಣೆ** – ವಾಯುವಿನ ಸೂಕ್ಷ್ಮಕಣಗಳು ಎಲ್ಲೆಡೆಯೂ ವ್ಯಾಪಿಸಿಕೊಂಡಿ–ದ್ದರೂ ನಮಗೆ ತಿಳಿಯುವುದಿಲ್ಲ. ಬೀಸಣಿಗೆಯಿಂದ ಬೀಸಿದಾಗ ವಾಯುಕಣಗಳು ಸಾಂದ್ರವಾಗಿ ಸ್ಪರ್ಶೇಂದ್ರಿಯಕ್ಕೆ ತಿಳಿಯುತ್ತದೆ. ಹಾಗೆಯೇ ಕಂಠತಾಲ್ವಾದಿಗಳನ್ನು ಶಬ್ದೋಚ್ಚಾರಣೆಗಾಗಿ ಅಭಿಘಾತಿಸಿದಾಗ ಆ ಧ್ವನಿಗಳು ಪ್ರಚಯಗೊಂಡು ಶ್ರೋತ್ರೇಂದ್ರಿಯಕ್ಕೆ ತಿಳಿಯುತ್ತವೆ.

ಈ ಮತದಲ್ಲಿ ಧ್ವನಿಯಿಂದಲೇ ಅರ್ಥಪ್ರತೀತಿಯಾಗುತ್ತದೆಯೋ ಅಥವಾ ಅದರಿಂದ ಸ್ಫೋಟವು ಅಭಿವ್ಯಕ್ತವಾಗಿ ಅರ್ಥಪ್ರತೀತಿಯಾಗುತ್ತದೆಯೋ ಎಂಬುದು ಸ್ಪಷ್ಟವಾಗಿ ತಿಳಿಯುವುದಿಲ್ಲ. ಧ್ವನಿಯು ನಿತ್ಯವಾಗಿ ಸರ್ವತ್ರ ಇರುತ್ತದೆಯೆಂಬುದೇ ಈ ಮತದಲ್ಲಿ ವಿಶೇಷ.

**ತಸ್ಯ ಪ್ರಾಣೇ ಚ ಯಾ ಶಕ್ತಿರ್ಯಾ ಚ ಬುದ್ಧೌ ವ್ಯವಸ್ಥಿತಾ ।**
**ವಿವರ್ತಮಾನಾ ಸ್ಥಾನೇಷು ಸೈಷಾ ಭೇದಂ ಪ್ರಪದ್ಯತೇ॥೧೧೭॥**

ಪ್ರಾಣವಾಯುವಿನಲ್ಲಿಯೂ ಬುದ್ಧಿಯಲ್ಲಿಯೂ ಶಬ್ದಕ್ಕೆ ಯಾವ ಪ್ರಕಟನ ಶಕ್ತಿಗಳುಂಟೋ ಅವು ಕಂಠತಾಲ್ವಾದಿಸ್ಥಾನಗಳಲ್ಲಿ ಸೇರುತ್ತವೆ. ಅಲ್ಲಿ ವಿಭಿನ್ನ ಕಾರ್ಯಗಳಲ್ಲಿ ತೊಡಗಿ ಒಂದಾಗಿ ಈ ಶಕ್ತಿಯು ಅಕಾರ, ಇಕಾರ, ಕಕಾರ – ಮುಂತಾದ ನಾನಾ ಭೇದವನ್ನು ಪಡೆಯುತ್ತದೆ.

**ವಿವರಣೆ** – ಆತ್ಮಾ ಬುದ್ಧ್ಯಾ ಸಮೇತ್ಯಾರ್ಥಾನ್ ಎಂಬ ಶಿಕ್ಷಾವಚನದಲ್ಲಿ ಬುದ್ಧಿಯ ಕಾರ್ಯವೇನೆಂಬುದು ಸ್ಪಷ್ಟವಾಗಿದೆ. ಹೇಳಬೇಕಾದ ಅರ್ಥವನ್ನು ಬುದ್ಧಿಯು ಮೊದಲು ಪರಿಶೀಲಿಸುತ್ತದೆ. ಈ ಶಕ್ತಿ ಬುದ್ಧಿಯಲ್ಲಿದೆ. ಅದಕ್ಕೆ ಅನುಗುಣವಾಗಿ ಪ್ರಾಣವಾಯು ಶಬ್ದ ಪ್ರಕಟನದ ಕ್ರಿಯೆಯನ್ನು ವಹಿಸಿಕೊಳ್ಳುತ್ತದೆ. ಬುದ್ಧಿ ಪ್ರೇರಿತವಾದ ಪ್ರಾಣವು ಕಂಠತಾಲ್ವಾದಿ ಸ್ಥಾನಗಳಲ್ಲಿ ಸೇರಿ ಅಭಿಹತವಾದಾಗ ವಿಭಿನ್ನಾಕೃತಿಯ ಅಕ್ಷರಗಳೂ ಪದ ವಾಕ್ಯಗಳೂ ಪ್ರಕಟವಾಗುತ್ತವೆ. ಈ ಶ್ಲೋಕವು ಹಿಂದೆ ಹೇಳಿದ ಎಲ್ಲ ಪಕ್ಷಗಳಿಗೂ ಉಪಸಂಹಾರವಾಗಿದೆ. ಎಲ್ಲ ಮತಗಳೂ ಅಕ್ಷರೋತ್ಪತ್ತಿಯ ಈ ಪ್ರಕ್ರಿಯೆಯನ್ನು ಅಂಗೀಕರಿಸುತ್ತವೆ.

**ಶಬ್ದೇಷ್ವೇವಾಶ್ರಿತಾ ಶಕ್ತಿರ್ವಿಶ್ವಸ್ಯಾಸ್ಯ ನಿಬಂಧನೀ ।**
**ಯನ್ನೇತ್ರಃ ಪ್ರತಿಭಾತ್ಮಾಯಂ ಭೇದರೂಪಃ ಪ್ರತೀಯತೇ ॥ ೧೧೮ ॥**

ಈ ವಿಶ್ವದ ವ್ಯವಹಾರಕ್ಕೆ ಕಾರಣವಾದ ಶಕ್ತಿಯು ಶಬ್ದಗಳನ್ನೇ ಆಶ್ರಯಿಸಿಕೊಂಡಿದೆ. ಪ್ರತಿಭಾಸ್ವರೂಪದಲ್ಲಿರುವ ಜ್ಞಾನವು ದ್ವೈತವಿಶಿಷ್ಟವಾಗಿ ಕಾಣುತ್ತದೆಯಲ್ಲ, ಇದಕ್ಕೆ ಶಬ್ದವೇ ನೇತ್ರವಾಗಿದೆ.

**ವಿವರಣೆ** – ಪದಗಳನ್ನು ಉಚ್ಚರಿಸಿದಾಗ ಪದಾರ್ಥಜ್ಞಾನವಾಗುತ್ತದೆ. ಆದ್ದ–ರಿಂದ ಪದಾರ್ಥಗಳಿಗೆ ಪದಗಳು ಆಶ್ರಯ. ಈ ವಿಶ್ವವು ಪದಪದಾರ್ಥರೂಪ–ವಾಗಿದೆ. ಪ್ರತಿಭೆಯೇ ಜಗತ್ತು. ಪ್ರತಿಭೆಯೆಂದರೆ ಕೇವಲ ಜ್ಞಾನ. ಒಂದು ವಸ್ತುವನ್ನು ನೋಡಿದಾಗ ಅಥವಾ ಒಂದು ವಾಕ್ಯವನ್ನು ಕೇಳಿದಾಗ ಅದು ವಿಷಯ ಜ್ಞಾನದಲ್ಲಿ

ಪರ್ಯವಸಾನವಾಗುತ್ತದೆ. ಆದ್ದರಿಂದ ಪ್ರತಿಭೆಯೇ ವಾಕ್ಯಾರ್ಥವೆನ್ನುತ್ತಾರೆ. ಒಬ್ಬ ಯುವತಿಯನ್ನು ನೋಡಿದಾಗ ಯುವಕನಿಗೆ ಅವಳು ಕಾಮಿನಿಯಾಗಿಯೂ ವಿರಕ್ತನಿಗೆ ಒಂದು ಶವವಾಗಿಯೂ ನಾಯಿಗೆ ಒಳ್ಳೆಯ ಆಹಾರವಾಗಿಯೂ ಕಾಣಿಸುತ್ತಾಳೆ. ಒಂದೇ ಪದಾರ್ಥವು ನಾನಾ ರೂಪವಾಗಿ ಕಾಣಿಸುವುದರಿಂದ ಬಾಹ್ಯವಸ್ತುವಿಗೆ ಗೊತ್ತಾದ ಸ್ವರೂಪವಿಲ್ಲ. ವ್ಯಕ್ತಿಸಂಸ್ಕಾರಕ್ಕೆ ಅನುರೂಪವಾದ ಜ್ಞಾನ ಹುಟ್ಟುತ್ತದೆ. ಬಾಹ್ಯವಸ್ತುವೇ ಇಲ್ಲದಿದ್ದರೂ ಈ ಜ್ಞಾನವು ಹುಟ್ಟುತ್ತದೆ. ಹೇಗೆಂದರೆ 'ಹುಲಿ ಬಂದಿತು' ಎಂದು ಒಬ್ಬನು ಅರಚಿಕೊಂಡರೆ, ಹುಲಿ ಬರದಿದ್ದರೂ ವೀರನಾದವನು ಉತ್ಸಾಹದಿಂದ ಖಡ್ಗವನ್ನು ಹಿಡಿಯುತ್ತಾನೆ. ಹೇಡಿಯು ಹೆದರಿ ಅಡಗಿಕೊಳ್ಳುತ್ತಾನೆ. ಈ ಉತ್ಸಾಹ ಭಯಗಳಿಗೆ ಶಬ್ದವೇ ನಿಮಿತ್ತವಾಯಿತು. ಪದಾರ್ಥವಿರಲಿ ಇಲ್ಲದಿರಲಿ ಪದದಿಂದ ಜ್ಞಾನ ಹುಟ್ಟುತ್ತದೆ. ಗಗನಕುಸುಮ, ಬಂಜೆಯ ಮಗ ಎಂದು ಹೇಳಿದರೆ, ವಸ್ತುಶೂನ್ಯವಾದ ವಿಕಲ್ಪವೆಂಬ ಜ್ಞಾನ ಹುಟ್ಟುತ್ತದೆ. ಅರ್ಥವು ಎಂದರೆ ವಸ್ತು ಪದವನ್ನು ಕಚ್ಚಿಕೊಂಡೇ ಇರುವುದರಿಂದ ಇದಕ್ಕೆ ಪದಾರ್ಥವೆಂಬ ಹೆಸರು ರೂಢಿಗೆ ಬಂದಿದೆ. ಏಕೆಂದರೆ ಅರ್ಥವು ಪದದ ವಿವರ್ತವೇ ಹೊರತು ಬೇರೆಯಲ್ಲ. ಪದವು ವಾಚಕವಾಗಿದ್ದು ವಾಚ್ಯವಾದ ವಿಶ್ವವನ್ನೇ ನಿರ್ಮಿಸಿಬಿಡುತ್ತದೆ. ಪ್ರತಿಭೆಯೆಂಬ ಕೇವಲಜ್ಞಾನವು ಶಬ್ದ ಜನಿತವಾದ ವಿಭಿನ್ನ ವಸ್ತುಗಳನ್ನಂಟಿಸಿಕೊಂಡು ದ್ವೈತಜ್ಞಾನವಾಗಿಬಿಡುತ್ತದೆ. ಪ್ರಾಚೀನವಾದ ಒಂದು ಪ್ರಮಾಣವಚನ ಹೀಗಿದೆ –

> ವಾಗೇವಾರ್ಥಂ ಪಶ್ಯತಿ ವಾಗ್ಬ್ರವೀತಿ
> ವಾಗೇವಾರ್ಥಂ ನಿಹಿತಂ ಸಂತನೋತಿ ।
> ವಾಚ್ಯೇವ ವಿಶ್ವಂ ಬಹುರೂಪಂ ನಿಬದ್ಧಂ
> ತದೇತದೇಕಂ ಪ್ರವಿಭಜ್ಯೋಪಭುಂಕ್ತೇ ॥

'ವಾಕ್‌ತತ್ತ್ವವೇ ಬುದ್ಧಿಯಾಗಿ ತನ್ನಿಂದಲೇ ವಿವರ್ತಗೊಂಡ ಜಗತ್ತನ್ನು ನೋಡುತ್ತದೆ, ತಿಳಿಯುತ್ತದೆ. ಅದನ್ನೇ ತಾನು ನುಡಿಯುತ್ತದೆ. ತನ್ನಲ್ಲಿ ಶಕ್ತಿರೂಪ–ದಿಂದ ನಿಹಿತವಾದ ಜಗತ್ತನ್ನು ವಿಸ್ತರಿಸುತ್ತದೆ. ಆದ್ದರಿಂದ ಬಹುರೂಪವಾದ ಈ ವಿಶ್ವವು ವಾಕ್‌ತತ್ತ್ವವನ್ನು ಆಶ್ರಯಿಸಿಕೊಂಡಿದೆ. ಅದೇ ಜೀವವೆನಿಸಿಕೊಂಡು ಜಗತ್ತನ್ನು ವಿಭಿನ್ನರೂಪಗಳಾಗಿ ವಿಂಗಡಿಸಿಕೊಂಡು ಭೋಗಿಸುತ್ತದೆ.'

**ಷಡ್ಜಾದಿಭೇದಃ ಶಬ್ದೇನ ವ್ಯಾಖ್ಯಾತೋ ರೂಪ್ಯತೇ ಯತಃ ।**
**ತಸ್ಮಾದರ್ಥವಿಧಾಃ ಸರ್ವಾಃ ಶಬ್ದಮಾತ್ರಾಸು ನಿಶ್ರಿತಾಃ ॥೧೧೯॥**

ಷಡ್ಜ, ನಿಷಾದ, ಋಷಭ, ಗಾಂಧಾರ, ಪಂಚಮ, ಮಧ್ಯಮ, ಧೈವತ– ಮುಂತಾದ ಸ್ವರಭೇದಗಳನ್ನು ಶಬ್ದದಿಂದಲೇ ವ್ಯಾಖ್ಯಾನಮಾಡಿ ತಿಳಿಸಿದರೆ ಮಾತ್ರ ಗೊತ್ತಾಗುತ್ತದೆ. ಆದ್ದರಿಂದ ಸಮಸ್ತ ಪದಾರ್ಥಭೇದಗಳು ಶಬ್ದಶಕ್ತಿಗಳಲ್ಲಿ ನೆಲೆಸಿವೆ.

**ವಿವರಣೆ** – ಮೂರ್ತವಸ್ತುಗಳಾದ ಗೋವು, ಗಡಿಗೆ–ಮೊದಲಾದವನ್ನು ಕಣ್ಣಿನಿಂದ ನೋಡಿ ತಿಳಿಯಬಹುದು. ಕೈಯಿಂದ ಮುಟ್ಟಬಹುದು. ಆದರೂ ಅವುಗಳ ಸ್ಥೂಲ ಆಕೃತಿ ಗೊತ್ತಾಗುವುದೇ ಹೊರತು ಹೆಚ್ಚಿನ ವಿವರಗಳೇನೂ ತಿಳಿಯುವುದಿಲ್ಲ. ಆ ವಿವರಗಳನ್ನು ಶಬ್ದಗಳಿಂದ ವರ್ಣಿಸಿದಾಗಲೇ ತಿಳಿಯಲು ಸಾಧ್ಯ. ಹೀಗಿರುವಾಗ ಅಮೂರ್ತ ವಿಷಯಗಳನ್ನು ಇಂದ್ರಿಯಗಳಿಂದ ತಿಳಿಯುವ ಬಗೆ ಹೇಗೆ? ಉದಾಹರಣೆಗಾಗಿ ಷಡ್ಜಾದಿಸ್ವರಗಳನ್ನು ಇಲ್ಲಿ ಕೊಟ್ಟಿದೆ. ಷಡ್ಜ, ನಿಷಾದ–ಮುಂತಾದ ಸಪ್ತಸ್ವರಗಳು ಸಂಗೀತಶಾಸ್ತ್ರದಲ್ಲಿ ಪ್ರಸಿದ್ಧವಾಗಿವೆ. ಇವಲ್ಲದೆ ನಾನಾರಾಗಭೇದಗಳು ವಿಪುಲವಾಗಿವೆ. ಇವನ್ನು ಶಬ್ದಗಳಿಂದ ಹಾಡಿ ಶಬ್ದಗಳಿಂದ ವಿವರಿಸಿ ತಿಳಿಸಬೇಕಾಗುತ್ತದೆ. ಹೀಗೆಯೇ ಲಜ್ಜೆ, ಕೋಪ, ದ್ವೇಷ – ಮುಂತಾದ ಮನೋಧರ್ಮಗಳನ್ನೂ ಮೂರ್ತವಸ್ತುಗಳಿಗೆ ಸಂಬಂಧಿಸಿದ ಅಸಂಖ್ಯಾತ ವಿಷಯಗಳನ್ನೂ ಶಬ್ದಗಳಿಂದ ತಿಳಿಯಬೇಕಾಗಿದೆ. ಘಟಶಬ್ದದಲ್ಲಿ ವಾಚಕತ್ವಶಕ್ತಿ ಇದೆ. ಅದಕ್ಕೆ ವಾಚ್ಯವಾದದ್ದು ಗಡಿಗೆ. ವಾಚ್ಯವಾಚಕಭಾವ ಸಂಬಧವನ್ನರಿತೇ ಭಾಷೆಯನ್ನು ಬಳಸುತ್ತಾರೆ. ಭಾಷೆ ಶಬ್ದಮಯವಾದದ್ದು. ಸಮಸ್ತಲೋಕ ವ್ಯವಹಾರವೂ ಶಬ್ದವನ್ನು ಆಶ್ರಯಿಸಿಕೊಂಡಿದೆ. ಈ ಜಗತ್ತು ನಡೆಯುತ್ತಿರುವುದು ಶಬ್ದಬಲದಿಂದಲೇ. ಆದ್ದರಿಂದ ವಿಶ್ವವೆಲ್ಲವೂ ಶಬ್ದಶಕ್ತಿಗೆ ಅಧೀನವಾಗಿದೆ.

**ಶಬ್ದಸ್ಯ ಪರಿಣಾಮೋಽಯಮಿತ್ಯಾಮ್ನಾಯವಿದೋ ವಿದುಃ ।**
**ಛಂದೋಭ್ಯ ಏವ ಪ್ರಥಮಮೇತದ್ವಿಶ್ವಂ ವ್ಯವರ್ತತ ॥ ೧೨೦ ॥**

ಈ ಸಂಸಾರವು ಶಬ್ದತತ್ತ್ವದ ಪರಿಣಾಮವಾಗಿ ಹುಟ್ಟಿದೆಯೆಂದು ವೇದಜ್ಞರಾದ ವಿದ್ವಾಂಸರು ತಿಳಿದಿದ್ದಾರೆ. ಮೊದಲು ಈ ವಿಶ್ವವು ವೇದಗಳಿಂದಲೇ ವಿವರ್ತವಾಗಿ ಜನಿಸಿತು.

**ವಿವರಣೆ** – ವಿವರ್ತವನ್ನು ಪರಿಣಾಮವೆಂದೂ ಹಿಂದೆ ಕರೆಯುತ್ತಿದ್ದರು. ಅದಕ್ಕೆ ಈ ಶ್ಲೋಕದಲ್ಲಿಯೇ ನಿದರ್ಶನವಿದೆ. ಪರಿಣಾಮ–ವಿವರ್ತಗಳಿಗೆ ಭೇದ ಉಂಟು. ಹಾಲು ಮೊಸರಾದಂತೆ, ಮಣ್ಣು ಗಡಿಗೆಯಾದಂತೆ ಉಪಾದಾನಕಾರಣವು ರೂಪಾಂತರಗೊಳ್ಳುವುದು ಪರಿಣಾಮ. ಹಗ್ಗವು ಹಾವಾಗಿಯೂ ಮುತ್ತಿನ ಚಿಪ್ಪು

ಬೆಳ್ಳಿಯಾಗಿಯೂ ಕಾಣುವಂತೆ ಮೂಲಕಾರಣವು ರೂಪಾಂತರಗೊಳ್ಳದೆಯೇ ಅನ್ಯಾಕಾರದಲ್ಲಿ ಕಾಣಿಸಿದರೆ ವಿವರ್ತ.

ಈ ವಿಶ್ವವು ಶಬ್ದಬ್ರಹ್ಮದ ವಿವರ್ತವೆಂದು ಶಬ್ದಾದ್ವೈತವಾದಿಗಳಾದ ವೈಯಾಕರಣರ ಸಿದ್ಧಾಂತ. ನಿತ್ಯ ಪರಮಾಣುಗಳಿಂದ ಜಗತ್ತು ಹುಟ್ಟುತ್ತದೆಯೆಂದು ವೈಶೇಷಿಕರೂ ತ್ರಿಗುಣಾತ್ಮಕವಾದ ಪ್ರಕೃತಿಯಿಂದ ಹುಟ್ಟಿದೆಯೆಂದು ಸಾಂಖ್ಯರೂ ಹೇಳುತ್ತಾರೆ. ಈ ಸಂಸಾರವು ಪರಬ್ರಹ್ಮವಿವರ್ತವೆಂದು ಅದ್ವೈತ ವೇದಾಂತಿಗಳ ಸಿದ್ಧಾಂತವಾದರೆ, ಶಬ್ದಬ್ರಹ್ಮದ ವಿವರ್ತವೆಂದು ವೈಯಾಕರಣರ ಅಭಿಪ್ರಾಯವಿದೆ. ಕಾರಣಧರ್ಮವು ಕಾರ್ಯದಲ್ಲಿ ಸಂಕ್ರಾಂತವಾಗುವುದು ಲೋಕದಲ್ಲಿ ಸ್ಪಷ್ಟವಾಗಿದೆ. ಹತ್ತಿಯ ಧರ್ಮವು ನೂಲಿನಲ್ಲಿಯೂ ನೂಲಿನ ಧರ್ಮವು ಬಟ್ಟೆಯಲ್ಲಿಯೂ ಅನು–ವೃತ್ತವಾಗುತ್ತದೆ. ಅಂತೆಯೇ ಶಬ್ದವು ಪದಾರ್ಥದಲ್ಲಿ ಸರ್ವತ್ರ ಅನುಸ್ಯೂತವಾಗಿದೆ–ಯೆಂಬುದು ಮುಂದಿನ ಶ್ಲೋಕಗಳಲ್ಲಿ ಸ್ಪಷ್ಟವಾಗುವುದು. ಶಬ್ದಬ್ರಹ್ಮದಿಂದ ಈ ಜಗತ್ತು ಹುಟ್ಟಿದೆ ಎಂಬುದಕ್ಕೆ ಆಧಾರಗಳುಂಟು.

೧. ವಾಗೇವ ವಿಶ್ವಾ ಭುವನಾನಿ ಜಜ್ಞೇ ।
ವಾಕ್ ಎಂಬುದೇ ಸಮಸ್ತಲೋಕಗಳನ್ನು ನಿರ್ಮಿಸಿದೆ.

೨. ನಾಮ್ನೈವೇದಂ ರೂಪತ್ವೇನ ವಿವೃತೇ ।

'ಈ ಸಮಸ್ತ ಪದಾರ್ಥವೂ ಶಬ್ದವೇ ಸರಿ, ಶಬ್ದವು ಅರ್ಥರೂಪವಾಗಿ ವಿವರ್ತಗೊಂಡಿದೆ' ಇತ್ಯಾದಿ ಶ್ರುತಿಗಳಿವೆ.

ವಿಭಜ್ಯ ಬಹುಧಾತ್ಮಾನಂ ಸ ಚ್ಛಂದಸ್ಯಃ ಪ್ರಜಾಪತಿಃ ।
ಛಂದೋಮಯೀಭಿರ್ಮಾತ್ರಾಭಿಃ ಬಹುಧೈವ ವಿವೇಶ ತಮ್ ॥ –ಪುರಾಕಲ್ಪ

'ವೇದಸ್ವರೂಪನಾದ ಪ್ರಜಾಪತಿಯು ವೇದವಾಕ್ಕಿನ ವಾಚ್ಯವಾಚಕ ಭಾವ–ರೂಪವಾದ ಅಂಶಗಳಿಂದ ತನ್ನನ್ನು ಬಹುವಿಧವಾಗಿ ವಿಭಾಗಿಸಿಕೊಂಡು, ತಾನು ಸೃಜಿಸಿದ ಜಗತ್ತನ್ನೇ ಪ್ರವೇಶಿಸಿದನು'. ಜೀವರೂಪದಿಂದ ಪ್ರವೇಶಿಸಿದನೆಂದರ್ಥ.

೩. ವೇದಶಬ್ದೇಭ್ಯ ಏವಾದೌ ಪೃಥಕ್ ಸಂಸ್ಥಾಶ್ಚ ನಿರ್ಮಮೇ ।

ಸೃಷ್ಟಿಯ ಆದಿಯಲ್ಲಿ ಪ್ರಜಾಪತಿಯು ವೇದಶಬ್ದಗಳಿಂದಲೇ ಈ ವಿಶ್ವವನ್ನು ಇದರಲ್ಲಿರುವ ನಾನಾ ಮೂರ್ತಪದಾರ್ಥಗಳನ್ನು ಸೃಜಿಸಿದನು – ಇತ್ಯಾದಿ ಸ್ಮೃತಿಗಳೂ ಈ ವಿಷಯದಲ್ಲಿ ಪ್ರಮಾಣವಾಕ್ಯಗಳು.

**ಇತಿಕರ್ತವ್ಯತಾ ಲೋಕೇ ಸರ್ವಾ ಶಬ್ದವ್ಯಪಾಶ್ರಯಾ ।**
**ಯಾಂ ಪೂರ್ವಾಹಿತಸಂಸ್ಕಾರೋ ಬಾಲೋಽಪಿ ಪ್ರತಿಪದ್ಯತೇ ॥ ೧೨೧ ॥**

ಈ ಲೋಕದಲ್ಲಿ ಇದನ್ನು ಹೀಗೆ ಮಾಡಬೇಕು ಎಂಬ ಕರ್ತವ್ಯಜ್ಞಾನ–ವೆಲ್ಲವೂ ಶಬ್ದವನ್ನೇ ಆಶ್ರಯಿಸಿಕೊಂಡಿದೆ. ಬಾಲಕನೂ ಸಹ ಜನ್ಮಾಂತರ ಶಬ್ದಸಂಸ್ಕಾರ ಬಲದಿಂದ ಕರ್ತವ್ಯ ಪ್ರಕಾರವನ್ನು ತಿಳಿದುಕೊಳ್ಳುತ್ತಾನೆ.

**ವಿವರಣೆ** – ನಮ್ಮ ಸಮಸ್ತ ವ್ಯವಹಾರವೂ ಜ್ಞಾನಪೂರ್ವಕವಾಗಿಯೇ ನಡೆಯುತ್ತದೆ. ಏಳುವುದು, ಕುಳಿತುಕೊಳ್ಳುವುದೂ ಸಹ – ಆ ವಿಷಯದ ಜ್ಞಾನ ಹುಟ್ಟದೆ ನಡೆಯುವುದಿಲ್ಲ. ಈ ಜ್ಞಾನವು ಯಾವ ಪ್ರಕಾರದಲ್ಲಿ ಬರುತ್ತದೆ ? ಶಬ್ದಪೂರ್ವಕವಾಗಿಯೇ ಅದು ಬರುತ್ತದೆ. ಶಬ್ದದ ಉಲ್ಲೇಖವು ಮನಸ್ಸಿಗೂ ಬಾರದೆ, ಬರಿಯ ಜ್ಞಾನ ಹುಟ್ಟುವುದು ಯಾರ ಅನುಭವದಲ್ಲಿಯೂ ಇಲ್ಲ. ಬಾಲಕನು ಆಟವಾಡುವುದು ಸಹ ಶಬ್ದಪೂರ್ವಕವಾದ ಜ್ಞಾನದಿಂದಲೇ. ಮಾತಾಡಲೂ ಬರದಿರುವ ಮಗುವಿಗೆ ಶಬ್ದಜ್ಞಾನ ಹೇಗೆ ಬರುತ್ತದೆ? ಜನ್ಮಾಂತರ ಸಂಸ್ಕಾರ ಬಲದಿಂದ. ಅವ್ಯಕ್ತ ಶಬ್ದದ ಮೂಲಕವೇ ಹೀಗೆ ಮಾಡಬೇಕೆಂಬ ಪ್ರಕಾರಜ್ಞಾನವು ಅವನಿಗೆ ಬಂದಿರುತ್ತದೆ. ಸರ್ವಸಾಕ್ಷಿಕವಾದ ನಮ್ಮ ಅನುಭವದಿಂದ ಜನ್ಮಾಂತರೀಯ ಸಂಸ್ಕಾರವನ್ನು ಊಹಿಸಬೇಕಾಗುತ್ತದೆ. ಮಾತಾಡಲು ಬರದಿದ್ದರೂ ಚೇಷ್ಟೆಯಲ್ಲಿ ಮಗು ತೊಡಗುತ್ತದೆಯಷ್ಟೆ. ಯಾವ ತಿಳಿವಳಿಕೆಯೂ ಹುಟ್ಟದೆ ಅದು ಚೇಷ್ಟೆಗಾಗಿ ಪ್ರಯತ್ನಿಸುವುದಿಲ್ಲ. ಆದ್ದರಿಂದ ಜ್ಞಾನವನ್ನು ಊಹಿಸುವಂತೆ ಜ್ಞಾನದ ಹಿಂದೆ ಅವ್ಯಕ್ತಶಬ್ದಪ್ರಕಾರವೂ ಇದೆಯೆಂದು ಒಪ್ಪಬೇಕು.

**ಆದ್ಯಃ ಕರಣವಿನ್ಯಾಸಃ ಪ್ರಾಣಸ್ಯೋರ್ಧ್ವಂ ಸಮೀರಣಮ್ ।**
**ಸ್ಥಾನಾನಾಮಭಿಘಾತಶ್ಚ ನ ವಿನಾ ಶಬ್ದಭಾವನಾಮ್॥ ೧೨೨ ॥**

ಮೊದಲು ಶಬ್ದೋಚ್ಚಾರಣೆಗಾಗಿ ಪ್ರಯತ್ನಿಸುವುದೂ ಉಸಿರನ್ನು ಮೇಲಕ್ಕೆ ಸೇದುವುದೂ ಕಂಠಾದಿಸ್ಥಾನಗಳನ್ನು ಅಭಿಘಾತಿಸುವುದೂ ಶಬ್ದದ ಪೂರ್ವಸಂಸ್ಕಾರವಿಲ್ಲದೆ ಆಗತಕ್ಕದ್ದಲ್ಲ.

**ವಿವರಣೆ** – ಯಾವ ಕ್ರಿಯೆಯು ಹುಟ್ಟಬೇಕಾದರೂ ಮೊದಲು ಆ ವಿಷಯವಾಗಿ ಜ್ಞಾನವು ಹುಟ್ಟುತ್ತದೆ. ಅನಂತರ ಇಚ್ಛೆ, ಯತ್ನ, ಕ್ರಿಯೆಗಳು ಕ್ರಮವಾಗಿ ಉತ್ಪನ್ನವಾಗುತ್ತವೆ. ಅಶಿಕ್ಷಿತ ಬಾಲಕನು ಒಂದು ಅಕ್ಷರವನ್ನು ಉಚ್ಚರಿಸಬೇಕಾದರೆ ಆ ಅಕ್ಷರವನ್ನು ನಾವು ಹೇಳಬೇಕು – ಅಥವಾ ನಾವು ಹಿಂದೆ ಹೇಳಿದ್ದನ್ನು ಅವನು ಕೇಳಿರಬೇಕು. ಆಗ ಉಚ್ಚಾರಣೆಗೆ ಪ್ರಯತ್ನಿಸುತ್ತಾನೆ. ಪ್ರಯತ್ನಿಸುವಾಗ

ಪ್ರಾಣವಾಯುವನ್ನು ಪ್ರೇರಿಸಬೇಕಾಗುತ್ತದೆ. ಆಮೇಲೆ ಅಕ್ಷರಾನುಗುಣವಾಗಿ ಕಂಠಾದಿಸ್ಥಾನಗಳನ್ನು ಜಿಹ್ವಾಗ್ರ ಮುಂತಾದವುಗಳಿಂದ ಅಭಿಘಾತಿಸಬೇಕು ಅಥವಾ ಸ್ಥಾನಗಳನ್ನು ಸಂಕೋಚಗೊಳಿಸಬೇಕು ಅಥವಾ ವಿಕಾಸಗೊಳಿಸಬೇಕು. ಆಗ ಅಕ್ಷರವು ಬಾಯಿಯಿಂದ ಹೊರಡುತ್ತದೆ. ಇದೆಲ್ಲವನ್ನು ಬಾಲಕನು ಎಲ್ಲಿಂದ ಕಲಿತನು? ಬಾಯೊಳಗೆ ನಡೆಯುವ ಈ ಕ್ರಿಯೆಗಳು ಅತಿಸೂಕ್ಷ್ಮವಾಗಿರುತ್ತವೆ. ಕಣ್ಣಿಗೆ ಕಾಣಿಸತಕ್ಕವಲ್ಲ. ಉಚ್ಚಾರಣೆ ಮಾಡತಕ್ಕವರ ಗಮನಕ್ಕೂ ಬಾರದಂತೆ ಅವು ನಡೆಯುತ್ತವೆ. ಪ್ರೌಢರಿಗೂ ತಿಳಿಯದ ಕ್ರಿಯೆಯನ್ನು ಬಾಲಕರು ಮಾಡಲು ಪ್ರಯತ್ನಿಸುತ್ತಿರುವುದು ಜನ್ಮಾಂತರದ ಸಂಸ್ಕಾರದಿಂದಲೇ.

**ನ ಸೋऽಸ್ತಿ ಪ್ರತ್ಯಯೋ ಲೋಕೇ ಯಃ ಶಬ್ದಾನುಗಮಾದೃತೇ।**
**ಅನುವಿದ್ಧಮಿವ ಜ್ಞಾನಂ ಸರ್ವಂ ಶಬ್ದೇನ ಭಾಸತೇ ॥ ೧೨೩ ॥**

ಶಬ್ದಸಂಸ್ಪರ್ಶವಿಲ್ಲದ ಯಾವುದೇ ಒಂದು ಜ್ಞಾನವೂ ಲೋಕದಲ್ಲಿಲ್ಲ. ಸಮಸ್ತಜ್ಞಾನವೂ ಸಹ ಶಬ್ದದೊಡನೆ ಕೂಡಿಹೋಗಿದೆಯೋ ಎಂಬಂತೆಯೇ ತೋರುತ್ತದೆ.

**ವಿವರಣೆ** – ವಕ್ತಾರನ ಜ್ಞಾನವಾಗಲಿ ಶ್ರೋತಾರನ ಜ್ಞಾನವಾಗಲಿ ಶಬ್ದಪೂರ್ವಕವಾಗಿಯೇ ಇರುತ್ತದೆ. 'ಘಟ ಇತಿ ಶಬ್ದಃ, ಘಟ ಇತ್ಯರ್ಥಃ, ಘಟ ಇತಿ ಜ್ಞಾನಂ' ಎಂದು ಲೋಕವ್ಯವಹಾರವಿರುವುದರಿಂದ, ಶಬ್ದ–ಅರ್ಥ–ಜ್ಞಾನ ಇವು ಮೂರು ತಾದಾತ್ಮ್ಯ ಸಂಬಂಧದಿಂದ ಕೂಡಿಕೊಂಡೇ ಇವೆಯೆಂದು ಸಿದ್ಧವಾಗುತ್ತದೆ. ಹೇಗೆ ಒಂದು ಜ್ಞಾನವು ಘಟಾದಿವಿಷಯವನ್ನು ಕಚ್ಚಿಕೊಳ್ಳದೆ ಒಂಟಿಯಾಗಿ ಬರುವುದಿಲ್ಲವೋ ಹಾಗೆ ಅದೇ ಜ್ಞಾನವು ಶಬ್ದವನ್ನು ಕಚ್ಚಿಕೊಳ್ಳದೆ ಬರುವುದಿಲ್ಲ. ಶಬ್ದಕ್ಕೆ ಗ್ರಾಹ್ಯತ್ವ, ಗ್ರಾಹಕತ್ವ ಎಂಬ ಎರಡು ಶಕ್ತಿಗಳಿವೆಯೆಂದು ಹಿಂದೆಯೇ ತಿಳಿಸಿದೆ. (ಶ್ಲೋ.೫೫) ಒಂದು ಆನೆಯನ್ನು ಕಂಡಾಗ 'ಆನೆ' ಎಂಬ ಶಬ್ದದ ಜೊತೆಗೆ ಆನೆಯೆಂಬ ಜ್ಞಾನವು ಬರುತ್ತದೆ. ಅಪರಿಚಿತ ವ್ಯಕ್ತಿಯನ್ನು ಕಂಡಾಗ 'ಮನುಷ್ಯ' ಎಂದೋ 'ಮುದುಕ' ಎಂದೋ 'ವಿದೇಶೀಯ'ನೆಂದೋ ಒಂದು ಶಬ್ದವು ಸ್ಫುರಿಸದೆ ಜ್ಞಾನ ಬರುವುದಿಲ್ಲ. ಸ್ವಪ್ನದಲ್ಲಿ ಬರುವ ಜ್ಞಾನವೂ ಶಬ್ದಪೂರ್ವಕ–ವಾಗಿಯೇ ಇರುತ್ತದೆ. ಸ್ಮರಣೆಯೂ ಸಹ ಶಬ್ದಾನುವಿದ್ಧವೇ ಆಗಿರುತ್ತದೆ. ಶಬ್ದಭಾವನೆಯಿಂದಲೇ ಜ್ಞಾನವು ಬರುವುದರಿಂದ ಶಬ್ದವು ಪ್ರಕೃತಿ. ಜ್ಞಾನವು ವಿಕೃತಿ. ಈ ಶ್ಲೋಕದಲ್ಲಿ ಶಬ್ದ, ಅರ್ಥ, ಜ್ಞಾನ – ಇವು ಮೂರು ಒಂದನ್ನೊಂದು ಬಿಟ್ಟಿರುವುದಿಲ್ಲವೆಂದು ತಿಳಿಸಿದ್ದಾರೆ. 'ಶಬ್ದಾರ್ಥಪ್ರತ್ಯಯಾನಾಮಿತರೇತರಾಧ್ಯಾಸಾತ್ ಸಂಕರಃ (ಯೋ. ೩–೧೭)' ಎಂಬ ಯೋಗಸೂತ್ರದಲ್ಲಿ ಇದನ್ನೇ ಹೇಳಿದೆ.

**ವಾಗ್ರೂಪತಾ ಚೇನ್ನಿಷ್ಕ್ರಾಮೇದವಬೋಧಸ್ಯ ಶಾಶ್ವತೀ ।**
**ನ ಪ್ರಕಾಶಃ ಪ್ರಕಾಶೇತ ಸಾ ಹಿ ಪ್ರತ್ಯವಮರ್ಶಿನೀ ॥ ೧೨೪ ॥**

ಜ್ಞಾನಕ್ಕೆ ವಾಗ್ರೂಪತಾನುಷಂಗವು ಶಾಶ್ವತವಾದದ್ದು – ಸಹಜವಾದದ್ದು. ವಾಗ್ರೂಪತೆ ಇಲ್ಲದೆ ಹೋದರೆ ಜ್ಞಾನವೆಂಬ ಪ್ರಕಾಶವು ಬೆಳಗದೆ ಹೋದೀತು. ಏಕೆಂದರೆ ಅದೇ ಜ್ಞಾನಪ್ರಕಾಶವು ಬೆಳಗುವುದಕ್ಕೆ ಸಾಧನವಾಗಿದೆ.

**ವಿವರಣೆ** – ಅಗ್ನಿಗೆ ಪ್ರಕಾಶವೂ ಅಂತರ್ಯಾಮಿಯಾದ ಆತ್ಮನಿಗೆ ಚೈತನ್ಯವೂ ಸ್ವರೂಪವಾಗಿರುವಂತೆ ಜ್ಞಾನಕ್ಕೆ ವಾಕ್‌ತತ್ತ್ವವೇ ಸ್ವರೂಪವಾಗಿರುತ್ತದೆ. ಪ್ರಕಾಶವಿಲ್ಲದೆ ಅಗ್ನಿಯು ಯಾವುದನ್ನೂ ಬೆಳಗಲಾರದು. ವಾಕ್ ಇಲ್ಲದೆ ಜ್ಞಾನವು ಯಾರಿಗೂ ವಸ್ತುಪ್ರಕಾಶವನ್ನು ನೀಡಲಾರದು. ಮನುಷ್ಯನು ತನಗೆ ಹುಟ್ಟಿದ ಜ್ಞಾನವನ್ನು ಶಬ್ದದಿಂದಲೇ ಇನ್ನೊಬ್ಬನಿಗೆ ತಿಳಿಸುತ್ತಾನೆ. ಚೈತ್ರನು ಮೈತ್ರನಿಗೆ ಕೈಸನ್ನೆಯಿಂದ 'ಹತ್ತಿರ ಬಾ' ಎಂದು ಸೂಚಿಸಿದಾಗಲೂ ಹತ್ತಿರ ಬಾ ಎಂಬ ಶಬ್ದವನ್ನು ಸ್ಮರಿಸಿಕೊಂಡೇ ಮೈತ್ರನು ಅರ್ಥಮಾಡಿಕೊಳ್ಳುತ್ತಾನೆ. ನಾವು ಯಾವುದಾದರೊಂದು ಶ್ಲೋಕವನ್ನು ಅರೆಬರೆಯಾಗಿ ಸ್ಮರಿಸಿಕೊಂಡಾಗ ಅರ್ಥವು ಅಸ್ಫುಟವಾಗಿರುತ್ತದೆ. ಶ್ಲೋಕವನ್ನು ಬಲ್ಲ ಇನ್ನೊಬ್ಬನು ಅದನ್ನು ಹೇಳಿದಾಗ ನಮ್ಮ ಗಮನವು ಆತನು ಉಚ್ಚರಿಸುವ ಶಬ್ದದ ಕಡೆಗೆ ಇರುತ್ತದೆ. ಶಬ್ದಗಳೆಲ್ಲವನ್ನು ಕೇಳಿದಾಗ ನಮ್ಮ ಮನಸ್ಸಿನಲ್ಲಿದ್ದ ಅರ್ಥವು ಸ್ಫುಟವಾಗಿ ಪ್ರಕಾಶಿಸುತ್ತದೆ. ಜ್ಞಾನವು ವಾಗ್ರೂಪತೆಯನ್ನು ಕಳಚಿಕೊಂಡರೆ, ಜ್ಞಾನಗೋಚರವಾದದ್ದನ್ನು ಇನ್ನೊಬ್ಬರಿಗೆ ಸ್ಪಷ್ಟವಾಗಿ ತಿಳಿಸಲು ಬೇರೆ ಸಾಧನವೇ ಇಲ್ಲ. 'ಇಹ ತ್ರೀಣಿ ಜ್ಯೋತೀಂಷಿ ತ್ರಯಃ ಪ್ರಕಾಶಾಃ' – ಎಂದು ಪ್ರಾಚೀನ ಸಿದ್ಧಾಂತ ಉಂಟು. ಪದಾರ್ಥ ಪ್ರಕಾಶನಗೊಳಿಸುವ ಜ್ಯೋತಿಗಳು ಮೂರು – ಅಗ್ನಿ, ಆತ್ಮ ಚೈತನ್ಯ ಮತ್ತು ಶಬ್ದ.

**ಸಾ ಸರ್ವವಿದ್ಯಾಶಿಲ್ಪಾನಾಂ ಕಲಾನಾಂ ಚೋಪಬಂಧನೀ ।**
**ತದ್ವಶಾದಭಿನಿಷ್ಪನ್ನಂ ಸರ್ವಂ ವಸ್ತು ವಿಭಜ್ಯತೇ ॥ ೧೨೫ ॥**

ಈ ವಾಕ್‌ತತ್ತ್ವವೇ ಸಮಸ್ತ ವಿದ್ಯೆಗಳಿಗೂ ಶಿಲ್ಪಗಳಿಗೂ ಕಲೆಗಳಿಗೂ ಬೋಧಕವಾಗಿ ಆಶ್ರಯದಾತೃವಾಗಿರುತ್ತದೆ. ನಿಷ್ಪನ್ನವಾದ ಸಮಸ್ತಪದಾರ್ಥವು ವಾಕ್ಕಿನ ವಶವಾಗಿಯೇ ವಿಶ್ಲೇಷಣೆ ಹೊಂದುತ್ತದೆ.

**ವಿವರಣೆ** – ಮನುಷ್ಯರ ಸಮಸ್ತ ಲೌಕಿಕ ವ್ಯವಹಾರಗಳೂ ವೈದಿಕ ವ್ಯವಹಾರ–ಗಳೂ ವಿದ್ಯಾ–ಶಿಲ್ಪ–ಕಲೆಗಳಿಗೆ ಸಂಬಂಧಿಸಿಯೇ ನಡೆಯುತ್ತದೆ. ಈ ವ್ಯವಹಾರಗಳು

ವಾಗ್ರೂಪವಾದ ಬುದ್ಧಿಯಲ್ಲಿ ನೆಲೆಸಿ ವಾಗ್ರೂಪದಲ್ಲಿ ಪ್ರಕಾಶಗೊಳ್ಳುತ್ತವೆ. ಸಕಲ ವಿಧಿ ನಿಷೇಧಗಳು ವಾಕ್ಕಿಗೆ ಅಧೀನವಾಗಿವೆ.

**ಟಿಪ್ಪಣಿ**

೧. ಅಂಗಾನಿ ವೇದಾಶ್ಚತ್ವಾರೋ ಮೀಮಾಂಸಾ ನ್ಯಾಯವಿಸ್ತರಃ ।
ಧರ್ಮಶಾಸ್ತ್ರಂ ಪುರಾಣಂ ಚ ವಿದ್ಯಾ ಹ್ಯೇತಾಶ್ಚತುರ್ದಶ ॥

ಶಿಕ್ಷಾ, ವ್ಯಾಕರಣ, ಕಲ್ಪ, ನಿರುಕ್ತ, ಜ್ಯೋತಿಷ್ಯ, ಛಂದಸ್ ಇವು ಆರು ವೇದಾಂಗಳು.

ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವವೇದ, ಇವು ನಾಲ್ಕು ವೇದಗಳು.

ಮೀಮಾಂಸಾ (ಪೂರ್ವ + ಉತ್ತರ) ನ್ಯಾಯಶಾಸ್ತ್ರ, ಧರ್ಮಶಾಸ್ತ್ರ, ಪುರಾಣ – ಹೀಗೆ ಹದಿನಾಲ್ಕು ವಿದ್ಯೆಗಳು, ಆಯುರ್ವೇದ, ಧನುರ್ವೇದ, ಗಾಂಧರ್ವವೇದ, ಅರ್ಥಶಾಸ್ತ್ರಗಳನ್ನು ಸೇರಿಸಿ ಒಟ್ಟು ಹದಿನೆಂಟು ವಿದ್ಯೆಗಳೆಂದು ಕೆಲವರು ಹೇಳಿದ್ದಾರೆ. ನೀತಿಶಾಸ್ತ್ರ, ಅಶ್ವಶಾಸ್ತ್ರ, ಗಜಶಾಸ್ತ್ರ ಮುಂತಾದವು ಅರ್ಥಶಾಸ್ತ್ರದಲ್ಲಿ ಸೇರುತ್ತವೆ. ಸಾಂಖ್ಯ, ಯೋಗ – ಮೊದಲಾದವನ್ನು ಧರ್ಮಶಾಸ್ತ್ರದಲ್ಲಿ, ಹೀಗೆ ಉಳಿದವನ್ನೂ ಅಲ್ಲಲ್ಲಿ ಅಂತರ್ಭಾವ ಮಾಡಬೇಕು.

೨. ಗೃಹ, ಪೀಠಾದ್ಯುಪಕರಣ, ಪ್ರತಿಮೆ – ಮೊದಲಾದದ್ದನ್ನು ನಿರ್ಮಿಸಲು ಉಪಯುಕ್ತಶಾಸ್ತ್ರವು ಶಿಲ್ಪಶಾಸ್ತ್ರ.

೩. ಗೀತ, ವಾದ್ಯ, ನೃತ್ಯ, ನಾಟ್ಯ ಮೊದಲಾದವು ಅರುವತ್ತನಾಲ್ಕು ಕಲೆಗಳು.

**ಸೈಷಾ ಸಂಸಾರಿಣಾಂ ಸಂಜ್ಞಾ ಬಹಿರಂತಶ್ಚ ವರ್ತತೇ ।**
**ತನ್ಮಾತ್ರಾಮನತಿಕ್ರಾಂತಂ ಚೈತನ್ಯಂ ಸರ್ವಜಂತುಷು ॥ ೧೨೬ ॥**

ಅಂತಹ ಈ ವಾಕ್ ಎಂಬುದು ಪ್ರಾಣಿಗಳ ಜೀವಿತ ಸಂಕೇತವಾಗಿದೆ. ಇದು ಬಾಹ್ಯವ್ಯವಹಾರದಲ್ಲಿಯೂ ಆಂತರಿಕವಾದ ಸುಖದುಃಖ ಸಂವೇದನೆಯಲ್ಲಿಯೂ ಇದ್ದೇ ಇರುತ್ತದೆ. ಸರ್ವಪ್ರಾಣಿಗಳಲ್ಲಿಯೂ ಇದು ವಾಗ್ರೂಪತೆಯನ್ನು ದಾಟದೆ ವಾಗ್ರೂಪವಾಗಿಯೇ ಇರುವ ಚೈತನ್ಯವಾಗಿದೆ.

**ವಿವರಣೆ** – ಸಕಲವಿದ್ಯಾ ಸ್ವರೂಪವಾಗಿರುವ ಶಬ್ದತತ್ತ್ವವು ಪ್ರಾಣಿಗಳ ನಿಜ ಸ್ವರೂಪವಾದ ಚೈತನ್ಯವೇ ಆಗಿದೆ. ಮನುಷ್ಯನು ಜೀವಿಸಿದ್ದಾನೆಯೇ ಇಲ್ಲವೇ ?

ಎಂಬುದು ವಾಗ್ ವ್ಯವಹಾರದಿಂದ ಗೊತ್ತುಮಾಡಲು ಸಾಧ್ಯ. ಮಾತು ನಿಂತು ಹೋಯಿತೆಂದರೆ ಮರಣಾವಸ್ಥೆ ಸಮೀಪಿಸಿದೆಯೆಂದು ಹೇಳುತ್ತಾರೆ. ಮಾತಾಡು-ತ್ತಿದ್ದರೆ ಇನ್ನೂ ಸಂಜ್ಞೆ ಇದೆಯೆಂದೂ ಮಾತು ನಿಂತು ಹೋಯಿತೆಂದರೆ ಸಂಜ್ಞೆ ತಪ್ಪಿತೆಂದೂ ವ್ಯವಹಾರ ಉಂಟು. ಬಾಹ್ಯವ್ಯವಹಾರಗಳು ಮಾತ್ರವಲ್ಲದೆ ನಮ್ಮ ಆಂತರಿಕವಾದ ಸುಖ, ದುಃಖ, ಕ್ರೋಧ ಮುಂತಾದ ಮಾನಸಿಕ ವ್ಯವಹಾರ-ಗಳಲ್ಲಿಯೂ ಶಬ್ದಗಳ ಉಲ್ಲೇಖವಿರುತ್ತದೆ. ನಮ್ಮ ಸಮಸ್ತ ಚಿಂತನಗಳೂ ಶಬ್ದರೂಪವಾಗಿಯೇ ಬರುತ್ತವೆ. ಶಬ್ದೋಲ್ಲೇಖನವಿಲ್ಲದೆ ಯಾವ ಚಿಂತನವೂ ನಡೆಯುವುದಿಲ್ಲ. ಆದ್ದರಿಂದ ಪ್ರಾಣಿಗಳ ಚೈತನ್ಯವೇ ವಾಗ್ರೂಪದಲ್ಲಿರುತ್ತದೆ. ಗಿಡ, ಮರ, ಬಳ್ಳಿ ಮೊದಲಾದವುಗಳಿಗೆ ಪ್ರಾಣವಿದೆಯೆಂದೂ ಅವು 'ಅಂತಃಸಂಜ್ಞ' ಗಳೆಂದೂ ಶಾಸ್ತ್ರಗಳಲ್ಲಿ ಪ್ರತಿಪಾದನೆ ಇದೆ. ಕ್ರಿಮಿ, ಕೀಟಗಳಿಗೂ, ಅತಿಸೂಕ್ಷ್ಮವಾದ ಧ್ವನಿಶಕ್ತಿಯಿದೆಯೆಂದು ವಚನವಿದೆ. ಎಲ್ಲಿ ಧ್ವನಿಶಕ್ತಿ ಇಲ್ಲವೋ ಅಲ್ಲಿ ಧ್ವನಿಯನ್ನುಂಟು ಮಾಡುವ ಅವಯವಗಳಿಲ್ಲವೆಂದೂ ವಾಕ್‌ತತ್ತ್ವವು ಪರಾಸ್ವರೂಪದಲ್ಲಿದೆಯೆಂದೂ ತಿಳಿಯಬೇಕು.

**ಪ್ರವಿಭಾಗೇ ಯಥಾ ಕರ್ತಾ ತಯಾ ಕಾರ್ಯೇ ಪ್ರವರ್ತತೇ ।**
**ಅವಿಭಾಗೇ ತಥಾ ಸೈವ ಕಾರ್ಯತ್ವೇನ ವಿವರ್ತತೇ ॥ ೧೨೭ ॥**

ಜಾಗ್ರದವಸ್ಥೆಯಲ್ಲಿ ಕರ್ತನು ವಾಕ್ಕಿನ ಸಹಾಯದಿಂದ ಹೇಗೆ ಕಾರ್ಯ-ದಲ್ಲಿ ತೊಡಗುವನೋ ಹಾಗೆಯೇ ಸ್ವಪ್ನಾವಸ್ಥೆಯಲ್ಲಿ ಆ ವಾಕ್‌ತತ್ತ್ವವೇ ಕಾರ್ಯವಾಗಿ ವಿವರ್ತಗೊಂಡು ಬಿಡುತ್ತದೆ.

**ವಿವರಣೆ** – ಪ್ರವಿಭಾಗ = ಜಾಗ್ರತ್ತು. ಅವಿಭಾಗ = ಸ್ವಪ್ನ. ಜಾಗ್ರದವಸ್ಥೆಯಲ್ಲಿ ಜೀವನು ಕಾರ್ಯದಲ್ಲಿ ತೊಡಗಿದಾಗ ಕರ್ತ, ಕರ್ಮ, ಕರಣ, ಕ್ರಿಯೆ ಮುಂತಾದ ವಿಭಾಗಗಳು ಸ್ಪಷ್ಟವಾಗಿ ಕಂಡು ಬರುತ್ತವೆ. ಕನಸಿನಲ್ಲಿ ಹೇಗೆ? ಆಗ ಬಾಹ್ಯವಸ್ತುಗಳೇ ಇರುವುದಿಲ್ಲ. ಆಗ ವಾಕ್ ಎಂಬುದೇ ಕರ್ತ, ಕರ್ಮ, ಕ್ರಿಯೆ ಮುಂತಾದ ರೂಪ-ಗಳನ್ನೂ ಪಡೆದು ಎಲ್ಲ ಕನಸಿನ ವ್ಯವಹಾರವನ್ನು ನಡೆಸುತ್ತದೆ. ಜಾಗ್ರದವಸ್ಥೆ-ಯಲ್ಲಿಯೂ ಶಬ್ದಾದ್ವೈತಸಿದ್ಧಾಂತದ ಪ್ರಕಾರ ಸರ್ವವೂ ವಾಕ್‌ತತ್ತ್ವವೇ ಆದರೂ ಲೋಕಪ್ರಸಿದ್ಧಿಯನ್ನನುಸರಿಸಿ ಬಾಹ್ಯವಸ್ತುಗಳಿರುವಂತೆ ಇಲ್ಲಿ ಹೇಳಿದೆ. ಸ್ವಪ್ನಾವಸ್ಥೆ-ಯಲ್ಲಿ ಬಾಹ್ಯವಸ್ತುವಿಲ್ಲದ್ದರಿಂದ ಸರ್ವವೂ ವಾಕ್‌ತತ್ತ್ವವೇ ಎಂಬುದು ಸ್ಫುಟವಾಗಿ ಗೊತ್ತಾಗುತ್ತದೆ.

ಎಲ್ಲ ಪ್ರಕ್ರಿಯೆಗಳು ಅದ್ವೈತ ಸಿದ್ಧಾಂತದಂತೆಯೇ ಇವೆ. ವೇದಾಂತಿಗಳು

ಪರಬ್ರಹ್ಮ ಎನ್ನುವ ಸ್ಥಳದಲ್ಲಿ ವೈಯಾಕರಣರು ಶಬ್ದಬ್ರಹ್ಮ ಎನ್ನುತ್ತಾರೆ. ಇಷ್ಟೇ ಭೇದ. ಕರ್ತಾ, ಕರ್ಮ, ಕ್ರಿಯೆ ಮೊದಲಾದವು ಶಬ್ದಬ್ರಹ್ಮದ ವಿವರ್ತಗಳು.

ಭೋಕ್ತಾ ಭೋಗ್ಯಂ ಪ್ರೇರಿತಾರಂ ಚ ಮತ್ವಾ ।
ಸರ್ವಂ ಪ್ರೋಕ್ತಂ ತ್ರಿವಿಧಂ ಬ್ರಹ್ಮ ಚೈತತ್ ॥

ಎಂದು ಉಪನಿಷತ್ತು ಹೇಳುತ್ತದೆ. ಒಂದೇ ಬ್ರಹ್ಮವೇ ಭೋಕ್ತ, ಭೋಗ್ಯ, ಪ್ರೇರಯಿತೃ ಹೀಗೆ ತ್ರಿವಿಧವಾಗಿದೆ ಎಂದು ತಾತ್ಪರ್ಯ.

**ಸ್ವಮಾತ್ರಾ ಪರಮಾತ್ರಾ ವಾ ಶ್ರುತ್ಯಾ ಪ್ರಕ್ರಮ್ಯತೇ ಯಥಾ ।**
**ತಥೈವ ರೂಢತಾಮೇತಿ ತಯಾ ಹ್ಯರ್ಥೋ ವಿಧೀಯತೇ ॥ ೧೨೮ ॥**

ಶಬ್ದವು ಜಗತ್ತನ್ನು ಸ್ವಸ್ವರೂಪವೆಂದಾಗಲಿ ಪರಸ್ವರೂಪವೆಂದಾಗಲಿ ಪ್ರತಿಪಾದಿಸಬಲ್ಲದು. ಅದು ಹೇಗೆ ಪ್ರತಿಪಾದಿಸುತ್ತದೆಯೋ ಹಾಗೆಯೇ ರೂಢಿಯಾಗಿ ಪ್ರಸಿದ್ಧವಾಗುತ್ತದೆ. ಏಕೆಂದರೆ ಶಬ್ದವೇ ಪದಾರ್ಥವನ್ನು ನಿರ್ಮಿಸುತ್ತದೆ.

**ವಿವರಣೆ** – ಈ ಶ್ಲೋಕದಲ್ಲಿರುವ ಶ್ರುತಿ ಎಂಬುದಕ್ಕೆ ಶಬ್ದ ಸಾಮಾನ್ಯವೆಂದರ್ಥ, ವೇದವೆಂದು ಅರ್ಥವಲ್ಲ. ಶಬ್ದವು ಸರ್ವಶಕ್ತವಾದದ್ದು. ಅದರ ಶಕ್ತಿಸಾಮರ್ಥ್ಯಗಳು ಅಪಾರವಾದವು. ನಾವು ಹಿಂದೆ ಬರೆದಂತೆ ಈ ವಿಶ್ವವೆಲ್ಲವೂ ವಾಕ್ ಸ್ವರೂಪವೆಂದೂ ಶಬ್ದಾದ್ವೈತವೇ ಸತ್ಯವೆಂದೂ ಸಿದ್ಧಾಂತಿಸಬಹುದು. ವಾಕ್ ಸ್ವರೂಪವಲ್ಲವೆಂದು ಪರರು ಹೇಳುವಂತೆ ನಾನಾ ಬಗೆಯ ದ್ವೈತಸಿದ್ಧಾಂತಗಳನ್ನು ಶಬ್ದದಿಂದಲೇ ನಿರೂಪಿಸಬಹುದು. ಆ ನಿರೂಪಣೆ ಪ್ರಸಿದ್ಧಿಯನ್ನೈದು ಉಳಿಯಬಲ್ಲದು. ಶಬ್ದದಿಂದಲೇ ಅರ್ಥನಿರ್ಮಾಣವಾಗುವುದರಿಂದ ಯಾವ ರೀತಿಯ ಅರ್ಥವನ್ನಾದರೂ ನಿರ್ಮಿಸಿ ಸ್ಥಾಪಿಸಬಹುದು. ಮಣ್ಣಿನಿಂದ ಹರವಿಯನ್ನು ಮಾಡಬಹುದು, ಹಣತೆಯನ್ನೂ ಮಾಡಬಹುದು. ಸಕಲ ಶಾಸ್ತ್ರಗಳೂ ವಾಗ್ರೂಪದಲ್ಲಿವೆ. ವಾಗ್ರೂಪವನ್ನು ಅತಿಕ್ರಮಿಸಿರುವ ಯಾವ ವಸ್ತುವೂ ಇಲ್ಲ.

ಇರುವುದನ್ನು ಇಲ್ಲದಂತೆಯೂ ಇಲ್ಲದ್ದನ್ನು ಇರುವಂತೆಯೂ ಮಾಡುವ ಶಕ್ತಿ ಶಬ್ದಕ್ಕಿದೆ. ಮೊಲದ ಕೊಂಬು, ಗಗನಪುಷ್ಪ, ಕನಸಿನ ಗಂಟು – ಎಂದು ಹೇಳಿದರೆ ಒಂದಾನೊಂದು ಅರ್ಥವು ಮನಸ್ಸಿಗೆ ಸ್ಫುರಿಸುತ್ತದೆ. ಇಂತಹ ವಸ್ತುಶೂನ್ಯವಾದ ಜ್ಞಾನಕ್ಕೆ ವಿಕಲ್ಪವೆಂದು ಹೆಸರು. 'ಶಬ್ದಜ್ಞಾನಾನುಪಾತೀ ವಸ್ತುಶೂನ್ಯೋ ವಿಕಲ್ಪಃ' ಎಂದು ಯೋಗಸೂತ್ರ (೧–೯) ಹೇಳುತ್ತದೆ. ಜಗತ್ತು ಸರ್ವಶೂನ್ಯವೆಂದು ಬೌದ್ಧರು ಸಿದ್ಧಾಂತಿಸಿದರೆ ಸರ್ವಶೂನ್ಯವಾಗಿಯೇ ಭಾಸವಾಗುತ್ತದೆ. ಶಬ್ದವು ಸರ್ವಶಕ್ತವೆಂದು ತಾತ್ಪರ್ಯ.

**ಅತ್ಯಂತಮತಥಾಭೂತೇ ನಿಮಿತ್ತೇ ಶ್ರುತ್ಯುಪಾಶ್ರಯಾತ್ ।**
**ದೃಶ್ಯತೇಽಲಾತಚಕ್ರಾದೌ ವಸ್ತ್ವಾಕಾರನಿರೂಪಣಾ ॥ ೧೨೯ ॥**

ಅಲಾತಚಕ್ರ ಮುಂತಾದವುಗಳ ಅಸ್ತಿತ್ವಕ್ಕೆ ಬಾಹ್ಯಕಾರಣವು ಸರ್ವಥಾ ಇರುವುದಿಲ್ಲ. ಆದರೂ ಶಬ್ದಬಲದಿಂದ ಅಂತಹ ವಸ್ತುವಿನ ಆಕೃತಿಜ್ಞಾನ–ವಾಗುವುದು ಕಂಡು ಬರುತ್ತದೆ.

**ವಿವರಣೆ** – ಇಲ್ಲದ್ದನ್ನು ಇರುವಂತೆ ಮಾಡುವ ಶಕ್ತಿ ಶಬ್ದಕ್ಕಿದೆಯೆಂಬುದನ್ನು ಇಲ್ಲಿ ವಿವರಿಸಲಾಗಿದೆ. ಅಲಾತವೆಂದರೆ ಪಂಜು, ಕೊಳ್ಳಿ. ಅದಕ್ಕೆ ಉರಿಯನ್ನು ತಾಗಿಸಿ ಗಿರ್ರೆಂದು ತಿರುಗಿಸುತ್ತಿದ್ದರೆ ಬೆಂಕಿಯ ಚಕ್ರದಂತೆ ಕಾಣಿಸುತ್ತದೆ. ಪಂಜು ನೀಳವಾಗಿದೆ. ಮಂಡಲಾಕಾರವಾಗಿಲ್ಲ – ಎಂಬುದು ಗೊತ್ತಿದ್ದರೂ ನೋಡುವಾಗ ಚಕ್ರವೆಂಬ ಭ್ರಾಂತಿ ಬರುತ್ತದೆ. ಅಂತೆಯೇ ಅಲಾತಚಕ್ರವೆಂಬ ಶಬ್ದವನ್ನು ಕೇಳಿದಾಗ ಶಬ್ದಶಕ್ತಿಯಿಂದ ಅದೊಂದು ಚಕ್ರವೆಂಬ ಬುದ್ಧಿ ಹುಟ್ಟುತ್ತದೆ. ಇದಕ್ಕೆ 'ವಿಕಲ್ಪಜ್ಞಾನ'ವೆಂದು ಶಾಸ್ತ್ರಕಾರರು ಹೇಳುತ್ತಾರೆ. ಶಶಶೃಂಗ, ಬಿಸಿಲ್ಗುದುರೆ – ಮುಂತಾದವೆಲ್ಲ ಇದೇ ಜಾತಿಯವು. ಅಲಾತಚಕ್ರವನ್ನು ಪ್ರತ್ಯಕ್ಷನೋಡಬಹುದೆಂಬ ಕಾರಣದಿಂದ ಇದನ್ನು ದೃಷ್ಟಾಂತವಾಗಿ ಉದಾಹರಿಸಿದ್ದಾರೆ. ಈ ಶ್ಲೋಕದ ಅಭಿಪ್ರಾಯವನ್ನೇ ಕುಮಾರಿಲಭಟ್ಟರು 'ಅತ್ಯಂತಾ ಸತ್ಯಪಿ ಹ್ಯರ್ಥೇ ಜ್ಞಾನಂ ಶಬ್ದಃ ಕರೋತಿ ಹಿ' ಎಂದು ಹೇಳಿದ್ದಾರೆ. ತೋರತಕ್ಕದ್ದು ಬೌದ್ಧವಾದ ಪದಾರ್ಥ, ಅದು ಬಾಹ್ಯದಲ್ಲಿಲ್ಲ. ಭ್ರಮೆಯಲ್ಲಿ ಮಾತ್ರವಲ್ಲ, ಪ್ರಮೆಯಲ್ಲಿಯೂ ಸರ್ವತ್ರ ಬೌದ್ಧಪದಾರ್ಥವನ್ನು ಒಪ್ಪಲೇಬೇಕಾಗುತ್ತದೆ. 'ಶಬ್ದಾರ್ಥಗಳು ಸೇರಿ ಕಾವ್ಯ' ಎಂದು ಆಲಂಕಾರಿಕರು ಹೇಳುತ್ತಾರೆ. ಅರ್ಥವೆಂದರೆ ಯಾವುದು ? ಹಿಮಾಲಯದ ವರ್ಣನೆ ಮಾಡಿದಾಗ ಹಿಮಾಲಯ ಪರ್ವತವೇ ಕಾವ್ಯವೆನಿಸುತ್ತದೆಯೇನು ? ಕಾವ್ಯವೆನಿಸತಕ್ಕದ್ದು ಬೌದ್ಧವಾದ ಅರ್ಥವೇ ಸರಿ, ಬಾಹ್ಯವಾದದ್ದಲ್ಲ. ಭ್ರಮೆಯಿಂದ ಅಲಾತಚಕ್ರವು ಕಾಣಿಸುವಂತೆ ಅನಾದಿಯಾದ ಅವಿದ್ಯೆಯಿಂದ ಶಬ್ದಬ್ರಹ್ಮವೇ ವಿವರ್ತದಿಂದ ವಿಶ್ವವಾಗಿ ಕಾಣಿಸುತ್ತದೆಯೆಂದು ತಾತ್ಪರ್ಯ.

**ಅಪಿ ಪ್ರಯೋಕ್ತುರಾತ್ಮಾನಂ ಶಬ್ದಮಂತರವಸ್ಥಿತಮ್ ।**
**ಪ್ರಾಹುರ್ಮಹಾಂತಮೃಷಭಂ ಯೇನ ಸಾಯುಜ್ಯಮಿಷ್ಯತೇ ॥ ೧೩೦ ॥**

ವಾಕ್‌ತತ್ತ್ವವೆನ್ನುವುದು ಶಬ್ದವನ್ನು ಪ್ರಯೋಗಿಸತಕ್ಕವನ ಆತ್ಮವಾಗಿದೆ. ಅವನ ಹೃದಯಾಕಾಶದಲ್ಲಿ ಪ್ರತಿಷ್ಠಿತವಾಗಿದೆ. ಅದನ್ನು ಮಹಾವೃಷಭವೆಂದು ವೇದಮಂತ್ರಗಳೂ ಋಷಿಗಳೂ ಕರೆದಿದ್ದಾರೆ. ಮೋಕ್ಷದಲ್ಲಿ ಅದರೊಡನೆ

ಸಾಯುಜ್ಯವಾಗುತ್ತದೆಯೆಂಬುದು ಋಷಿಸಂಮತವಾಗಿದೆ.

**ವಿವರಣೆ** – ಶಬ್ದವು ನಿತ್ಯ, ಕಾರ್ಯ ಎಂದು ಎರಡು ವಿಧ. ಕಂಠತಾಲ್ವಾದಿ ಸ್ಥಾನಗಳಲ್ಲಿ ಉತ್ಪನ್ನವಾಗತಕ್ಕದ್ದು ಕಾರ್ಯ. ಇದನ್ನೇ ವೈಖರೀನಾದವೆಂದೂ ಲೋಕದಲ್ಲಿ ಶಬ್ದವೆಂದೂ ಹೇಳುತ್ತಾರೆ. ಇದರಿಂದ ಸಮಸ್ತವ್ಯವಹಾರವೂ ನಡೆಯು–ತ್ತದೆ. ಈ ಶಬ್ದವು ಶ್ರವಣ ಗೋಚರವೂ ಅನಿತ್ಯವೂ ಆಗಿದೆ. ಇದಕ್ಕೆ ಮೂಲಪ್ರಕೃತಿ–ಯಾದ ಪರಾವಾಕ್ ಎನ್ನುವುದು ನಿತ್ಯವಾದ ಶಬ್ದ. ಅದು ಕ್ರಮ ರಹಿತವೂ ಅಖಂಡವೂ ಆಗಿದೆ. ನಾವು ಉಚ್ಚರಿಸುವ ಶಬ್ದವು ಪರಾವಾಕ್ಕಿನ ಪ್ರತಿಬಿಂಬಗ್ರಾಹಿ–ಯಾಗಿ ಛಾಯಾಚಿತ್ರದಂತಿರುತ್ತದೆ. ಪಂಚಮಹಾಭೂತಾದಿ ಸಮಸ್ತ ವಸ್ತುಗಳಿಗೂ ನಿತ್ಯಶಬ್ದವು ಉಪಾದಾನಕಾರಣವಾಗಿದೆ. ಪಾಪಪುಣ್ಯಗಳೆಂಬ ಸಂಸ್ಕಾರಕ್ಕೆ ಆಶ್ರಯವಾದ ಅಂತಃಕರಣವೂ ಶಬ್ದತತ್ತ್ವವೇ. ಅದರ ಶಕ್ತಿ ಅಪ್ರತಿಹತವಾದದ್ದು. ಮೋಡದಂತೆ ಅದರಲ್ಲಿ ಸೃಷ್ಟಿಶಕ್ತಿ ಇದೆ. ಕಾಳ್ಗಿಚ್ಚಿನಂತೆ ಸುಡುವ ಶಕ್ತಿ ಇದೆ. ಅದು ಸರ್ವಶಕ್ತಿ ಸಮನ್ವಿತವಾದ ಮಹಾವೃಷಭವೆಂದು ವಾಗ್ಯೋಗವಿದರು ಹೇಳಿದ್ದಾರೆ. ಒಂದು ಋಙ್ಮಂತ್ರ ಹೇಳುತ್ತದೆ –

> ಚತ್ವಾರಿ ಶೃಂಗಾ ತ್ರಯೋ ಅಸ್ಯ ಪಾದಾ
> ದ್ವೇ ಶೀರ್ಷೇ ಸಪ್ತ ಹಸ್ತಾಸೋ ಅಸ್ಯ ॥
> ತ್ರಿಧಾ ಬದ್ಧೋ ವೃಷಭೋ ರೋರವೀತಿ
> ಮಹೋ ದೇವೋ ಮರ್ತ್ಯಾಗ್ಂ ಆವಿವೇಶ ॥

ಒಂದು ಮಹಾ ವೃಷಭವಿದೆ. ಅದಕ್ಕೆ ನಾಲ್ಕು ಕೊಂಬುಗಳಿವೆ. ಮೂರು ಕಾಲುಗಳಿವೆ. ಅದಕ್ಕೆ ಎರಡು ತಲೆಗಳು ಏಳು ಕೈಗಳು. ಅದನ್ನು ಮೂರು ವಿಧದಲ್ಲಿ ಕಟ್ಟಿಹಾಕಲಾಗಿದೆ. ಆ ವೃಷಭವು ಒಂದೇ ಸಮವಾಗಿ ಗುಟರು ಹಾಕುತ್ತಲೇ ಇದೆ. ಆ ಮಹಾದೇವನು ಮರ್ತ್ಯರಾದ ಮನುಜರನ್ನು ಪ್ರವೇಶಿಸಿಬಿಟ್ಟಿದ್ದಾನೆ !

ಇದಕ್ಕೆ ಮಹಾಭಾಷ್ಯಕಾರ ಪತಂಜಲಿಯ ವಿವರಣೆ ಹೀಗಿದೆ –

ನಾಲ್ಕುಕೊಂಬುಗಳು = ನಾಮಪದ, ಆಖ್ಯಾತ, ಉಪಸರ್ಗ, ನಿಪಾತ ಎಂಬ ನಾಲ್ಕು ಬಗೆಯ ಶಬ್ದಗಳು.

ಮೂರು ಕಾಲುಗಳು = ಭೂತ, ಭವಿಷ್ಯತ್, ವರ್ತಮಾನ ಎಂಬ ಮೂರು ಕಾಲಗಳು

ಎರಡು ತಲೆಗಳು = ನಿತ್ಯಶಬ್ದ, ಕಾರ್ಯಶಬ್ದ.

ಏಳು ಕೈಗಳು = ಪ್ರಥಮಾವಿಭಕ್ತಿ ಮೊದಲಾದ ಸಪ್ತ ವಿಭಕ್ತಿಗಳು.

ಈ ವೃಷಭವನ್ನು ಉರಸ್ಸು, ಕಂಠ, ಶಿರಸ್ಸು, ಎಂಬ ಮೂರು ಸ್ಥಳಗಳಲ್ಲಿ ಕಟ್ಟಿ ಹಾಕಲಾಗಿದೆ. (ಈ ಸ್ಥಳಗಳಲ್ಲಿ ವ್ಯಂಜಕಧ್ವನಿಯು ಹುಟ್ಟದಿದ್ದರೆ ಶಬ್ದವು ಬಾಯಿಂದ ಹೊರಗೆ ಬಾರದು), ಸಕಲಕಾಮನೆಗಳನ್ನು ವರ್ಷಣ ಮಾಡುವುದರಿಂದ ಶಬ್ದವು ವೃಷಭವೆನಿಸಿದೆ. 'ಈ ಮಹಾದೇವನು ಮರ್ತ್ಯರನ್ನು ಅಂತರ್ಯಾಮಿಯಾಗಿ ಪ್ರವೇಶಿಸಿದ್ದಾನೆ' ಎಂದು ಈ ವೃಷಭವು ಕೂಗುತ್ತಿದೆ! ಭಾಗವತ ಪುರಾಣದಲ್ಲಿ ಈ ಮಾತು ಬರುತ್ತದೆ –

ಸ ಏಷ ಜೀವೋ ವಿವರಪ್ರಸೂತಿಃ
ಪ್ರಾಣೇನ ಘೋಷೇಣ ಗುಹಾಂ ಪ್ರವಿಷ್ಟಃ ।
ಮನೋಮಯಂ ಸೂಕ್ಷ್ಮಮುಪೇತ್ಯ ರೂಪಂ
ಮಾತ್ರಸ್ವರೋ ವರ್ಣ ಇತಿ ಸ್ಥವಿಷ್ಠಃ ॥ ಭಾಗ ೧೧–೧೨–೧೭

'ಮೂಲಾಧಾರಾದಿ ಚಕ್ರಗಳಲ್ಲಿ ಪ್ರವೇಶಿಸಿ ಅಭಿವ್ಯಕ್ತನಾದ ಆತ್ಮನು ಇದೋ ಈ ಜೀವನೆನಿಸಿದ್ದಾನೆ. ಪರಮಾತ್ಮನು (ಪರಾ ಎಂಬ ಹೆಸರಿನ)ನಾದ ಸ್ವರೂಪದಿಂದ ಪ್ರಾಣದೊಡನೆ ಮೂಲಾಧಾರವೆಂಬ ಗುಹೆಯನ್ನು ಪ್ರವೇಶಿಸಿದನು. ಅನಂತರ ಮನೋಮಯವೂ ಸೂಕ್ಷ್ಮವೂ ಆದ (ಪಶ್ಯಂತೀ) ರೂಪವನ್ನು ಧರಿಸಿ (ಮಣಿಪೂರಚಕ್ರವನ್ನು) ಮಧ್ಯಮಾ ರೂಪವನ್ನು ಧರಿಸಿ (ವಿಶುದ್ಧಿ ಚಕ್ರವನ್ನೂ ಪ್ರವೇಶಿಸಿ) ಆಮೇಲೆ ವಕ್ತ್ರದಲ್ಲಿ ಹ್ರಸ್ವಾದಿಮಾತ್ರೆ, ಉದಾತ್ತಾದಿ ಸ್ವರ, ಕಕಾರಾದಿ ವರ್ಣರೂಪಗಳನ್ನೂ ಪಡೆದು ಸ್ಥೂಲವಾದ (ವೈಖರೀ) ಶಬ್ದರೂಪವನ್ನು ಪಡೆದಿದ್ದಾನೆ' (ಶ್ರೀಧರೀಯ ವ್ಯಾಖ್ಯಾನ)

**ತಸ್ಮಾದ್ಯಃ ಶಬ್ದಸಂಸ್ಕಾರಃ ಸಾ ಸಿದ್ಧಿಃ ಪರಮಾತ್ಮನಃ ।**
**ತಸ್ಯ ಪ್ರವೃತ್ತಿತತ್ತ್ವಜ್ಞಃ ತದ್ ಬ್ರಹ್ಮಾಮೃತಮಶ್ನುತೇ ॥ ೧೩೧ ॥**

ಈ ರೀತಿಯಾಗಿ ಶಬ್ದತತ್ತ್ವದ ಮಹಿಮೆಯಿರುವುದರಿಂದ ಶಬ್ದ ಸಂಸ್ಕಾರವು ಶಬ್ದಬ್ರಹ್ಮದ ಸಿದ್ಧಿಗೆ ಉಪಾಯವಾಗಿರುತ್ತದೆ. ಆ ಶಬ್ದಬ್ರಹ್ಮದ ಷಡ್‌ಭಾವವಿಕಾರವೆಂಬ ಪ್ರವೃತ್ತಿಯ ತತ್ತ್ವವನ್ನು ತಿಳಿದವನು ಆ ಔಪನಿಷದವೂ ನಿತ್ಯವೂ ಆದ ಶಬ್ದಬ್ರಹ್ಮವನ್ನು ಸೇರುತ್ತಾನೆ, ಮುಕ್ತನಾಗುತ್ತಾನೆ.

**ವಿವರಣೆ** – ಸಾಧುಶಬ್ದಗಳನ್ನು ಅಪಭ್ರಂಶಗಳಿಂದ ಪ್ರತ್ಯೇಕಿಸಿ ಶಾಸ್ತ್ರಾನುಸಾರ–ವಾಗಿ ತಿಳಿಯುವುದೇ ಶಬ್ದಸಂಸ್ಕಾರ. ಈ ಶಬ್ದಸಂಸ್ಕಾರವನ್ನು ಪಡೆದಿರುವ ವೈಯಾಕರಣನು ವಾಗ್ಯೋಗವಿತ್. 'ಸೋऽನಂತಮಾಪ್ನೋತಿ ಜಯಂ ಪರತ್ರ

ವಾಗ್ಯೋಗವಿತ್' ಎಂದು ಮಹಾಭಾಷ್ಯದಲ್ಲಿ ಪ್ರಾಚೀನವಚನವನ್ನು ಉದಾಹರಿಸಿ–ದ್ದಾರೆ. ವಾಗ್ಯೋಗವಿದನಿಗೆ ಪರಲೋಕದಲ್ಲಿ ಶ್ರೇಷ್ಠವಾದ ಅಭ್ಯುದಯ ದೊರೆಯು–ತ್ತದೆಯೆಂದು ಅದರ ಅರ್ಥ. 'ಏಕಃ ಶಬ್ದಃ ಸಮ್ಯಗ್ ಜ್ಞಾತಃ ಶಾಸ್ತ್ರಾನ್ವಿತಃ ಸುಪ್ರಯುಕ್ತಃ ಸ್ವರ್ಗೇ ಲೋಕೇ ಕಾಮಧುಗ್ ಭವತಿ' ಎಂದೂ ಹೇಳಿದ್ದಾರೆ. 'ಒಂದು ಶಬ್ದವನ್ನು ಶಾಸ್ತ್ರ ಪ್ರಕ್ರಿಯಾನುಸಾರವಾಗಿ ತಿಳಿದು ಸರಿಯಾದ ಅರ್ಥದಲ್ಲಿ ಪ್ರಯೋಗಿಸಿದರೆ ಅದು ಸ್ವರ್ಗಲೋಕದಲ್ಲಿ ಇಷ್ಟಾರ್ಥವನ್ನು ಕೊಡುವ ಕಾಮಧೇನುವಾಗುತ್ತದೆ.'

**ನ ಜಾತ್ವಕರ್ತೃಕಂ ಕಶ್ಚಿದಾಗಮಂ ಪ್ರತಿಪದ್ಯತೇ ।**
**ಬೀಜಂ ಸರ್ವಾಗಮಾಪಾಯೇ ತ್ರಯ್ಯೇವಾತೋ ವ್ಯವಸ್ಥಿತಾ ॥ ೧೩೨ ॥**

ಶಾಸ್ತ್ರಮಾರ್ಗದಲ್ಲಿರುವ ಯಾವಾತನೂ ತನ್ನ ಶಾಸ್ತ್ರವು ಕರ್ತೃರಹಿತ–ವೆಂದು ಎಂದಿಗೂ ತಿಳಿಯುವುದಿಲ್ಲ. ಸರ್ವಶಾಸ್ತ್ರಗಳೂ ವಿನಷ್ಟವಾದಾಗ ನಿತ್ಯವಾದ ವೇದವೇ ಸಕಲದರ್ಶನಗಳಿಗೂ ಬೀಜವಾಗಿ ನಿಲ್ಲುತ್ತದೆ.

**ವಿವರಣೆ** – ಎಲ್ಲ ಸಾಂಖ್ಯಾದಿದರ್ಶನಗಳೂ ಪೌರುಷೇಯಗಳು, ಮನುಷ್ಯ ನಿರ್ಮಿತಗಳೆಂದು ಆಯಾ ಶಾಸ್ತ್ರಜ್ಞರೇ ಒಪ್ಪಿಕೊಂಡಿದ್ದಾರೆ. ಸಾಂಖ್ಯವನ್ನು ಕಪಿಲ ಮುನಿಯೂ ಯೋಗವನ್ನು ಪತಂಜಲಿಯೂ ವೈಶೇಷಿಕವನ್ನು ಕಣಾದನೂ ನ್ಯಾಯಶಾಸ್ತ್ರವನ್ನು ಗೌತಮನೂ ಪೂರ್ವಮೀಮಾಂಸೆಯನ್ನು ಜೈಮಿನಿಯೂ ರಚಿಸಿದ್ದಾರೆ. ಬ್ರಹ್ಮಸೂತ್ರಗಳನ್ನು ಬಾದರಾಯಣಾಚಾರ್ಯನು ರಚಿಸಿದ್ದಾನೆಂದು ಹೇಳುತ್ತಾರೆ. ಹೀಗೆ ಉಳಿದ ಶಾಸ್ತ್ರಗಳೂ ಕರ್ತೃಜನ್ಯವಾದವು. ಎಲ್ಲರೂ ವೇದವನ್ನು ಆಧಾರಗ್ರಂಥವೆಂದು ಪರಿಗಣಿಸುತ್ತಾರೆ. ಮನುಷ್ಯರಿಗೆ ಭ್ರಮಪ್ರಮಾದಗಳು ಸಹಜ. ಆದ್ದರಿಂದ ಎಲ್ಲರೂ ವೇದವನ್ನೇ ಆಧಾರವಾಗಿ ಇಟ್ಟುಕೊಂಡರೂ ತಮ್ಮ ತಮ್ಮ ಮತಿವಿಕಲ್ಪಗಳಿಂದ ಪರಸ್ಪರವಿರುದ್ಧವಾದ ಸಿದ್ಧಾಂತಗಳನ್ನು ತೆಗೆದಿರುವ ಸಾಧ್ಯತೆ ಉಂಟು. ವ್ಯಾಕರಣದರ್ಶನವು ವೇದದ ಆಧಾರದಿಂದಲೇ ರೂಪಿತವಾಗಿದೆ. ವ್ಯಾಕರಣವು ಮುಖ್ಯವಾದ ವೇದಾಂಗವಾದ್ದರಿಂದ ವೇದದಷ್ಟೇ ಪ್ರಾಮಾಣ್ಯವು ಇದಕ್ಕೂ ಉಂಟು ಎಂದು ತಾತ್ಪರ್ಯ. ಪ್ರಳಯದಲ್ಲಿ ಸರ್ವನಾಶವಾದರೂ ವೇದವು ಉಳಿದುಕೊಂಡಿರುತ್ತದೆ. ಪುನಃ ಸೃಷ್ಟಿಯಲ್ಲಿ ಸಕಲ ವಿದ್ಯೆಗಳಿಗೂ ವೇದವೇ ಆಧಾರವಾಗುತ್ತದೆ.

**ಅಸ್ತಂ ಯಾತೇಷು ವಾದೇಷು ಕರ್ತೃಷ್ವನ್ಯೇಷ್ವಸತ್ಸ್ವಪಿ ।**
**ಶ್ರುತಿಸ್ಮೃತ್ಯುದಿತಂ ಧರ್ಮಂ ನ ಲೋಕೋ ವ್ಯತಿವರ್ತತೇ ॥ ೧೩೩ ॥**

ಸಾಂಖ್ಯಾದಿ ಸಕಲಶಾಸ್ತ್ರವಾದಗಳು ನಷ್ಟವಾಗಿ ಹೋದರೂ ಬೇರೆ ಶಾಸ್ತ್ರಪ್ರಣೇತೃಗಳು ಇಲ್ಲದಿದ್ದರೂ ಶ್ರುತಿಯಲ್ಲಿ ಮತ್ತು ಧರ್ಮಶಾಸ್ತ್ರದಲ್ಲಿ ಹೇಳಿದ ಧರ್ಮವನ್ನು ಮೀರಿ ಶಿಷ್ಟಜನರು ನಡೆದುಕೊಳ್ಳುವುದಿಲ್ಲ.

**ವಿವರಣೆ** – ಶಾಸ್ತ್ರಕರ್ತರು ಗತಿಸಿಹೋಗುವಂತೆ ಶಾಸ್ತ್ರಗಳೂ ನಶಿಸಿಹೋಗುವ ಸಂಭವ ಇದ್ದೇ ಇದೆ. ಆಗ ನೂತನರಾದ ಶಾಸ್ತ್ರಕಾರರು ಹುಟ್ಟದಿದ್ದರೂ ವೇದ–ಗಳಿಂದ ಮತ್ತು ಸ್ಮೃತಿಗಳಿಂದ ಉದಿತವಾದ ಧರ್ಮವು ಇದ್ದೇ ಇರುತ್ತದೆ. ಶಿಷ್ಟರಾದ ಆಚಾರಶೀಲರು ಎಂದಿಗೂ ಆ ಧರ್ಮವನ್ನು ಕೈಬಿಡುವುದಿಲ್ಲ. ಸನಾತನವಾದ ವೈದಿಕಧರ್ಮಕ್ಕೆ ಎಂದಿಗೂ ಚ್ಯುತಿಯಿಲ್ಲ, ವೇದವು ಅಪೌರುಷೇಯವಾದ್ದರಿಂದ ನಿತ್ಯವಾದದ್ದೆಂದು ಸಿದ್ಧವಾಗುತ್ತದೆ. ಪ್ರಳಯವಾದ ಮೇಲೆ ನೂತನ ಸೃಷ್ಟಿಯಾದಾ–ಗಲೂ ಕಪಿಲಾದಿಮುನಿಗಳೂ ಸಾಂಖ್ಯಾದಿ ಶಾಸ್ತ್ರಗಳನ್ನು ವೇದಮೂಲಕವಾಗಿಯೇ ರಚಿಸಲು ಪ್ರಯತ್ನಿಸುತ್ತಾರೆ.

**ಜ್ಞಾನೇ ಸ್ವಾಭಾವಿಕೇ ನಾರ್ಥಃ ಶಾಸ್ತ್ರೈಃ ಕಶ್ಚನ ವಿದ್ಯತೇ ।**
**ಧರ್ಮೋ ಜ್ಞಾನಸ್ಯ ಹೇತುಶ್ಚೇತ್ ತಸ್ಯಾಮ್ನಾಯೋ ನಿಬಂಧನಮ್॥೧೩೪॥**

ಕಪಿಲಾದಿಮುನಿಗಳಿಗೆ ಅಲೌಕಿಕಜ್ಞಾನವು ಸ್ವಾಭಾವಿಕವಾಗಿರುತ್ತದೆ–ಯಾದರೆ, ವೇದಶಾಸ್ತ್ರಗಳಿಂದ ಪ್ರಯೋಜನವೇ ಇಲ್ಲವೆಂದಾಗಿ ಬಿಡುತ್ತದೆ. ಧರ್ಮವಿಶೇಷವು ಅಲೌಕಿಕಜ್ಞಾನಕ್ಕೆ ಕಾರಣವೆನ್ನುವುದಾದರೆ, ಅಂತಹ ಧರ್ಮ ವಿಶೇಷಕ್ಕೆ ವೇದವೇ ಮೂಲಕಾರಣವಾಗಿದೆ.

**ವಿವರಣೆ** – ಋಷಿಗಳಿಗೆ ಧರ್ಮಾಧರ್ಮಜ್ಞಾನವು ಸ್ವಾಭಾವಿಕವಾಗಿರುತ್ತದೆ. ವೇದದ ಆವಶ್ಯಕತೆ ಏನು ಎಂಬ ಶಂಕೆಗೆ ಇದು ಉತ್ತರ. ಧರ್ಮಾಧರ್ಮಗಳ ಮತ್ತು ಪರಮಾರ್ಥದ ಜ್ಞಾನವು ತಾನಾಗಿ ಬರತಕ್ಕದ್ದಲ್ಲ. ತಪೋಬಲದಿಂದ ಋಷಿಗಳಿಗೆ ದಿವ್ಯಜ್ಞಾನ ಉದಯಿಸುತ್ತದೆಯಾದರೂ ಅಂತಹ ತಪಸ್ಸು ಯಾವುದು? ಯಾವ ರೀತಿ ನಡೆದರೆ ತಪಸ್ಸು ಸಿದ್ಧಿಸುತ್ತದೆ? ಅಜ್ಞಾನದ ನಿವೃತ್ತಿಗೆ ಉಪಾಯ–ವೇನು ? ಎನ್ನುವುದನ್ನು ವೇದವೇ ತಿಳಿಸಬೇಕಾಗುತ್ತದೆ. 'ಋಷೀಣಾಮಪಿ ಯಜ್ಜ್ಞಾನಂ ತದಪ್ಯಾಗಮಪೂರ್ವಕಂ' (ಶ್ಲೋ. ೩೦) ಎಂಬುದು ನಿಶ್ಚಿತ.

**ವೇದಶಾಸ್ತ್ರಾವಿರೋಧೀ ಚ ತರ್ಕಶ್ಚಕ್ಷುರಪಶ್ಯತಾಂ ।**
**ರೂಪಮಾತ್ರಾದ್ಧಿ ವಾಕ್ಯಾರ್ಥಃ ಕೇವಲಾನ್ನಾವತಿಷ್ಠತೇ॥ ೧೩೫ ॥**

ಜ್ಞಾನನೇತ್ರವಿಲ್ಲದ ಅಜ್ಞಾನಿಗಳಿಗೆ ವೇದಶಾಸ್ತ್ರವಿರುದ್ಧವಲ್ಲದ ತರ್ಕವು

ನೇತ್ರವಾಗುತ್ತದೆ. ತರ್ಕರೂಪವಾದ ವಿಚಾರವಿಲ್ಲದಿದ್ದರೆ ಕೇವಲ ವೇದಶಾಸ್ತ್ರ–ಗಳ ಸ್ವರೂಪದಿಂದ ಸಿದ್ಧಾಂತವು ನಿಶ್ಚಿತವಾಗುವುದಿಲ್ಲ–ಶಾಸ್ತ್ರ ವಾಕ್ಯಾರ್ಥವು ವ್ಯವಸ್ಥಿತವಾಗುವುದಿಲ್ಲ.

**ವಿವರಣೆ** – ತರ್ಕವನ್ನು ನಾವೇನೂ ಅಲ್ಲಗಳೆಯುವುದಿಲ್ಲ. ತರ್ಕವೆಂದರೆ ಶಾಸ್ತ್ರೀಯ ವಿಚಾರ – ವಿಮರ್ಶೆ. ವೇದಶಾಸ್ತ್ರಗಳ ನಿರ್ಣಯವನ್ನು ತಿಳಿಯುವುದಕ್ಕೆ ವಿಚಾರ ಆವಶ್ಯಕ. ವೇದದಲ್ಲಿ ಒಂದು ವಾಕ್ಯವು ಅನೇಕ ಸಂದರ್ಭಗಳಲ್ಲಿ ಬೇರೆ ಬೇರೆ ಅಭಿಪ್ರಾಯದಿಂದ ಬಂದಿರುತ್ತದೆ. ಅದನ್ನು ಥಟ್ಟನೆ ಶಾಸ್ತ್ರನಿರ್ಣಯವೆಂದು ತಿಳಿಯಬಾರದು. ನಿರ್ಣಯಕ್ಕಾಗಿ ವಿಚಾರ ವಿಮರ್ಶೆಗಳು ನಡೆಯಲೇ ಬೇಕು. ಆದರೆ ಯಾವ ತರ್ಕವೇ ಆಗಲಿ ವೇದವಿರುದ್ಧವಾಗಿ ಅಡ್ಡದಾರಿ ಹಿಡಿಯಬಾರದು. ಪೂರ್ವಮೀಮಾಂಸಾ ಉತ್ತರಮೀಮಾಂಸೆಗಳು ತರ್ಕದಿಂದಲೇ ವಿಚಾರ ಮಾಡುತ್ತವೆ.

**ಸತೋಽವಿವಕ್ಷಾ ಪಾರಾರ್ಥ್ಯಂ ವ್ಯಕ್ತಿರರ್ಥಸ್ಯ ಲೈಂಗಿಕೀ ।**
**ಇತಿ ನ್ಯಾಯೋ ಬಹುವಿಧಸ್ತರ್ಕೇಣ ಪ್ರವಿಭಜ್ಯತೇ ॥ ೧೩೬ ॥**

ವಾಕ್ಯದಲ್ಲಿರುವ ಒಂದು ಶಬ್ದಾರ್ಥಕ್ಕೆ ಅವಿವಕ್ಷೆ, ಇನ್ನೊಂದು ಅರ್ಥಕ್ಕೆ ಅನ್ಯಾರ್ಥತೆ, ಇನ್ನೊಂದೆಡೆಯಲ್ಲಿ ಒಂದು ಸೂಚನೆಯಿಂದ ಅನ್ಯಾರ್ಥದ ಪರಿಕಲ್ಪನೆ – ಈ ಪ್ರಕಾರ ವೇದ ಶಾಸ್ತ್ರಗಳಲ್ಲಿ ಬಹುವಿಧವಾಗಿ ಅರ್ಥ–ನಿರ್ಣಯ ಪ್ರಕಾರಗಳಿವೆ. ಇವೆಲ್ಲವೂ ತರ್ಕದಿಂದಲೇ ನಿರ್ಣೀತವಾಗುತ್ತದೆ.

**ವಿವರಣೆ** – ಶಾಸ್ತ್ರವಾಕ್ಯದ ತಾತ್ಪರ್ಯವನ್ನು ನಿರ್ಣಯಿಸುವುದು ಸುಲಭವಲ್ಲ. ನಿರ್ಣಯಿಸುವುದಕ್ಕೆ ಮೀಮಾಂಸಾ ನ್ಯಾಯಗಳನ್ನೂ ವ್ಯವಸ್ಥಿತವಾದ ಇನ್ನೂ ಕೆಲವು ಮಾರ್ಗಗಳನ್ನೂ ಅನುಸರಿಸಬೇಕಾಗುತ್ತದೆ. ಅದೆಲ್ಲವೂ ವಿಚಾರ–ವಿಮರ್ಶೆ–ತರ್ಕಗಳಿಂದ ಆಗಬೇಕು. ಅಂತಹ ನೂರಾರು ಪ್ರಸಂಗಗಳು ಶಾಸ್ತ್ರದಲ್ಲಿರುತ್ತವೆ. ಉದಾಹರಣೆಗಾಗಿ ಮೂರು ಪ್ರಸಂಗಗಳನ್ನು ಈ ಶ್ಲೋಕದಲ್ಲಿ ಹೆಸರಿಸಿದ್ದಾರೆ.

೧. ಸತೋಽವಿವಕ್ಷಾ=ವಾಕ್ಯದಲ್ಲಿರತಕ್ಕ ಒಂದು ವಿಷಯವು ಕೆಲವು ಕಡೆ ವಿವಕ್ಷಿತ–ವಾಗಿರುವುದಿಲ್ಲ. ಉದಾ – 'ಸಾಧಕತಮಂ ಕರಣಂ' ಎಂದು ವ್ಯಾಕರಣ ಸೂತ್ರವಿದೆ. 'ಒಂದು ಕ್ರಿಯೆಯ ಸಿದ್ಧಿಗೆ ಅತ್ಯಂತ ಉಪಯುಕ್ತವಾದ ಸಾಧನಕ್ಕೆ ಕರಣವೆಂದು ಹೆಸರು'. ಈ ಕರಣದ ಮೇಲೆ ತೃತೀಯಾ ವಿಭಕ್ತಿ ಬರುತ್ತದೆ. ಹುಡುಗನು ಲೇಖನಿಯಿಂದ ಬರೆಯುತ್ತಾನೆ ಎಂಬುದು ಉದಾಹರಣೆ.

ಇಲ್ಲಿ ಲೇಖನಿ ಸಾಧಕತಮವಾದದ್ದು. ಲೇಖನಕ್ರಿಯೆಯ ಸಿದ್ಧಿಗೆ ಅದು ಬೇಕು.

ಸೂತ್ರದಲ್ಲಿ 'ಸಾಧಕತಮಂ' ಎಂದು ನಪುಂಸಕಲಿಂಗವೂ ಏಕವಚನವೂ ಕಂಡು ಬರುತ್ತದೆ. ಅದು ವಿವಕ್ಷಿತವೆ? ಅಲ್ಲವೆ? ವಿವಕ್ಷಿತವಾದರೆ ಲೇಖನಿಯು ಕರಣವಾಗುವುದಿಲ್ಲ. ಏಕೆಂದರೆ ಸಂಸ್ಕೃತದಲ್ಲಿ ಲೇಖನಿಯು ಸ್ತ್ರೀಲಿಂಗ. ಹುಡುಗರು ಲೇಖನಿಗಳಿಂದ ಬರೆಯುತ್ತಾರೆ. ಎಂಬಲ್ಲಿ ಬಹುವಚನವಿರುವು–ದರಿಂದ ಲೇಖನಿಗಳು ಕರಣಗಳಾಗದೆ ಹೋಗುತ್ತವೆ. ಆದ್ದರಿಂದ ಈ ಸೂತ್ರ–ದಲ್ಲಿ ಲಿಂಗವೂ ವಚನವೂ ಅವಿವಕ್ಷಿತವೆನ್ನಬೇಕು. ಸೂತ್ರದಲ್ಲಿ ಯಾವುದೋ ಒಂದು ಲಿಂಗವನ್ನೂ ವಚನವನ್ನೂ ಬಳಸಲೇಬೇಕು. ಅದರಂತೆ ನಪುಂಸಕವನ್ನೂ ಏಕವಚನವನ್ನೂ ಬಳಸಿದೆ. ಅವೆರಡೂ ಅನಿವಾರ್ಯ ಇಂತಹದನ್ನು ಶಾಸ್ತ್ರದಲ್ಲಿ 'ನಾಂತರೀಯಕ' ಎನ್ನುತ್ತಾರೆ. ಇದು ಅವಿವಕ್ಷಿತ.

೨. ಪಾರಾರ್ಥ್ಯಂ = ಹೇಳಿದ್ದನ್ನು ಉಪಲಕ್ಷಣವಾಗಿಟ್ಟುಕೊಂಡು ಅರ್ಥಾಂತರ–ವನ್ನು ಕಲ್ಪಿಸಿಕೊಳ್ಳುವುದು. ಉದಾ – 'ನಕ್ಷತ್ರಂ ದೃಷ್ಟ್ವಾ ವಾಚಂ ವಿಸೃಜೇತ್' ಎಂಬ ವಾಕ್ಯವಿದೆ. ಒಂದಾನೊಂದು ವ್ರತದಲ್ಲಿ ನಕ್ಷತ್ರವನ್ನು ನೋಡಿ ವಾಗ್ವಿಸರ್ಗ ಮಾಡಬೇಕೆಂದು ಅದರ ಅರ್ಥ. ಮೋಡವಾಗಿ ನಕ್ಷತ್ರವು ಕಾಣಿಸದಿದ್ದರೆ, ವ್ರತಕರ್ತನಿಗೆ ಕಣ್ಣುಕಾಣಿಸದಿದ್ದರೆ ಏನು ಮಾಡಬೇಕು? ಆದ್ದರಿಂದ 'ನಕ್ಷತ್ರಂ ದೃಷ್ಟ್ವಾ' ಎಂಬ ಶಬ್ದಾರ್ಥವು ವಿವಕ್ಷಿತವಲ್ಲ. ನಕ್ಷತ್ರದರ್ಶನಯೋಗ್ಯವಾದ 'ರಾತ್ರಿಯಲ್ಲಿ' ಮೌನವ್ರತವನ್ನು ಬಿಡಬಹುದು ಎಂಬ ಅರ್ಥವನ್ನು ಹಿಡಿಯಬೇಕು.

೩. ಲೈಂಗಿಕೀ ವ್ಯಕ್ತಿಃ = ಇನ್ನೊಂದು ಶಬ್ದದಲ್ಲಿರುವ ಸೂಚನೆಯಿಂದ ಪ್ರಕೃತಕ್ಕೆ ಬೇಕಾದ ಅರ್ಥವನ್ನು ಊಹಿಸಿಕೊಳ್ಳುವುದು. ಉದಾ – ' ಅಕ್ತಾಃ ಶರ್ಕರಾ ಉಪದಧಾತಿ। ತೇಜೋ ವೈ ಘೃತಮ್' ಎಂದು ವಾಕ್ಯಗಳಿವೆ. ಇಲ್ಲಿ ಶರ್ಕರಾ (ಮರಳು) ಎಂಬುದನ್ನು ದ್ರವದ್ರವ್ಯದಿಂದ ಲೇಪಿಸಬೇಕೆಂದು ತಿಳಿಸಿದೆ. ಯಾವ ದ್ರವದಿಂದ ಎಂಬುದನ್ನು ಹೇಳಿಲ್ಲ. ಮುಂದಿನ ವಾಕ್ಯದಲ್ಲಿ 'ತೇಜೋ ವೈ ಘೃತಂ' ಎಂದು ತುಪ್ಪದ ಸ್ತುತಿ ಇದೆ. ಸ್ತುತಿಯು ಇಲ್ಲಿ ಪ್ರಕೃತವಾಗದಿದ್ದರೂ ಬಂದಿದೆ. ಈ ಸೂಚನೆಯಿಂದ ದ್ರವದ್ರವ್ಯವು ತುಪ್ಪವೆಂದು ಊಹಿಸಿಕೊಳ್ಳ–ಬೇಕಾಗುತ್ತದೆ. ತೋರಿದಂತೆ ಎಲ್ಲ ಕಡೆಗಳಲ್ಲೂ ಹೀಗೆ ಕಲ್ಪಿಸಿಕೊಳ್ಳುವುದು ತಪ್ಪಾಗುತ್ತದೆ. ಎಲ್ಲಿ ಹೀಗೆ ಕಲ್ಪಿಸಿಕೊಳ್ಳಬೇಕೆಂಬುದಕ್ಕೆ ವ್ಯವಸ್ಥಾಪಕ ನಿರ್ಣಯ–ಗಳಿವೆ. ತಾತ್ಪರ್ಯವೇನಾಯಿತೆಂದರೆ ಶಾಸ್ತ್ರದಲ್ಲಿ ಯಥಾಶ್ರುತವಾದದ್ದು

ನಿರ್ಣಯವಾಗುವುದಿಲ್ಲ – ವೇದಕ್ಕೆ ಅವಿರುದ್ಧವಾದ ತರ್ಕಾದಿ ವಿಚಾರಗಳು ಅವಶ್ಯಬೇಕು.

**ಶಬ್ದಾನಾಮೇವ ಸಾ ಶಕ್ತಿಸ್ತರ್ಕೋ ಯಃ ಪುರುಷಾಶ್ರಯಃ ।**
**ಶಬ್ದಾನನುಗತೋ ನ್ಯಾಯೋಽನಾಗಮೇಷ್ವನಿಬಂಧನಃ ॥೧೩೭॥**

ಪುರುಷನಲ್ಲಿ ಕಂಡುಬರುವ ಯಾವ ತರ್ಕ ಶಕ್ತಿ ಇದೆಯೋ ಅದು ವಾಸ್ತವವಾಗಿ ಶಬ್ದಗಳ ಶಕ್ತಿಯೇ ಸರಿ. ಈ ಶಬ್ದಶಕ್ತಿಗೆ ಅನುಗತವಲ್ಲದ ಯಾವ ತರ್ಕವು ಶಾಸ್ತ್ರಬಾಹಿರರಲ್ಲಿ ಕಂಡು ಬರುತ್ತದೆಯೋ ಅದು ನಿರ್ಣಾಯಕವಲ್ಲ.

**ವಿವರಣೆ** – ಶಾಸ್ತ್ರದಲ್ಲಿ ಯಾವ ರೀತಿ ತರ್ಕನ್ಯಾಯಗಳನ್ನು ಬಳಸ–ಬೇಕೆಂಬುದು ವ್ಯವಸ್ಥಿತವಾಗಿದೆ. ಸಂಯೋಗ, ವಿಯೋಗ, ಸಾಹಚರ್ಯ, ವಿರೋಧಿತಾ, ಅರ್ಥ, ಪ್ರಕರಣ, ಲಿಂಗ, ಅನ್ಯಶಬ್ದದ ಸಾಂನಿಧ್ಯ, ಸಾಮರ್ಥ್ಯ, ಔಚಿತ್ಯ ಮುಂತಾದ ಸಾಮಗ್ರಿಗಳು ಬಹಳ ಇವೆ. ಅವೆಲ್ಲವನ್ನು ಶಾಸ್ತ್ರವೇ ಗೊತ್ತು–ಮಾಡಿರುವುದರಿಂದ ತರ್ಕನ್ಯಾಯಗಳು ಶಬ್ದಶಕ್ತಿಗಳೇ ಸರಿ. ತಮ್ಮ ಬಳಕೆಗೆ ತಾವೇ ಸಲಕರಣೆಗಳನ್ನು ಸಿದ್ಧಪಡಿಸಿಕೊಂಡಿವೆ. ಮನುಷ್ಯನು ಅವುಗಳನ್ನು ಉಪ–ಯೋಗಿಸುತ್ತಾನೆ. ಅವು ಆತನ ಸಲಕರಣೆಗಳಲ್ಲ, ಯಾವನು ಶಾಸ್ತ್ರಜ್ಞನೋ ಅವನಿಗೆ ಅವು ದೊರೆಯುತ್ತವೆ. ಶಾಸ್ತ್ರಬಾಹಿರರು ಮನಸ್ಸು ಬಂದಂತೆ ತಮಗೆ ತೋರಿದ್ದನ್ನು ಬಳಸುತ್ತಾರೆ. ಅವರು ಬಳಸುವ ತರ್ಕ ಒಣತರ್ಕವೇ ಹೊರತು ನಿರ್ಣಾಯಕವಲ್ಲ.

**ರೂಪಾದಯೋ ಯಥಾ ದೃಷ್ಟಾಃ ಪ್ರತ್ಯರ್ಥಂ ಯತಶಕ್ತಯಃ ।**
**ಶಬ್ದಾಸ್ತಥೈವ ದೃಶ್ಯಂತೇ ವಿಷಾಪಹರಣಾದಿಷು ॥ ೧೩೮ ॥**

ರೂಪ, ರಸ, ಗಂಧಾದಿ ಗುಣಗಳು ಒಂದೇ ಜಾತಿಯವಾಗಿದ್ದರೂ ಒಂದೊಂದು ವಸ್ತುವಿನಲ್ಲಿ ಅವುಗಳ ಶಕ್ತಿಯು ಬೇರೆ ವಿಧದಲ್ಲಿ ನಿಯತ–ವಾಗಿರುವುದು ಕಂಡು ಬರುತ್ತದೆ. ಹಾಗೆಯೇ ಶಬ್ದಗಳೂ ಸಹ ವಿಷಪರಿಹಾರಾದಿ ವಿಷಯಗಳಲ್ಲಿ ಭಿನ್ನ ಶಕ್ತಿಯುಳ್ಳವುಗಳಾಗಿರುವುದು ಕಂಡು ಬರುತ್ತದೆ.

**ವಿವರಣೆ** – ರೂಪಾದಿಗಳು ಗುಣಜಾತಿಗೇ ಸೇರಿದವು. ಆದರೂ ಅವುಗಳ ಶಕ್ತಿ ವಿಭಿನ್ನವಾಗುತ್ತದೆ. ಹಸಿರು, ಹಳದಿ ಬಣ್ಣಗಳು ಕಣ್ಣಿಗೆ ಹಿತವಾಗಿರುತ್ತದೆ. ಕೆಂಪು ಬಣ್ಣ

ಹಿತಕರವಲ್ಲ. ಮಧುರ ರಸವು ಶ್ಲೇಷ್ಮವನ್ನು ವರ್ಧಿಸಿದರೆ ಕಹಿಯು ಪಿತ್ತವನ್ನು ಹೆಚ್ಚಿಸುತ್ತದೆ. ಮಲ್ಲಿಗೆ ಹೂವಿನ ಗಂಧ ಆಪ್ಯಾಯನಕರವಾದರೆ, ಕ್ಲೋರೋಫಾರಂ ವಾಸನೆ ಎಚ್ಚರದಪ್ಪಿಸುತ್ತದೆ. ಹಸಿರುಹುಲ್ಲಿನ ಸ್ಪರ್ಶ ಮೃದುವಾದರೆ, ಚುರ್ಚಿಗಿಡದ ಸ್ಪರ್ಶ ಕಡಿತವನ್ನುಂಟುಮಾಡುತ್ತದೆ.

ದ್ರವ್ಯಗಳಲ್ಲಿಯೂ ಇಂತಹ ಭಿನ್ನಶಕ್ತಿಗಳಿವೆ. ಒಂದೇ ಗೋವಿನಿಂದ ಬಂದರೂ ಹಾಲಿನ ಗುಣ ಬೇರೆ, ಗೋಮೂತ್ರದ ಗುಣ ಬೇರೆ, ಗೋಮಯದ ಗುಣ ಬೇರೆ. ತೆಂಗಿನ ಮರದ ಎಳೆನೀರು ಕುಡಿದರೆ ದೋಷವಿಲ್ಲ, ತೆಂಗಿನ ಮರದ ಹೆಂಡವನ್ನು ಕುಡಿದರೆ ದೋಷವಿದೆ.

ಹೀಗೆಯೇ ಶಬ್ದಗಳಿಗೂ ವಿಭಿನ್ನ ಶಕ್ತಿಗಳುಂಟು. ಎಲ್ಲವೂ ಅಕ್ಷರಮಯವೇ ಆದರೂ ವಿಶಿಷ್ಟಕ್ರಮದಲ್ಲಿ ಜೋಡಿಸಿದಾಗ ಕೆಲವು ಬೀಜಾಕ್ಷರಗಳಾಗುತ್ತವೆ. ಕೆಲವು ವಿಷವನ್ನು ಪರಿಹರಿಸುವ, ಭೂತವನ್ನು ಬಿಡಿಸುವ ಮಂತ್ರಗಳಾಗುತ್ತವೆ. ವೇದಪಾರಾಯಣದಿಂದ ಪುಣ್ಯ ಬರುತ್ತದೆಯೆಂದು ಧರ್ಮಶಾಸ್ತ್ರ ಹೇಳುತ್ತದೆ. ಕಥೆಗಳ ಪಾರಾಯಣದಿಂದ ಬರುವುದಿಲ್ಲ.

ಅದರಂತೆಯೇ ಸಾಧುಶಬ್ದಗಳಿಂದಲೂ ಅರ್ಥಬೋಧವಾಗುತ್ತದೆ. ಅಸಾಧು ಶಬ್ದಗಳಿಂದಲೂ ಅರ್ಥಬೋಧವಾಗುತ್ತದೆ. ಅರ್ಥಜ್ಞಾನವು ಉಭಯತ್ರ ಸಮಾನ–ವಾದರೂ ಸಾಧುಶಬ್ದಗಳ ಜ್ಞಾನಪೂರ್ವಕ ಪ್ರಯೋಗದಿಂದ ಧರ್ಮ ಹುಟ್ಟುವು–ದೆಂದೂ ಅಸಾಧುಶಬ್ದಗಳ ಬಳಕೆಯಿಂದ ಧರ್ಮವು ಹುಟ್ಟುವುದಿಲ್ಲವೆಂದೂ ಕೆಲವು ಸಂದರ್ಭಗಳಲ್ಲಿ ಅಧರ್ಮ ಹುಟ್ಟುತ್ತದೆಯೆಂದೂ ಶಾಸ್ತ್ರವಚನವಿದೆ. ಧರ್ಮ ಅಧರ್ಮಗಳ ವ್ಯವಸ್ಥೆಗೆ ಶಾಸ್ತ್ರವೇ ಪ್ರಮಾಣ. ಆದ್ದರಿಂದ ನಾವು ಈ ಹಿಂದೆ ಹೇಳಿದ ಮಾತು ನ್ಯಾಯಸಂಮತವಾದದ್ದು (ಶ್ಲೋ – ೧೩೧).

**ಯಥೈಷಾಂ ತತ್ರ ಸಾಮರ್ಥ್ಯಂ ಧರ್ಮೇಽಪ್ಯೇವಂ ಪ್ರತೀಯತಾಂ ।**
**ಸಾಧೂನಾಂ ಸಾಧುಭಿಸ್ತಸ್ಮಾದ್ವಾಚ್ಯಮಭ್ಯುದಯಾರ್ಥಿನಾಮ್ ॥೧೩೯॥**

ಶಬ್ದಗಳಿಗೆ ವಿಷಾಪರಹರಣಾದಿಗಳಲ್ಲಿ ಹೇಗೆ ಸಾಮರ್ಥ್ಯ ಉಂಟೋ ಹಾಗೆ ಧರ್ಮದ ವಿಷಯದಲ್ಲಿಯೂ ಸಾಧುಶಬ್ದಗಳಿಗೆ ಮಾತ್ರ ಸಾಮರ್ಥ್ಯ–ವಿದೆಯೆಂದು ತಿಳಿಯಬೇಕು. ಆದಕಾರಣ ಶ್ರೇಯಸ್ಸನ್ನು ಬಯಸತಕ್ಕವರು ಸಾಧುಶಬ್ದಗಳನ್ನೇ ಉಚ್ಚರಿಸಬೇಕು.

**ವಿವರಣೆ** – 'ಏಕಃ ಶಬ್ದಃ ಸಮ್ಯಗ್ ಜ್ಞಾತಃ ಶಾಸ್ತ್ರಾನ್ವಿತಃ ಸುಪ್ರಯುಕ್ತಃ ಸ್ವರ್ಗೇ ಲೋಕೇ ಕಾಮಧುಗ್ ಭವತಿ,' 'ಸೋಽನಂತಮಾಪ್ನೋತಿ ಜಯಂ ಪರತ್ರ ವಾಗ್ಯೋಗವಿದ್ ದುಷ್ಯತಿ ಚಾಪಶಬ್ದೈಃ' ಇತ್ಯಾದಿ ವಚನಗಳು ಸಾಧುಶಬ್ದ–ಪ್ರಯೋಗದಿಂದ ಪುಣ್ಯವಿದೆಯೆಂದೂ ಅಪಶಬ್ದಗಳನ್ನು ಬಳಸಿದರೆ ದೋಷವಿದೆ–ಯೆಂದೂ ಹೇಳುತ್ತವೆ. ಹಾಗೆಯೇ ಶಿಷ್ಟಾಚಾರವೂ ಇದೆ. ಆದ್ದರಿಂದ 'ನಮಗೆ ಅರ್ಥಜ್ಞಾನವಾದರಾಯಿತು – ಸಾಧುಶಬ್ದವೇನು? ಅಪಶಬ್ದವೇನು?' ಎಂದು ಉಪೇಕ್ಷಿಸಬಾರದೆಂದು ಅಭಿಪ್ರಾಯ.

**ಸರ್ವೋಽದೃಷ್ಟಫಲಾನರ್ಥಾನಾಗಮಾತ್ ಪ್ರತಿಪದ್ಯತೇ ।**
**ವಿಪರೀತಂ ಚ ಸರ್ವತ್ರ ಶಕ್ಯತೇ ವಕ್ತುಮಾಗಮೇ ॥ ೧೪೦ ॥**

ಅದೃಷ್ಟ ಫಲಗಳನ್ನು ಕೊಡುವ ಯಾಗಾದಿ ವಿಷಯಗಳನ್ನು ಸರ್ವರೂ ಆಗಮದಿಂದ ತಿಳಿದುಕೊಳ್ಳುತ್ತಾರೆ. (ಶುಷ್ಕತರ್ಕವನ್ನವಲಂಬಿಸುವುದಾದರೆ), ವೇದದಲ್ಲಿಯೂ ಸರ್ವತ್ರ ವಿಪರೀತಾರ್ಥವನ್ನು ಹೇಳಲು ಸಾಧ್ಯವುಂಟು.

**ವಿವರಣೆ** – ಸಾಧುಶಬ್ದಗಳನ್ನು ಬಳಸಿದರೆ ಧರ್ಮ ಬರುತ್ತದೆಯೆಂದು ಹೇಳಿದಿರಿ. 'ಸಾಧುಶಬ್ದಗಳಿಂದ ಅಧರ್ಮ ಬರುತ್ತದೆ. ಅಸಾಧು ಶಬ್ದಗಳಿಂದಲೇ ಧರ್ಮ ಬರುತ್ತದೆ' ಎಂದು ವಿಪರೀತವಾಗಿ ಏಕೆ ಹೇಳಬಾರದು ಎಂಬ ಅಕ್ಷೇಪಕ್ಕೆ ಇದು ಉತ್ತರ. ಕೆಲವು ವಿಧಿನಿಷೇಧಗಳಿಗೆ ಫಲವು ನಮಗೆ ಜೀವಿತದಲ್ಲಿ ಕಂಡು ಬರುವುದಿಲ್ಲ. ಮರಣವಾದಮೇಲೆ ಜನ್ಮಾಂತರದಲ್ಲಿ ಫಲವುಂಟೆಂದು ಗೊತ್ತಾಗುತ್ತದೆ. ಅವು ಅದೃಷ್ಟ ಫಲಗಳು. 'ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ' – ಸ್ವರ್ಗದ ಬಯಕೆ ಇದ್ದವನು ಜ್ಯೋತಿಷ್ಟೋಮಯಾಗವನ್ನು ಮಾಡಬೇಕು ಎಂದು ವಿಧಿ ಇದೆ. ಸ್ವರ್ಗವು ಆತನು ಸತ್ತಮೇಲೆ ಲಭಿಸತಕ್ಕದ್ದು. ಇದು ಅದೃಷ್ಟ ಫಲಕವಾದ ಯಾಗ. ಶಿಷ್ಟರಾದ ಜನರು ಇದನ್ನು ನಂಬಿ ಇದರಂತೆ ಆಚರಿಸುತ್ತಾರೆ. ಹಾಗೆಯೇ 'ಏಕಃ ಶಬ್ದಃ ಸಮ್ಯಗ್ ಜ್ಞಾತಃ ಶಾಸ್ತ್ರಾನ್ವಿತಃ ಸುಪ್ರಯುಕ್ತಃ ಸ್ವರ್ಗೇ ಲೋಕೇ ಕಾಮ–ಧುಗ್‌ಭವತಿ' ಎಂಬ ಶ್ರುತಿವಾಕ್ಯದಿಂದ ಸಾಧುಶಬ್ದ ಪ್ರಯೋಗವು ಧರ್ಮಜನಕ–ವೆಂದು ತಿಳಿಯಬೇಕು – 'ದುಷ್ಯತಿ ಚಾಪಶಬ್ದೈಃ' ಇತ್ಯಾದಿ ವಾಕ್ಯಗಳಿಂದ ಅಪಶಬ್ದಗಳು ಅಧರ್ಮ ಜನಕವೆಂದು ತಿಳಿಯಬೇಕು. ಈ ವ್ಯವಸ್ಥೆಗೆ ಆಗಮವೇ ಪ್ರಮಾಣ. ನೀವು ಅದನ್ನು ಉಲ್ಲಂಘಿಸಿ ವಿಪರೀತವಾಗಿ ಹೇಳುವುದಾದರೆ ವೇದವು ಪ್ರಮಾಣವಲ್ಲವೆಂದು ಹೇಳಿದಂತಾಗುತ್ತದೆ. ಇದನ್ನು ಶಿಷ್ಟ ಜನರು ಒಪ್ಪುವುದಿಲ್ಲ.

**ಸಾಧುತ್ವಜ್ಞಾನವಿಷಯಾ ಸೈಷಾ ವ್ಯಾಕರಣಸ್ಮೃತಿಃ ।**
**ಅವಿಚ್ಛೇದೇನ ಶಿಷ್ಟಾನಾಮಿದಂ ಸ್ಮೃತಿನಿಬಂಧನಮ್ ॥ ೧೪೧ ॥**

ಈ ವ್ಯಾಕರಣಶಾಸ್ತ್ರವು ಶಬ್ದಗಳ ಸಾಧುತ್ವಜ್ಞಾನವನ್ನುಂಟು ಮಾಡು-ವುದಕ್ಕಾಗಿ ಪ್ರವೃತ್ತವಾಗಿದೆ. ಇದು ಶಿಷ್ಟಜನರಲ್ಲಿ ವಿಚ್ಛೇದವಿಲ್ಲದೆ ಪರಂಪರೆ-ಯಿಂದ ನಡೆದುಕೊಂಡು ಬಂದ ಧರ್ಮಶಾಸ್ತ್ರವೇ ಆಗಿದೆ.

**ವಿವರಣೆ** – ಸಾಧುಶಬ್ದಗಳಿಂದ ವ್ಯವಹರಿಸಬೇಕೆಂದು ಹೇಳುವ ಆಗಮವೇ ವ್ಯಾಕರಣಶಾಸ್ತ್ರ. ವೇದ ಮತ್ತು ವೇದಮೂಲಕವಾದ ಸ್ಮೃತಿಗಳಿಗೆ ಆಗಮವೆಂದು ಹೆಸರು. ಮನುಸ್ಮೃತಿ ಮೊದಲಾದ ಧರ್ಮಶಾಸ್ತ್ರಗಳಂತೆ ವ್ಯಾಕರಣಶಾಸ್ತ್ರವೂ ಪರಂಪರೆಯಿಂದ ಬಂದದ್ದು. ಧರ್ಮಶಾಸ್ತ್ರವು ಭಕ್ಷ್ಯ–ಅಭಕ್ಷ್ಯ, ಗಮ್ಯಾ–ಅಗಮ್ಯಾಸ್ತ್ರೀ, ವಾಚ್ಯ–ಅವಾಚ್ಯ, ಕಾರ್ಯ–ಅಕಾರ್ಯ ಎಂಬ ವ್ಯವಸ್ಥೆಯನ್ನು ಮಾಡುತ್ತದೆ. ವಿಷಯಾನುಗುಣವಾಗಿ ವಾಚ್ಯ–ಅವಾಚ್ಯಗಳನ್ನು ಹೇಳುತ್ತದೆ. ಉದಾ –

ಸತ್ಯಂ ಬ್ರೂಯಾತ್ ಪ್ರಿಯಂ ಬ್ರೂಯಾತ್ ನ ಬ್ರೂಯಾತ್ ಸತ್ಯಮಪ್ರಿಯಂ ।
ಪ್ರಿಯಂ ಚ ನಾನೃತಂ ಬ್ರೂಯಾತ್ ಏಷ ಧರ್ಮಃ ಸನಾತನಃ ॥

ವ್ಯಾಕರಣಶಾಸ್ತ್ರವಾದರೋ – 'ಇದು ಸಾಧು ಶಬ್ದ, ಇದನ್ನು ಬಳಸಬೇಕು. ಇದು ಅಪಶಬ್ದ, ಇದನ್ನು ಬಳಸಬಾರದು' ಎಂದು ಶಬ್ದಾನುಗುಣವಾಗಿ ವಾಚ್ಯಾವಾಚ್ಯಗಳನ್ನು ವ್ಯವಸ್ಥೆಮಾಡುತ್ತದೆ. ಶಬ್ದ–ಅಪಶಬ್ದಗಳೆರಡರಿಂದಲೂ ವ್ಯವಹಾರವು ಸಾಧ್ಯವಿರುವಾಗ ವ್ಯಾಕರಣದ ಆವಶ್ಯಕತೆ ಏನು ಎಂಬ ಪ್ರಶ್ನೆಗೆ 'ಶಾಸ್ತ್ರೇಣ ಧರ್ಮನಿಯಮಃ' ಎಂದು ಮಹಾಭಾಷ್ಯದಲ್ಲಿ ಉತ್ತರವನ್ನು ಹೇಳಿ ವ್ಯವಸ್ಥೆ ಮಾಡಿದ್ದಾರೆ.

**ವೈಖರ್ಯಾ ಮಧ್ಯಮಾಯಾಶ್ಚ ಪಶ್ಯಂತ್ಯಾಶ್ಚೈತದದ್ಭುತಮ್ ।**
**ಅನೇಕತೀರ್ಥಭೇದಾಯಾಸ್ತ್ರಯ್ಯಾ ವಾಚಃ ಪರಂ ಪದಮ್ ॥ ೧೪೨ ॥**

ಅನೇಕ ಸ್ಥಾನಗಳಲ್ಲಿ ಅಭಿವ್ಯಕ್ತವಾಗಿ ಭಿನ್ನಸ್ವರೂಪವನ್ನು ತಳೆದಿರುವ ವೈಖರೀ, ಮಧ್ಯಮಾ, ಪಶ್ಯಂತೀ ಎಂಬ ತ್ರಯೀ ವಾಕ್ಕಿಗೆ ವ್ಯಾಕರಣಶಾಸ್ತ್ರವು ಅದ್ಭುತವಾದ ಪರಮ ಸ್ಥಾನವಾಗಿದೆ.

**ವಿವರಣೆ** – ವೈಖರೀ = ಕಿವಿಯಿಂದ ಕೇಳಬಹುದಾದ ಶಬ್ದ. ಇದು

ಮನುಷ್ಯರ ಮಾತಿನಲ್ಲಿ ವರ್ಣಾತ್ಮಕವೂ ಪಶುಪಕ್ಷಿಗಳ ಕೂಗಿನಲ್ಲಿ ಧ್ವನ್ಯಾತ್ಮಕವೂ ಆಗಿದೆ. ಸ್ಥಾನಭೇದದಿಂದ ನಾನಾ ರೂಪವುಳ್ಳದ್ದು. ಅದು ಸಾಧುಶಬ್ದವೂ ಅಸಾಧು–ಶಬ್ದವೂ ಆಗಿರಬಹುದು. ಮಧ್ಯಮಾ – ವಕ್ತೃಬುದ್ಧಿಗೆ ಮಾತ್ರ ಗೋಚರವಾದದ್ದು. ಇದು ಸೂಕ್ಷ್ಮವಾದದ್ದು. ಪಶ್ಯಂತೀ = ಇದು ಅಕ್ರಮವೂ ಸೂಕ್ಷ್ಮತರವೂ ಆದದ್ದು. ಅಪಭ್ರಂಶಗಳನ್ನು ಉಚ್ಚರಿಸತಕ್ಕವರಿಗೆ ಇದು 'ಆವೃತ' ವಾಗಿರುತ್ತದೆ. ಯೋಗಿಗಳಿಗೆ ಇದು 'ವಿಶುದ್ಧ'ವೇ ಆಗಿ ಸ್ವರೂಪದಲ್ಲಿ ಗೋಚರಿಸುತ್ತದೆ. ವ್ಯಾಕರಣಶಾಸ್ತ್ರಕ್ಕೆ ಇವು ಮೂರು ವಾಕ್ಕುಗಳು ಮಾತ್ರ ವಿಷಯವಾದ್ದರಿಂದ 'ತ್ರಯ್ಯಾವಾಚಃ ಪರಂ ಪದಂ' ಎಂದು ಶ್ಲೋಕದಲ್ಲಿ ಹೇಳಿದ್ದಾರೆ – ಎಂಬುದಾಗಿ ನಾಗೇಶಭಟ್ಟರು ಲಘು–ಮಂಜೂಷಾದಲ್ಲಿ ಬರೆದಿದ್ದಾರೆ. ಪರಾವಾಕ್ ಎಂಬ ಸೂಕ್ಷ್ಮತಮವಾದ ವಾಕ್‌ತತ್ತ್ವವು ಯೋಗಿಗಳಿಗೂ ವೇದಾಂತಿಗಳಿಗೂ ವಿಚಾರಯೋಗ್ಯವಾದದ್ದೆಂದು ಅವರ ಅಭಿಪ್ರಾಯ. ಶ್ರೀ ಸೂರ್ಯನಾರಾಯಣಶುಕ್ಲ ಎಂಬ ವಿದ್ವಾಂಸರು ಭಾವಪ್ರದೀಪ–ವೆಂಬ ತಮ್ಮ ವ್ಯಾಖ್ಯಾನದಲ್ಲಿ ನಾಗೇಶಭಟ್ಟರನ್ನು ಖಂಡಿಸಿದ್ದಾರೆ. ವ್ಯಾಕರಣಶಾಸ್ತ್ರದ ಪ್ರಕಾರ ಮೂರೇ ವಾಕ್ಕುಗಳೆಂದೂ ಪರಾವಾಕ್ ಎಂಬುದು ಸಿದ್ಧಾಂತಶೈವರ ಮತವೆಂದೂ ನಾಗೇಶಭಟ್ಟರು ವ್ಯಾಕರಣಸಿದ್ಧಾಂತವನ್ನು ತಿಳಿಯದೇ ಹಾಗೆ ಬರೆದಿದ್ದಾರೆಂದೂ ಹೇಳಿದ್ದಾರೆ. ನಾಗೇಶಭಟ್ಟರಿಗೆ ವ್ಯಾಕರಣಸಿದ್ಧಾಂತವೇ ತಿಳಿದಿಲ್ಲವೆನ್ನುವುದು ಬಹಳ ಕಠೋರವಾದ ನುಡಿಯೇ ಆಯಿತು. ವೈಖರಿಯಲ್ಲಿ ಪ್ರಕೃತಿಪ್ರತ್ಯಯವಿಭಾಗವು ಶ್ರೋತೃವಿಗೂ ತಿಳಿಯುತ್ತದೆ. ಮಧ್ಯಮಾದಲ್ಲಿ ವಕ್ತೃವಿಗೆ ಮಾತ್ರ ತಿಳಿಯುತ್ತದೆ. ಪಶ್ಯಂತಿಯಲ್ಲಿ ಯೋಗಿಗಳಿಗೆ ಮಾತ್ರ ಪ್ರಕೃತಿಪ್ರತ್ಯಯವಿಭಾಗವು ತಿಳಿಯುತ್ತದೆ–ಯಾದ್ದರಿಂದ ಇವು ಮೂರು ವ್ಯಾಕರಣಶಾಸ್ತ್ರಕ್ಕೆ ವಿಷಯಗಳು. ಪರಾದಲ್ಲಿ ಪ್ರಕೃತಿ ಪ್ರತ್ಯಯವಿಭಾಗವೇ ಇಲ್ಲವಾದ್ದರಿಂದ ವ್ಯಾಕರಣಕ್ಕೆ ವಿಷಯವಲ್ಲ.

ಜಗತ್ತಿನಲ್ಲಿರುವ ಸಕಲ ವಸ್ತುಗಳನ್ನು ಶಬ್ದ, ಅರ್ಥ ಎಂದು ಎರಡು ವಿಭಾಗ ಮಾಡಬಹುದು. ಅರ್ಥಪ್ರಪಂಚವು ಎಷ್ಟು ದೊಡ್ಡದೋ ಅಷ್ಟೇ ಶಬ್ದಪ್ರಪಂಚವೂ ದೊಡ್ಡದು. ಅರ್ಥಪ್ರಪಂಚವನ್ನು ಇತರ ಎಲ್ಲ ದರ್ಶನಗಳೂ ವಿಚಾರ ಮಾಡಿ ವಿವರಗಳನ್ನು ತಿಳಿಸಿವೆ. ಶಬ್ದಪ್ರಪಂಚವನ್ನು ಮಾತ್ರ ವಿಚಾರ ಮಾಡಿರುವುದು ವ್ಯಾಕರಣಶಾಸ್ತ್ರ ಒಂದೇ. ಅರ್ಥವನ್ನು ತಿಳಿಸಲು ನಾನಾ ಪರ್ಯಾಯ ಪದಗಳಿರು–ವುದರಿಂದ ಶಬ್ದಪ್ರಪಂಚವೇ ಬಹು ದೊಡ್ಡದೆಂದರೆ ತಪ್ಪಾಗದು. ಆದ್ದರಿಂದ ವ್ಯಾಕರಣಶಾಸ್ತ್ರವನ್ನು 'ಅದ್ಭುತ' ಎಂದು ಭರ್ತೃಹರಿ ಮೇಲ್ಕಂಡ ಶ್ಲೋಕದಲ್ಲಿ ವಿಶ್ಲೇಷಿಸಿದ್ದಾನೆ.

**ತದ್ವಿಭಾಗಾವಿಭಾಗಾಭ್ಯಾಂ ಕ್ರಿಯಮಾಣಮವಸ್ಥಿತಂ ।**
**ಸ್ವಭಾವಜ್ಞೈಶ್ಚ ಭಾವಾನಾಂ ದೃಶ್ಯಂತೇ ಶಬ್ದಶಕ್ತಯಃ ॥೧೪೩॥**

ಆ ವ್ಯಾಕರಣಶಾಸ್ತ್ರವು ಕೆಲವೆಡೆ ಪ್ರಕೃತಿ ಪ್ರತ್ಯಯ ವಿಭಾಗದ ಮೂಲಕವೂ ಕೆಲವೆಡೆ ವಿಭಾಗವಿಲ್ಲದೆಯೂ ರಚಿತವಾಗಿ ವ್ಯವಸ್ಥಿತವಾಗಿದೆ. ಸಕಲ ಪದಾರ್ಥಗಳ ನಿಜಸ್ವರೂಪವನ್ನು ಬಲ್ಲ ಶಿಷ್ಟರಾದ ವಿದ್ವಜ್ಜನರಿಗೆ ಕಾಲಾನುರೋಧ–ವಾಗಿರುವ ನಾನಾ ಶಬ್ದಶಕ್ತಿಗಳು ಗೋಚರಿಸುತ್ತವೆ.

**ವಿವರಣೆ** – ಶಬ್ದಗಳು ಅಪಾರವಾಗಿರುವುದರಿಂದ ವ್ಯಾಕರಣದಲ್ಲಿ ಎಲ್ಲ ಸಾಧುಶಬ್ದಗಳ ಪಟ್ಟಿಯನ್ನು ತಯಾರಿಸುವುದು ಶಕ್ಯವಾದದ್ದೇ ಅಲ್ಲ. ಆದ್ದರಿಂದ ಪ್ರಕೃತಿ ಪ್ರತ್ಯಯ ವಿಭಾಗವೆಂಬ ಲಘೂಪಾಯವನ್ನು ವ್ಯಾಕರಣಶಾಸ್ತ್ರವು ಆದರಿಸಿದೆ. ಕೆಲವು ಶಬ್ದಗಳಿಗೆ ಮಾತ್ರ ವಿಭಾಗವಿಲ್ಲದೆ ಸಿದ್ಧರೂಪಗಳನ್ನು ತಿಳಿಸುವುದೇ ಲಘೂಪಾಯವಾಗುತ್ತದೆ. ಉದಾ – ಪಠತಿ, ಪಠಿತುಂ, ಪಠಿತವ್ಯಂ – ಮುಂತಾದ ಕಡೆ ಪ್ರಕೃತಿ ಪ್ರತ್ಯಯ ವಿಭಾಗವಿದೆ. ದಾಧರ್ತಿ, ಪಾಪಯಾಂಕ್ರಿಯಾತ್ – ಮುಂತಾದ ಕಡೆ ವಿಭಾಗವನ್ನು ತೋರಿಸದೆ ಸಿದ್ಧರೂಪಗಳನ್ನೇ ತಿಳಿಸಿದ್ದಾರೆ. ಹೀಗೆಯೇ ಸಂಧಿ, ಸಮಾಸ ಮೊದಲಾದವು ಸಿದ್ಧರೂಪಗಳನ್ನು ತಿಳಿಯಲು ಅನುಸರಿಸಿದ ಉಪಾಯಗಳು.

ಸಾಧುಶಬ್ದಗಳಿಂದ ಧರ್ಮ, ಅಸಾಧು ಶಬ್ದಗಳಿಂದ ಅಧರ್ಮ – ಎಂದು ಹೇಳಲಾಯಿತಷ್ಟೇ. ಈಗ ಒಂದು ಪ್ರಶ್ನೆ ಹುಟ್ಟುತ್ತದೆ. ಕೆಲವು ವೈದಿಕಶಬ್ದಗಳನ್ನು ಲೋಕದಲ್ಲಿ ಪ್ರಯೋಗಿಸುವಂತಿಲ್ಲ. ಅವು ಸಾಧುಶಬ್ದಗಳೇ ಆದಾಗ ಲೋಕದಲ್ಲೇಕೆ ಪ್ರಯೋಗಿಸಬಾರದು? ರಾಮಾಯಣಾದಿ ಗ್ರಂಥಗಳಲ್ಲಿ ಕುರ್ಮಿ, ಮಹಾರಾಜಾನಂ ಇತ್ಯಾದಿ ಶಬ್ದಗಳು ಕಂಡು ಬರುತ್ತವೆ. ಅವು ಆರ್ಷಪ್ರಯೋಗಗಳೆಂದೂ ವ್ಯಾಕರಣಾನುಸಾರ ಅವನ್ನು ನಾವು ಪ್ರಯೋಗಿಸಬಾರದೆಂದೂ ಹೇಳುತ್ತಾರೆ. ಇದೇಕೆ? ಋಷಿಗಳು ಪ್ರಯೋಗಿಸಬಹುದಾದರೆ ನಾವೇಕೆ ಬಳಸಬಾರದು ಎಂಬುದು ಪ್ರಶ್ನೆ. ಸಮಾಧಾನ ಹೀಗೆ – ಇದು ವ್ಯಾಕರಣಸ್ಮೃತಿಯೆಂದು ಹೇಳಿದ್ದೇವೆ. ಇದೊಂದು ಧರ್ಮಶಾಸ್ತ್ರವಿದ್ದಂತೆಯೇ. ದೇಶ ಕಾಲ ಭೇದಗಳಿಂದ ಧರ್ಮ ವ್ಯತ್ಯಸ್ತವಾಗುತ್ತದೆ. ಯುಗಾನುಸಾರವಾಗಿ ಧರ್ಮಶಾಸ್ತ್ರವು ಬೇರೆಯಾಗುತ್ತದೆಯೆಂದು ಶಾಸ್ತ್ರಕಾರರೇ ಹೇಳಿದ್ದಾರೆ. ಮಾತುಲಕನ್ಯಾವಿವಾಹವು ಕೆಲವರಿಗೆ ಧರ್ಮವಾದರೆ ಕೆಲವರಿಗೆ ಅಧರ್ಮ. ದೇಶ ಕಾಲಭೇದಗಳಿಂದ ಇವುಗಳ ವ್ಯವಸ್ಥೆಯೆಂದು

ಗೊತ್ತಾಗಿದೆ. ಹಾಗೆಯೇ ಶಬ್ದಗಳ ವಿಷಯದಲ್ಲಿಯೂ ತಿಳಿಯಬೇಕು. 'ಭದ್ರಂ ಕರ್ಣೇಭಿಃ' ಎನ್ನುವುದು ವೇದದಲ್ಲಿ ಸಾಧು, ಧರ್ಮಜನಕ. ಲೋಕದಲ್ಲಿ 'ಕರ್ಣೈಃ' ಎಂದು ಹೇಳಬೇಕು. ರಾಮಾಯಣದ ಕಾಲದಲ್ಲಿ 'ಕುರ್ಮಿ' ಸಾಧುವಾಗಬಹುದು. ಈಗ 'ಕರೋಮಿ' ಎಂಬುದೇ ಸಾಧು. ಹೀಗೆ ಯಾವಾಗ ಎಲ್ಲಿ ಯಾವ ಶಬ್ದ ಧರ್ಮಜನಕ, ಯಾವಾಗ ಅಧರ್ಮಜನಕ ಎಂಬುದನ್ನು ಶಿಷ್ಟರೂ ವಿದ್ವಾಂಸರೂ ಆದ ಪಾಣಿನಿ ಮೊದಲಾದವರು ತಿಳಿದಿರುತ್ತಾರೆ. ಯಾವ ಶಬ್ದದಲ್ಲಿ ಯಾವ ಸಾಮರ್ಥ್ಯವಿದೆಯೆಂಬುದು ಅವರಿಗೆ ವೇದ್ಯವಾಗಿರುತ್ತದೆ. ಆದ್ದರಿಂದ ವ್ಯಾಕರಣ-ಶಾಸ್ತ್ರಗಳಲ್ಲಿ ಬೇರೆ ಬೇರೆ ರೂಪಗಳಿಗೆ ಸಾಧುತ್ವವನ್ನು ಹೇಳಿರುವುದು ಕ್ವಚಿತ್ ಕಂಡು ಬರುತ್ತದೆ. ಒಂದು ವ್ಯಾಕರಣದಲ್ಲಿ ಅಸಾಧುವಾದದ್ದು ಇನ್ನೊಂದರಲ್ಲಿ ಸಾಧುವಾಗ-ಬಹುದು. ವಿರೋಧವೇನೂ ಇಲ್ಲ. ದೇಶಭೇದದಿಂದ ಶಬ್ದದಲ್ಲಿ ರೂಪಭೇದವಾಗ-ಬಹುದು.

**ಅನಾದಿಮವ್ಯವಚ್ಛಿನ್ನಾಂ ಶ್ರುತಿಮಾಹುರಕರ್ತೃಕಾಂ ।**
**ಶಿಷ್ಟೈರ್ನಿಬಧ್ಯಮಾನಾ ತು ನ ವ್ಯವಚ್ಛಿದ್ಯತೇ ಸ್ಮೃತಿಃ ॥ ೧೪೪ ॥**

ವೇದವು ಅನಾದಿಯೆಂದೂ ಪರಂಪರೆಯಿಂದ ವಿಚ್ಛೇದವಿಲ್ಲದೆ ಬಂದ-ದ್ದೆಂದೂ ಅಪೌರುಷೇಯವೆಂದೂ ಶಿಷ್ಟರಾದ ಜನರು ಹೇಳುತ್ತಾರೆ. ಸ್ಮೃತಿ-ಯಾದರೋ ಆ ಶಿಷ್ಟರಿಂದಲೇ ರಚಿತವಾದದ್ದು. ಅದೂ ಪರಂಪರೆಯಿಂದ ಬಂದಿರುವುದರಿಂದ ಅದಕ್ಕೆ ವಿಚ್ಛೇದವಿಲ್ಲ.

**ವಿವರಣೆ** – ವೇದವು ಮನುಷ್ಯರಚಿತವಲ್ಲವಾದದ್ದರಿಂದ ಅದರಲ್ಲಿ ಭ್ರಮಪ್ರಮಾದಗಳಿರುವುದಿಲ್ಲ. ವ್ಯಾಕರಣಾದಿ ಸ್ಮೃತಿಗಳು ಮನುಷ್ಯರಚಿತವಾದವು. ಇವನ್ನು ವೇದದಂತೆ ಪ್ರಾಮಾಣಿಕವೆಂದು ಹೇಳುವುದು ಹೇಗೆ? ಹಾಗಲ್ಲ; ಸ್ಮೃತಿ-ಗಳನ್ನು ವೇದಗಳ ಆಧಾರದಿಂದಲೇ ಶಿಷ್ಟರಾದ ಜನರು ರಚಿಸಿದ್ದಾರೆ. ಇವೂ ಪರಂಪರೆಯಿಂದ ಬಂದಿವೆ. ಇವುಗಳಿಗೂ ವಿಚ್ಛೇದವಿಲ್ಲ. ಸ್ಮೃತಿಯು ಪ್ರವಾಹ-ನಿತ್ಯವೇ. ವೇದಮೂಲಕವಾದದ್ದರಿಂದ ಪ್ರಾಮಾಣಿಕವೂ ಹೌದು. ಶಿಷ್ಟರಾದ ಮುನಿ-ಗಳ ರಚನೆಯಾದ್ದರಿಂದ ಇದರಲ್ಲಿ ಪ್ರತಾರಣಾ (ವಂಚನಾ) ದೋಷವೂ ಇಲ್ಲ.

**ಅವಿಭಾಗಾದ್ವಿವೃತ್ತಾನಾಮಭಿಖ್ಯಾ ಸ್ವಪ್ನವತ್ ಶ್ರುತೌ ।**
**ಭಾವತತ್ತ್ವಂ ತು ವಿಜ್ಞಾಯ ಲಿಂಗೇಭ್ಯೋ ವಿಹಿತಾ ಸ್ಮೃತಿಃ ॥ ೧೪೫ ॥**

ಅವಿದ್ಯಾಶಕ್ತಿಯಿಂದ ವಿಭಾಗವಿಲ್ಲದ, ಎಂದರೆ ಅವಿದ್ಯಾಶಕ್ತಿಸಹಿತವಾದ ಶಬ್ದಬ್ರಹ್ಮದಿಂದ ಋಷಿಗಳು ವಿವರ್ತಸ್ವರೂಪವಾಗಿ ಉದ್ಭವಿಸುತ್ತಾರೆ. ಅವರಿಗೆ ವೇದದ ಜ್ಞಾನವು ಕನಸಿನಲ್ಲಾಗುವಂತೆ ಆಗುತ್ತದೆ. ಅವರು ಪದಾರ್ಥಗಳ ನಿಜಸ್ವರೂಪವನ್ನರಿತು ವೇದದಲ್ಲಿರುವ ಸೂಚನೆಗಳಿಂದ ಸ್ಮೃತಿಶಾಸ್ತ್ರಗಳನ್ನು ರಚಿಸಿದ್ದಾರೆ.

**ವಿವರಣೆ** – ಜಗತ್ತಿಗೆ ಪ್ರಳಯವಿಲ್ಲವೆಂದೂ ಯಾವಾಗಲೂ ಈ ವಿಶ್ವವು ಇದ್ದೇ ಇರುತ್ತದೆ ಎಂದೂ ಕೆಲವು ದಾರ್ಶನಿಕರ ಅಭಿಪ್ರಾಯವಿದೆ. ಅವರ ಮತದಲ್ಲಿ ನಿದ್ರೆಯೇ ಪ್ರಳಯ. ಪ್ರಬೋಧವೇ ಸೃಷ್ಟಿ. ಈ ಮತದಲ್ಲಿ ವೇದಾಧ್ಯಾಯಿಗಳು ಸದಾ ಇರುತ್ತಾರಾದ್ದರಿಂದ ವೇದಗಳಿಗೆ ವಿಚ್ಛೇದವಿಲ್ಲವೆಂಬುದನ್ನು ಒಪ್ಪಬಹುದು. ಆದರೆ ಕೆಲವು ದಾರ್ಶನಿಕರು ಜಗತ್ತಿಗೆ ನಿಜವಾದ ಪ್ರಳಯವಿದೆಯೆನ್ನುತ್ತಾರೆ. ಪ್ರಳಯದಲ್ಲಿ ಯಾವ ಜೀವಿಗಳೂ ಇರುವುದಿಲ್ಲ. ಆಮೇಲೆ ನೂತನ ಸೃಷ್ಟಿಯಾಗುತ್ತದೆ. ಈ ಸಂದರ್ಭದಲ್ಲಿ ವೇದಗಳಿಗೆ ವಿಚ್ಛೇದವಾಗುತ್ತದೆಯಲ್ಲವೆ ಎಂಬ ಶಂಕೆಗೆ ಇದು ಉತ್ತರ. ಪ್ರಳಯವಾದ ಮೇಲೆ ಪುನಃ ಸೃಷ್ಟಿಕಾಲದಲ್ಲಿ ಉದ್ಭವಿಸುವ ಋಷಿಗಳು ಶಬ್ದಬ್ರಹ್ಮದ ವಿವರ್ತಸ್ವರೂಪರಾಗಿರುತ್ತಾರೆ. ಶಬ್ದಬ್ರಹ್ಮವು ಅವಿದ್ಯಾಶಕ್ತಿಯಿಂದ ವಿವರ್ತಗೊಳ್ಳುತ್ತದೆ. ಆಗ ಋಷಿಗಳಿಗೆ ವೇದವು ಯಥಾವತ್ತಾಗಿ ಸ್ವಯಂಪ್ರಕಾಶವಾಗಿ ಹೊಳೆಯುತ್ತದೆ. ವೇದವನ್ನು ಹೇಳಿಕೊಡತಕ್ಕವರಿಲ್ಲದಿದ್ದರೂ ಪ್ರತಿಭಾತವಾಗಿ ತಿಳಿಯುತ್ತದೆ. ಹೇಗೆಂದರೆ ಕನಸಿನಲ್ಲಿ ಯಾರೋ ಮಾತಾಡುವಂತೆಯೂ ಆ ಮಾತು ನಮಗೆ ತಿಳಿದಂತೆಯೂ ಆಗುವುದು ಎಲ್ಲರ ಅನುಭವದಲ್ಲಿದೆ. ವಾಸ್ತವವಾಗಿ ಆಗ ಮಾತಾಡತಕ್ಕವರೂ ಇರುವುದಿಲ್ಲ. ನಮ್ಮ ಶ್ರೋತ್ರೇಂದ್ರಿಯವೂ ಕಾರ್ಯೋನ್ಮುಖ–ವಾಗಿರುವುದಿಲ್ಲ. ಮನಸ್ಸೇ ಅದೆಲ್ಲವನ್ನು ಗ್ರಹಿಸಿಬಿಡುತ್ತದೆ. ಹಾಗೆ ಋಷಿಗಳಿಗೆ ವೇದವು ತಾನಾಗಿ ಹೊಳೆಯುತ್ತದೆ. ಅದರ ಆಧಾರದಿಂದ ಅವರು ಸ್ಮೃತಿಗಳನ್ನು ರಚಿಸುತ್ತಾರೆ. ಆದ್ದರಿಂದ ವೇದಕ್ಕಾಗಲಿ ಸ್ಮೃತಿಗಾಗಲಿ ವಿಚ್ಛೇದವಿಲ್ಲ.

ಇಲ್ಲಿ ಋಷಿಗಳೆಂದರೆ ಹಿರಣ್ಯಗರ್ಭರೆಂದು ಅಂಬಾಕರ್ತ್ರೀ ವ್ಯಾಖ್ಯಾನದಲ್ಲಿ ಬರೆಯಲಾಗಿದೆ. ಪ್ರತಿಯೊಂದು ಪ್ರಳಯವಾದಮೇಲೂ ಮೊದಲು ಹಿರಣ್ಯಗರ್ಭ–ನೆಂಬ ಪ್ರಜಾಪತಿಯು ಆವಿರ್ಭವಿಸುತ್ತಾನೆಂದು ವೇದದಲ್ಲಿಯೂ ಪುರಾಣಗಳ–ಲ್ಲಿಯೂ ಇದೆ. ಪರಮಾತ್ಮನು ಹಿರಣ್ಯಗರ್ಭನಿಗೆ ವೇದವನ್ನು ಬೋಧಿಸುತ್ತಾನೆಂದೂ ಇದೆ. ಹಿರಣ್ಯಗರ್ಭನೇ ಪ್ರಥಮ ಶರೀರಿಯಾದ್ದರಿಂದ, ಶರೀರವಿಲ್ಲದ ಪರಮಾತ್ಮನು ಉಪದೇಶಿಸುವುದು ಹೇಗೆ? ಪರಮಾತ್ಮನ ಅನುಗ್ರಹದಿಂದ ಹಿರಣ್ಯಗರ್ಭನಿಗೆ ವೇದವು ಹೊಳೆಯುತ್ತದೆಯೆಂದು ಅದರ ತಾತ್ಪರ್ಯ.

**ಕಾಯವಾಗ್ ಬುದ್ಧಿವಿಷಯಾ ಯೇ ಮಲಾಃ ಸಮವಸ್ಥಿತಾಃ ।**
**ಚಿಕಿತ್ಸಾಲಕ್ಷಣಾಧ್ಯಾತ್ಮಶಾಸ್ತ್ರೈಸ್ತೇಷಾಂ ವಿಶುದ್ಧಯಃ ॥ ೧೪೬ ॥**

ಶರೀರ – ಶಬ್ದ – ಮನಸ್ಸು ಇವುಗಳಲ್ಲಿರುವ ಕಶ್ಮಲಗಳು ಕ್ರಮವಾಗಿ ವೈದ್ಯಶಾಸ್ತ್ರ – ಶಬ್ದಾನುಶಾಸನವೆಂಬ ಲಕ್ಷಣಶಾಸ್ತ್ರ–ಯೋಗಶಾಸ್ತ್ರಗಳಿಂದ ಶುದ್ಧಿಯಾಗುತ್ತದೆ.

**ವಿವರಣೆ** – ಶರೀರ, ವಾಕ್, ಮನಸ್ಸು – ಇವನ್ನು ತ್ರಿಕರಣವೆನ್ನುತ್ತಾರೆ. ಶ್ರೇಯಸ್ಸನ್ನು ಬಯಸತಕ್ಕವನಿಗೆ ತ್ರಿಕರಣಶುದ್ಧಿ ಇರಬೇಕು. ಕೊಳೆಯನ್ನು ಹೋಗ–ಲಾಡಿಸಿದರೆ ಶುದ್ಧಿಯಾಗುತ್ತದೆ. ವಾತ, ಪಿತ್ತ, ಕಫಗಳೆಂಬ ತ್ರಿದೋಷಗಳ ಉಲ್ಬಣವೇ ರೋಗಕ್ಕೆ ಕಾರಣವಾದ್ದರಿಂದ ಅದು ಶರೀರದ ಕೊಳೆ. ಅದನ್ನು ಚರಕಾದಿ ವೈದ್ಯಶಾಸ್ತ್ರವು ಹೋಗಲಾಡಿಸುತ್ತದೆ.

ಅಪಶಬ್ದಗಳೇ ವಾಕ್ಕಿನ ಕೊಳೆ. ಅದರ ನಿರ್ಮೂಲನಕ್ಕಾಗಿ ಶಬ್ದಾನುಶಾಸವೆಂಬ ವ್ಯಾಕರಣಶಾಸ್ತ್ರವು ಪ್ರವೃತ್ತವಾಗಿದೆ. ಅಪಭ್ರಂಶಗಳನ್ನು ದೂರವಿರಿಸುವುದಕ್ಕಾಗಿ ಅದು ಸಾಧುಶಬ್ದಗಳನ್ನು ತಿಳಿಸಿಕೊಡುತ್ತದೆ. ಕಾಮ, ಕ್ರೋಧಾದಿಗಳು ಮನಸ್ಸಿನ ಕೊಳೆ. ಅವನ್ನು ಹೋಗಲಾಡಿಸುವುದಕ್ಕಾಗಿ ಯೋಗಶಾಸ್ತ್ರವು ಹೊರಟಿದೆ. ವೈದ್ಯಶಾಸ್ತ್ರ–ದಂತೆಯೂ ಯೋಗಶಾಸ್ತ್ರದಂತೆಯೂ ಶಬ್ದಶಾಸ್ತ್ರವು ಉಪಕಾರಿಯಾದದ್ದು ಎಂದು ಅಭಿಪ್ರಾಯ.

ಪತಂಜಲಿ ಮುನಿಯು ಈ ಮೂರುಶಾಸ್ತ್ರಗಳಲ್ಲಿಯೂ ಗ್ರಂಥವನ್ನು ರಚಿಸಿ ಉಪಕಾರಮಾಡಿದ್ದಾನೆಂದು ಭೋಜರಾಜನು ತನ್ನ ಸರಸ್ವತೀಕಂಠಾಭರಣದಲ್ಲಿ ಹೇಳುತ್ತಾನೆ. ಪ್ರಸಿದ್ಧವಾದ ಆ ಶ್ಲೋಕ ಹೀಗಿದೆ –

ಯೋಗೇನ ಚಿತ್ತಸ್ಯ ಪದೇನ ವಾಚಾಂ
ಮಲಂ ಶರೀರಸ್ಯ ಚ ವೈದ್ಯಕೇನ ।
ಯೋಽಪಾಕರೋತ್ತಂ ಪ್ರವರಂ ಮುನೀನಾಂ
ಪತಂಜಲಿಂ ಪ್ರಾಂಜಲಿರಾನತೋಽಸ್ಮಿ ॥

ಪದ = ವ್ಯಾಕರಣಶಾಸ್ತ್ರ, ಪತಂಜಲಿಯು ಯೋಗಸೂತ್ರಗಳನ್ನೂ ವ್ಯಾಕರಣ ಮಹಾಭಾಷ್ಯವನ್ನೂ ಚರಕಸಂಹಿತೆಯನ್ನೂ ರಚಿಸಿದ್ದಾನೆಂದು ಭೋಜರಾಜನ ಅಭಿಪ್ರಾಯ.

**ಶಬ್ದಃ ಸಂಸ್ಕಾರಹೀನೋ ಯೋ ಗೌರಿತಿ ಪ್ರಯುಯುಕ್ಷಿತೇ ।**
**ತಮಪಭ್ರಂಶಮಿಚ್ಛಂತಿ ವಿಶಿಷ್ಟಾರ್ಥನಿವೇಶಿನಮ್ ॥ ೧೪೭ ॥**

ಹಸು ಎಂಬ ಅರ್ಥದಲ್ಲಿ 'ಗೌಃ' ಎಂದು ಪ್ರಯೋಗಿಸಬೇಕಾಗಿದೆ. ಆಗ ಅದೇ ಅರ್ಥವಿಶೇಷದಲ್ಲಿ ಸಂಸ್ಕಾರಹೀನವಾದ ಗಾವೀ ಅಥವಾ ಗೋಣೀ ಎಂಬ ಶಬ್ದವನ್ನು ಪ್ರಯೋಗಿಸಿದರೆ, ಅದು ಅಪಭ್ರಂಶವೆಂದು ವಿದ್ವಜ್ಜನರ ಅಭಿಪ್ರಾಯವಾಗಿದೆ.

**ವಿವರಣೆ** – ಗಾವೀ, ಗೋಣೀ – ಎಂಬಿವು ಗೋಶಬ್ದದ ಅಪಭ್ರಂಶಗಳು. ಉಚ್ಚಾರಣೆ ಮಾಡಲು ಅಸಾಮರ್ಥ್ಯದಿಂದಲೋ ಅಜ್ಞಾನದಿಂದಲೋ 'ಗೌಃ' ಎನ್ನುವುದಕ್ಕೆ ಬದಲಾಗಿ ಗಾವೀ, ಗೋಣೀ ಎಂದು ಹೇಳಿದರೆ ಅದು ಅಪಭ್ರಂಶವೆನಿಸುತ್ತದೆ. ಹಸು ಎಂಬ ಅರ್ಥದಲ್ಲಿಯೇ ಗೋಶಬ್ದದ ವಿಕಾರವಾದ ಅದನ್ನು ಬಳಸಿದರೆ, ಅದು ಗೋಶಬ್ದದ ಅಪಭ್ರಂಶ ಎನ್ನಬೇಕು.

'ಶಬ್ದಪ್ರಕೃತಿರಪಭ್ರಂಶಃ' ಎಂದು ಸಂಗ್ರಹದಲ್ಲಿ ಹೇಳಿದೆಯಂತೆ. ಸಾಧುಶಬ್ದವೇ ಯಾವುದಕ್ಕೆ ಪ್ರಕೃತಿಯೋ ಅಂತಹ ವಿಕೃತಿಯು ಆ ಶಬ್ದಕ್ಕೆ ಅಪಭ್ರಂಶವಾಗುತ್ತದೆ. ಸರ್ವ ಅಪಭ್ರಂಶಗಳೂ ಪ್ರಕೃತಿಯಿಂದ ಹುಟ್ಟುವವೆಂದೂ ಪ್ರಕೃತಿಯಿಲ್ಲದೆ ವಿಕೃತಿಯಿರುವುದಿಲ್ಲವೆಂದೂ ಭರ್ತೃಹರಿಯು ತನ್ನ ಸ್ವೋಪಜ್ಞವ್ಯಾಖ್ಯಾನದಲ್ಲಿ ಬರೆದಿದ್ದಾನೆ. ಎಲ್ಲ ಭಾಷಾಶಬ್ದಗಳೂ ಸಂಸ್ಕೃತ ಜನ್ಯವೆಂದು ಆತನ ಆಶಯ.

**ಟಿಪ್ಪಣಿ** – ಸಂಗ್ರಹವೆಂಬುದು ಪ್ರಾಚೀನವಾದ ವ್ಯಾಕರಣ ಗ್ರಂಥ. ಅದನ್ನು ವ್ಯಾಡಿಯು ರಚಿಸಿದ್ದಾನೆಂದೂ ಅದರಲ್ಲಿ ಒಂದು ಲಕ್ಷ ಶ್ಲೋಕಗಳಿದ್ದವೆಂದೂ ಪ್ರತೀತಿ ಇದೆ. ಭಾಷ್ಯಕಾರ ಪತಂಜಲಿಗೂ ಭರ್ತೃಹರಿಗೂ ಅದರ ಪರಿಚಯವಿತ್ತು. ಸಂಗ್ರಹ ಈಗ ನಷ್ಟವಾಗಿದೆ.

**ಅಸ್ವಗೋಣ್ಯಾದಯಃ ಶಬ್ದಾಃ ಸಾಧವೋ ವಿಷಯಾಂತರೇ ।**
**ನಿಮಿತ್ತಭೇದಾತ್ ಸರ್ವತ್ರ ಸಾಧುತ್ವಂ ಚ ವ್ಯವಸ್ಥಿತಮ್॥೧೪೮॥**

ಅಸ್ವ, ಗೋಣೀ – ಮುಂತಾದ ಶಬ್ದಗಳು ಬೇರೆ ಅರ್ಥದ ವಿಷಯದಲ್ಲಿ ಸಾಧುಶಬ್ದಗಳೇ ಆಗುತ್ತವೆ. ಎಲ್ಲ ಶಬ್ದಗಳಲ್ಲಿಯೂ ಅರ್ಥವಿಶೇಷವೆಂಬ ನಿಮಿತ್ತದ ಭೇದದಿಂದ ಸಾಧುತ್ವವು ವ್ಯವಸ್ಥಿತವಾಗಿದೆ.

**ವಿವರಣೆ** – ಒಂದು ಶಬ್ದವು ಸಾಧುವೆ? ಅಸಾಧುವೆ? ಎಂಬುದನ್ನು ಅರ್ಥನಿಬಂಧನವಾಗಿ ನಿರ್ಣಯಿಸಬೇಕು. ಸ್ವತಃ ಶಬ್ದವು ಸಾಧುವೂ ಅಲ್ಲ. ಅಸಾಧುವೂ ಅಲ್ಲ. ಕುದುರೆ ಎಂಬ ಅರ್ಥದಲ್ಲಿ 'ಅಶ್ವ' ಶಬ್ದವು ಸಾಧು. 'ಅಸ್ವ' ಎಂದರೆ ಅಸಾಧು. ಆದರೆ ಬಡವ ಎಂಬ ಅರ್ಥದಲ್ಲಿ 'ಅಸ್ವ' ಶಬ್ದವು ಸಾಧುವೇ ಆಗುತ್ತದೆ. ಸ್ವ ಎಂದರೆ ಧನ. ಅದು ಇಲ್ಲದವನು ಅಸ್ವ, – ದರಿದ್ರನೆಂದರ್ಥ. ಹಸುವೆಂಬ ಅರ್ಥದಲ್ಲಿ ಗೋಣೀಶಬ್ದ ಅಸಾಧು. ಚೀಲ ಎಂಬ ಅರ್ಥದಲ್ಲಿ ಅದು ಸಾಧುಶಬ್ದವೇ. ಆದ್ದರಿಂದ ಅರ್ಥಪೂರ್ವಕವಾಗಿಯೇ ಸಾಧುತ್ವವು ವ್ಯವಸ್ಥಿತವಾಗಿದೆ. ಕೇವಲ ಸ್ವಸ್ವರೂಪದಿಂದ ಯಾವುದೂ ಸಾಧುವೂ ಅಲ್ಲ, ಅಸಾಧುವೂ ಅಲ್ಲ. ಹೀಗೆಯೇ ಇತರ ಶಬ್ದಗಳನ್ನು ಊಹಿಸಿಕೊಳ್ಳಬಹುದು. ಸಕಲ ಎಂಬ ಶಬ್ದವು ಸರ್ವ ಎಂಬ ಅರ್ಥದಲ್ಲಿ ಸಾಧು, ಚೂರು ಎಂಬ ಅರ್ಥದಲ್ಲಿ ಅಸಾಧು. ಶಕಲ = ಸರ್ವವೆಂಬ ಅರ್ಥದಲ್ಲಿ ಅಸಾಧು, ಚೂರು ಎಂಬ ಅರ್ಥದಲ್ಲಿ ಸಾಧು. ಹೀಗೆಯೇ ಅವಧಾನ – ಅವದಾನ (ಪೂರ್ವಚರಿತೆ) ಫಲ–ಪಲ (ಮಾಂಸ), ಕರ–ಖರ (ಕತ್ತೆ), ಸ್ವರಾಜ್ಯ – ಶ್ವರಾಜ್ಯ, ಛಲ – ಚಲ ಇತ್ಯಾದಿ.

**ತೇ ಸಾಧುಷ್ವನುಮಾನೇನ ಪ್ರತ್ಯಯೋತ್ಪತ್ತಿಹೇತವಃ ।**
**ತಾದಾತ್ಮ್ಯಮುಪಗಮ್ಯೇವ ಶಬ್ದಾರ್ಥಸ್ಯ ಪ್ರಕಾಶಕಾಃ ॥ ೧೪೯ ॥**

ಆ ಅಪಶಬ್ದಗಳು ಸಾಧುಶಬ್ದಗಳ ಸ್ಮರಣೆಯ ಮೂಲಕ ಜ್ಞಾನೋತ್ಪತ್ತಿಗೆ ಕಾರಣಗಳಾಗುತ್ತದೆ. ಅವು ಸಾಧುಶಬ್ದಗಳೊಡನೆ ತಾದಾತ್ಮ್ಯವನ್ನು ಹೊಂದಿವೆಯೋ ಎಂಬಂತೆ ಆಗಿ ಅರ್ಥಜ್ಞಾನವನ್ನುಂಟು ಮಾಡುತ್ತವೆ.

**ವಿವರಣೆ** – ಸಾಧುಶಬ್ದಗಳಂತೆ ಅಪಭ್ರಂಶಗಳೂ ಸಾಕ್ಷಾತ್ತಾಗಿ ಅರ್ಥವನ್ನು ಬೋಧಿಸುತ್ತವೆ. ಅರ್ಥಜ್ಞಾನವು ಉಭಯಶಬ್ದಗಳಿಗೂ ಸಮಾನವೆಂದು ವೈಯಾ–ಕರಣರು ಹೇಳುತ್ತಾರೆ. ಆದರೆ ತಾರ್ಕಿಕರು ಇದನ್ನೊಪ್ಪುವುದಿಲ್ಲ. ಒಬ್ಬನು ಅಪಶಬ್ದವನ್ನು ನುಡಿದಾಗ ಅದರಿಂದ ಸಾಧುಶಬ್ದದ ಸ್ಮರಣೆಯುಂಟಾಗಿ ಆಮೇಲೆ ಅದರಿಂದ ಅರ್ಥಜ್ಞಾನವಾಗುತ್ತದೆಯೆಂದು ಅವರು ಹೇಳುತ್ತಾರೆ. ಅಪಶಬ್ದವು ಸಾಧುಶಬ್ದದೊಡನೆ ತಾದಾತ್ಮ್ಯದಿಂದ ಕೂಡಿಹೋಗಿದೆಯೋ ಎಂಬಂತೆ ಅತಿ ಶೀಘ್ರವಾಗಿ ಅರ್ಥಬೋಧವಾಗುತ್ತದೆ. ಅಪಶಬ್ದದಿಂದಲೇ ಅರ್ಥವಾಯಿತೆಂದು ತಿಳಿಯುತ್ತೇವೆ, ಹಾಗಲ್ಲ. ನಡುವೆ ಸಾಧುಶಬ್ದದ ಸ್ಮರಣೆಯಾಗುತ್ತದೆಯೆಂದು ತಾರ್ಕಿಕರ ಅಭಿಪ್ರಾಯ. ಈ ಶ್ಲೋಕದಲ್ಲಿ ಅನುಮಾನವೆಂದರೆ ಸ್ಮರಣೆ ಎಂದರ್ಥ.

**ನ ಶಿಷ್ಟೈರನುಗಮ್ಯಂತೇ ಪರ್ಯಾಯಾ ಇವ ಸಾಧವಃ ।**
**ತೇ ಯತಃ ಸ್ಮೃತಿಶಾಸ್ತ್ರೇಣ ತಸ್ಮಾತ್ ಸಾಕ್ಷಾದವಾಚಕಾಃ॥೧೫೦॥**

ಒಂದು ಶಬ್ದಕ್ಕೆ ಪರ್ಯಾಯವಾಗಿ ಇತರ ಸಾಧುಶಬ್ದಗಳೂ ಇರುತ್ತವೆ. ಅಪಭ್ರಂಶ ಶಬ್ದಗಳು ಹಾಗೆಯೇ ಪರ್ಯಾಯಗಳೆಂದು ವ್ಯಾಕರಣಶಾಸ್ತ್ರವು ಒಪ್ಪುವುದಿಲ್ಲ. ಆದ್ದರಿಂದ ಅಪಭ್ರಂಶಗಳು ಸಾಕ್ಷಾತ್ ಅರ್ಥವಾಚಕಗಳಲ್ಲ.

**ವಿವರಣೆ** – ಭೂಶಬ್ದಕ್ಕೆ ಪೃಥ್ವೀ, ಧರಣಿ, ಭೂಮಿ ಮುಂತಾದ ಪರ್ಯಾಯ–ಪದಗಳಿವೆ. ಅವು ಶಾಸ್ತ್ರಾನುಮತವಾದ ಸಾಧುಶಬ್ದಗಳು. ಅವೆಲ್ಲವೂ ಸಾಕ್ಷಾತ್ತಾಗಿ ಭೂಮಿಯೆಂಬ ಅರ್ಥವನ್ನು ಬೋಧಿಸುತ್ತವೆ. ಹಾಗೆಯೇ ಅಪಭ್ರಂಶಗಳೂ ಪರ್ಯಾಯಪದಗಳೆಂದು ನಿಮ್ಮ ವ್ಯಾಕರಣಶಾಸ್ತ್ರವೇ ಒಪ್ಪುವುದಿಲ್ಲ. ಆದ್ದರಿಂದ ಅಪಭ್ರಂಶಗಳು ಪರ್ಯಾಯಪದಗಳಂತೆ ಸಾಕ್ಷಾತ್ ಅರ್ಥಬೋಧಕಗಳಲ್ಲವೆಂದು ಸಿದ್ಧವಾಗುತ್ತದೆ. ಇದು ತಾರ್ಕಿಕರ ಹೇಳಿಕೆ. ಅಪಭ್ರಂಶಗಳು ಪರ್ಯಾಯ ಪದಗಳೂ ಅಲ್ಲ, ಸಾಧು ಶಬ್ದಗಳೂ ಅಲ್ಲವೆಂಬುದು ವೈಯಾಕರಣರಿಗೆ ಸಂಮತ; ಸಾಕ್ಷಾತ್ ವಾಚಕಗಳಲ್ಲ ಎಂಬುದು ಮಾತ್ರ ಅಸಂಮತ.

**ಅಂಬಾಂಬೇತಿ ಯಥಾ ಬಾಲಃ ಶಿಕ್ಷಮಾಣಃ ಪ್ರಭಾಷತೇ ।**
**ಅವ್ಯಕ್ತಂ ತದ್ವಿದಾಂ ತೇನ ವ್ಯಕ್ತೇ ಭವತಿ ನಿರ್ಣಯಃ॥ ೧೫೧ ॥**

ಮಾತುಕಲಿಯುತ್ತಿರುವ ಬಾಲಕನು ಅಂಬ, ಅಂಬ ಎನ್ನುವುದಕ್ಕೆ ಬಾರದೆ, 'ಅಮ್ ಅಮ್ಮ' ಎಂದು ಅಸ್ಫುಟವಾಗಿ ನುಡಿಯುತ್ತಾನೆ. ಅಂಬಾಶಬ್ದವನ್ನು ಬಲ್ಲವರಿಗೆ ಬಾಲಕನ ಮಾತಿನಿಂದ ಸ್ಫುಟವಾದ ಅಂಬಾ ಶಬ್ದದ ಸ್ಮರಣೆಯಾಗಿ ಅರ್ಥನಿರ್ಣಯವಾಗುತ್ತದೆ.

**ವಿವರಣೆ** – ಬಾಲಕರ ಮತು ಅಸ್ಫುಟವಾಗಿದ್ದರೂ ಅದರ ಅರ್ಥ ನಮಗೆ ಹೇಗೆ ತಿಳಿಯುತ್ತದೆ? ಅದಕ್ಕೆ ಸದೃಶವಾದ ಸ್ಫುಟಶಬ್ದದ ಸ್ಮರಣೆಯಾಗಿ ಅರ್ಥ ತಿಳಿಯುತ್ತದೆ ಎನ್ನಬೇಕು. ಹಾಗೆಯೇ ಅಪಶಬ್ದದಿಂದ ಸಾಧುಶಬ್ದದ ಸ್ಮರಣೆಯಾಗಿ ಅರ್ಥಬೋಧವಾಗುತ್ತದೆ.

**ಏವಂ ಸಾಧೌ ಪ್ರಯೋಕ್ತವ್ಯೇ ಯೋಽಪಭ್ರಂಶಃ ಪ್ರಯುಜ್ಯತೇ ।**
**ತೇನ ಸಾಧುವ್ಯವಹಿತಃ ಕಶ್ಚಿದರ್ಥೋಽಭಿಧೀಯತೇ॥ ೧೫೨ ॥**

ಇದೇ ರೀತಿಯಲ್ಲಿ ಸಾಧುಶಬ್ದವನ್ನು ಪ್ರಯೋಗಿಸಬೇಕಾದಾಗ, ಅದಕ್ಕೆ

ಬದಲು ಅಪಭ್ರಂಶವನ್ನು ಪ್ರಯೋಗಿಸಿದರೆ ಸಾಧುಶಬ್ದದ ಸ್ಮರಣೆಯಾಗಿ ಅದರ ಮೂಲಕ ಅದರ ಅರ್ಥವು ಪ್ರತೀತವಾಗುತ್ತದೆ.

**ವಿವರಣೆ** – ಹಿಂದಿನ ಶ್ಲೋಕದಲ್ಲಿ ಹೇಳಿದ ಪ್ರಕಾರವನ್ನೇ ಅಪಶಬ್ದದ ಸ್ಥಳದಲ್ಲಿಯೂ ತಿಳಿಯಬೇಕು. 'ಗೌಃ' ಎಂದು ಹೇಳುವುದಕ್ಕೆ ಬದಲು ಒಬ್ಬನು ಗಾವೀ ಎಂದು ಹೇಳಿದರೆ 'ಗೌಃ' ಎಂಬ ಸಾಧುಶಬ್ದದ ಸ್ಮರಣೆಯಾಗಿ ಅರ್ಥ ತಿಳಿಯುತ್ತದೆ.

**ಪಾರಂಪರ್ಯಾದಪಭ್ರಂಶಾ ವಿಗುಣೇಷ್ವಭಿಧಾತೃಷು ।**
**ಪ್ರಸಿದ್ಧಿಮಾಗತಾ ಯೇಷು ತೇಷಾಂ ಸಾಧುರವಾಚಕಃ ॥೧೫೩॥**

ಬಹುಮಂದಿ ವಕ್ತಾರರಲ್ಲಿಯೇ ದೋಷವಿದ್ದಾಗ ಅವರಲ್ಲಿ ಪರಂಪರೆ–ಯಿಂದ ಅಪಭ್ರಂಶಗಳು ರೂಢಿಗೆ ಬಂದು ಪ್ರಸಿದ್ಧವಾಗಿ ಬಿಡುತ್ತವೆ. ಅವರಿಗೆ ಸಾಧುಶಬ್ದವೇ ಅರ್ಥಭೋಧಕವಾಗುವುದಿಲ್ಲ.

**ವಿವರಣೆ** – ವಿದ್ಯಾವಿಹೀನರಾದ ಹಳ್ಳಿಗರು, ರೈತರು ಮೊದಲಾದವರಲ್ಲಿ ಅಪಭ್ರಂಶಗಳೇ ರೂಢಿಗೆ ಬಂದಿರುತ್ತವೆ. ಅವರು ತಂದೆ, ಅಜ್ಜ – ಮೊದಲಾದ ಪರಂಪರೆಯಿಂದ ಅಸಾಧುಶಬ್ದಗಳನ್ನೇ ಸರ್ವತ್ರ ಬಳಸುತ್ತಾರೆ. ಅವರ ಭಾಷಾ–ಸ್ವರೂಪವೇ ಬೇರೆಯಾಗಿ ಬಿಡುತ್ತದೆ. ಅವರಿಗೆ ಶುದ್ಧವಾದ ಶಬ್ದವನ್ನು ಹೇಳಿದರೆ ಅರ್ಥವೇ ಆಗುವುದಿಲ್ಲ. ಇನ್ನು ಸಾಧುಶಬ್ದದ ಸ್ಮರಣೆ ಎಲ್ಲಿಂದ ಬರುತ್ತದೆ? ಆದ್ದರಿಂದ ಅಪಶಬ್ದಗಳಿಗೂ ಅರ್ಥಬೋಧಕತೆ ಇದೆಯೆಂದು ಒಪ್ಪಲೇ ಬೇಕು. ಇದು ವೈಯಾಕರಣರ ಮತ.

**ದೈವೀ ವಾಗ್ ವ್ಯವಕೀರ್ಣೇಯಮಶಕ್ತೈರಭಿಧಾತೃಭಿಃ ।**
**ಅನಿತ್ಯದರ್ಶಿನಾಮಸ್ಮಿನ್ ವಾದೇ ಬುದ್ಧಿವಿಪರ್ಯಯಃ ॥೧೫೪॥**

ಸಂಸ್ಕೃತ ಭಾಷೆಯು ಪರಮಾತ್ಮನಿಂದ ಆವಿರ್ಭೂತವಾದ ದೈವೀ ವಾಕ್. ಸರಿಯಾಗಿ ಶಬ್ದಪ್ರಯೋಗವನ್ನು ಮಾಡಲು ಅಶಕ್ತರಾದ ವಕ್ತಾರರು ಅಪಭ್ರಂಶಗಳನ್ನಾಡಿ ಈ ಭಾಷೆಯನ್ನು ನಾನಾ ಮುಖವಾಗಿ ಕಿತ್ತಾಡಿದ್ದಾರೆ. ಶಬ್ದವು ಅನಿತ್ಯವೆಂದು ಹೇಳತಕ್ಕವರಿಗೆ ಈ ವಾದದಲ್ಲಿ ಬುದ್ಧಿವೈಪರೀತ್ಯ ಉಂಟಾಗಿದೆ !

**ವಿವರಣೆ** – ವೇದವು ಪರಮಾತ್ಮನಿಂದ ಆವಿರ್ಭೂತವಾಗಿದೆಯೆಂದೂ ಅದು

ಅಪೌರುಷೇಯವೆಂದೂ ಹಿಂದೆ ಹೇಳಿದ್ದೇವೆ. ವೈದಿಕಶಬ್ದಗಳೇ ಸಂಸ್ಕೃತ ಭಾಷೆಯಲ್ಲಿವೆ. ವೇದವು ಅನಂತವಾದ್ದರಿಂದ ಭಾಷೆಯಲ್ಲಿ ಪ್ರಯುಕ್ತವಾದ ಕೆಲವು ಶಬ್ದಗಳು ಈಗ ದೊರೆಯುವ ವೇದದಲ್ಲಿ ಇಲ್ಲದಿರಬಹುದು. ಸೌಕರ್ಯಕ್ಕಾಗಿ ಕೆಲವು ವೈದಿಕಶಬ್ದಗಳನ್ನು ಭಾಷೆಯಲ್ಲಿ ಕೈಬಿಟ್ಟಿದ್ದಾರೆ. ವೇದವನ್ನು ಪದಶಃ ವಿಭಾಗ ಮಾಡಿ ಪದಗಳನ್ನು ಪ್ರಕೃತಿ ಪ್ರತ್ಯಯಗಳಾಗಿ ವಿಂಗಡಿಸಿ ಆಗಮಾದೇಶಾದಿಗಳಿಂದ ವ್ಯಾಕರಣಶಾಸ್ತ್ರವು ಸಂಸ್ಕರಿಸಿದ್ದರಿಂದ ಇದಕ್ಕೆ ಸಂಸ್ಕೃತವೆಂಬ ಹೆಸರು ರೂಢಿಗೆ ಬಂದಿದೆ. ಈ ಸಂಸ್ಕಾರವು ಪದಗಳ ನಿಜ ಸ್ವರೂಪವನ್ನು ತಿಳಿಸಿಕೊಡುತ್ತದೆ. ವ್ಯಾಕರಣವು ಹೊಸಶಬ್ದವನ್ನು ನಿರ್ಮಾಣ ಮಾಡುವುದಿಲ್ಲ. ಈ ಸಂಸ್ಕೃತಶಬ್ದಗಳು ನಿತ್ಯವಾದವು. ವೈಖರೀನಾದವು ಮಾತ್ರ ಅನಿತ್ಯವೆಂದು ಹಿಂದೆ ಪ್ರತಿಪಾದಿಸಿದ್ದೇವೆ. ಶಬ್ದವನ್ನು ಉಚ್ಚಾರಮಾಡಲು ಕಂಠತಾಲ್ವಾದ್ಯವಯವಗಳಿಗೆ ಪಾಟವವಿಲ್ಲದ್ದ-ರಿಂದಲೂ ಅಜ್ಞಾನದಿಂದಲೂ ಅಸಡ್ಡೆಯಿಂದಲೂ ಅಪಶಬ್ದಗಳು ಹುಟ್ಟುತ್ತವೆ. ಇವು ಮತ್ತೆ ನಾನಾವಿಕಾರಗಳನ್ನು ಪಡೆಯುತ್ತ ಹೋಗುತ್ತವೆ. ಹೊಸ ಹೊಸ ಭಾಷೆಗಳ ನಿರ್ಮಾಣವೇ ಆಗಿಬಿಡುತ್ತದೆ. ಈ ಎಲ್ಲ ಅಪಭ್ರಂಶಗಳಿಗೂ ಸಂಸ್ಕೃತವು ಮೂಲಪ್ರಕೃತಿ. ಅಪಭ್ರಂಶಗಳೆಲ್ಲವೂ ವಿಕೃತಿಗಳು.

ಶಬ್ದವು ಅನಿತ್ಯವೆನ್ನುವ ಕೆಲವರು ಅಪಭ್ರಂಶಗಳೇ ಪ್ರಕೃತಿ ಎನ್ನುತ್ತಾರೆ. ಅವೇ ಪ್ರಾಕೃತ ಭಾಷೆಯ ಶಬ್ದಗಳು. ಪ್ರಕೃತಿರೂಪದಲ್ಲಿರುವುದು ಪ್ರಾಕೃತ. ಅದನ್ನು ಸಂಸ್ಕಾರ ಗೊಳಿಸಿದ್ದರಿಂದ ಸಂಸ್ಕೃತ ಶಬ್ದವಾಯಿತೆಂದೂ ಸಂಸ್ಕೃತವೇ ವಿಕೃತಿಯೆಂದೂ ವಾದಿಸುತ್ತಾರೆ. ಹೀಗೆ ವಾದಿಸತಕ್ಕವರಿಗೆ ಬುದ್ಧಿಭ್ರಮಣೆಯಾಗಿರಬೇಕು! ಎಂದು ಅಭಿಪ್ರಾಯ.

**ಉಭಯೇಷಾಮವಿಚ್ಛೇದಾದನ್ಯಶಬ್ದವಿವಕ್ಷಯಾ ।**
**ಯೋಽನ್ಯಃ ಪ್ರಯುಜ್ಯತೇ ಶಬ್ದೋ ನ ಸೋಽರ್ಥಸ್ಯಾಭಿಧಾಯಕಃ ॥೧೫೫॥**

ಉಭಯ ಪಕ್ಷಗಳಲ್ಲಿಯೂ ಸಾಧು – ಅಸಾಧು ಎಂಬ ವ್ಯವಸ್ಥೆಯು ವಿಚ್ಛೇದವಿಲ್ಲದೆ ನಡೆದುಕೊಂಡು ಬಂದಿದೆ. ಆದರೆ ಒಂದು ಸಾಧುಶಬ್ದವನ್ನು ಹೇಳುವ ಉದ್ದೇಶದಿಂದ ಆ ಸ್ಥಳದಲ್ಲಿ ಅಪಶಬ್ದವನ್ನು ಬಳಸಿದರೆ ಅದು ಅರ್ಥವಾಚಕವೆನಿಸುವುದಿಲ್ಲ.

**ವಿವರಣೆ** – ಪ್ರಳಯವಿಲ್ಲ, ಅಪಭ್ರಂಶಗಳೂ ಹಿಂದಿನಿಂದಲೇ ಬಂದಿವೆ, ಅವು ಸಂಸ್ಕೃತದ ವಿಕಾರಗಳಲ್ಲ, ಅವು ನೇರವಾಗಿ ಅರ್ಥವನ್ನು ಬೋಧಿಸುತ್ತವೆ – ಎಂದು

ಹೇಳತಕ್ಕವರಿಗೂ ಶಬ್ದವು ನಿತ್ಯ, ಸಂಸ್ಕೃತದ ಅಪಭ್ರಂಶಗಳೇ ಭಾಷಾ ಶಬ್ದಗಳು – ಎಂದು ಹೇಳತಕ್ಕವರಿಗೂ ಸಾಧು – ಅಸಾಧು ಎಂಬ ವ್ಯವಸ್ಥೆಯು ಮಾತ್ರ ಇದ್ದೇ ಇದೆ. ಅದು ವಿಚ್ಛೇದವಿಲ್ಲದೆ ನಡೆದುಕೊಂಡು ಬಂದಿದೆ ಎಂಬುದನ್ನು ಎಲ್ಲರೂ ಒಪ್ಪುತ್ತಾರೆ. ಆದರೆ ಸಂಸ್ಕೃತದಲ್ಲಿಯೇ ಅಶ್ವಶಬ್ದವನ್ನು ಹೇಳುವಾಗ ಅಸ್ವಶಬ್ದವನ್ನೋ ಗೌಃ ಎಂಬ ಶಬ್ದವನ್ನು ಹೇಳುವುದಕ್ಕೆ ಬದಲಾಗಿ ಗೋಣೀ ಶಬ್ದವನ್ನೋ ಬಳಸಿದರೆ ಅದು ವಾಚಕವೆನಿಸುವುದಿಲ್ಲ. ಅರ್ಥವೇನೋ ತಿಳಿಯುತ್ತದೆ. ಅಂತಹ ಸ್ಥಳದಲ್ಲಿ ಮಾತ್ರ ಸಾಧುಶಬ್ದದ ಸ್ಮರಣೆಯಾದೀತು. ಅಥವಾ ಕೈಸನ್ನೆಯಿಂದ ಅರ್ಥಜ್ಞಾನ–ವಾಗುವಂತೆಯೂ ಜ್ಞಾನವಾಗಬಹುದು.

**ಇಲ್ಲಿಗೆ ಮಹಾವೈಯಾಕರಣ ಶ್ರೀಭರ್ತೃಹರಿ ವಿರಚಿತವಾದ**
**ವಾಕ್ಯಪದೀಯ ಗ್ರಂಥದಲ್ಲಿ ಬ್ರಹ್ಮಕಾಂಡವು ಸಮಾಪ್ತವಾಯಿತು.**

**– ಶ್ರೀರಸ್ತು –**

# ೨. ಕಾಲಸಮುದ್ದೇಶ

**ವ್ಯಾಪಾರವ್ಯತಿರೇಕೇಣ ಕಾಲಮೇಕೇ ಪ್ರಚಕ್ಷತೇ ।**
**ನಿತ್ಯಮೇಕಂ ವಿಭು ದ್ರವ್ಯಂ ಪರಿಮಾಣಂ ಕ್ರಿಯಾವತಾಮ್ ॥೧॥**

ಕೆಲವರು ವೈಶೇಷಿಕರೂ ಕ್ರಿಯೆಗೆ ಅತಿರಿಕ್ತವಾಗಿ ಕಾಲವೆಂಬ ವಸ್ತುವಿದೆ ಎನ್ನುತ್ತಾರೆ. ಅದು ನಿತ್ಯವೂ ಏಕವೂ ವಿಭುವೂ ಆದ ದ್ರವ್ಯವೆಂದೂ ಕ್ರಿಯಾವಿಶಿಷ್ಟ ವಸ್ತುಗಳ ಪರಿಚ್ಛೇದಕವೆಂದೂ ಅವರು ಹೇಳುತ್ತಾರೆ.

**ವಿವರಣೆ :** ಕಣಾದರೆಂಬ ಋಷಿಗಳು 'ವಿಶೇಷ' ಎಂಬ ಒಂದು ಪದಾರ್ಥವನ್ನು ಒಪ್ಪಿದ್ದಾರೆ. ಆದ್ದರಿಂದ ಇವರ ದರ್ಶನಕ್ಕೆ ವೈಶೇಷಿಕದರ್ಶನವೆಂದು ಹೆಸರು. ಈ ದರ್ಶನದ ಅನುಸಾರಿಗಳು ವೈಶೇಷಿಕರು. ಗೌತಮರ ನ್ಯಾಯದರ್ಶನ ಮತ್ತು ವೈಶೇಷಿಕದರ್ಶನ – ಇವೆರಡನ್ನೂ ಸೇರಿಸಿ ತರ್ಕಶಾಸ್ತ್ರ ಎಂಬ ಹೆಸರು ರೂಢಿಯಲ್ಲಿ ಬಂದಿದೆ. ಈ ದರ್ಶನಗಳಲ್ಲಿ ಹೆಚ್ಚು ಭೇದವಿಲ್ಲ. ಈ ಉಭಯ ದರ್ಶನದವರನ್ನೂ ತಾರ್ಕಿಕರು ಎನ್ನುತ್ತಾರೆ.

ಕಾಲಕ್ಕೆ ಆದಿಯೂ ಅಂತ್ಯವೂ ಇಲ್ಲವಾದ್ದರಿಂದ ಅದು ನಿತ್ಯವಾದದ್ದು. ಅಖಂಡವಾದ ಕಾಲವು ಒಂದೇ ಆಗಿದೆ. ಕ್ಷಣ, ಗಳಿಗೆ, ಮುಹೂರ್ತ, ದಿನ, ಮುಂತಾದ ಕಾಲಭೇದಗಳು ಉಪಾಧಿವಶದಿಂದ ವ್ಯವಹಾರಕ್ಕಾಗಿ ಕಲ್ಪಿತವಾದವು. ಉಪಾಧಿಯ ವಿಚಾರ ಮುಂದೆ ಬರುತ್ತದೆ. ಕಾಲವು ವಿಭು, ಸರ್ವವ್ಯಾಪಿ, ಅದು ಇಲ್ಲದ ಸ್ಥಳವಿಲ್ಲ, 'ಸರ್ವಮೂರ್ತದ್ರವ್ಯಸಂಯೋಗಿತ್ವಂ ವಿಭುತ್ವಂ' ಎಂದು ವಿಭುತ್ವದ ಪರಿಷ್ಕಾರ. ಸಮಸ್ತ ಮೂರ್ತದ್ರವ್ಯಗಳೊಡನೆ ಸಹಯೋಗ ಹೊಂದಿರುವುದೇ ವಿಭುತ್ವ. ಮೂರ್ತದ್ರವ್ಯವೆಂದರೆ ಪರಿಮಿತವಾದ ಪರಿಮಾಣವುಳ್ಳ ದ್ರವ್ಯ ಅಥವಾ ಕ್ರಿಯೆಯುಳ್ಳ ದ್ರವ್ಯ. ಕಾಲವು ದ್ರವ್ಯವೂ ಹೌದು. ಯಾವುದರಲ್ಲಿ ರೂಪರಸಾದಿ ಗುಣಗಳಿರುತ್ತವೆಯೋ ಅದು ದ್ರವ್ಯವೆನಿಸುತ್ತದೆ. 'ಗುಣವತ್ತ್ವ'

ಎಂಬುದೇ ದ್ರವ್ಯದ ಲಕ್ಷಣ. ಕಾಲದಲ್ಲಿ ಪರತ್ವ–ಅಪರತ್ವ ಎಂಬ ಗುಣಗಳಿವೆ. ಇವನು ಹಿರಿಯ–ಅವನು ಕಿರಿಯ, ಅದು ಮೊದಲು ಹುಟ್ಟಿದ್ದು – ಅದು ಕಡೆಗೆ ಹುಟ್ಟಿದ್ದು ಇತ್ಯಾದಿ ವ್ಯವಹಾರವಿದೆಯಷ್ಟೆ. ಹಿರಿಯ, ಮೊದಲು ಹುಟ್ಟಿದ್ದು – ಎಂಬುದು ಪರ ಕಿರಿಯ, ಕಡೆಗೆ ಹುಟ್ಟಿದ್ದು ಎಂಬ ವ್ಯವಹಾರಕ್ಕೆ ಕಾರಣವಾದದ್ದು ಅಪರ. ಪರತ್ವ, ಅಪರತ್ವ – ಎಂಬಿವು ಕಾಲದ ಗುಣಗಳು. ಕಾಲದ ಈ ಗುಣಗಳಿಂದ ಅವನು ಅಣ್ಣ, ಇವನು ತಮ್ಮ ಮುಂತಾದ ವ್ಯವಹಾರಗಳು ಬರುತ್ತವೆ. ಕಾಲವು ಪರಿಚ್ಛೇದಕವೂ ಹೌದು. ಪರಿಚ್ಛೇದಕ ಶಬ್ದಕ್ಕೆ ಪರಿಮಿತಿಗೊಳಿಸುವ, ಅಳತೆಮಾಡುವ, ಮಿತಗೊಳಿ–ಸುವ, ಎಷ್ಟೆಂದು ಅಥವಾ ಯಾವಾಗ ಎಂದು ಗೊತ್ತುಮಾಡುವ – ಮುಂತಾದ ಅರ್ಥಗಳಿವೆ. ಕ್ರಿಯೆಯ ಮೂಲಕ ಕಾಲವು ಕ್ರಿಯಾವಿಶಿಷ್ಟವಸ್ತುವನ್ನು ಪರಿಚ್ಛೇದ–ಗೊಳಿಸುತ್ತದೆ. ದಶರಥನು ರಾಜ್ಯವನ್ನು ಪಾಲಿಸುತ್ತಿದ್ದನು. ಉಪಾಧ್ಯಾಯನು ಪಾಠ ಹೇಳುತ್ತಿದ್ದಾನೆ. ನನ್ನ ತಾಯಿ ನಾಳೆ ಬರುವಳು – ಮುಂತಾದ ಸ್ಥಳಗಳಲ್ಲಿ ಪಾಲ–ನಾದಿ ಕ್ರಿಯೆಗಳನ್ನು ಕಾಲವು ಪರಿಚ್ಛೇದಗೊಳಿಸಿ ದಶರಥಾದಿಗಳಿಗೆ ಕ್ರಿಯಾದ್ವಾರಾ ಪರಿಚ್ಛೇದಕವಾಗಿದೆ ಎಂದು ಅಭಿಪ್ರಾಯ. ಕ್ರಿಯೆಯನ್ನು ಪರಿಚ್ಛೇದಿಸುವ ಕಾಲವು ಕ್ರಿಯೆಗಿಂತ ಅತಿರಿಕ್ತವೆಂದು ಸ್ಪಷ್ಟವಾಗುತ್ತದೆ. ಇದಿಷ್ಟು ವೈಶೇಷಿಕರ ಸಿದ್ಧಾಂತ.

ಕಾಲವು ಸರ್ವಾಧಾರವೆಂದೂ ಸರ್ವಕಾರ್ಯಗಳಿಗೆ ನಿಮಿತ್ತ ಕಾರಣವೆಂದೂ ಅವರು ಹೇಳುತ್ತಾರೆ. ಈಶ್ವರನಿಗಿಂತ ಅತಿರಿಕ್ತವಾಗಿ ದಿಕ್‌ಕಾಲಗಳೆರಡೂ ಇಲ್ಲ – ಎಂದು ನವೀನತಾರ್ಕಿಕರ ಮತವಿದೆ. (ನೋಡಿ. ತರ್ಕಸಂಗ್ರಹದ ಭಾಸ್ಕರೋ–ದಯವ್ಯಾಖ್ಯಾನ; ಕಾಲವಿಚಾರ)

ಕಾಲದಂತೆ ಇನ್ನೂ ಕೆಲವು ಪರಿಚ್ಛೇದಕಗಳಿವೆ. ಅವುಗಳಿಗಿಂತ ಕಾಲದ ವೈಶಿಷ್ಟ್ಯವೇನೆಂದರೆ :

**ದಿಷ್ಟಿಪ್ರಸ್ಥಸುವರ್ಣಾದಿ ಮೂರ್ತಿಭೇದಾಯ ಕಲ್ಪತೇ ।**
**ಕ್ರಿಯಾಭೇದಾಯ ಕಾಲಸ್ತು ಸಂಖ್ಯಾ ಸರ್ವಸ್ಯಭೇದಿಕಾ ॥ ೨ ॥**

ದಿಷ್ಟಿ, ಪ್ರಸ್ಥ, ಸುವರ್ಣ – ಮುಂತಾದ ಅಳತೆಯ ಸಾಧನವು ಮೂರ್ತದ್ರವ್ಯವನ್ನು ಪರಿಚ್ಛೇದಿಸಲು ಸಮರ್ಥವಾಗಿದೆ. ಕಾಲವಾದರೋ ಅಮೂರ್ತವಾದ ಕ್ರಿಯೆಯನ್ನು ಮಾತ್ರ ಪರಿಚ್ಛೇದಿಸುತ್ತದೆ. ಸಂಖ್ಯೆಯು ಮೂರ್ತ–ಅಮೂರ್ತಗಳಾದ ಎಲ್ಲ ವಸ್ತುಗಳನ್ನೂ ಪರಿಚ್ಛೇದಿಸಬಲ್ಲದು.

**ವಿವರಣೆ** : ದಿಷ್ಟಿ ಮೊದಲಾದವು ಪ್ರಾಚೀನ ಕಾಲದಲ್ಲಿದ್ದ ಅಳತೆಗಳು. ಅವುಗಳ

ಪ್ರಮಾಣ ಎಷ್ಟೆಂಬುದನ್ನು ಸರಿಯಾಗಿ ಹೇಳಲು ಶಕ್ಯವಿಲ್ಲ. ದಿಷ್ಟಿ, ಅಡಿ, ಗಜ, ಮೀಟರ್ ಮೊದಲಾದವುಗಳಂತೆ ಉದ್ದ ಅಗಲದ ಅಳತೆ. ಶಮ, ಕ್ಷೇತ್ರ, ಭಕ್ತಿ – ಎಂಬವು ಈ ಬಗೆಯವು. ವಿತಸ್ತಿ = ಗೇಣು, ಹಸ್ತ = ಮೊಳ. ವ್ಯಾಮ = ಮಾರು, ಈ ಬಗೆಯ ಅಳತೆಗೆ ಆಯಾಮವೆಂದು ಹೆಸರು.

ಪ್ರಸ್ಥ = ಅಳತೆಯ ಒಂದು ಸೇರು, ಆಢಕ = ನಾಲ್ಕು ಸೇರು, ದ್ರೋಣ = ಎಂಟು ಆಢಕಗಳು. ಅಕ್ಕಿ, ರಾಗಿ, ಗೋಧಿ ಮೊದಲಾದವುಗಳ ಅಳತೆ. ಇದಕ್ಕೆ ಪ್ರಮಾಣವೆಂದು ಹೆಸರು. ಪ್ರಮಾಣವು ಎತ್ತರ, ಸುತ್ತಳತೆ ಇವೆರಡನ್ನೂ ಒಳಗೊಂಡ ಅಳತೆ. ಸುವರ್ಣ = ಒಂದು ಕರ್ಷ, ಕರ್ಷ = ಹದಿನಾರು ಮಾಷಕ. ಮಾಷಕ = ಐದು ಗುಂಜಿಗಳ ತೂಕ. ಹೀಗೆ ತುಲಾ, ಭಾರ ಮುಂತಾದವು ತೂಗುವ ಅಳತೆಗಳು. ಈ ಅಳತೆಗೆ ಉನ್ಮಾನ ಎಂದು ಹೆಸರು. ಈ ದಿಷ್ಟಿ ಮೊದಲಾದವೆಲ್ಲವೂ ಮೂರ್ತದ್ರವ್ಯಗಳ ಪರಿಚ್ಛೇದಕಗಳು.

ಕಾಲವು ಅಮೂರ್ತವಾದ ಕ್ರಿಯೆಯನ್ನು ಮಾತ್ರ ಪರಿಚ್ಛೇದಿಸುತ್ತದೆ. ಭೂತ, ಭವಿಷ್ಯತ್, ವರ್ತಮಾನ ಕಾಲಗಳು ಆಗ ನಡೆಯುವ ಕ್ರಿಯೆಯನ್ನು ಮಾತ್ರ ವಿಶೇಷಿಸುತ್ತವೆ. ಸಂಖ್ಯೆಯಾದರೋ ಮೂರ್ತ–ಅಮೂರ್ತವಸ್ತುಗಳೆಲ್ಲವನ್ನೂ ಪರಿಚ್ಛೇದಿಸುತ್ತದೆ. ಎರಡು ಗಡಿಗೆಗಳು, ಐದು ಜನರು, ಇಬ್ಬರು ಜೀವಾತ್ಮರು, ಒಂಬತ್ತು ರಸಗಳು, ಎರಡು ಕ್ರಿಯೆಗಳು, ಆರು ಗುಣಗಳು; ನಾಲ್ಕು ಗಜ, ಐದು ಮೈಲುಗಳು, ಹತ್ತು ಸೇರು, ಐದು ತೊಲ, ಆರುನೂರು ಇತ್ಯಾದಿ.

ಪ್ರಮಾಣ, ಪರಿಮಾಣಶಬ್ದಗಳನ್ನು ಸಾಮಾನ್ಯವಾಗಿ ಎಲ್ಲ ಬಗೆಯ ಅಳತೆಗೂ ಲೋಕದಲ್ಲಿ ಬಳಸುತ್ತಾರೆ.

ಅಖಂಡವಾದ ಕಾಲವು ಒಂದೇ ಆದರೆ ಜಗತ್ತಿನ ನಾನಾ ಕ್ರಿಯೆಗಳನ್ನು ಪರಿಚ್ಛೇದಿಸುವುದು ಹೇಗೆ? ಕಾಲದಲ್ಲಿಯೂ ಭೇದವಿರಬೇಕಾಗುತ್ತದೆಯಲ್ಲವೆ? ಎಂಬ ಪ್ರಶ್ನೆಗೆ ಉತ್ತರವನ್ನೀಗ ಹೇಳಬೇಕು.

**ಉತ್ಪತ್ತೌ ಚ ಸ್ಥಿತೌ ಚೈವ ವಿನಾಶೇ ಚಾಪಿ ತದ್ವತಾಂ ।**
**ನಿಮಿತ್ತಂ ಕಾಲಮೇವಾಹುರ್ವಿಭಕ್ತೇನಾತ್ಮನಾ ಸ್ಥಿತಮ್ ॥ ೩ ॥**

ಜನನ, ಸ್ಥಿತಿ, ನಾಶ – ಮುಂತಾದ ನಾನಾ ಕ್ರಿಯೆಗಳನ್ನು ಹೊಂದಿರುವ ಪದಾರ್ಥಗಳಿಗೆ ಜನನ–ಮುಂತಾದ ಕ್ರಿಯೆಗಳು ನಡೆಯುವುದಕ್ಕೆ ಉಪಾಧಿ–ಗಳಿಂದ ವಿಭಕ್ತವಾದ ಕಾಲವೇ ನಿಮಿತ್ತ ಕಾರಣವೆಂದು ಬಲ್ಲವರು ಹೇಳುತ್ತಾರೆ.

**ವಿವರಣೆ** : ಉತ್ಪತ್ತಿ, ಸ್ಥಿತಿ, ವಿನಾಶ – ಇವು ಮೂರು ಮುಖ್ಯವಾದ ಕ್ರಿಯೆಗಳು. ಇವು ಇತರ ಸಮಸ್ತ ಕ್ರಿಯೆಗಳಿಗೂ ಉಪಲಕ್ಷಣ. ಕಾಲವು ಸ್ವತಃ ಉಪಾಧಿ ಭೇದದಿಂದ ವಿಭಿನ್ನವಾಗಿ ಲೋಕದ ವಿಭಿನ್ನ ಕ್ರಿಯೆಗಳನ್ನು ನಡೆಸುತ್ತದೆ. ಮಾನವ ಗರ್ಭವು ಬೆಳೆದು ಜನನವಾಗುವುಕ್ಕೆ ಒಂಬತ್ತು ತಿಂಗಳು ನಿಮಿತ್ತ. ಜನರು ನಿದ್ರೆಯಿಂದ ಎಚ್ಚರಗೊಳ್ಳಲು ಪ್ರಾತಃಕಾಲವು ನಿಮಿತ್ತ. ಜಗತ್ತಿನ ಪ್ರಳಯಕ್ಕೆ ಬ್ರಹ್ಮನ ರಾತ್ರಿ ನಿಮಿತ್ತ. ಮಾಗಿಮಲ್ಲಿಗೆ ಅರಳುವುದಕ್ಕೆ ಮಾಘಮಾಸವೂ ಮಾವಿನ ಹಣ್ಣು ಬರಲು ಚೈತ್ರಮಾಸವೂ ಮರದ ಎಲೆಗಳು ಉದುರುವುದಕ್ಕೆ ಚಳಿಗಾಲವೂ ನಿಮಿತ್ತಗಳು. ಹೀಗೆ ಪ್ರತಿಯೊಂದು ಕ್ರಿಯೆ ನಡೆಯುವಾಗಲೂ ಹಗಲು, ರಾತ್ರಿ, ಘಂಟೆ, ದಿನ, ತಿಂಗಳು – ಮೊದಲಾದವು ನಿಮಿತ್ತ ಕಾರಣಗಳಾಗಿ ಇದ್ದೇ ಇರುತ್ತವೆ.

**ತಮಸ್ಯ ಲೋಕಯಂತ್ರಸ್ಯ ಸೂತ್ರಧಾರಂ ಪ್ರಚಕ್ಷತೇ ।**
**ಪ್ರತಿಬಂಧಾಭ್ಯನುಜ್ಞಾಭ್ಯಾಂ ತೇನ ವಿಶ್ವಂ ವಿಭಜ್ಯತೇ ॥ ೪ ॥**

ಈ ಕಾಲವನ್ನು ವಿಶ್ವವೆಂಬ ಯಂತ್ರದ ಸೂತ್ರಧಾರನೆಂದು ಜ್ಞಾನಿಗಳು ಹೇಳುತ್ತಾರೆ. ಸಮಸ್ತ ಕ್ರಿಯೆಗಳಿಗೂ ಪ್ರತಿಬಂಧ ಮತ್ತು ಅನುಮತಿಗಳನ್ನು ನೀಡುವುದರ ಮೂಲಕ ಈ ಕಾಲವೆಂಬ ಸೂತ್ರಧಾರನಿಂದ ಜಗತ್ತು ಪೌರ್ವಾಪರ್ಯವೆಂಬ ವ್ಯವಸ್ಥೆಗೆ ಒಳಪಟ್ಟಿರುತ್ತದೆ.

**ವಿವರಣೆ**: ವಿಶ್ವವು ಮನುಷ್ಯನ ಊಹೆಗೂ ನಿಲುಕದ ಒಂದು ಮಹಾಯಂತ್ರ. ಇದರ ರಚನೆ, ಕ್ರಿಯಾಕಲಾಪಗಳೂ ಹೇಗೆ ಯಾವ ವ್ಯವಸ್ಥೆಗೆ ಒಳಪಟ್ಟು ನಡೆಯುತ್ತವೆಯೆಂಬುದನ್ನು ಯಾರೂ ಹೇಳಲಾರರು. ಕಾಲವು ಸೂತ್ರಧಾರನಂತೆ ಈ ಯಂತ್ರದ ನಿಯಾಮಕ. ಈ ಸೃಷ್ಟಿಯಲ್ಲಿ ನಡೆಯುವ ಕ್ರಿಯೆಗಳನ್ನು ಪ್ರತಿಬಂಧಿಸುವುದು ಮತ್ತು ನಡೆಯಲು ಅನುಮತಿಯನ್ನು ಕೊಡುವುದು ಇವೆರಡೂ ಕಾಲನೆಂಬ ಸೂತ್ರಧಾರನ ಅಧೀನ. ಅದರಿಂದಲೇ ಈ ಜಗತ್ತು ವ್ಯವಸ್ಥಿತವಾಗಿ ನಡೆಯುತ್ತದೆ. ಹಗಲು ರಾತ್ರಿಗಳಾಗುವುದು ಭೂಮಿಯ ಭ್ರಮಣಕ್ರಿಯೆಯಿಂದ. ಇದರ ನಿಯಾಮಕವು ಕಾಲ. ಗ್ರಹಗಳ ಚಲನೆ, ಹುಣ್ಣಿಮೆ ಅಮಾವಾಸ್ಯೆಗಳು ಕಾಲಕ್ಕೆ ಅಧೀನ. ಗಿಡಮರಗಳು ಯಾವಾಗ ಹೂ ಹಣ್ಣುಗಳನ್ನು ಬಿಡಬೇಕು, ಯಾವಾಗ ಹೂಹಣ್ಣುಗಳನ್ನು ಬಿಡಕೂಡದು – ಎಂದು ವ್ಯವಸ್ಥೆ ಮಾಡಿರುವವನು ಈ ಕಾಲಪುರುಷ. ಎಷ್ಟು ತಿಂಗಳಿಗೆ ಮಗು ಹುಟ್ಟಬೇಕು, ಎಷ್ಟು ವರ್ಷ ಶೈಶವ, ಎಷ್ಟು ವರ್ಷ ಯೌವನ, ಯಾವಾಗ ಮುಪ್ಪು, ಯಾವಾಗ ಮರಣ – ಎಂಬುದು ಕಾಲಕ್ಕೆ ಅಧೀನ. ಯೌವನವು ನೂರು ವರ್ಷಗಳವರೆಗೆ ಇರಲಿ, ಮುಪ್ಪು ತಡವಾಗಿ ಬರಲಿ ಎಂದು ಬೇಡಿಕೊಂಡರೂ ಕಾಲನು ಅನುಮತಿ ಕೊಡುವುದಿಲ್ಲ! ಮಾನವನ

ಬುದ್ಧಿಯ ಬೆಳವಣಿಗೆಯೂ ಕಾಲಕ್ಕೆ ಅಧೀನ. ಹೀಗೆ ಕಾಲವು ಜಗತ್ತಿನ ಕ್ರಿಯಾಕಲಾಪಗಳಲ್ಲಿ ಮಹತ್ತ್ವದ ಪಾತ್ರವನ್ನು ವಹಿಸಿದೆ. ಆದ್ದರಿಂದ ಅದರ ಸ್ವರೂಪ ಲಕ್ಷಣವೇನೆಂಬುದನ್ನು ಗೊತ್ತು ಮಾಡಬೇಕಾಗಿದೆ.

ಈ ಶ್ಲೋಕದಲ್ಲಿರುವ ಪ್ರತಿಬಂಧಶಬ್ದಕ್ಕೆ 'ಜನ್ಮದ ವಿನಾಶ' ಎಂದು ವ್ಯಾಖ್ಯಾನಕಾರರು ಅರ್ಥಹೇಳಿದ್ದಾರೆ. ಕ್ರಿಯೋತ್ಪತ್ತಿಯ 'ತಡೆ' ಎಂಬ ಅರ್ಥವು ಸ್ವರಸವಾಗಿದೆ.

**ಯದಿ ನ ಪ್ರತಿಬಧ್ನೀಯಾತ್ ಪ್ರತಿಬಂಧಂ ಚ ನೋತ್ಸೃಜೇತ್ ।**
**ವ್ಯವಸ್ಥಾ ವ್ಯವಕೀರ್ಯೇರನ್ ಪೌರ್ವಾಪರ್ಯವಿನಾಕೃತಾಃ ॥೫॥**

ಆ ಕಾಲದಲ್ಲಾಗಬಹುದಾದ ಪದಾರ್ಥಗಳ ಉತ್ಪತ್ತಿಯನ್ನು ಕಾಲವು ಪ್ರತಿಬಂಧಿಸದಿದ್ದರೆ ಮತ್ತು ಸರಿಯಾದ ಕಾಲದಲ್ಲಿ ಅವುಗಳ ಉತ್ಪತ್ತಿಯ ಪ್ರತಿಬಂಧಕವನ್ನು ತೆಗೆದು ಹಾಕದಿದ್ದರೆ, ಆಗ ಉತ್ಪತ್ತಿಗೆ ಪೌರ್ವಾಪರ್ಯಗಳೇ ಇಲ್ಲದೆ ಈಗಿರುವ ವ್ಯವಸ್ಥೆಗಳು ಹಾಳಾಗಿ ಎಲ್ಲವೂ ಸಂಕರವಾಗಿ ಹೋದೀತು.

**ವಿವರಣೆ** : ಕ್ರಿಯೆಗೆ ಕಾಲದ ನಿಯಂತ್ರಣವಿಲ್ಲದೆ ಹೋದಾಗ ಕ್ರಮವಾಗಿ ಹುಟ್ಟುವ ಪದಾರ್ಥಗಳು ಒಂದೇ ಸಲಕ್ಕೆ ಹುಟ್ಟಬಹುದು. ಭತ್ತ, ಗೋಧಿ – ಮೊದಲಾದವುಗಳು ಮೊಳಕೆ, ಸಸಿ, ತೆನೆ ಮುಂತಾದ ರೀತಿಯಲ್ಲಿ ಬೆಳೆಯುವ ಕ್ರಮವು ತಪ್ಪಿ, ಒಂದೇ ಸಲಕ್ಕೆ ಬೆಳೆದು ಕಾಳುಗಳನ್ನು ಕೊಡಬಹುದು. ಮಗುವಿಗೆ ಮುಪ್ಪಿನಲ್ಲಿ ಹಲ್ಲು ಹುಟ್ಟಬಹುದು! ಉತ್ಪತ್ತಿ ವಿನಾಶಗಳು ಇತರ ಎಲ್ಲ ಕ್ರಿಯೆಗಳಿಗೂ ಉಪಲಕ್ಷಣ.

ಕಾಲವು ಏಕವಾಗಿದ್ದರೂ ಉಪಾಧಿಗಳಿಂದ ಬೇರೆಬೇರೆ ಸ್ವರೂಪಗಳನ್ನು ಪಡೆದು ಅನೇಕ ಕ್ರಿಯೆಗಳನ್ನು ನಿಯಂತ್ರಿಸುತ್ತದೆ –

**ತಸ್ಯಾತ್ಮಾ ಬಹುಧಾ ಭಿನ್ನೋ ಭೇದೈರ್ಧರ್ಮಾಂತರಾಶ್ರಯೈಃ ।**
**ನ ಹಿ ಭಿನ್ನಮಭಿನ್ನಂ ವಾ ವಸ್ತು ಕಿಂಚನ ವಿದ್ಯತೇ ॥ ೬ ॥**

ಬೇರೆ ಬೇರೆ ಕ್ರಿಯೆಗಳೆಂಬ ಧರ್ಮಾಂತರಗಳಿಂದ ಪ್ರಯುಕ್ತವಾದ ನಾನಾ ಭೇದಗಳಿಂದ ಕಾಲದ ಸ್ವರೂಪವು ಬಹುವಿಧವಾಗಿ ಭೇದಗಳನ್ನು ಪಡೆಯುತ್ತದೆ. ಕಾಲವು ಮಾತ್ರವಲ್ಲ, ಧರ್ಮಾಂತರದ ಸಂಬಂಧವಿಲ್ಲದೆ ಸ್ವತಃ ಭಿನ್ನ ಅಥವಾ ಅಭಿನ್ನ ಎಂದು ಹೇಳಬಹುದಾದ ಯಾವ ವಸ್ತುವೂ ಲೋಕದಲ್ಲಿಲ್ಲ.

**ವಿವರಣೆ** : ಕ್ರಿಯೆಗಳೆಂಬ ಧರ್ಮಾಂತರಗಳು ಯಾವುದೆಂಬುದನ್ನು ಮುಂದೆ ೮ನೇ ಕಾರಿಕೆಯಲ್ಲಿ ತಿಳಿಸಲಾಗುವುದು. ಅವು ಕಾಲಕ್ಕೆ ಉಪಾಧಿಗಳು–ವಿಶೇಷಣಗಳು. ಈ ಉಪಾಧಿಗಳಿಂದ ಕಾಲವು ಕ್ಷಣ, ಮುಹೂರ್ತ, ಹಗಲು, ರಾತ್ರಿ, ದಿನ, ಮಾಸ – ಮುಂತಾದ ಹೆಸರುಗಳನ್ನು ಪಡೆಯುತ್ತದೆ. ಕ್ಷಣಾದಿಗಳಿಗೆ ಪರಸ್ಪರ ಭೇದ ಉಂಟು. ಈ ಕ್ರಮವು ಕಾಲಕ್ಕೆ ಮಾತ್ರವಲ್ಲ. ಸಕಲ ವಸ್ತುಗಳಿಗೂ ಈ ರೀತಿಯ ಉಪಾಧಿ–ಗಳಿಂದಲೇ ಭೇದ ಉಂಟಾಗಿರುತ್ತದೆ. ಯಾವ ವಸ್ತುವನ್ನೂ ಸ್ವತಃ ಭಿನ್ನವೆಂದೋ ಅಭಿನ್ನವೆಂದೋ ಹೇಳಲಾಗುವುದಿಲ್ಲ. ಹೇಗೆಂದರೆ ಭೇದ, ಅಭೇದ – ಇವೆರಡೂ ಸಾಪೇಕ್ಷವಾದವು. ಯಾವುದರಿಂದ ಭೇದ, ಯಾವುದರಿಂದ ಅಭೇದ? ಎಂಬ ಪ್ರಶ್ನೆ ಹುಟ್ಟುತ್ತದೆ. ಅದಕ್ಕೆ ಯಾವುದು ಉತ್ತರವೋ ಅದಕ್ಕೆ ಪ್ರತಿಯೋಗಿಯೆಂದು ಹೆಸರು. ಘಟವು ಪಟದಿಂದ ಭಿನ್ನವಾಗಿದೆ ಎಂದಾಗ ಘಟದಲ್ಲಿ ಪಟದ ಭೇದ ತೋರುತ್ತದೆ. ಈ ಭೇದವು ಪಟಪ್ರತಿಯೋಗಿಕವಾದದ್ದು. ಇಲ್ಲಿ ಘಟವನ್ನು ಅನುಯೋಗಿ ಎನ್ನುತ್ತಾರೆ. ಪಟ ಪ್ರತಿಯೋಗಿಕವಾದ ಭೇದವು ಅನುಯೋಗಿಯಾದ ಘಟದಲ್ಲಿದೆ. ಆದ್ದರಿಂದ ಪಟದಿಂದ ಭಿನ್ನ ಎನ್ನಬಹುದು. ಸ್ವತಃ ಅದು ಭಿನ್ನ ಎನ್ನಲಾಗದು. ಅಭಿನ್ನ ಎಂದಾಗಲೂ ಹೀಗೆಯೇ. ಘಟವು ಮಣ್ಣಿನಿಂದ ಅಭಿನ್ನ ಎನ್ನಬಹುದು. ಘಟವು ಮಣ್ಣೇ ಆಗಿರುವುದರಿಂದ, ಇಲ್ಲಿ ಅಭೇದಕ್ಕೆ ಮಣ್ಣು ಪ್ರತಿಯೋಗಿ. ಈ ಪ್ರತಿಯೋಗಿಯಿದ್ದರೆ ಮಾತ್ರ ಘಟವನ್ನು ಮಣ್ಣಿನಿಂದ ಅಭಿನ್ನ ಎನ್ನಬಹುದು. ಸ್ವತಃ ಘಟವು ಅಭಿನ್ನ ಎಂದು ಹೇಳಲಾಗದು.

ಇದೇನೋ ಸರಿ. ಈಗ ಘಟವು ಪಟದಿಂದ ಏಕೆ ಭಿನ್ನ ಎಂದು ಪ್ರಶ್ನೆ ಹುಟ್ಟುತ್ತದೆ. ಅವುಗಳಲ್ಲಿರುವ ಧರ್ಮಗಳು ಭಿನ್ನಸ್ವರೂಪದವಾದ್ದರಿಂದ ಈ ವ್ಯಕ್ತಿಗಳೂ ಭಿನ್ನ ಎಂದು ಉತ್ತರಿಸಬೇಕಾಗುತ್ತದೆ. ಮಣ್ಣು ಘಟಕ್ಕೆ ಉಪಾದಾನ–ಕಾರಣವಾದ್ದರಿಂದ ಮಣ್ಣಿನ ಧರ್ಮವೇ ಘಟದಲ್ಲಿ ಅನುಸ್ಯೂತವಾಗಿದೆ. ಆದ್ದರಿಂದ ಮಣ್ಣಿಗೆ ಅಭಿನ್ನವಾದದ್ದು ಘಟ ಎನ್ನಬಹುದು. ಮಣ್ಣುಮುದ್ದೆಗೂ ಘಟಕ್ಕೂ ಆಕಾರದಲ್ಲಿ ಭೇದವಿದೆ. ಆಕಾರದ ದೃಷ್ಟಿಯಿಂದ ಹೇಳುವಾಗ ಮಣ್ಣುಮುದ್ದೆಗಿಂತ ಭಿನ್ನವಾದದ್ದು ಘಟ ಎನ್ನಬಹುದು. ಏವಂಚ ಭಿನ್ನ, ಅಭಿನ್ನ ಎಂಬ ವ್ಯವಹಾರಗಳು ಸ್ವತಃ ಅಲ್ಲ, ಅನ್ಯ ಸಾಪೇಕ್ಷ ಎಂದು ತಿಳಿಯಬೇಕು. ಹೀಗೆಯೇ ಕ್ರಿಯೆಯ ಅಪೇಕ್ಷೆಯಿಂದ ಕಾಲವು ಭಿನ್ನವಾಗುತ್ತದೆ. ಈ ಕ್ರಿಯೆಯೇ ಕಾಲಭೇದಕ್ಕೆ ಉಪಾಧಿ–ವಿಶೇಷಣ. ವಸ್ತುತಃ ವಿಚಾರಮಾಡಿದರೆ ನಮ್ಮ ವ್ಯವಹಾರವೆಲ್ಲವೂ ಪ್ರತಿಯೋಗಿ–ಯಾದ ಇನ್ನೊಂದರ ಸಂಬಂಧದಿಂದಲೇ ನಡೆಯುತ್ತದೆ.

**ನೈಕೋ ನ ಚಾಪ್ಯನೇಕೋऽಸ್ತಿ!ನ ಶುಕ್ಲೋ ನಾಪಿ ಚಾಸಿತಃ ।**
**ದ್ರವ್ಯಾತ್ಮಾ ಸ ತು ಸಂಸರ್ಗಾದೇವಂರೂಪಃ ಪ್ರಕಾಶತೇ ॥ ೭ ॥**

(ಆರೋಪವಿಲ್ಲದೆ ಸ್ವತಃ) ಏಕ, ಅನೇಕ, ಬಿಳಿಯದು, ಕರಿಯದು ಎಂಬ ದ್ರವ್ಯವೇ ಇಲ್ಲ. ಇರುವ ಎಲ್ಲ ದ್ರವ್ಯಸ್ವರೂಪವೂ ಬೇರೆಬೇರೆಯಾಗಿ ಕಲ್ಪಿತವಾದ ಧರ್ಮದ ಸಂಸರ್ಗದಿಂದ(ಆರೋಪದಿಂದ) ಏಕ, ಅನೇಕ ಇತ್ಯಾದಿಯಾಗಿ ವ್ಯವಹೃತವಾಗುತ್ತದೆ.

**ವಿವರಣೆ** : ದ್ರವ್ಯಾತ್ಮಾ ಎಂದರೆ ದ್ರವ್ಯದ ನಿಜಸ್ವರೂಪವೆಂದರ್ಥ. ಅದು ವೇದಾಂತ ಪ್ರತಿಪಾದ್ಯವಾದ ಪರಬ್ರಹ್ಮ. ಅದರಲ್ಲಿ ಯಾವ ಗುಣಧರ್ಮಗಳೂ ಇಲ್ಲ. ಅದು ಅದ್ವಿತೀಯವಾದ್ದರಿಂದ ಇನ್ನೊಂದು ವಸ್ತುವೇ ಇಲ್ಲ. ಭೂಮಿ, ಜಲ, ವೃಕ್ಷ, ಲತೆ – ಮುಂತಾದ ವಸ್ತುಗಳು ಮಾಯೆಯಿಂದ ತೋರತಕ್ಕವು. ಅಜ್ಞಾನದಿಂದ ಕಲ್ಪಿತವಾದ ಭೂಮಿತ್ವ, ಜಲತ್ವ, ವೃಕ್ಷತ್ವ, ಲತಾತ್ವ – ಮುಂತಾದ ಧರ್ಮಗಳನ್ನು ಬ್ರಹ್ಮದಲ್ಲಿ ಆರೋಪಿಸಿ ಸಕಲ ವ್ಯವಹಾರಗಳೂ ನಡೆಯುತ್ತವೆ. ಈ ವಸ್ತುಗಳೆಲ್ಲವೂ ವ್ಯಾವಹಾರಿಕವಾಗಿ ಇರತಕ್ಕವು. ಪರಮಾರ್ಥದಲ್ಲಿ ಬ್ರಹ್ಮದ ಹೊರತಾಗಿ ಇನ್ನೊಂ–ದಿಲ್ಲ. ಗ್ರಂಥಕಾರನಾದ ಭರ್ತೃಹರಿಯು ಅದ್ವೈತ ವೇದಾಂತಿ. ವೇದಾಂತತತ್ತ್ವದ ಆಧಾರದಲ್ಲಿ ವಾಕ್ಯಪದೀಯವು ರಚಿತವಾಗಿದೆ.

ಮನಸ್ಸಿಗೂ ಮಾತಿಗೂ ನಿಲುಕದ ಬ್ರಹ್ಮವು ವ್ಯವಹಾರಗೋಚರವಾಗದು. ಮೇಜಿನಮೇಲೆ 'ಒಂದು ಲೇಖನಿ ಇದೆ' ಎಂದರೆ ಎರಡು ಮೂರು ಲೇಖನಿಗಳಿಲ್ಲ ಎಂದು ಅಭಿಪ್ರಾಯ. ಎರಡು ಮೂರು ಸಂಖ್ಯೆಗಳನ್ನು ವ್ಯಾವರ್ತಿಸುವುದಕ್ಕಾಗಿ 'ಒಂದು' ಎಂಬ ವಿಶೇಷಣವನ್ನು ಲೇಖನಿಗೆ ಸೇರಿಸುತ್ತೇವೆ. ಒಂದಕ್ಕಿಂತ ಹೆಚ್ಚು ಸಂಖ್ಯೆ ಲೇಖನಿಗಳಿರುವ ಸಂದರ್ಭವಿದೆಯಾದ್ದರಿಂದ 'ಒಂದು' ಎಂಬ ವಿಶೇಷಣವು ಸಾರ್ಥಕವಾಗುತ್ತದೆ. ಬ್ರಹ್ಮಾತಿರಿಕ್ತವಸ್ತುವೇ ಇಲ್ಲದಾಗಿ ಬ್ರಹ್ಮಕ್ಕೆ 'ಒಂದು' ಎಂಬ ವಿಶೇಷಣ ಅನರ್ಥಕ. ಇನ್ನೊಂದು ವಸ್ತುವೇ ಇಲ್ಲದಾಗ ಅದು ಯಾವುದನ್ನು ವ್ಯಾವರ್ತಿಸುತ್ತದೆ? ನಾವು ಅಜ್ಞಾನದಿಂದ ಘಟತ್ವವೆಂಬ ಮಾನಸ ಪದಾರ್ಥವನ್ನು ಬ್ರಹ್ಮದಲ್ಲಿ ಆರೋಪಿಸಿ ಒಂದು ಘಟ ಎನ್ನುತ್ತೇವೆ. ಆರೋಪದಿಂದ ಅನೇಕ ಘಟಗಳಿರುವ ಸಾಧ್ಯತೆ ಇದೆಯಾದ್ದರಿಂದ ಈಗ ಒಂದು ಎಂಬ ವಿಶೇಷಣವು ಸಾರ್ಥಕವಾಗುತ್ತದೆ. 'ಇಲ್ಲಿ ಅನೇಕ ವೃಕ್ಷಗಳಿವೆ' ಇತ್ಯಾದಿ ವ್ಯವಹಾರವು ಅರೋಪದಿಂದಲೇ ಸಾಗಬೇಕು. ಬೌದ್ಧವಾದ ವೃಕ್ಷತ್ವವನ್ನು ಬ್ರಹ್ಮದಲ್ಲಿ ಆರೋಪಿಸಿ ಹಾಗೆ ಹೇಳುತ್ತೇವೆ. ಬಿಳಿಯದು, ಕರಿಯದು ಮೊದಲಾದದ್ದೂ ಈ ಬಗೆಯ ಆರೋಪದಿಂದಲೇ. ಪ್ರಪಂಚ ಆರೋಪವಿಲ್ಲದೆ ವ್ಯವಹಾರವೇ ನಡೆಯದು.

ಹೀಗೆಯೇ ಉತ್ಪತ್ತಿ, ಸ್ಥಿತಿ, ವಿನಾಶ – ಮುಂತಾದ ಅನ್ಯನಿಷ್ಠಕ್ರಿಯೆಗಳನ್ನು ಕಾಲದಲ್ಲಿ ಆರೋಪಿಸಿ ಉತ್ಪತ್ತಿಕಾಲ, ಸ್ಥಿತಿಕಾಲ, ವಿನಾಶಕಾಲ – ಇತ್ಯಾದಿ ವ್ಯವಹಾರಗಳು ಬಂದಿವೆ.

**ಸಂಸರ್ಗಿಣಾಂ ತು ಯೇ ಭೇದಾ ವಿಶೇಷಾಸ್ತಸ್ಯ ತೇ ಮತಾಃ ।**
**ಸ ಭಿನ್ನಸ್ತೈರ್ವ್ಯವಸ್ಥಾನಾಂ ಕಾಲೋ ಭೇದಾಯ ತೇ ಮತಾಃ ॥ ೮ ॥**

ಕಾಲಸಂಬಂಧಿಗಳಾದ ಸೂರ್ಯಾದಿ ಕ್ರಿಯೆಗಳಲ್ಲಿರುವ ಭೇದವಿಶೇಷ–ಗಳು ಕಾಲಸಂಬಂಧಿಗಳೆಂದು ಗೃಹೀತವಾಗುತ್ತದೆ. ಈ ಕ್ರಿಯಾ ವಿಶೇಷಗಳಿಂದ ಕೂಡಿದ ಕಾಲವು ಹಗಲು, ರಾತ್ರಿ, ದಿನ, ಪಕ್ಷ, ಮಾಸ – ಮುಂತಾದ ಸಕಲ ಕಾಲವ್ಯವಸ್ಥೆಗಳನ್ನು ಮಾಡಲು ಸಮರ್ಥವಾಗುತ್ತದೆ.

**ವಿವರಣೆ** – ಸೂರ್ಯನಲ್ಲಿಯೂ ಪರಿಮಿತವಾದ ಚಲನೆಯುಂಟು. ಭೂಮಿಯಲ್ಲಿ ತಿರುಗುವ ಕ್ರಿಯೆಯ ವೇಗವು ಹೆಚ್ಚಾಗಿದೆ. ಸೂರ್ಯ, ಚಂದ್ರ, ಭೂಮಿ, ನಕ್ಷತ್ರಪುಂಜ – ಇವುಗಳ ಕ್ರಿಯೆಗಳನ್ನು ಸರ್ವಾಧಾರವಾದ ಕಾಲದಲ್ಲಿ ಆರೋಪಿಸಿ ಕಾಲವನ್ನು ಹಗಲು, ರಾತ್ರಿ, ದಿನ, ಪಕ್ಷ, ಮಾಸ, ಸಂವತ್ಸರ – ಇತ್ಯಾದಿ ಭೇದಗಳನ್ನು ಮಾಡಿಕೊಂಡಿದ್ದೇವೆ. ಈ ಕ್ರಿಯೆಗಳು ಕಾಲಕ್ಕೆ ಉಪಾಧಿಗಳು. ಈ ಉಪಾಧಿಗಳಿಂದಲೇ ದಿನ, ಮಾಸ, ಮುಂತಾದ ಕಾಲಭೇದಗಳಾಗುತ್ತವೆ. ಸ್ವತಃ ಕಾಲದಲ್ಲಿ ಯಾವ ಭೇದವೂ ಇಲ್ಲ. ಕಣ್ಣುಮುಚ್ಚಿ ತೆರೆಯುವಷ್ಟು ಕಾಲಕ್ಕೆ ಕ್ಷಣವೆಂದು ಹೆಸರು. ಕಣ್ಣರೆಪ್ಪೆಯ ಕ್ರಿಯೆಯನ್ನು ಕಾಲಕ್ಕೆ ಉಪಾಧಿಯಾಗಿ ಸೇರಿಸಿ ಆ ಕಾಲವನ್ನು ಕ್ಷಣ ಎಂದು ಕರೆಯುತ್ತೇವೆ. ಹೀಗೆ ಕ್ರಿಯೆಯೆಂಬ ಉಪಾಧಿಯ ಸಂಬಂಧದಿಂದಲೇ ಕಾಲದಲ್ಲಿ ವಿಲಕ್ಷಣವಾದ ಭೇದಗಳಾಗುತ್ತವೆ ಎಂದು ತಿಳಿಯಬೇಕು. ಕಾಲವನ್ನಳೆಯುವ ಬೇರೆ ಯಾವ ಸಾಧನವೂ ಇಲ್ಲ.

**ವಿಶಿಷ್ಟಕಾಲಸಂಬಂಧಾತ್ ವೃತ್ತಿಲಾಭಃ ಪ್ರಕಲ್ಪತೇ ।**
**ಶಕ್ತೀನಾಂ ಸ ಪ್ರಯೋಗಸ್ಯ ಹೇತುತ್ವೇನಾವತಿಷ್ಠತೇ ॥ ೯ ॥**

ಕಾಲವಿಶೇಷಗಳ ಸಂಬಂಧದಿಂದ ಸಾಧನಗಳಲ್ಲಿರುವ ಶಕ್ತಿಗಳಿಗೆ ತಮ್ಮ ತಮ್ಮ ವ್ಯಾಪಾರಗಳಲ್ಲಿ ತೊಡಗುವ ಪ್ರವೃತ್ತಿಯುಂಟಾಗುತ್ತದೆ. ಆದ್ದರಿಂದ ಕಾಲವು ಆ ಶಕ್ತಿಗಳ ಪ್ರೇರಣೆಗೆ ಕಾರಣವಾಗಿ ನಿಲ್ಲುತ್ತದೆ.

**ವಿವರಣೆ** : ವಸಂತಕಾಲದಲ್ಲಿ ಕೆಲವು ಗಿಡಬಳ್ಳಿಗಳು ಹೂಗಳನ್ನು ಬಿಡುತ್ತವೆ. ಮರಗಳೂ ಚಿಗುರುತ್ತವೆ. ಕೋಗಿಲೆಯು ಕೂಗುತ್ತದೆ. ಹೂ ಬಿಡುವ, ಚಿಗುರುವ

ಶಕ್ತಿಯು ಗಿಡಬಳ್ಳಿಮರಗಳಲ್ಲಿಯೂ ಕೂಗುವ ಶಕ್ತಿ ಕೋಗಿಲೆಯಲ್ಲಿಯೂ ಮೊದಲೇ ಇರುತ್ತದೆ. ಆದರೆ ಆ ಶಕ್ತಿಗಳು ಕಾರ್ಯಪ್ರವೃತ್ತವಾಗಿರುವುದಿಲ್ಲ. ವಸಂತಕಾಲವು ಆ ಶಕ್ತಿಗಳನ್ನು ಪ್ರೇರಿಸಿ ಕಾರ್ಯದಲ್ಲಿ ತೊಡಗಿಸುತ್ತದೆ. ಆದ್ದರಿಂದ ವಸಂತಕಾಲವು ಶಕ್ತಿಗಳ ಪ್ರೇರಣೆಗೆ ಹೇತುವಾಗುತ್ತದೆ. ಹೀಗೆ ಬೇರೆಬೇರೆ ಕಾಲಗಳಲ್ಲಿ ನಡೆಯುವ ಕ್ರಿಯೆಗಳಿಗೆ ಕಾಲವು ಹೇತುವೆಂದು ತಿಳಿಯಬೇಕು. ಪ್ರಯೋಗ = ಪ್ರೇರಣೆ.

**ಜನ್ಮಾಭಿವ್ಯಕ್ತಿನಿಯಮಾಃ ಪ್ರಯೋಗೋಪನಿಬಂಧನಾಃ ।**
**ನಿತ್ಯಾಧೀನಸ್ಥಿತಿತ್ವಾಚ್ಚ ಸ್ಥಿತಿರ್ನಿಯಮಪೂರ್ವಿಕಾ ॥ ೧೦ ॥**

ಪದಾರ್ಥಗಳ ಜನ್ಮ, ಸ್ವಸ್ವರೂಪದ ಅಭಿವ್ಯಕ್ತಿ ಮತ್ತು ನಿಯತಕಾಲದ–ವರೆಗೆ ಸ್ಥಿತಿ–ಇದು ಕಾಲಕೃತವಾದ ಸಾಧನಶಕ್ತಿ ಪ್ರೇರಣೆಗೆ ಒಳಪಟ್ಟವುಗಳು. ನಿತ್ಯವಾದ ಕಾಲಕ್ಕೆ ವಸ್ತುಗಳ ಬಾಳ್ವಿಕೆ ಅಧೀನವಾಗಿರುವುದರಿಂದ ಅವುಗಳ ಬಾಳು ಬೇರೆಬೇರೆ ನಿಯಮಗಳಿಗೆ ಒಳಪಟ್ಟಿರುತ್ತದೆ.

**ವಿವರಣೆ** : ಇಲ್ಲಿ ಜನ್ಮ ಅಭಿವ್ಯಕ್ತಿಗಳ ಜೊತೆಗೆ ವಿನಾಶವನ್ನೂ ಉಪಲಕ್ಷಣವಾಗಿ ಸೇರಿಸಿಕೊಳ್ಳಬೇಕು. ಅಷ್ಟೇ ಹೊರತು ನಿಯಮಶಬ್ದಕ್ಕೇ ವಿನಾಶವೆಂದು ಅರ್ಥ–ಮಾಡುವುದು ಯುಕ್ತವಲ್ಲ. ಇದೇ ಶ್ಲೋಕದ ಎರಡನೇ ಸಾಲಿನಲ್ಲಿರುವ ನಿಯಮ–ಶಬ್ದಕ್ಕೆ ವಿನಾಶವೆಂದು ಅರ್ಥವಿಲ್ಲ. ಒಂದೇ ಶ್ಲೋಕದಲ್ಲಿ ನಿಯಮಶಬ್ದಕ್ಕೆ ಎರಡು ಅರ್ಥಗಳನ್ನು ಹೇಳುವುದು ಸರಿಯಲ್ಲ. ಆ ಶಬ್ದಕ್ಕೆ ವಿನಾಶವೆಂಬ ಅರ್ಥವೂ ಅಪ್ರಸಿದ್ಧ. ನಿತ್ಯವಾದ ಕಾಲವು ವಸ್ತುಗಳ ಜೀವಿತಶಕ್ತಿಯನ್ನು ಪ್ರೇರಿಸದಿದ್ದಾಗ ಅವುಗಳ ವಿನಾಶವು ಸಂಭವಿಸುತ್ತದೆ. ಪ್ರಾಣಿಗಳು ಸಾಯುತ್ತವೆ. ಗಿಡಮರಬಳ್ಳಿಗಳು ಒಣಗುತ್ತವೆ. 'ಉತ್ಪತ್ತೌ ಚ ಸ್ಥಿತೌ ಚೈವ' ಎಂಬ ಮೂರನೆಯ ಕಾರಿಕೆಯಲ್ಲಿ ಹೇಳಿದುದರ ವಿವರಣೆ ಇದು.

**ಸ್ಥಿತಸ್ಯಾನುಗ್ರಹಸ್ತೈಸ್ತೈರ್ಭಾವೈಃ ಸಂಸರ್ಗಿಭಿಸ್ತತಃ ।**
**ಪ್ರತಿಬಂಧಸ್ತಿರೋಭಾವಃ ಪ್ರಹಾಣಮಿತಿ ಚಾತ್ಮನಃ ॥ ೧೧ ॥**

ಕಾಲದಿಂದಲೇ ಉಳಿದುಕೊಂಡು ಅವಸ್ಥಿತವಾಗಿರುವ ಪದಾರ್ಥಕ್ಕೆ ಕಾಲಸಂಬಂಧಿಗಳಾದ ಬೇರೆಬೇರೆ ಕ್ರಿಯೆಗಳ ಮೂಲಕ ಕಾಲದಿಂದಲೇ ಅನುಗ್ರಹವಾಗುತ್ತದೆ. ಅವಸ್ಥಿತವಾದ ಪದಾರ್ಥದ ಸಾಮರ್ಥ್ಯಕ್ಕೆ ತಡೆಯೂ, ಕೆಲವು ದಿನ ಅದರ್ಶನವೂ, ವಿನಾಶವೂ ಸಹ ಕಾಲದಿಂದಲೇ ಆಗುತ್ತವೆ.

**ವಿವರಣೆ** : ಪದಾರ್ಥಗಳಿಗೆ ಒದಗುವ ಎಲ್ಲ ವಿಕಾರಗಳೂ ಕಾಲಕ್ಕೆ ಸಂಬಂಧಿಸಿದವು. ಆರು ಭಾವವಿಕಾರಗಳಿವೆ. ಜನ್ಮ, ಸ್ಥಿತಿ, ವೃದ್ಧಿ, ಪರಿಣಾಮ, ಕ್ಷಯ,

ವಿನಾಶ ಎಂದು. ಇವನ್ನು ಷಡ್ಭಾವವಿಕಾರಗಳೆನ್ನುತ್ತಾರೆ. ಇವೆಲ್ಲಕ್ಕೂ ಕಾಲವೇ ಕಾರಣ ಎಂದು ಅಭಿಪ್ರಾಯ.

**ಪ್ರತ್ಯವಸ್ಥಂ ತು ಕಾಲಸ್ಯ ವ್ಯಾಪಾರೋಽತ್ರ ವ್ಯವಸ್ಥಿತಃ ।**
**ಕಾಲ ಏವ ಹಿ ವಿಶ್ವಾತ್ಮಾ ವ್ಯಾಪಾರ ಇತಿ ಕಥ್ಯತೇ ॥ ೧೨ ॥**

ಹೀಗೆ ಭಾವವಸ್ತುಗಳ ಉತ್ಪತ್ತಿ, ಸ್ಥಿತಿ, ವೃದ್ಧಿ, ನಾಶ ಮುಂತಾದ ಪ್ರತಿಯೊಂದು ಅವಸ್ಥೆಗಳಲ್ಲಿಯೂ ಕಾಲದ ಅನುಗ್ರಹ, ನಿರಾಕರಣೆ ಮುಂತಾದ ವ್ಯಾಪಾರವು ನಿಯತವಾಗಿ ಇದ್ದುಬಿಟ್ಟಿದೆ. ಈ ಪ್ರಕಾರದಲ್ಲಿ ವಿಶ್ವಕ್ಕೆ ಜೀವಾಳವಾಗಿರುವ ಕಾಲವೇ ಆ ಭಾವಸ್ತುಗಳ ವ್ಯಾಪಾರವೆನಿಸಿಬಿಟ್ಟಿದೆ !

**ವಿವರಣೆ** : ಕಾಲದ ಪ್ರೇರಣೆಯಿಲ್ಲದೆ ಯಾವ ವಸ್ತುವಿನಲ್ಲಿಯೂ ಉತ್ಪತ್ತಿ ಮುಂತಾದ ಕ್ರಿಯೆಗಳು ಹುಟ್ಟುವುದಿಲ್ಲ. ವಸ್ತುಗಳ ವ್ಯಾಪಾರಕ್ಕೆ ಕಾಲವು ಕಾರಣ. ಹೀಗೆ ಸಕಲ ಪದಾರ್ಥಗಳ ಕ್ರಿಯೆಗೆ ಕಾಲವು ಕಾರಣವಾಗಿರುವುದರಿಂದ ಕಾರ್ಯವನ್ನೇ ಕಾರಣವಾದ ಕಾಲವೆಂದು ಲೋಕದಲ್ಲಿ ಹೇಳುವುದುಂಟು. ಉದಾಹರಣೆ : ತಾವರೆಗಳು ಅರಳುವುದು ವಸಂತಕಾಲ, ಸೂರ್ಯನು ಮುಳುಗುವುದು ಸಂಜೆ, ಯೌವನ ಪ್ರಾಪ್ತಿಯೆಂದರೆ ಹದಿನೆಂಟುವರ್ಷ.

**ಮೂರ್ತೀನಾಂ ತೇನ ಭಿನ್ನಾನಾಮಾಚಯಾಪಚಯಾಃ ಪೃಥಕ್ ।**
**ಲಕ್ಷ್ಯಂತೇ ಪರಿಣಾಮೇನ ಸರ್ವಾಸಾಂ ಭೇದಯೋಗಿನಾ ॥ ೧೩ ॥**

ಇಲ್ಲಿ ಮೂರ್ತಿಗಳೆಂದರೆ ಪ್ರಾಣಿ–ಅಪ್ರಾಣಿರೂಪಗಳಾದ ಚರಾಚರ ಜನ್ಯ ವಸ್ತುಗಳು. ಪ್ರಾಣಿ–ಅಪ್ರಾಣಿ ಇತ್ಯಾದಿ ನಾನಾಭೇದಗಳನ್ನು ತಳೆದಿರುವ ಈ ಮೂರ್ತಿಗಳಿಗೆ ಕಾಲದಿಂದಾಗುವ ವೃದ್ಧಿಹ್ರಾಸಗಳು ಸ್ಪಷ್ಟವಾಗಿ ಗೋಚರಿಸು–ತ್ತವೆ. ವಿಭಿನ್ನ ಕ್ರಿಯೆಗಳನ್ನು ನಡೆಸುವ ಕಾಲದಿಂದ ಆಗುವ ಪರಿಣಾಮದಿಂದ ಸಮಸ್ತಮೂರ್ತಿಗಳಲ್ಲಿ ಈ ವೃದ್ಧಿಹ್ರಾಸಗಳು ಕಂಡುಬರುತ್ತವೆ.

**ವಿವರಣೆ** : ಸ್ಥಾವರ ಜಂಗಮಗಳೆಲ್ಲವೂ ಕಾಲಮಹಿಮೆಯಿಂದ ಬೆಳೆದು ಬೇರೆಬೇರೆ ರೂಪದಲ್ಲಿ ಪರಿಣಮಿಸಿ, ಕಡೆಗೆ ಕ್ಷಯಿಸಿ ನಾಶಹೊಂದುತ್ತವೆ. ಇವೆಲ್ಲವೂ ಕಾಲಕ್ಕೆ ಉಪಾಧಿಗಳಾದ ಕ್ರಿಯೆಗಳಿಂದ ನಡೆಯತಕ್ಕವು. ಚರಾಚರಮೂರ್ತಿ–ಗಳಲ್ಲಿಯೇ ಈ ಕ್ರಿಯೆಗಳು ನಡೆಯುತ್ತವೆ. ರೂಪಾಂತರವನ್ನು ತಳೆಯುವುದಕ್ಕೆ ಪರಿಣಾಮವೆಂದು ಹೆಸರು. ಈ ಪರಿಣಾಮಗಳು ಜನ್ಯವಸ್ತುಗಳಿಗೆ ಮಾತ್ರ. ನಿತ್ಯವಾದ ಆತ್ಮ, ಆಕಾಶಾದಿಗಳಲ್ಲಿ ಯಾವ ಪರಿಣಾಮವೂ ಆಗುವುದಿಲ್ಲ.

**ಜಲಯಂತ್ರಭ್ರಮಾವೇಶಸದೃಶೀಭಿಃ ಪ್ರವೃತ್ತಿಭಿಃ ।**
**ಸ ಕಲಾಃ ಕಲಯನ್ ಸರ್ವಾಃ ಕಾಲಾಖ್ಯಾಂ ಲಭತೇ ವಿಭುಃ ॥ ೧೪ ॥**

ನೀರೆತ್ತುವ ಘಟೀಯಂತ್ರದ ಪರಿಭ್ರಮಣದಿಂದ ಆ ಯಂತ್ರದಲ್ಲಿಯೇ ಕ್ಷೋಭೆಯುಂಟಾಗುತ್ತದೆ (ಚಲನೆ ಹುಟ್ಟುತ್ತದೆ). ಈ ಪರಿಭ್ರಮಣಕ್ಕೆ ಸದೃಶ–ವಾಗಿ ಮತ್ತೆ ಮತ್ತೆ ಸುತ್ತಿಬರುವ ತನ್ನ ಪ್ರವೃತ್ತಿಗಳಿಂದ ವಿಭುವಾದ ಕಾಲವು ಕಲೆಗಳೆಂಬ ಭಾವಪದಾರ್ಥಗಳನ್ನು ಕಲಯತಿ = ಆವಿರ್ಭವಿಸುವಂತೆ ಮಾಡುವುದರಿಂದ 'ಕಾಲ' ಎಂದು ಹೆಸರನ್ನು ಪಡೆದಿದೆ.

**ವಿವರಣೆ** : ಜಲಯಂತ್ರವೆಂದರೆ ನೀರೆತ್ತುವ ಯಾತ, ರಾಟಿಯೆಂದೂ ಹೇಳುತ್ತಾರೆ. ಕೊಳಗದಂತಹ ಅನೇಕ ಪಾತ್ರೆಗಳನ್ನು ಇದಕ್ಕೆ ಕ್ರಮವಾಗಿ ಜೋಡಿಸಿರುತ್ತಾರೆ. ಈ ರಾಟಿಯನ್ನು ತಿರುಗಿಸುತ್ತಿದ್ದರೆ ಕೊಳಗದಂತಹ ಪಾತ್ರೆಗಳು ಭಾವಿ ಕೆರೆಕುಂಟೆಗಳಲ್ಲಿರುವ ನೀರನ್ನು ತುಂಬಿಕೊಂಡು ಮೇಲಕ್ಕೆ ತಂದು ಒಂದೇ ಸಮವಾಗಿ ಗದ್ದೆಗೆ ಸುರಿಯುತ್ತವೆ. ಈ ಜಲಯಂತ್ರವು ಮೇಲೆ ಕೆಳಗೆ ಸತತವಾಗಿ ಸುತ್ತುವಂತೆ ಕಾಲವು ಹಗಲು ರಾತ್ರಿ ದಿನ ತಿಂಗಳು ವರ್ಷಗಳ ರೂಪದಲ್ಲಿ ಸತತವಾಗಿ ಸುತ್ತುತ್ತಲೇ ಇದೆ. ರಾಟಿಯ ಪಾತ್ರೆಗಳಂತೆ ಈ ಕಾಲಭೇದಗಳಿವೆ. ರಾಟಿಯ ಪಾತ್ರೆಗಳು ತಾವು ತುಂಬಿಕೊಂಡ ನೀರನ್ನು ಭೂಮಿಯ ಮೇಲೆ ಸುರಿಯುವಂತೆ ಋತುಮಾಸಾದಿ ಕಾಲಭೇದಗಳು ಜಗತ್ತಿನ ಎಲ್ಲ ವಸ್ತುಗಳನ್ನೂ ಕ್ರಮವಾಗಿ ಹೊರ ಹೊಮ್ಮಿಸುತ್ತಲೇ ಇವೆ.

ತಾತ್ಪರ್ಯವೇನೆಂದರೆ – ವಿಶ್ವಕ್ಕೆ ಆತ್ಮವಾದ ಒಂದೇ ಒಂದು ಸತ್ಯವಾದ ಭಾವ ಪದಾರ್ಥವಿದೆ. ಅದೇ ಪರಬ್ರಹ್ಮ. ಅದು ಮಾಯಾಸಂವಲಿತವಾಗಿ ನಾನಾವಿಧ ಕಾರ್ಯಗಳನ್ನು ಮಾಡುವುದರಿಂದ ಅನಂತಶಕ್ತಿಯುಳ್ಳದ್ದು ಎನ್ನಬಹುದು. 'ಪರಾಸ್ಯ ಶಕ್ತಿರ್ವಿವಿಧೈವ ಶ್ರೂಯತೇ' ಎಂದು ಶ್ರುತಿವಾಕ್ಯ. ಈ ಮಾಯೆಯು ತನ್ನಲ್ಲಿ ಲೀನವಾದ ಈ ಪದಾರ್ಥಗಳೆಲ್ಲವನ್ನು ಹೊರಗೆ ಕ್ರಮವಾಗಿ ಹೊಮ್ಮಿಸುವುದರಿಂದ ಕಾಲ ಎನ್ನಿಸಿದೆ. 'ಕಲ–ಕ್ಷೇಪೇ' ಎಂಬ ಧಾತುವಿನಿಂದ ಕಾಲಯತಿ – ಹೊರಗೆ ಚಿಮ್ಮಿಸುತ್ತದೆ ಎಂಬ ಅರ್ಥದಲ್ಲಿ ಕಾಲಶಬ್ದದ ವ್ಯುತ್ಪತ್ತಿ. ಕಾಲವು ಪರಬ್ರಹ್ಮದ ಸ್ವಾತಂತ್ರ್ಯಶಕ್ತಿ ಎಂದು ವಾಕ್ಯಪದೀಯಕಾರನಾದ ಭರ್ತೃಹರಿಯ ಸಿದ್ಧಾಂತ. (ನೋಡಿ – ವಾ.ಪ.೧–೩ ಮತ್ತು ಈ ಕಾಲಸಮುದ್ದೇಶದ ೬೨).

**ಪ್ರತಿಬದ್ಧಾಶ್ಚ ಯಾಸ್ತೇನ ಚಿತ್ರಾ ವಿಶ್ವಸ್ಯ ವೃತ್ತಯಃ ।**
**ತಾಃ ಸ ಏವಾನುಜಾನಾತಿ ಯಥಾ ತಂತುಃ ಶಕುಂತಿಕಾಃ ॥೧೫॥**

ವಿಶ್ವದ ಪದಾರ್ಥಶಕ್ತಿಗಳು ಕಾಲದಿಂದ ಮೊದಲು ಪ್ರತಿಬದ್ಧವಾಗಿರುತ್ತವೆ. ಅನಂತರ ಆ ಶಕ್ತಿಗಳು ಕಾರ್ಯಪ್ರವೃತ್ತವಾಗುವಂತೆ ಕಾಲವೇ ಅನುಜ್ಞೆಯನ್ನು ನೀಡುತ್ತದೆ. ಪಕ್ಷಿಗಳನ್ನು ಕಟ್ಟಿಹಿಡಿದ ದಾರವು ಮತ್ತೆ ಪಕ್ಷಿಗಳಿಗೆ ಹಾರುವುದಕ್ಕೆ ಅನುಜ್ಞೆಯನ್ನು ಕೊಡುವಂತೆ, ಕಾಲವೂ ಮಾಡುತ್ತದೆ.

**ವಿವರಣೆ** : ಹಕ್ಕಿಹಿಡಿಯುವ ಬೇಟೆಗಾರರು ಗುಬ್ಬಿ, ಪಾರಿವಾಳ – ಮುಂತಾದ ಚಿಕ್ಕಹಕ್ಕಿಗಳನ್ನು ಹಿಡಿದು ಅವುಗಳ ಕಾಲಿಗೆ ದಾರವನ್ನು ಕಟ್ಟಿ ಹಾರಿಹೋಗದಂತೆ ತಡೆದಿರುತ್ತಾರೆ. ಗಿಡಗ ಮುಂತಾದ ಹಕ್ಕಿಗಳನ್ನು ಹಿಡಿಯುವದಕ್ಕಾಗಿ ಬಲೆಗಳನ್ನು ಹರಡಿ ಅವುಗಳ ಬಳಿ ಈ ಸಣ್ಣಹಕ್ಕಿಗಳು ಹಾರಾಡುವಂತೆ ಬಿಡುತ್ತಾರೆ. ದಾರವನ್ನು ಸಡಿಲಿಸುತ್ತಾರೆಯೇ ಹೊರತು ಬಿಚ್ಚಿ ಬಿಡುವುದಿಲ್ಲ. ಆ ಹಕ್ಕಿಗಳನ್ನು ತಿನ್ನುವುದಕ್ಕಾಗಿ ಗಿಡಗ ಮೊದಲಾದ ಇತರ ಹಕ್ಕಿಗಳು ಹಾರಿಬಂದು ಬಲೆಯಲ್ಲಿ ಸಿಕ್ಕಿಕೊಳ್ಳುತ್ತವೆ. ಹಿಂದೆ ಹೇಳಿದಂತೆ ಕಾಲವು ವೃಕ್ಷಾದಿಗಳಲ್ಲಿರುವ ಸಾಧನಶಕ್ತಿಯನ್ನು ಪ್ರತಿಬಂಧಿಸುತ್ತದೆ. ತನಗೆ ಬೇಕಾದಾಗ ಪ್ರತಿಬಂಧವನ್ನು ತೆಗೆದು ಹಾಕುತ್ತದೆ.

**ವಿಶಿಷ್ಟಕಾಲಸಂಬಂಧಾಲ್ಲಬ್ಧಪಾಕಾಸು ಶಕ್ತಿಷು ।**
**ಕ್ರಿಯಾಭಿವ್ಯಜ್ಯತೇ ನಿತ್ಯಾ ಪ್ರಯೋಗಾಖ್ಯೇನ ಕರ್ಮಣಾ ॥೧೬॥**

(ಜಗದ್ರಚನೆಗೆ ಮೂಲಕಾರಣವಾದ ಪರಮಾಣುಗಳಲ್ಲಿ ಅಥವಾ ಸಾಂಖ್ಯಮತದಂತೆ ಪ್ರಧಾನದಲ್ಲಿ ಇರುವ) ಕಾರ್ಯಜನಕಶಕ್ತಿಗಳು ವಿಲಕ್ಷಣ–ವಾದ ಕಾಲಸಂಬಂಧದಿಂದ ಕಾರ್ಯೋನ್ಮುಖವಾಗಲು, ಕಾಲವು ಆ ಶಕ್ತಿಗಳನ್ನು ಪ್ರೇರಿಸುತ್ತದೆ. ಈ ಪ್ರೇರಣಾ ರೂಪವಾದ ಕ್ರಿಯೆಯಿಂದ ಪರಮಾಣುಗಳಲ್ಲಿ ನಿತ್ಯವಾದ 'ಸತ್ತಾ' ಎಂಬ ಕ್ರಿಯೆಯು ಅಭಿವ್ಯಕ್ತವಾಗುತ್ತದೆ.

**ವಿವರಣೆ** : ಪ್ರಾಣಿಗಳಿಗೆ ಕರ್ಮಾನುಸಾರವಾಗಿ ಪ್ರಾಪ್ತವಾಗುವ ಸುಖದುಃಖ–ಗಳ ಉಪಭೋಗಕ್ಕಾಗಿ ಜಗದ್ರಚನೆಯಾಗುತ್ತದೆ. ಪ್ರಳಯವು ಕಳೆದು ಸೃಷ್ಟಿಕಾಲವು ಪ್ರಾಪ್ತವಾದೊಡನೆ, ಪರಮಾಣುಗಳಲ್ಲಿ ಸುಪ್ತವಾಗಿದ್ದ ಶಕ್ತಿಗಳು ಜಾಗ್ರತವಾಗುತ್ತವೆ. ಆಗ ಪರಮಾಣುಗಳು ಒಂದಕ್ಕೊಂದು ಸೇರಿ, ದ್ವ್ಯಣುಕತ್ರ್ಯಣುಕಗಳ ಕ್ರಮದಿಂದ ಜಗತ್ತಿನ ಸೃಷ್ಟಿಯಾಗುತ್ತದೆ. ಈ ಶಕ್ತಿ ಪರಮಾಣುಗಳಲ್ಲಿರುತ್ತದೆ. ಅದನ್ನು ಕಾಲವು ಪ್ರೇರಿಸುತ್ತದೆ. ಮೊದಲು ಪರಮಾಣುಗಳಲ್ಲಿ ಕಾಣಿಸಿಕೊಳ್ಳತಕ್ಕದ್ದು ಸತ್ತಾ ಎಂಬ ಕ್ರಿಯೆ. ಸಾಂಖ್ಯರು ಪ್ರಧಾನದಿಂದಲೇ ಜಗದ್ರಚನೆಯೆನ್ನುತ್ತಾರೆ. ಅವರ ಮತದಂತೆ ಪ್ರಧಾನದಲ್ಲಿ ಕಾಲದಿಂದ ಸೃಷ್ಟಿಶಕ್ತಿಯು ಉನ್ಮುಖವಾಗುತ್ತದೆಯೆಂದು ತಿಳಿಯಬೇಕು. ಸತ್ತಾ ಎಂದರೆ ಅಸ್ತಿತ್ವ. ಅದೂ ಒಂದು ಕ್ರಿಯೆಯೆಂದು ಕ್ರಿಯಾಸಮುದ್ದೇಶದಲ್ಲಿ ಪ್ರತಿಪಾದಿಸಲಾಗಿದೆ.

**ಜಾತಿಪ್ರಯುಕ್ತಾ ತಸ್ಯಾಂ ತು ಫಲವ್ಯಕ್ತಿಃ ಪ್ರತೀಯತೇ ।**
**ಕುತೋಽಪ್ಯದ್ಭುತಯಾ ವೃತ್ತ್ಯಾ ಶಕ್ತಿಭಿಃ ಸಾ ನಿಯಮ್ಯತೇ॥೧೭॥**

ತಸ್ಯಾಂ (ಪೂರ್ವಶ್ಲೋಕದಲ್ಲಿ ಹೇಳಿದಂತೆ) ಮೂಲಕಾರಣದಲ್ಲಿ ನಿತ್ಯವಾದ ಸತ್ತಾ ಎಂಬ ನಿತ್ಯಕ್ರಿಯೆಯು ಅಭಿವ್ಯಕ್ತವಾದ ಮೇಲೆ, ಜಾತ್ಯಾ = ಕಾರ್ಯಗತವಾದ ಜಾತಿಯಿಂದ ಪ್ರೇರಿತವಾಗಿ, ಫಲವ್ಯಕ್ತಿಃ ಪ್ರತೀಯತೇ = ಪ್ರತೀತವಾಗುತ್ತದೆ. ಸಾ = ಹುಟ್ಟಿದ ಆ ಕಾರ್ಯವ್ಯಕ್ತಿಯು (ಫಲವ್ಯಕ್ತಿಯು), ಕುತಶ್ಚಿತ್ = ಯಾವುದೋ ಕಾರಣದಿಂದ, ಅದ್ಭುತಯಾ ವೃತ್ತ್ಯಾ = ಅದ್ಭುತವಾದ ಕಾರಣವ್ಯಾಪಾರದಿಂದ, ನಿಯಮ್ಯತೇ = ಅಲ್ಲಿಯೇ ಇರುವಂತೆ ನಿಯಮಿಸಲ್ಪಡುತ್ತದೆ.

**ವಿವರಣೆ** : ಜಗತ್ತಿನ ಮೂಲಕಾರಣವು ಪರಮಾಣುವೆಂದು ತಾರ್ಕಿಕರೂ, ಪ್ರಧಾನವೆಂದು ಸಾಂಖ್ಯರೂ ಹೇಳುತ್ತಾರೆ. ವೇದಾಂತಿಗಳು ಮಾಯೆಯೆನ್ನುತ್ತಾರೆ. ಪ್ರಳಯಕಾಲದಲ್ಲಿ ಈ ಮೂಲಕಾರಣವೆಲ್ಲವೂ ಸುಪ್ತವಾಗಿರುತ್ತದೆ. ಸೃಷ್ಟಿಕಾಲವು ಬಂದಾಗ ಈ ಕಾಲದ ಪ್ರೇರಣೆಯಿಂದ ಮೂಲಕಾರಣದಲ್ಲಿ ನಿತ್ಯವಾದ ಸತ್ತಾ ಎಂಬುದು ಅಭಿವ್ಯಕ್ತವಾಗುವುದು. ಎಂದರೆ ಮೂಲಕಾರಣದಲ್ಲಿ ಅಸ್ತಿತ್ವ ಉಂಟಾಗಿ ಕಾರ್ಯೋನ್ಮುಖವಾಗುವುದು ಎಂದು ಅಭಿಪ್ರಾಯ. ಅನಂತರ ಪೃಥಿವೀತ್ವ, ಜಲತ್ವ, ವೃಕ್ಷತ್ವ ಮುಂತಾದ ಜಾತಿಧರ್ಮಗಳಿಗೆ ಆಶ್ರಯಾಪೇಕ್ಷೆ ಇರುವುದರಿಂದ ಮೂಲಕಾರಣವು ಪೃಥಿವೀ, ಜಲ, ವೃಕ್ಷ ಮುಂತಾದ ವ್ಯಕ್ತಿಗಳನ್ನು ಸೃಷ್ಟಿಸುತ್ತದೆ. ಈ ವ್ಯಕ್ತಿಗಳು ಬಹುಕಾಲ ನಿಲ್ಲತಕ್ಕವು. ಇವು ಮೂಲಕಾರಣದಲ್ಲಿಯೂ ನಿಂತಿರತಕ್ಕವು – ಇವು ಬೇಗನೆ ಏಕೆ ನಾಶವಾಗುವುದಿಲ್ಲವೆಂದರೆ, ಯಾವುದೋ ಒಂದು ಅನಿರ್ವಾಚ್ಯವಾದ ಹೇತುವುಂಟು. ಅದು ನಮ್ಮ ವರ್ಣನೆಗೆ ನಿಲುಕುವುದಿಲ್ಲ ಎಂದು ಅಭಿಪ್ರಾಯ.

ಪೃಥಿವೀ ಮುಂತಾದ ಜಗತ್ತೆಲ್ಲವೂ ಮಾಯಾಶಕ್ತಿಯಿಂದ ಕಲ್ಪಿತವಾದದ್ದು. ಇವುಗಳ ಸೃಷ್ಟಿ, ಸ್ಥಿತಿ, ನಾಶಗಳು ವರ್ಣನೆಗೆ ನಿಲುಕುವುದಿಲ್ಲ. ಪರಮಾಣುಗಳು ಮೂಲ ಕಾರಣವೆನ್ನುವುದು ಯುಕ್ತವಲ್ಲ. ಪರಮಾಣುಗಳು ಸಂಯೋಗಹೊಂದಿ ದ್ವ್ಯಣುಕ, ತ್ರ್ಯಣುಕ ಕ್ರಮದಲ್ಲಿ ಪೃಥಿವೀ ಮೊದಲಾದವು ಹುಟ್ಟುತ್ತವೆಯೆಂಬುದು ಯುಕ್ತವಲ್ಲ. ಸಂಯೋಗವು ವಸ್ತುವಿನ ಅವಯವಗಳಲ್ಲಿ ಆಗಬೇಕು. ಪರಮಾಣುಗಳಿಗೆ ಅವಯವಗಳಿಲ್ಲವಾದ್ದರಿಂದ ಅವು ಕೂಡಿಕೊಳ್ಳುತ್ತವೆಯೆನ್ನುವುದು ಯುಕ್ತವಲ್ಲ. ಪ್ರಧಾನವು ಜಡವಾದ್ದರಿಂದ ಜಗತ್ತನ್ನು ಸೃಷ್ಟಿಸುವ ಚೈತನ್ಯ ಅದಕ್ಕೆ

ಬರುವುದು ಹೇಗೆ? ಇತ್ಯಾದಿ ವಾದಗಳಿವೆ. ಆದ್ದರಿಂದ ಪರಮಾತ್ಮನ ಮಾಯಾಶಕ್ತಿಯೇ ಜಗನ್ನಿರ್ಮಾಣಕ್ಕೆ ಮೂಲಕಾರಣವೆಂದು ತಾತ್ಪರ್ಯ.

**ತತಸ್ತು ಸಮವಾಯಾಖ್ಯಾ ಶಕ್ತಿರ್ಭೇದಸ್ಯ ಬಾಧಿಕಾ ।**
**ಏಕತ್ವಮಿವ ತಾ ವ್ಯಕ್ತೀರಾಪಾದಯತಿ ಕಾರಣೈಃ ॥ ೧೮ ॥**

ಕಾರ್ಯರೂಪವಾದ ವ್ಯಕ್ತಿಯು ಹಾಗೆಯೇ ಇರುವಂತೆ ನಿಯಂತ್ರಿತ-ವಾದ ಮೇಲೆ ಸಮವಾಯವೆಂಬ ಶಕ್ತಿಯೂ ಕಾರ್ಯಕಾರಣಗಳಿಗಿರುವ ಭೇದವನ್ನು ಬಾಧಿಸಿಬಿಡುತ್ತದೆ. ಅದು ಉಪಾದಾನಕಾರಣಗಳಿಗೂ ಅವು-ಗಳಿಂದ ಹುಟ್ಟಿದ ಕಾರ್ಯಗಳಿಗೂ ಏಕತ್ವವು (ಅಭೇದವು) ಇದೆಯೋ ಎಂಬಂತೆ ಮಾಡಿಬಿಡುತ್ತದೆ.

**ವಿವರಣೆ** : ಮುಂದೆ ಹೇಳುತ್ತಿರುವುದು ತಾರ್ಕಿಕರ ಮತ. ಸಮವಾಯವು ಒಂದು ಸಂಬಂಧ ವಿಶೇಷ. ಅದು ಶಕ್ತಿಯಂತೆ ಪರಾಶ್ರಿತವಾಗಿಯೇ ಇರುವುದರಿಂದ ಸಮವಾಯವನ್ನು ಶಕ್ತಿಯೆಂದು ಇಲ್ಲಿ ಕರೆದಿದ್ದಾರೆ. ಕಾರ್ಯಕಾರಣಗಳಿಗೆ ವಸ್ತುತಃ ಭೇದವಿದ್ದರೂ ಈ ಸಮವಾಯವು ಭೇದವಿಲ್ಲದಂತೆ ಮಾಡಿ ಕಾರ್ಯಕಾರಣ-ಗಳೆರಡೂ ಒಂದೇ ಎಂಬಂತೆ ತೋರಿಸಿಬಿಡುತ್ತದೆ. ಚಿನ್ನವು ಒಡವೆಗೆ ಉಪಾದಾನ ಕಾರಣ. ಚಿನ್ನಕ್ಕೂ ಒಡವೆಗೂ ಭೇದವಿದೆಯೊ ಇಲ್ಲವೊ? ಭೇದವಿಲ್ಲವೆಂದೇ ಬಹುಜನರ ಅಭಿಪ್ರಾಯವಿದೆ. ನೂಲು-ಬಟ್ಟೆ, ಮಣ್ಣು-ಗಡಿಗೆ, ಮರ-ಕಂಭ, ಕಲ್ಲು-ಪ್ರತಿಮೆ - ಇವೂ ಉದಾಹರಣೆಗಳು. ಭೇದವಿಲ್ಲ, ಭೇದವಿದೆ - ಎಂಬ ಎರಡು ಅಭಿಪ್ರಾಯಗಳೂ ಉಂಟು. ಅಲ್ಲದೆ ಜಾತಿವ್ಯಕ್ತಿಗಳಿಗೂ ಅವಯವಾವಯವಿಗಳಿಗೂ ಗುಣಗುಣಿಗಳಿಗೂ ಕ್ರಿಯಾ ಕ್ರಿಯಾವತ್ತುಗಳಿಗೂ ಸಮವಾಯವು ಸಂಬಂಧ. ಅಲ್ಲಿಯೂ ಭೇದಾಭೇದಗಳೆಂಬ ಮತದ್ವಯವಿದೆ.

**ಅಥಾಸ್ಮಾನ್ನಿಯಮಾದೂರ್ಧ್ವಂ ಜಾತಯೋ ಯಾಃ ಪ್ರಯೋಜಿಕಾಃ ।**
**ತಾಃ ಸರ್ವಾ ವ್ಯಕ್ತಿಮಾಯಾಂತಿ ಸ್ವಚ್ಛೇ ಛಾಯಾ ಇವಾಂಭಸಿ ॥ ೧೯ ॥**

ಮತ್ತು ಕಾರಣಶಕ್ತಿಗಳು ತಮ್ಮಲ್ಲಿಯೇ ಕಾರ್ಯಗಳಿರುವಂತೆ ನಿಯಂತ್ರಿಸಿದೊಡನೆಯೇ, ಕಾರ್ಯಗಳನ್ನು ಹುಟ್ಟಿಸುವಂತೆ ಪ್ರೇರಿಸಿದ ಜಾತಿಗಳೆಲ್ಲವೂ ಆಯಾ ಕಾರ್ಯವ್ಯಕ್ತಿಗಳಲ್ಲಿ ಸೇರಿಕೊಂಡು ಬಿಡುತ್ತವೆ. ತಿಳಿಯಾದ ನೀರಿನಲ್ಲಿ ಚಂದ್ರ, ಸೂರ್ಯ, ವೃಕ್ಷ ಮುಂತಾದವುಗಳ ನೆರಳಿನ ಪ್ರತಿಬಿಂಬಗಳು ಸೇರಿಕೊಳ್ಳುವ ಹಾಗೆ ಸೇರಿಕೊಳ್ಳುತ್ತವೆ.

**ವಿವರಣೆ** : ಆಶ್ರಯದ ಅಪೇಕ್ಷೆಯಿಂದ ಜಾತಿಯು ವ್ಯಕ್ತಿಯನ್ನು ಹುಟ್ಟಿಸುವಂತೆ ಕಾರಣದ ಅಸ್ತಿತ್ವವನ್ನೇ ಪ್ರೇರಿಸುತ್ತದೆಯೆಂದೂ ಆಗ ಕಾರ್ಯವು ಹುಟ್ಟಿ ಕಾರಣದಲ್ಲಿಯೇ ಕಾರಣ ಸಹಿತವಾಗಿ ನೆಲೆಸುವುದೆಂದೂ ಹಿಂದೆ ಹೇಳಿದೆ. ವ್ಯಕ್ತಿಯು ಹುಟ್ಟಿದೊಡನೆ ಘಟತ್ವಾದಿ ಜಾತಿಯು ವ್ಯಕ್ತಿಯಲ್ಲಿ ಸೇರಿಕೊಳ್ಳುತ್ತದೆ. ಅನಂತರ ಬಿಳುಪು, ಕಪ್ಪು ಮುಂತಾದ ಗುಣಗಳು ಬಂದು ಸೇರಿಕೊಳ್ಳುತ್ತವೆ. ಇಲ್ಲಿ ಕ್ರಮ ಹೀಗೆ ವ್ಯಕ್ತಿಯು ಕಾರಣಸಾಮಗ್ರಿಯೊಡನೆ ನಿಂತೊಡನೆ ಆ ಕ್ಷಣದಲ್ಲಿ ಜಾತಿಯು ಸೇರಿಕೊಳ್ಳುತ್ತದೆ. ದ್ವಿತೀಯ ಕ್ಷಣದಲ್ಲಿ ರೂಪಾದಿ ಗುಣಗಳು ಸೇರಿಕೊಳ್ಳುತ್ತವೆ. ನೀರಲ್ಲಿ ಮರದ ನೆರಳು ನೀರಿನೊಡನೆ ಅಭೇದವನ್ನು ಹೊಂದಿದಂತೆ ಕಾಣುತ್ತದೆ. ಹಾಗೆಯೇ ಘಟತ್ವಾದಿ ಜಾತಿಗಳು ವ್ಯಕ್ತಿಯೊಡನೆ ಅಭೇದವನ್ನು ಹೊಂದಿದಂತೆ ಇರುತ್ತವೆ.

ರೂಪಾದಿಗುಣಗಳು ಹುಟ್ಟುವ ಕ್ರಮ ಹೇಗೆಂದರೆ –

**ಕಾರಣಾನುವಿಧಾಯಿತ್ವಾದಥ ಕಾರಣಪೂರ್ವಕಾಃ ।**
**ಗುಣಾಸ್ತತ್ರೋಪಲಭ್ಯಂತೇ ಸ್ವಜಾತಿವ್ಯಕ್ತಿಹೇತವಃ ॥ ೨೦ ॥**

(ಘಟಾದಿ ವ್ಯಕ್ತಿಯು (ದ್ರವ್ಯವು) ಉತ್ಪನ್ನವಾದ ಮೇಲೆ) ಕಾರಣವನ್ನನು–ಸರಿಸಿ ಕಾರ್ಯವು ಹುಟ್ಟಬೇಕಾದ್ದರಿಂದ ಗುಣಗಳು ತಮಗೆ ಕಾರಣವಾದ ದ್ರವ್ಯವು ಹುಟ್ಟಿರುವುದರಿಂದ ಅದನ್ನನುಸರಿಸಿ ಆ ದ್ರವ್ಯದಲ್ಲಿ ಸೇರಿಕೊಳ್ಳುತ್ತವೆ. ಆ ಗುಣಗಳು ತಮ್ಮಲ್ಲಿರುವ ರೂಪತ್ವ ರಸತ್ವಾದಿ ಜಾತಿಗಳ ಅಭಿವ್ಯಕ್ತಿಗೆ ಕಾರಣಗಳಾಗಿರುತ್ತವೆ.

**ವಿವರಣೆ** : ಮೂಲಕಾರಣದಲ್ಲಿ ಅಸ್ತಿತ್ವ (ಸತ್ತಾ) ಎಂಬುದು ಕಾಲ ವಶದಿಂದ ತೋರಿದ ಮೇಲೆ, ಘಟತ್ವಾದಿ ಜಾತಿಗಳಿಗೆ ಆಶ್ರಯವನ್ನು ನೀಡುವುದಕ್ಕಾಗಿ ಘಟಾದಿದ್ರವ್ಯಗಳು ಹುಟ್ಟುತ್ತವೆ. ಆ ಕ್ಷಣದಲ್ಲಿಯೇ ಘಟತ್ವಾದಿ ಧರ್ಮಗಳು ಅವುಗಳಲ್ಲಿ ಸೇರಿಕೊಳ್ಳುತ್ತವೆ. ಮುಂದಿನ ಕ್ಷಣದಲ್ಲಿಯೇ ರೂಪತ್ವಾದಿಗಳಿಗೆ ಆಶ್ರಯವನ್ನು ನೀಡುವುದಕ್ಕಾಗಿ ರೂಪಾದಿ ಗುಣಗಳು ಹುಟ್ಟುತ್ತವೆ. ಈ ಗುಣಗಳು ರೂಪತ್ವ, ರಸತ್ವ ಮುಂತಾದ ಜಾತಿಗಳಿಗೆ ಆಶ್ರಯವನ್ನು ನೀಡುತ್ತದೆ. ಘಟವು ಹುಟ್ಟುವ ಕ್ಷಣದಲ್ಲಿಯೇ ಘಟತ್ವವು ಅದರಲ್ಲಿ ಸೇರಿಕೊಳ್ಳುತ್ತದೆ. ಗುಣವು ಎರಡನೆಯ ಕ್ಷಣದಲ್ಲಿ ಸೇರುತ್ತದೆ. ಅನಂತರ ಯಾವಾಗಲಾದರೂ ಕಾರಣವು ಉಂಟಾದರೆ ಕ್ರಿಯೆ ಹುಟ್ಟುತ್ತದೆ. ಆದ್ದರಿಂದ 'ಉತ್ಪನ್ನಂ ದ್ರವ್ಯಂ ಕ್ಷಣಮಗುಣಮಕ್ರಿಯಾಕಂ ಚ ತಿಷ್ಠತಿ' ಎಂದು ತಾರ್ಕಿಕರ ಉದ್ಘೋಷ. ಯಾವುದಾದ ಮೇಲೆ ಯಾವುದು ಹುಟ್ಟ–ಬೇಕೆಂಬುದು ಕಾಲದ 'ಕ್ರಮ' ಎಂಬ ಕಾಲಶಕ್ತಿಯೇ ಮಾಡಿದ ವ್ಯವಸ್ಥೆ.

ಕಾಲಕೃತವಾದ ಉತ್ಪತ್ತಿಯ ವಿಧಾನವನ್ನು ಹೇಳಿದ್ದಾಯಿತು. ಉತ್ಪನ್ನವಾದ ಭಾವಪದಾರ್ಥಗಳು ಕೆಲವು ಕಾಲದವರೆಗೆ ಇರುತ್ತವೆ. ಈ 'ಅವಸ್ಥಿತಿ'ಯು ಹೇಗೆ ಎಂಬುದನ್ನೀಗ ತಿಳಿಸಲಾಗುತ್ತದೆ.

**ಆಶ್ರಯಾಣಾಂ ಚ ನಿತ್ಯತ್ವಮಾಶ್ರಿತಾನಾಂ ಚ ನಿತ್ಯತಾ ।**
**ತಾ ವ್ಯಕ್ತೀರನುಗೃಹ್ಣಾತಿ ಸ್ಥಿತಿಸ್ತೇನ ಪ್ರಕಲ್ಪತೇ ॥ ೨೧ ॥**

ವ್ಯಕ್ತಿಗಳಿಗೆ ಆಶ್ರಯಕಾರಣಗಳಾದ ಪರಮಾಣುಗಳ ನಿತ್ಯತ್ವವೂ ಆಶ್ರಿತ–ಗಳಾದ ಘಟತ್ವಾದಿ ಜಾತಿಗಳ ನಿತ್ಯತ್ವವೂ ವ್ಯಕ್ತಿಗಳಿಗೆ ಕೆಲವು ಕಾಲದವರೆಗೆ ಉಳಿಯಲು ಉಪಕರಿಸುತ್ತವೆ. ಆದ್ದರಿಂದ ಉತ್ಪನ್ನ ವ್ಯಕ್ತಿಗಳ 'ಅವಸ್ಥಿತಿ'ಯು ನಡೆಯುತ್ತದೆ.

**ವಿವರಣೆ** : ದ್ವ್ಯಣುಕ, ತ್ರ್ಯಣುಕ, ಚತುರಣುಕಗಳು ಪರಮಾಣುಗಳಿಂದ ನಿರ್ಮಿತವಾದವು. ಪರಮಾಣುಗಳು ಆಶ್ರಯಗಳಾದ ಕಾರಣಗಳು. ಇವು ನಿತ್ಯವಾದ್ದರಿಂದ ಕಾರ್ಯಗಳಾದ ದ್ವ್ಯಣುಕಾದಿಗಳೂ ಕೆಲವು ಕಾಲ ಉಳಿದು–ಕೊಂಡಿರುತ್ತವೆ. ಅವುಗಳ ಸ್ಥಿತಿಗೆ ಪರಮಾಣುಗಳು ಕಾರಣ. ಪರಮಾಣುಗಳು ನಿತ್ಯವಲ್ಲದೆ ಹೋಗಿದ್ದರೆ, ಅವು ನಾಶವಾದರೆ, ಕಾರ್ಯಗಳಾದ ದ್ವ್ಯಣುಕಾದಿಗಳೂ ನಾಶವಾಗಿ ಹೋದಾವು. ಆಗ ಸ್ಥಿತಿಯೇ ಇಲ್ಲದೆ ಹೋಗುತ್ತದೆ. ಇನ್ನು ಗಡಿಗೆಗೆ ಕಪಾಲವೂ ಬಟ್ಟೆಗೆ ನೂಲೂ ಕಾರಣ. ಈ ಕಾರಣಗಳು ನಿತ್ಯವಲ್ಲ. ಆಗ ಘಟಾದಿಗಳ ಸ್ಥಿತಿ ಹೇಗಾಗುತ್ತದೆ? ಎಂದರೆ ಅವುಗಳಲ್ಲಿರುವ ಘಟತ್ವ, ಪಟತ್ವಾದಿ ಜಾತಿಗಳು ನಿತ್ಯವಾದ್ದರಿಂದ ಅವುಗಳಿಗೆ ಆಶ್ರಯವಾದ ಕಾರಣ ಘಟಾದಿಗಳೂ ಕೆಲವು ಕಾಲ ಇರಬೇಕಾಗುತ್ತವೆ ಎಂದು ಆಶಯ. ಇದೆಲ್ಲವೂ ತಾರ್ಕಿಕರ ಯುಕ್ತಿವಾದ.

**ಅನಿತ್ಯಸ್ಯ ಯಥೋತ್ಪಾದೇ ಪಾರತಂತ್ರ್ಯಂ ತಥಾ ಸ್ಥಿತೌ ।**
**ವಿನಾಶಾಯೈವ ತತ್ ಸೃಷ್ಟಮಸ್ವಾಧೀನಸ್ಥಿತಿಂ ವಿದುಃ ॥ ೨೨ ॥**

ಅನಿತ್ಯವಾದ ಪದಾರ್ಥವು ಹುಟ್ಟುವಾಗ ಹೇಗೆ ಪರತಂತ್ರವೋ ಹಾಗೆ 'ಸ್ಥಿತಿ'ಯಲ್ಲಿಯೂ ಅದು ಪರಾಧೀನವೇ ಆಗಿರುತ್ತದೆ. ಹಾಗಿಲ್ಲದೆ ಹೋಗಿದ್ದರೆ ಅದು ನಾಶವಾಗುವುದಕ್ಕಾಗಿಯೇ ಹುಟ್ಟುತ್ತದೆ – ಎಂದು ಹೇಳಬೇಕಾದೀತು! ಆದ್ದರಿಂದ ಅನಿತ್ಯವಸ್ತುಗಳ 'ಅವಸ್ಥಿತಿ'ಯೂ ಪರಾಧೀನವಾಗಿದೆಯೆಂದು ತಾರ್ಕಿಕರು ತಿಳಿದಿದ್ದಾರೆ.

**ವಿವರಣೆ** : ಪದಾರ್ಥದ ಉತ್ಪತ್ತಿಗೆ ಸಮವಾಯಿ, ಅಸಮವಾಯಿ, ನಿಮಿತ್ತ

ಎಂಬ ಮೂರು ಕಾರಣಗಳು ಬೇಕು. ಆದ್ದರಿಂದ ವಸ್ತುವಿನ ಉತ್ಪತ್ತಿಯು ಕಾರಣಗಳಿಗೆ ಅಧೀನವಾದ್ದರಿಂದ ಪರಾಧೀನ. ಹಾಗೆಯೇ ಸ್ಥಿತಿಯೂ ಸಹ ಹಿಂದಿನ ಶ್ಲೋಕದಲ್ಲಿ ಹೇಳಿದಂತೆ ಪರಮಾಣುಗಳಿಗೆ ಅಥವಾ ಜಾತಿಗೆ ಅಧೀನ. ಉತ್ಪನ್ನವಾದ ವಸ್ತು ಕೆಲವು ಕಾಲದವರೆಗೆ ಸ್ಥಿತವಾಗದೆ ಹೋದರೆ ಉತ್ಪತ್ತಿಯೂ ನಾಶಕ್ಕಾಗಿಯೇ ಸರಿ! – ಎಂಬ ಪರಿಸ್ಥಿತಿಯೊದಗೀತು. ಪ್ರತಿಯೊಂದು ವಸ್ತು ಜನ್ಮ ತಳೆಯುವುದು ಏನಾದರೊಂದು ಉದ್ದೇಶವನ್ನು ಸಾಧಿಸುವುದಕ್ಕೆ ಆಗಿರುತ್ತದೆ. ಮಾವಿನಗಿಡದ ಉತ್ಪತ್ತಿ ಮಾವಿನಹಣ್ಣಿಗಾಗಿ. ಮಲ್ಲಿಗೆ ಬಳ್ಳಿಯ ಉತ್ಪತ್ತಿ ಮಲ್ಲಿಗೆ ಹೂವಿಗಾಗಿ. ಈ ಫಲವನ್ನು ನೀಡುವುದೇ ಉತ್ಪತ್ತಿಯ ಉದ್ದೇಶವಾಗಿರುತ್ತದೆ. ಇದನ್ನು 'ಅರ್ಥಕ್ರಿಯಾ' ಎಂದು ಶಾಸ್ತ್ರಕಾರರು ಕರೆಯುತ್ತಾರೆ. ಎಲ್ಲ ವಸ್ತುಗಳೂ ಹುಟ್ಟಿದೊಡನೆ ನಾಶವಾದರೆ ಅರ್ಥಕ್ರಿಯಾ ಎನ್ನುವುದೇ ತಪ್ಪಿಹೋಗುತ್ತದೆ. ಆದ್ದರಿಂದ ಪೂರ್ವೋಕ್ತರೀತಿಯಲ್ಲಿ ಜಗತ್ತಿನ ಸ್ಥಿತಿ ನಡೆಯುತ್ತದೆ ಎಂದು ವೈಶೇಷಿಕರ ಅಭಿಪ್ರಾಯವಾಗಿದೆ.

**ಸ್ಥಿತಃ ಸಂಸರ್ಗಿಭಿರ್ಭಾವೈಃ ಸ ಕ್ರಿಯಾಸ್ವನುಗೃಹ್ಯತೇ ।**
**ನೈಷಾಂ ಸತ್ತಾಮನುದ್ಗೃಹ್ಯ ವೃತ್ತಿರ್ಜನ್ಮವತಾಂ ಸ್ಮೃತಾ ॥ ೨೩ ॥**

ಉತ್ಪತ್ತಿಯಾದ ಮೇಲೆ 'ಸ್ಥಿತ'ವಾದ ಭಾವಪದಾರ್ಥವು 'ಅರ್ಥಕ್ರಿಯೆ'ಗಳನ್ನು ನಡೆಸುವುದಕ್ಕಾಗಿ ಸಹಕಾರಿಗಳಾದ ಪದಾರ್ಥಗಳಿಂದ ಉಪಕಾರ–ವನ್ನು ಪಡೆಯುತ್ತದೆ. ಜನ್ಯವಾದ ಯಾವ ವಸ್ತುವೂ ಈ ಸಹಕಾರಿ ಕಾರಣಗಳ ಅಸ್ತಿತ್ವವನ್ನು ಉಪಕಾರವನ್ನು ಸ್ವೀಕರಿಸದೆ ಅರ್ಥಕ್ರಿಯೆಗಳಲ್ಲಿ ತೊಡಗುವುದು ಎಲ್ಲಿಯೂ ಇಲ್ಲ.

**ವಿವರಣೆ** : ಉತ್ಪನ್ನವಾದ ವಸ್ತು ಉದ್ದಿಷ್ಟಫಲವನ್ನು ನೀಡುವುದು ಅರ್ಥಕ್ರಿಯೆ. ಈ ಅರ್ಥಕ್ರಿಯೆಯನ್ನು ನೀಡಬೇಕಾದರೆ ಸಹಕಾರಿ ಕಾರಣಗಳು ಬೇಕು. ಸಹಕಾರಿ ಕಾರಣಗಳಿಲ್ಲದೆ ಯಾವುದೂ ಕಾರ್ಯವನ್ನು ಮಾಡಲಾರದು. ಅನ್ನವನ್ನು ಮಾಡಲು ಕಟ್ಟಿಗೆ, ಬೆಂಕಿ, ನೀರು, ಪಾತ್ರೆ ಮೊದಲಾದ ಸಹಕಾರಿವಸ್ತುಗಳಿಲ್ಲದೆ ಪಾಚಕನೊಬ್ಬನೇ ಅಡುಗೆ ಮಾಡಲಾರ. ಮಾವಿನಗಿಡವು ಹುಟ್ಟಿದಮೇಲೆ ಬೆಳೆದು ಮರವಾಗಿ ಹಣ್ಣುಗಳನ್ನು ನೀಡುತ್ತದೆ. ಅದು ಬೆಳೆಯುವುದಕ್ಕೆ ಮಣ್ಣು, ಗೊಬ್ಬರ, ನೀರು, ಗಾಳಿ ಮತ್ತು ಗೊತ್ತಾದ ಕಾಲ ಇವು ಸಹಕಾರಿಗಳು. ಇವೆಲ್ಲದರ ಸಹಕಾರದಿಂದ ಮಾವಿನಮರವು ಅರ್ಥಕ್ರಿಯೆಯಲ್ಲಿ (ಹಣ್ಣುಬಿಡುವುದರಲ್ಲಿ) ತೊಡಗುತ್ತದೆ. ಅಲ್ಲಿಯವರೆಗೆ ಮಾವಿನಮರವು ತನ್ನಪಾಡಿಗೆ ಅವಸ್ಥಿತವಾಗಿ ಇರಬೇಕು.

ಈ ಶ್ಲೋಕವು ಕ್ಷಣಭಂಗವಾದಿಗಳಾದ ಬೌದ್ಧರಿಗೆ ಉತ್ತರವನ್ನು ಹೇಳುವುದಕ್ಕಾಗಿ ಹೊರಟಿದೆ. ಅವರ ಮತದಂತೆ ಯಾವ ವಸ್ತುವೂ ಸ್ಥಿರವಲ್ಲ. ಹುಟ್ಟಿದ ಮರುಕ್ಷಣದಲ್ಲಿಯೇ ಆ ವಸ್ತು ನಾಶವಾಗುತ್ತದೆ. ಆಮೇಲೆ ಇನ್ನೊಂದು ಹುಟ್ಟಿ ಸಾಯುತ್ತದೆ. ಯಾವುದೂ ಒಂದು ಕ್ಷಣದ ಮೇಲಿರುವುದಿಲ್ಲ. ಹೀಗೆ ಉತ್ಪತ್ತಿ ನಾಶಗಳು ಸತತವಾಗಿ ನಡೆಯುತ್ತಲೇ ಇವೆ. ಯಾವುದೂ ಸ್ವಲ್ಪಕಾಲವೂ ಸ್ಥಿತಿಯನ್ನು ಪಡೆಯುವುದೇ ಇಲ್ಲ. ಅರ್ಥಕ್ರಿಯಾಸಿದ್ಧಿಗಾಗಿ ಭಾವಪದಾರ್ಥವು ಸ್ಥಿತವಾಗುತ್ತದೆ–ಯೆಂಬುದನ್ನು ಯುಕ್ತಿಯಿಂದ ನಿರಾಕರಿಸಬಹುದು. ಹೇಗೆಂದರೆ – ಅರ್ಥಕ್ರಿಯೆಯು ಕೆಲವು ಕಾಲದಮೇಲೆ ಕ್ರಮವಾಗಿ ನಡೆಯುತ್ತದೆಯೆಂದರೆ ಅಷ್ಟು ಕಾಲ ಈ ವಸ್ತು ನಾಶವಾಗದಿರಲು ಕಾರಣವೇ ಇಲ್ಲ. ಅಲ್ಲಿಯವರೆಗೆ ಸ್ಥಿತಿ ಇರಲು ಕಾರಣವಿಲ್ಲ. ಹುಟ್ಟಿದ ಕೂಡಲೇ ಅರ್ಥಕ್ರಿಯೆ ನಡೆಯುತ್ತದೆ ಎನ್ನುವುದು ಅನುಭವಕ್ಕೆ ವಿರುದ್ಧ. ಮಾವಿನಗಿಡ ಹುಟ್ಟಿದೊಡನೆ ಫಲವನ್ನು ನೀಡುವುದಿಲ್ಲ. ಭತ್ತವು ಮೊಳೆಯುತ್ತಿದ್ದಂತೆ ಭತ್ತದ ತೆನೆಯನ್ನು ಹೊರಡಿಸುವುದಿಲ್ಲ. ಹೀಗೆ ಕ್ರಮವಾಗಲಿ, ಯೌಗಪದ್ಯವಾಗಲಿ ಇಲ್ಲವಾದ್ದರಿಂದ ವಸ್ತು ಕೆಲವು ಕಾಲ ಸ್ಥಿತವಾಗುತ್ತದೆ ಎನ್ನುವುದು ಯುಕ್ತಿಶೂನ್ಯ–ವಾದದ್ದು – ಎಂದು ಬೌದ್ಧರ ಮತವಿದೆ. ಇದಕ್ಕೆ ಉತ್ತರವೇನೆಂದರೆ ಅರ್ಥ–ಕ್ರಿಯೆಗೋಸ್ಕರವೇ ಹುಟ್ಟಿದ ವಸ್ತು ಕೆಲವು ಕಾಲದವರೆಗೆ ಸ್ಥಿತವಾಗಿರುತ್ತದೆ. ಅದು ಕ್ರಮವಾಗಿ ಕಾಲಾಂತರದಲ್ಲಿ ಫಲವನ್ನು ಕೊಡುತ್ತದೆ. ಅದಕ್ಕೆ ಫಲವನ್ನು ನೀಡಲು ಸಹಕಾರಿಗಳು ಬೇಕು. ಅದಕ್ಕಾಗಿ ಕಾಲಕ್ಷೇಪವಾಗುತ್ತದೆ. ಸಹಕಾರಿಗಳಿಲ್ಲದೆ ಯಾವ ಕಾರಣದಿಂದಲೂ ಫಲವು ಹುಟ್ಟುವುದಿಲ್ಲ. ಆದ್ದರಿಂದ ಅರ್ಥಕ್ರಿಯೆ ನಡೆಯುವವರೆಗೆ ಆ ವಸ್ತು ಸ್ಥಿತವಾಗಿರಲು ಕಾಲವು ಅನುಜ್ಞೆಯನ್ನು ನೀಡುತ್ತದೆ. 'ನಿನ್ನೆ ನೋಡಿದ ಗಡಿಗೆಯನ್ನೇ ಈ ದಿನ ನೋಡುತ್ತಿದ್ದೇನೆ' ಇತ್ಯಾದಿ ಅನುಭವಗಳಿಗೆ ವಿರುದ್ಧವಾದ್ದರಿಂದ ಕ್ಷಣಭಂಗವಾದವು ಯುಕ್ತವಲ್ಲ.

**ಜರಾಖ್ಯಾ ಕಾಲಶಕ್ತಿರ್ಯಾ ಶಕ್ತ್ಯಂತರವಿರೋಧಿನೀ ।**
**ಸಾ ಶಕ್ತಿಂ ಪ್ರತಿಬಧ್ನಾತಿ ಜಾಯಂತೇ ಚ ವಿರೋಧಿನಃ ॥ ೨೪ ॥**

ಜರಾ (ಮುಪ್ಪು) ಎಂಬುದು ಕಾಲದ ಒಂದು ಶಕ್ತಿ. ಅದು ಯೌವನ, ದೃಢತ್ವ–ಮುಂತಾದ ಶಕ್ತಿಗಳಿಗೆ ವಿರೋಧಿಯಾದದ್ದು. ಆ ಕಾಲಶಕ್ತಿಯೂ (ಪ್ರಾಣಿಗಳಲ್ಲಾಗಲಿ ಇತರ ಜಡವಸ್ತುಗಳಲ್ಲಾಗಲಿ) ಇರತಕ್ಕ ದೃಢತ್ವಾದಿ ಶಕ್ತಿಗಳನ್ನು ತಡೆದುಬಿಡುತ್ತದೆ. ಆಗ ವಿರೋಧಿಗಳಾದ ಬುದ್ಧಿಮಾಂದ್ಯ, ದೇಹಕ್ಷೀಣತೆ, ದೌರ್ಬಲ್ಯ, ಶೈಥಿಲ್ಯ ಮೊದಲಾದವು ಹುಟ್ಟಿಕೊಳ್ಳುತ್ತವೆ.

**ವಿವರಣೆ** : ಕಾಲಶಕ್ತಿಯು ನಿತ್ಯವಾದರೂ ಸಹಕಾರಿಯಿಲ್ಲದೆ ಕಾರ್ಯವನ್ನು ಮಾಡುವುದಿಲ್ಲ. ಪ್ರಾಣಿಗಳ ವಿಷಯದಲ್ಲಿ ಅವುಗಳ ಅದೃಷ್ಟವು ಸಹಕಾರಿ. ಇತರ ಜಡವಸ್ತುಗಳಿಗೆ ನಿಯತವಾದ ಅವಧಿಯೇ ಸಹಕಾರಿ. ಈ ಸಹಕಾರಿ ಕಾರಣವು ದೊರೆತೊಡನೆ ಕಾಲದ ಜರಾಶಕ್ತಿಯು ತನ್ನ ಕೆಲಸವನ್ನು ಆರಂಭಿಸುತ್ತದೆ. ಇದು ಲೋಕಾನುಭವ ಸಿದ್ಧವಾದದ್ದು.

**ಪ್ರಯೋಜಕಾಸ್ತು ಯೇ ಭಾವಾಃ ಸ್ಥಿತಿಭಾಗಸ್ಯ ಹೇತವಃ ।**
**ತಿರೋಭವಂತಿ ತೇ ಸರ್ವೇ ಯತ ಆತ್ಮಾ ಪ್ರಹೀಯತೇ ॥೨೫॥**

ಉತ್ಪತ್ತಿ ಸ್ಥಿತಿ ನಾಶಗಳಲ್ಲಿ ಸ್ಥಿತಿಯ ಅಂಶಕ್ಕೆ ಪ್ರವರ್ತಕಗಳಾದ ಸಹಕಾರಿ ಕಾರಣಗಳೆಲ್ಲವೂ ಜರಾಶಕ್ತಿಯು ಆಕ್ರಮಿಸಿದೊಡನೆ ಹೊರಟುಹೋಗುತ್ತವೆ. ಈ ಕಾರಣದಿಂದ ಭಾವಪದಾರ್ಥದ ಸ್ವರೂಪವು ಪ್ರಚ್ಯುತವಾಗುವುದು.

**ವಿವರಣೆ :** ಪೂರ್ವೋಕ್ತ ಸಹಕಾರಿ ಕಾರಣಗಳು ಬಹುಕಾಲದಿಂದ ಮಿತ್ರರಂತೆ ಜೊತೆಗಿದ್ದರೂ ಮುಪ್ಪು ಬಂದೊಡನೆ ಕೃತಘ್ನರಂತೆ ದೇಹವನ್ನು ಬಿಟ್ಟು ಹೊರಟುಹೋಗುತ್ತವೆ. ಪ್ರಾರಬ್ಧಕರ್ಮವು ಮುಗಿಯುತ್ತ ಬಂದಂತೆ ಮೊದಲಿದ್ದ ಬುದ್ಧಿಶಕ್ತಿ ದೇಹಶಕ್ತಿ ಮೊದಲಾದವು ಆಯಾ ವ್ಯಕ್ತಿಯನ್ನು ಒಂದೊಂದಾಗಿ ತ್ಯಜಿಸಿಬಿಡುತ್ತವೆ. ಜಡವಸ್ತುಗಳಲ್ಲಿ ಅವುಗಳ ದೃಢತ್ವ ಕಾರಣಗಳಾದ ಪೃಥ್ವೀ, ಜಲ, ಅಗ್ನಿ, ವಾಯುಗಳ ಅಂಶಗಳು ಆ ಜಡವಸ್ತುಗಳಿಂದ ನಿರ್ಗಮಿಸುತ್ತವೆ. ಯೌವನದ ಸ್ವರೂಪವು ಉಡುಗಿ ವಿನಾಶದ ಸಮಯವು ಪ್ರಾಪ್ತವಾಗುತ್ತದೆ. ಆತ್ಮಾ = ಸ್ವರೂಪ.

**ಯಥೈವಾದ್ಭುತಯಾ ವೃತ್ತ್ಯಾ ನಿಷ್ಕ್ರಮಂ ನಿರ್ನಿಬಂಧನಂ ।**
**ಅಪದಂ ಜಾಯತೇ ಸರ್ವಂ ತಥಾಸ್ಯಾತ್ಮಾ ಪ್ರಹೀಯತೇ ॥ ೨೬ ॥**

ಜನ್ಯವಸ್ತುವು ಅದ್ಭುತವಾದ ಮಾಯಾವ್ಯಾಪಾರದಿಂದ ಹುಟ್ಟುತ್ತದೆ. ಅದರ ಉತ್ಪತ್ತಿಯು ನಿರ್ನಿಬಂಧನಂ = ಕಾರಣಸಾಮಗ್ರಿ ಇಲ್ಲದೆಯೇ ಆದದ್ದು. ಆದ್ದರಿಂದ ನಿಷ್ಕ್ರಮಂ = ಮೊದಲು ಕಾರಣ ಅನಂತರ ಕಾರ್ಯ. ಎಂಬ ಕಾರ್ಯಕಾರಣಭಾವದ ಕ್ರಮವಿಲ್ಲದೆ ಆಗುತ್ತದೆ. ಆ ಜನ್ಯವಸ್ತು ಅಪದಂ = ಸತ್ ಅಥವಾ ಅಸತ್ ಎಂಬ ಪದಕ್ಕೆ ವಿಷಯವಾಗಿದೆ ಅನಿರ್ವಾಚ್ಯವಾಗಿರುತ್ತದೆ. ಹಾಗೆಯೇ ಜನ್ಯವಾದ ಸರ್ವವಸ್ತುವಿನ ಸ್ವರೂಪವೂ ನಾಶವಾಗಿಬಿಡುತ್ತದೆ.

**ವಿವರಣೆ** : ವಾಕ್ಯಪದೀಯವು ವಿವರ್ತವಾದವನ್ನು ಪುರಸ್ಕರಿಸಿದೆ.

ಆದ್ದರಿಂದಲೇ ಗ್ರಂಥಾರಂಭದಲ್ಲಿ ಬ್ರಹ್ಮಕಾಂಡದ ಮೊದಲನೆಯ ಶ್ಲೋಕದಲ್ಲಿಯೇ 'ವಿವರ್ತತೇಽರ್ಥಭಾವೇನ' ಎಂದು ವರ್ಣಿಸಿದ್ದಾರೆ. ಜಗತ್ತಿನಲ್ಲಿ ಕಾಣಿಸುವ ಸಕಲ ಪದಾರ್ಥಗಳ ಉತ್ಪತ್ತಿಗೆ ಲೌಕಿಕವಾದ ಯಾವ ಕಾರಣ ಸಾಮಗ್ರಿಯೂ ಇಲ್ಲ. ಹಾಗೆಯೇ ಇವುಗಳ ವಿನಾಶಕ್ಕೆ ಯಾವ ಕಾರಣ ಸಾಮಗ್ರಿಯೂ ಇಲ್ಲ. ಕಾಲದ ಶಕ್ತಿವಿಶೇಷಗಳಿಂದ ಭಾವಪದಾರ್ಥದ ಉತ್ಪತ್ತಿಸ್ಥಿತಿಗಳು ನಡೆಯುತ್ತವೆ. ಕಾಲದ ಜರಾಶಕ್ತಿಯಿಂದ ವಸ್ತುವು ಕ್ಷೀಣಿಸುತ್ತ ಹೋಗಿ ವಿನಾಶವನ್ನೈದುತ್ತದೆ. ಒಟ್ಟಿನಲ್ಲಿ ಕಾಲದ ಪ್ರತಿಬಂಧ–ಅನುಜ್ಞಾಶಕ್ತಿಗಳಿಂದ ಸೃಷ್ಟಿ ಸ್ಥಿತಿ ಲಯಗಳು ನಡೆಯುತ್ತವೆ–ಯೆಂದು ಅಭಿಪ್ರಾಯ.

ಇದರಿಂದ 'ಕಾಲ'ವೆಂಬ ಪದಾರ್ಥವಿದೆಯೆಂದು ನಿಶ್ಚಯಿಸಬಹುದು. ಕಾಲವಿದೆಯೆಂದು ನಿಶ್ಚಯಿಸಲು ಇನ್ನೂ ಒಂದು ಯುಕ್ತಿಯುಂಟು –

**ಕ್ರಿಯಯೋರಪವರ್ಗಿಣ್ಯೋರ್ನಾನಾರ್ಥಸಮವೇತಯೋಃ ।**
**ಸಂಬಂಧಿನಾ ವಿನೈಕೇನ ಪರಿಚ್ಛೇದಃ ಕಥಂ ಭವೇತ್ ॥ ೨೭ ॥**

ಬೇರೆಬೇರೆ ಪದಾರ್ಥಗಳಲ್ಲಿದ್ದು, ನಾಶವಾಗತಕ್ಕ ಎರಡು ಕ್ರಿಯೆಗಳಿಗೆ ಅನುಸ್ಯೂತವಾಗಿ ಸಂಬಂಧಿಸಿದ ಒಂದು ವಸ್ತುವಿಲ್ಲದೆ ಹೋದರೆ, ಆ ಕ್ರಿಯೆಗಳ ಪ್ರಮಾಣವೆಷ್ಟೆಂಬ ನಿಶ್ಚಯವು ಹೇಗೆ ಆದೀತು ?

ಅಪವರ್ಗ – ಧ್ವಂಸ, ನಾಶ, ಅಪವರ್ಗಿಣೀ – ನಾಶವಾಗುವ (ಕ್ರಿಯೆ)

**ವಿವರಣೆ** : ಕ್ರಿಯೆಯೆಂದರೆ ಅನೇಕ ವ್ಯಾಪಾರಗಳ ಸಮುದಾಯ. ಹುಡುಗನು ಶಾಲೆಗೆ ಹೋಗುತ್ತಾನೆ – ಎಂಬಲ್ಲಿ ಹೋಗುವ ಕ್ರಿಯೆಯಲ್ಲಿ ಅನೇಕ ವ್ಯಾಪಾರಗಳಿವೆ. ಆತನು ಕಾಲನ್ನೆತ್ತುವುದು, ಹೆಜ್ಜೆಯೂರುವುದು, ಇನ್ನೊಂದು ಕಾಲನ್ನೆತ್ತುವುದು, ಮತ್ತೆ ಹೆಜ್ಜೆಯೂರುವುದು – ಇವೆಲ್ಲವೂ ವ್ಯಾಪಾರಗಳು. ಇವುಗಳ ಸಮುದಾಯವೇ ಹೋಗುವ ಕ್ರಿಯೆ. ಹೀಗೆ ಎಲ್ಲ ಧಾತ್ವರ್ಥಕ್ರಿಯೆಗಳೂ ವ್ಯಾಪಾರ–ಸಮೂಹಗಳು. ಇವುಗಳಲ್ಲಿ ಒಂದೊಂದು ವ್ಯಾಪಾರವೂ ಕ್ಷಣಿಕವಾಗಿರುತ್ತದೆ. ಇನ್ನೊಂದು ಕ್ಷಣದಲ್ಲಿ ನಾಶವಾಗಿಬಿಡುತ್ತದೆ. ಆಮೇಲೆ ಇನ್ನೊಂದು ವ್ಯಾಪಾರ ಹುಟ್ಟಿ ನಾಶವಾಗುತ್ತದೆ. ಹೀಗೆ ಕ್ಷಣಿಕಗಳಾದ ವ್ಯಾಪಾರ ಸಮೂಹವಾದ ಕ್ರಿಯೆಯೂ ನಾಶವಾಗತಕ್ಕದ್ದೇ ಆಗಿದೆ. ಹುಡುಗನು ಬೇಗನೆ ಹೋದನು. ತಂದೆಯು ಮೆಲ್ಲಗೆ ಹೋದನು – ಎಂಬ ಉದಾಹರಣೆಗಳಲ್ಲಿ ಎರಡು ಹೋಗುವ ಕ್ರಿಯೆಗಳಿವೆ. ಎರಡೂ ನಾಶವಾಗತಕ್ಕವು. ಹೀಗಿರುವಾಗ ಒಂದನ್ನು ಬೇಗನೆ, ಇನ್ನೊಂದನ್ನು ಮೆಲ್ಲಗೆ ಎಂದು ವಿಭಾಗಿಸುವುದು ಹೇಗೆ? ಇವೆರಡನ್ನು ಅಳತೆಮಾಡತಕ್ಕ ಒಂದು

ವಸ್ತು ಇರಲೇ ಬೇಕು. ಅದು ಎರಡೂ ಕ್ರಿಯೆಗಳಿಗೆ ಸಂಬಂಧಿಸಿದ್ದಾದರೆ ಮಾತ್ರ ಸಾಧ್ಯವಾಗುತ್ತದೆ. ಆದ್ದರಿಂದ ಉಭಯ ಸಂಬಂಧಿಯಾಗಿ ಅಳತೆಮಾಡತಕ್ಕದ್ದು ಕಾಲವೇ ಹೊರತು ಇನ್ನೊಂದಲ್ಲ. ಸ್ವಲ್ಪ ಕ್ಷಣಗಳಿಗೆ ಸಂಬಂಧಿಸಿದ ಕ್ರಿಯೆಯನ್ನು 'ಬೇಗನೆ' ಎಂದೂ ಹೆಚ್ಚು ಕ್ಷಣಗಳಿಗೆ ಸಂಬಂಧಿಸಿದ ಕ್ರಿಯೆಯನ್ನು 'ಮೆಲ್ಲಗೆ' ಎಂದೂ ವಿಶೇಷಿಸುತ್ತೇವೆ. ಉಭಯ ಸಂಬಂಧಿಯಾದದ್ದು ಕಾಲ. ಭಿನ್ನ ವ್ಯಕ್ತಿಗಳಲ್ಲಿದ್ದು ನಾಶವಾಗತಕ್ಕ ಬೇರೆಬೇರೆ ಕ್ರಿಯೆಗಳೊಡನೆ ಸಂಬಂಧಿಸಿರುವುದು ಕಾಲವು ಮಾತ್ರ.

**ಯಥಾ ತುಲಾಯಾಂ ಹಸ್ತೇ ವಾ ನಾನಾದ್ರವ್ಯವ್ಯವಸ್ಥಿತಂ ।**
**ಗುರುತ್ವಂ ಪರಿಮೀಯೇತ ಕಾಲಾದೇವಂ ಕ್ರಿಯಾಗತಿಃ ॥ ೨೮ ॥**

ಬೇರೆಬೇರೆ ದ್ರವ್ಯಗಳಲ್ಲಿರುವ ಭಾರವು ತಕ್ಕಡಿಯಲ್ಲಿ ಅಥವಾ ಕೈಯಲ್ಲಿ ಎಷ್ಟೆಂದು ಹೇಗೆ ತಿಳಿಯಲ್ಪಡುವುದೋ ಹಾಗೆ ಕಾಲದಿಂದ ಕ್ರಿಯಾಸ್ವರೂಪವು ಯಾವ ಬಗೆಯದೆಂದು ನಿಶ್ಚಿತವಾಗುವುದು.

**ವಿವರಣೆ** : ಒಂದೇ ತಕ್ಕಡಿಯು ತೂಗಲು ಎರಡು ಪಾತ್ರೆಗಳನ್ನು ಹೊಂದಿರುತ್ತದೆ. ಒಂದರಲ್ಲಿ ಚಿನ್ನ, ಬೆಳ್ಳಿ ಮುಂತಾದ ವಸ್ತುವನ್ನಿಟ್ಟು ಇನ್ನೊಂದರಲ್ಲಿ ತೂಕದ ಕಲ್ಲನ್ನು ಇಟ್ಟು ತೂಗಿದರೆ, ತಕ್ಕಡಿಯಿಂದ ವಸ್ತುವಿನ ಭಾರವೆಷ್ಟೆಂಬುದು ಗೊತ್ತಾಗುತ್ತದೆ. ಹಾಗೆ ಒಂದೇ ಕೈಯಲ್ಲಿ ಒಂದಾದ ಮೇಲೆ ಇನ್ನೊಂದರಂತೆ ವಸ್ತುಗಳನ್ನಿಟ್ಟು ಕೈಯಾಡಿಸಿದರೆ ವಸ್ತುವಿನ ಭಾರವನ್ನು ನಿಶ್ಚಯಿಸುತ್ತದೆಯೋ ಹಾಗೆ ಕಾಲವು ಕ್ರಿಯೆಯ ಚಿರ–ಅಚಿರ ಇತ್ಯಾದಿ ಸ್ವರೂಪವನ್ನು ನಿರ್ಣಯಿಸುತ್ತದೆ. ಅದರಿಂದ ನಿಮಿಷ, ಮುಹೂರ್ತ ಮುಂತಾದ ವ್ಯವಹಾರಗಳು ಸಿದ್ಧಿಸುತ್ತವೆ.

**ಜಹಾತಿ ಸಹವೃತ್ತಾಶ್ಚ ಕ್ರಿಯಾಃ ಸ ಸಮವಸ್ಥಿತಃ ।**
**ವ್ರೀಹಿರ್ಯಥೋದಕಂ ತೇನ ಹಾಯನಾಖ್ಯಾಂ ಪ್ರಪದ್ಯತೇ ॥ ೨೯ ॥**

ಕಾಲವು ತಾನು ವ್ಯವಸ್ಥಿತವಾಗಿ ಇದ್ದುಕೊಂಡು ಸಹಚಾರಿಗಳಾದ ನಾನಾ ವಿಧ ಕ್ರಿಯೆಗಳನ್ನು ತ್ಯಜಿಸಿಬಿಡುತ್ತದೆ. ಬತ್ತದ ಸಸಿಯು ಜೊತೆಗಿರುವ ನೀರನ್ನು ತ್ಯಜಿಸಿ ಮೇಲೇಳುವಂತೆ ಕ್ರಿಯೆಗಳನ್ನು ಕಾಲವು ತ್ಯಜಿಸುತ್ತದೆಯಾದ್ದರಿಂದ ಬತ್ತದ ಸಸಿಯಂತೆ ಕಾಲವು ಹಾಯನ (ಸಂವತ್ಸರ) ಎಂಬ ಹೆಸರನ್ನು ಪಡೆಯುತ್ತದೆ.

**ವಿವರಣೆ** : ಕಾಲವು ಒಂದೇ ಇದೆ, ಅನೇಕ ಕಾಲಗಳಿಲ್ಲ. ಕಾಲದಲ್ಲಿ ನಾನಾ

ಕ್ರಿಯೆಗಳು ಹುಟ್ಟಿ ನಾಶವಾದರೂ ಕಾಲವು ಮುಂದುವರಿಯುತ್ತದೆ. ಉದಾಹರಣೆಗೆ ಸಂವತ್ಸರ. ಒಂದು ಸಂವತ್ಸರದಲ್ಲಿ ಲೆಕ್ಕವಿಲ್ಲದಷ್ಟು ಕ್ರಿಯೆಗಳು ಭಾವಪದಾರ್ಥಗಳಲ್ಲಿ ಹುಟ್ಟಿ ನಶಿಸುತ್ತವೆ, ಸಂವತ್ಸರವು ಒಂದೇ. ಗದ್ದೆಯಲ್ಲಿ ಬತ್ತದ ಸಸಿಯು ಬೆಳೆಯುವಾಗ ನೀರು ತುಂಬಿರುತ್ತದೆ. ಬತ್ತವು ಬೆಳೆದು ನೀರಿನ ಮಟ್ಟಕ್ಕಿಂತ ಮೇಲೆದ್ದು ಕಡೆಗೆ ನೀರನ್ನೇ ತ್ಯಜಿಸಿ ಬಿಡುತ್ತದೆ. ಕಾಲವು ಕ್ರಿಯೆಗಳನ್ನು ಹೀಗೆಯೇ ತ್ಯಜಿಸುವುದರಿಂದ ಇವೆರಡಕ್ಕೂ 'ಹಾಯನ' ಎಂದು ಹೆಸರಿದೆ.

'ಹಶ್ಚ ವ್ರೀಹಿಕಾಲಯೋಃ' ಎಂದು ಪಾಣಿನಿಸೂತ್ರ (೩-೨-೧೪೮) ತ್ಯಾಗಾರ್ಥಕವಾದ 'ಹಾ' ಧಾತುವಿಗೆ ಅನ (ಣ್ಯುಟ್) ಪ್ರತ್ಯಯವು ಬಂದು ಹಾಯನ ಶಬ್ದವಾಗಿದೆ. ವ್ರೀಹಿ = ಬತ್ತ. ಕಾಲ = ಕಾಲವಿಶೇಷ ಸಂವತ್ಸರ. ಬತ್ತ ಎಂಬ ಅರ್ಥದಲ್ಲಿ 'ಜಹಾತಿ ಜಲಂ' ಎಂದೂ ಸಂವತ್ಸರ ಎಂಬ ಅರ್ಥದಲ್ಲಿ ಜಹಾತಿ ಕ್ರಿಯಾಃ ಎಂದೂ, ಹಾಯನ ಶಬ್ದದ ವ್ಯುತ್ಪತ್ತಿ. ಹಾಧಾತುವಿಗೂ ಅನಪ್ರತ್ಯಯಕ್ಕೂ ನಡುವೆ ಯಕಾರಾಗಮ ಬಂದಿದೆ.

**ಪ್ರತಿಬಂಧಾಭ್ಯನುಜ್ಞಾಭ್ಯಾಂ ವೃತ್ತಿರ್ಯಾ ತಸ್ಯ ಶಾಶ್ವತೀ ।**
**ತಯಾ ವಿಭಜ್ಯಮಾನೋಽಸೌ ಭಜತೇ ಕ್ರಮರೂಪತಾಮ್ ॥ ೩೦ ॥**

ಸಾಧನದ ಶಕ್ತಿಗಳು ಕ್ರಿಯೆಯನ್ನು ನಡೆಸದಂತೆ ಅದನ್ನು ಪ್ರತಿಬಂಧಿಸು-ವುದು ಅವು ಕ್ರಿಯೆಯನ್ನು ನಡೆಸುವಂತೆ ಅನುಜ್ಞೆಯನ್ನು ಕೊಡುವುದು. ಇವೆರಡನ್ನು ನಡೆಸುವುದು ಕಾಲದ ನಿತ್ಯವಾದ ಪ್ರವೃತ್ತಿಯಾಗಿರುತ್ತದೆ. ಆ ಪ್ರವೃತ್ತಿಯಿಂದ ವಿಭಕ್ತವಾಗುವ ಕಾಲವು ಒಂದೇ ಆಗಿದ್ದರೂ ಕ್ರಮವಿಶಿಷ್ಟ ಸ್ವರೂಪವನ್ನು ಪಡೆದುಕೊಳ್ಳುತ್ತದೆ.

**ವಿವರಣೆ** : ಪ್ರತಿಬಂಧ, ಅನುಜ್ಞೆಗಳು ಕಾಲದ ಕಾರ್ಯಗಳೆಂದು ಹಿಂದೆ ತಿಳಿಸಿದೆ. ಇವುಗಳಿಂದ ಜನ್ಯವಸ್ತುಗಳಲ್ಲಿ ಕ್ರಿಯೆಗಳು ಕ್ರಮವಾಗಿ ಒಂದಾದಮೇಲೆ ಇನ್ನೊಂದರಂತೆ ಹುಟ್ಟುತ್ತದೆ. ಬೀಜವು ಮೊಳಕೆಯಾಗಿ ಗಿಡವಾಗಿ ಬೆಳೆದು ಹೂವನ್ನು ಕೊಡುತ್ತದೆ. ಒಂದೇ ಸಲಕ್ಕೆ ಬೆಳೆದು ಹೂವನ್ನು ಕೊಡುವುದಿಲ್ಲ. ಮಗುವಿನಲ್ಲಿ ಶಿಶುತ್ವ-ಯೌವನ-ಮುಪ್ಪು ಇವು ಕ್ರಮವಾಗಿ ಬರುತ್ತವೆ. ಮಾವಿನ ಹೂ ಮಿಡಿಯಾಗಿ ಕಾಯಾಗಿ ಬಲಿತು ಹಣ್ಣಾಗಬೇಕು. ಹಣ್ಣಾಗುವ ಶಕ್ತಿ ಮಾವಿನ ಹೂವಿನಲ್ಲಿದ್ದರೂ ಕಾಲವು ಕ್ರಮಪೂರ್ವಕವಾಗಿ ಆ ಕ್ರಿಯೆಗಳು ನಡೆಯುವಂತೆ ನಿಯಂತ್ರಿಸುತ್ತದೆ. ಕ್ರಿಯಾಗತವಾದ ಆ ಕ್ರಮವನ್ನು ನಾವು ಕಾಲದಲ್ಲಿ ಆರೋಪಿಸಿ ಇದು ಹೂ ಬಿಡುವ ಕಾಲ, ಅದು ಕಾಯಿಯಾಗುವ ಕಾಲ, ಇದು ಹಣ್ಣಾಗುವ ಕಾಲ

ಎಂದು ಕಾಲವನ್ನೇ ವಿಭಾಗಿಸಿ ಬಿಡುತ್ತೇವೆ. ಕಾಲದಲ್ಲಿಯೇ ಕ್ರಮವಿದೆಯೆಂದು ತಿಳಿಯುತ್ತೇವೆ.

**ಕರ್ತೃಭೇದಾತ್ ತದರ್ಥೇಷು ಪ್ರಕರ್ಷಾಪಚಯೌ ಗತಃ ।**
**ಸಮತ್ವಂ ವಿಷಮತ್ವಂ ವಾ ಸ ಏಕಃ ಪ್ರತಿಪದ್ಯತೇ ॥ ೩೧ ॥**

ಅನುಷ್ಠಾತೃಗಳಾದ ಕರ್ತೃಗಳು ಬೇರೆಬೇರೆ ಇರುವುದರಿಂದ ಅವರು ಆಚರಿಸುವ ಸತ್ಕರ್ಮದುಷ್ಕರ್ಮಗಳ ವಿಷಯದಲ್ಲಿ ಪ್ರಕರ್ಷವನ್ನೋ ಅಪಕರ್ಷವನ್ನೋ ಕಾಲವು ಪಡೆದುಕೊಳ್ಳುತ್ತದೆ. ಆಗ ಕಾಲವು ಒಂದೇ ಆಗಿದ್ದರೂ ಪ್ರಶಂಸೆಯನ್ನೋ ನಿಂದೆಯನ್ನೋ ಪಡೆಯುತ್ತದೆ.

**ವಿವರಣೆ** : ಕೃತಯುಗವನ್ನು ಶ್ರೇಷ್ಠವಾದ ಕಾಲವೆಂದು ಜನರು ಹೊಗಳುತ್ತಾರೆ. ಏಕೆಂದರೆ ಆ ಕಾಲದ ಜನರು ಸತ್ಕರ್ಮಗಳನ್ನೇ ಹೆಚ್ಚಾಗಿ ಆಚರಿಸುತ್ತಿದ್ದರು. ಸಜ್ಜನರ ಸಂಖ್ಯೆ ಅಧಿಕವಾಗಿತ್ತು. ಅವರಿಗೆ ಸಲ್ಲುವ ಪ್ರಕರ್ಷವನ್ನು ಕಾಲದಲ್ಲಿ ಆರೋಪಿಸಿ ಉತ್ತಮವಾದ ಯುಗ ಎಂದು ಕೃತಯುಗವನ್ನು ಹೊಗಳುತ್ತಾರೆ. ಕಲಿಯುಗದಲ್ಲಿ ದುಷ್ಕರ್ಮಗಳನ್ನಾಚರಿಸತಕ್ಕವರೇ ಅಧಿಕ. ಜನರಿಗೆ ಪ್ರಾಪ್ತವಾದ ನಿಂದೆಯನ್ನು ಕಾಲದಲ್ಲಿ ಆರೋಪಿಸಿ ಇದು 'ಕೆಟ್ಟಕಾಲ' ಎಂದು ಕಲಿಯುಗವನ್ನು ನಿಂದಿಸುತ್ತಾರೆ. ಹೀಗೆ ಸದಾಚಾರ–ದುರಾಚಾರಗಳ ಆಧಿಕ್ಯವನ್ನನುಸರಿಸಿ ಕೃತಯುಗ, ತ್ರೇತಾಯುಗ, ದ್ವಾಪರಯುಗ, ಕಲಿಯುಗ ಎಂದು ಅಖಂಡವಾದ ಕಾಲವನ್ನು ವಿಂಗಡಿಸುತ್ತೇವೆ.

**ಕ್ರಿಯಾಭೇದಾದ್ ಯಥೈಕಸ್ಮಿನ್ ತಕ್ಷಾದ್ಯಾಖ್ಯಾ ಪ್ರವರ್ತತೇ ।**
**ಕ್ರಿಯಾಭೇದಾತ್ ತಥೈಕಸ್ಮಿನ್ ಋತ್ವಾದ್ಯಾಖ್ಯೋಪಜಾಯತೇ ॥ ೩೨ ॥**

ಒಬ್ಬ ಮನುಷ್ಯನಲ್ಲಿ ಅವನು ಮಾಡುವ ಬೇರೆ ಬೇರೆ ಕ್ರಿಯೆಗಳಿಂದ ಬಡಗಿ ಮುಂತಾದ ಹೆಸರು ಹೇಗೆ ಪ್ರವೃತ್ತವಾಗುವುದೋ ಹಾಗೆಯೇ ಒಂದೇ ಆಗಿರುವ ಕಾಲದಲ್ಲಿ ಹೂಬಿಡುವುದು, ಮಳೆಸುರಿಸುವುದು ಮುಂತಾದ ವಿಭಿನ್ನಕ್ರಿಯೆಗಳಿಂದ ವಸಂತಋತು ಮುಂತಾದ ಹೆಸರುಗಳು ಪ್ರವೃತ್ತ–ವಾಗುತ್ತವೆ.

**ವಿವರಣೆ** : ಚೈತ್ರ ಎಂಬ ಒಬ್ಬನು ಮರಕೆತ್ತುವ ಕೆಲಸವನ್ನು ಮಾಡುತ್ತಿದ್ದರೆ ಬಡಗಿಯೆಂದೂ ಕಬ್ಬಿಣವನ್ನು ಬಡಿಯುತ್ತಿದ್ದರೆ ಕಮ್ಮಾರನೆಂದೂ ಗಡಿಗೆ ಮಾಡಿದರೆ ಕುಂಬಾರನೆಂದೂ ಒಡವೆಗಳನ್ನು ಮಾಡಿದರೆ ಅಕ್ಕಸಾಲಿಗನೆಂದೂ ಬೇರೆಬೇರೆ ಹೆಸರುಗಳನ್ನು ಪಡೆಯುತ್ತಾನೆ. ಹಾಗೆಯೇ ಮಾಲತೀ ಮುಂತಾದ ಹೂಗಳು

ಬಿಡುತ್ತಿರುವಾಗ ವಸಂತಋತುವೆಂದೂ ಬಿಸಿಲು ತೀವ್ರವಾಗಿದ್ದಾಗ ಗ್ರೀಷ್ಮಋತು–ವೆಂದೂ ಮಳೆ ಸುರಿಯುತ್ತಿದ್ದಾಗ ವರ್ಷರ್ತುವೆಂದೂ ಕಾಲಕ್ಕೆ ಬೇರೆಬೇರೆ ಹೆಸರುಗಳು ಬರುತ್ತವೆ. ಚಂದ್ರನು ವೃದ್ಧಿ ಹೊಂದುತ್ತಿರುವಾಗ ಶುಕ್ಲಪಕ್ಷವೆಂದೂ ಅವನು ಕ್ಷೀಣಿಸುತ್ತಿರುವಾಗ ಕೃಷ್ಣಪಕ್ಷವೆಂದೂ ಹೇಳುತ್ತೇವೆ. ಹಗಲು, ರಾತ್ರಿ ಮುಂತಾದ ವಿಭಾಗವೆಲ್ಲವೂ ಬೇರೆಬೇರೆ ಕ್ರಿಯೆಗಳ ಉಪಾಧಿಯಿಂದ ಆದವು. ಕಾಲಭೇದಕ್ಕೆ ಕ್ರಿಯೆಯು ನಿಮಿತ್ತವಾಗುತ್ತದೆ.

**ಆರಂಭಶ್ಚ ಕ್ರಿಯಾ ಚೈವ ನಿಷ್ಠಾಚೇತ್ಯಭಿಧೀಯತೇ ।**
**ಧರ್ಮಾಂತರಾಣಾಮಧ್ಯಾಸಭೇದಾತ್ ಸದಸದಾತ್ಮನಃ ॥ ೩೩ ॥**

ಸದಸದ್ರೂಪವಾದ ಕಾರ್ಯವಸ್ತುವಿಗೆ ಆರಂಭ, ಕ್ರಿಯಾ, ನಿಷ್ಠಾ ಎಂಬ ಮೂರು ಧರ್ಮಗಳಿರುತ್ತವೆ. ಇವು ಘಟತ್ವ, ಪಟತ್ವ – ಮುಂತಾದ ನಿತ್ಯಧರ್ಮಗಳಿಗಿಂತ ಭಿನ್ನವಾದವು. ಈ ವಸ್ತುಧರ್ಮಗಳನ್ನು ಕಾಲದಲ್ಲಿ ಅಧ್ಯಾರೋಪಮಾಡಿ ಆರಂಭಕಾಲ, ಕ್ರಿಯಾಕಾಲ, ನಿಷ್ಠಾಕಾಲ – ಎಂಬ ಮೂರು ಹೆಸರುಗಳಿಂದ ಕಾಲವು ಕರೆಯಲ್ಪಡುತ್ತದೆ.

**ವಿವರಣೆ** – ಪ್ರತಿಯೊಂದು ಜನ್ಯಪದಾರ್ಥವೂ ಎರಡು ಬಗೆಯಾಗಿರುತ್ತದೆ. ಅದು ಹುಟ್ಟುವುದಕ್ಕೆ ಮೊದಲು ಅಸತ್, ಹುಟ್ಟಿದಮೇಲೆ ಸತ್ – ಎನ್ನಿಸುತ್ತದೆ. 'ಉತ್ಪತ್ತೇಃ ಪ್ರಾಕ್ ಪದಾರ್ಥೋಽಸದಾತ್ಮಾ, ಪಶ್ಚಾತ್ತು ಸದಾತ್ಮಾ' ಎಂದು ನ್ಯಾಯ ಶಾಸ್ತ್ರಕಾರರಾದ ಗೌತಮರ ಅಭಿಪ್ರಾಯ. ವಸ್ತುವಿನ ನಿರ್ಮಾಣಕ್ಕೆ ಬೇಕಾದ ಸಾಮಗ್ರಿಗಳನ್ನು ಅಣಿಮಾಡಿಕೊಂಡು ಆರಂಭಿಸುವುದು ವಸ್ತುವಿನ ಆರಂಭ. ಅದನ್ನು ಮಾಡುತ್ತಿರುವುದು ಕ್ರಿಯಾ = ವಸ್ತುವಿನ ನಿರ್ಮಾಣ ಸ್ಥಿತಿ. ಅದು ಸಿದ್ಧವಾದ ಮೇಲೆ ನಿಷ್ಠಾ = ನಿರ್ಮಿತವಾದ ಸ್ಥಿತಿ. ಈ ವಸ್ತುಧರ್ಮಗಳನ್ನು ಕಾಲದಲ್ಲಿ ಅಧ್ಯಾರೋಪಿಸಿ, ಕ್ರಮವಾಗಿ ಆರಂಭಕಾಲ, ಕ್ರಿಯಾಕಾಲ, ನಿಷ್ಠಾಕಾಲ ಎಂದು ಕಾಲದಲ್ಲಿ ಮೂರು ಭೇದಗಳಾಗಿಬಿಡುತ್ತವೆ. ವಸ್ತುಧರ್ಮವನ್ನು ಕಾಲದಲ್ಲಿ ಹೇರಿ ಈ ರೀತಿ ವ್ಯವಹರಿಸುತ್ತೇವೆ. ನಿಷ್ಠಾ ನಿಶ್ಚಿತವಾದ ಸ್ಥಿತಿ. ವಸ್ತುವು ನಾಶವಾದ ಮೇಲೆ ವಿನಾಶಕಾಲ ಎಂಬ ಇನ್ನೊಂದು ಕಾಲಭೇದವನ್ನು ಹೇಳಬಹುದಲ್ಲವೆ? ಇಲ್ಲ; ವಿನಾಶವೆಂದರೆ ಅಭಾವ. ಅದು ಭಾವವಸ್ತುವಿನ ಧರ್ಮವಾಗುವುದಿಲ್ಲ. 'ವಿನಾಶಕಾಲೇ ವಿಪರೀತಬುದ್ಧಿಃ' ಎಂಬಲ್ಲಿ ವಿನಾಶಕಾಲವು ಸಮೀಪಿಸಿದಾಗ ಎಂದರ್ಥ. ಅದು ನಿಷ್ಠಾಕಾಲವೇ ಆಗಿರುತ್ತದೆ. ವಸ್ತುವು ನಾಶವಾದ ಮೇಲೆ ವಿನಷ್ಟಕಾಲ ಎಂದು ಹೇಳುವುದುಂಟು. ಆಗ ವಿನಷ್ಟವಾದ ವಸ್ತು ಬೌದ್ಧವಸ್ತು. ಅದರ ಕಾಲ ನಿಷ್ಠಾಕಾಲವೇ ಆಗುತ್ತದೆ.

ವಸ್ತುವಿನ ಆರಂಭ, ಕ್ರಿಯಾ, ನಿಷ್ಠಾ ಇವು ಆಯಾ ವಸ್ತುವಿನ ಅವಯವಗಳಲ್ಲಿ ಇರತಕ್ಕ ಕ್ರಿಯೆಗಳು, ಸಿದ್ಧವಾದ ವಸ್ತುವಿನಲ್ಲಲ್ಲ. ಅವಯವ ಕ್ರಿಯೆಯನ್ನು ವಸ್ತುವಿನಲ್ಲಿಯೂ ಕಾಲದಲ್ಲಿಯೂ ಆರೋಪಿಸಿಕೊಂಡು ವ್ಯವಹರಿಸುತ್ತೇವೆ. ಗೃಹಾರಂಭವೆಂದರೆ ಗೃಹದ ಅವಯವಕ್ರಿಯೆಯ ಆರಂಭ. ಅದನ್ನೇ ಗೃಹಾರಂಭಕಾಲವೆಂದೂ ಹೇಳುತ್ತೇವೆ.

**ಟಿಪ್ಪಣಿ** : ಆರಂಭ ಅವಯವಕ್ರಿಯೆಯ ಉತ್ಪತ್ತಿಕಾಲ, ಕ್ರಿಯಾ = ಕ್ರಿಯೆ ನಡೆಯುವ ವರ್ತಮಾನಕಾಲ, ನಿಷ್ಠಾ = ಕ್ರಿಯೆಯ ಭೂತಕಾಲ – ಎಂದು ವ್ಯಾಖ್ಯಾನಿಸುವುದು ಯುಕ್ತ. ಭೂತಕಾಲದಲ್ಲಿ ವಿಹಿತವಾದ ಕ್ತ ಕ್ತವತು ಪ್ರತ್ಯಯಗಳಿಗೆ ನಿಷ್ಠಾ ಸಂಜ್ಞೆ ಇದೆ ಎಂಬುದಿಲ್ಲಿ ಸ್ಮರಣೀಯ. ನಿಷ್ಠಾ ಎಂದರೆ ನಾಶವೆಂದರ್ಥ. 'ನಿಷ್ಠಾ ನಿಷ್ಪತ್ತಿನಾಶಾಂತಾಃ' – ಅಮರ.

**ಯಾವಾಂಶ್ಚ ದ್ವ್ಯಣುಕಾದೀನಾಂ ತಾವಾನ್ ಹಿಮವತೋಽಪ್ಯಸೌ ।**
**ನ ಹ್ಯಾತ್ಮಾ ಕಸ್ಯಚಿದ್ ಭೇತ್ತುಂ ಪ್ರಚೇತುಂ ವಾಪಿ ಶಕ್ಯತೇ ॥ ೩೪ ॥**

ಆರಂಭಕಾಲವು ದ್ವ್ಯಣುಕಕ್ಕೆ ಎಷ್ಟು ಪರಿಮಾಣದಲ್ಲಿರುವುದೋ ಅಷ್ಟೇ ಪರಿಮಾಣದಲ್ಲಿ ಹಿಮಾಲಯಪರ್ವತಕ್ಕೂ ಆಗಿರುತ್ತದೆ. ಏಕೆಂದರೆ ಯಾವ ಅವಯವಿಯ ಸ್ವರೂಪವೂ ಇನ್ನೊಂದು ಅವಯವಿಗಿಂತ ಚಿಕ್ಕದೆಂದು ವಿಶೇಷಿಸುವುದಕ್ಕಾಗಲಿ ದೊಡ್ಡದೆಂದು ವಿಶೇಷಿಸುವುದಕ್ಕಾಗಲಿ ಶಕ್ಯವಿಲ್ಲ.

**ವಿವರಣೆ** : ಯಾವುದೇ ಜನ್ಯ ಪದಾರ್ಥದ ಆರಂಭಾದಿಕ್ರಿಯೆಗಳು ಅದರ ಅವಯವಗಳಲ್ಲಿ ಆಗುತ್ತವೆಯೇ ಹೊರತು ಅವಯವಿಯಾದ ಘಟ ಪಟಾದಿ ಪದಾರ್ಥದಲ್ಲಿ ಆಗುವುದಿಲ್ಲ. ಉದಾಹರಣೆಗೆ, ವಸ್ತ್ರದ ನಿರ್ಮಾಣವಾಗುವುದು ಅದರ ಅವಯವಗಳಾದ ನೂಲುಗಳ ಕ್ರಮಬದ್ಧವಾದ ಜೋಡಣೆಯಿಂದ. ಜೋಡಿಸಿಕೊಳ್ಳುವ ಕ್ರಿಯೆ ನೂಲುಗಳಲ್ಲಿರುತ್ತದೆ. ವಸ್ತುವಾದ ಮೇಲೆ ಅದರ ನಿರ್ಮಾಣಕ್ಕಾಗಿ ವಸ್ತ್ರದಲ್ಲಿ ಯಾವ ಕ್ರಿಯೆಯೂ ಹುಟ್ಟುವುದಿಲ್ಲ. ಬೆಟ್ಟದ ನಿರ್ಮಾಣವಾಗಬೇಕಾದರೆ ಅದರ ಅವಯವಗಳಾದ ಮಣ್ಣು ಕಲ್ಲುಗಳು ಕ್ರಮವಾಗಿ ಜೋಡಿಸಿಕೊಳ್ಳಬೇಕು. ಅವುಗಳು ಒಂದೊಂದಾಗಿ ಜೋಡಿಸಿಕೊಳ್ಳಬೇಕು. ಒಂದೊಂದು ಜೋಡಣೆಗೆ ಎಷ್ಟು ಕಾಲವೋ ಅಷ್ಟೇ ಕಾಲ ನೂಲುಗಳ ಜೋಡಣೆಗೂ ಆಗಿರುತ್ತದೆ. ಆದ್ದರಿಂದ ಎರಡು ಅಣುಗಳು ಕೂಡುವುದಕ್ಕೆ ಎಷ್ಟು ಕಾಲವೋ ಅಷ್ಟೇ ಕಾಲ ಹಿಮಾಲಯ ಪರ್ವತದ ಅವಯವಗಳಾದ ಅಣುಗಳ ಜೋಡಣೆಯಲ್ಲಿಯೂ ಇರುತ್ತದೆ. ಏವಂಚ ಜನ್ಯ ಪದಾರ್ಥದ ಅಳತೆ ಚಿಕ್ಕದೂ

ದೊಡ್ಡದೂ ಆಗಿ ಕಾಣುವುದು ಅವಯವಗಳ ಸಂಖ್ಯೆಯನ್ನು ಅವಲಂಬಿಸಿದೆ. ಅವಯವಿಯಾದ ವಸ್ತುವಿನಲ್ಲಿ ಸ್ವ ನಿರ್ಮಾಣ ಕ್ರಿಯೆ ಇಲ್ಲವಾದ್ದರಿಂದ ಚಿಕ್ಕದು ದೊಡ್ಡದು ಎಂಬ ಪರಿಮಾಣವು ಅವಯವಗಳಿಗೆ ಸೇರಿದ್ದು, ಅವಯವಿಗಲ್ಲ. ಈ ಪರಿಮಾಣವನ್ನು ಅವಯವಿಯಲ್ಲಿ ಆರೋಪಿಸಿ ದ್ವ್ಯಣುಕ ಚಿಕ್ಕದು, ಹಿಮಾಲಯ–ಪರ್ವತ ಬಹುದೊಡ್ಡದು ಎಂದು ಹೇಳುತ್ತೇವೆ.

**ಅನ್ಯೈಸ್ತು ಭಾವೈರನ್ಯೇಷಾಂ ಪ್ರಚಯಃ ಪರಿಕಲ್ಪ್ಯತೇ ।**
**ಶನೈರಿದಮಿದಂ ಕ್ಷಿಪ್ರಮಿತಿ ತೇನ ಪ್ರತೀಯತೇ ॥ ೩೫ ॥**

ಅವಯವಿಗಳಾದ ದ್ರವ್ಯಗಳಿಗಿಂತ ವ್ಯತಿರಿಕ್ತವಾದ ಅವಯವಗಳಿಂದ (ಅವುಗಳ ಸಂಖ್ಯಾನುಗುಣವಾಗಿ) ದೊಡ್ಡದು ಚಿಕ್ಕದು ಎಂಬ ಪರಿಮಾಣವು ಅವಯವಿಗಳಲ್ಲಿ ಆರೋಪಿಸಲ್ಪಡುತ್ತದೆ. ಆದ್ದರಿಂದ ಇದು (ಮಹಾ ಪರಿಮಾಣದ ದ್ರವ್ಯವು) ತಡವಾಗಿ (ನಿಧಾನವಾಗಿ) ಆಯಿತು, ಇದು ಬೇಗನೆ ಅಯಿತು ಎಂದು ಪ್ರತೀತವಾಗುತ್ತದೆ.

**ವಿವರಣೆ** : ಜನ್ಯವಸ್ತುಗಳನ್ನು 'ಇದು ಮಹಾಪರಿಮಾಣ ಉಳ್ಳದ್ದು, ಇದು ಅಲ್ಪಪರಿಮಾಣ ಉಳ್ಳದ್ದು' ಎಂದು ಹೇಳುತ್ತೇವಷ್ಟೆ. ಈ ಪರಿಮಾಣವು ಆ ವಸ್ತುವಿನ ಅವಯವಗಳಲ್ಲಿ ಇರತಕ್ಕದ್ದು. ಅದನ್ನು ಅವಯವಿಯಾದ ವಸ್ತುವಿನಲ್ಲಿ ಆರೋಪಿಸಿ ವ್ಯವಹರಿಸುತ್ತೇವೆ. ಅವಯವಗಳ ಸಂಖ್ಯೆ ಬಹಳ ಇದ್ದರೆ ಅವಯವಗಳ ಪರಿಮಾಣ ಬಹು ಆಗುತ್ತದೆ. ಅವುಗಳ ಸಂಖ್ಯೆ ಕಡಿಮೆ ಇದ್ದರೆ ಆ ಅವಯವಗಳ ಪರಿಮಾಣ ಅಲ್ಪ ಆಗುತ್ತದೆ. ಈ ಬಹುತ್ವ ಅಲ್ಪತ್ವಗಳನ್ನು ಅವಯವಿಗಳಲ್ಲಿ ಆರೋಪಿಸಿ ಹಿಮಾಲಯವು ದೊಡ್ಡದು ಗಡಿಗೆಯು ಚಿಕ್ಕದು ಎಂದು ಹೇಳುತ್ತೇವೆ. ಒಂದು ದೊಡ್ಡ ಬಂಗಲೆಯಲ್ಲಿ ಅವಯವಗಳ ಸಂಖ್ಯೆ ಬಹಳ ಇರುವುದರಿಂದ ಬಂಗಲೆಯ ನಿರ್ಮಾಣ ತಡವಾಗಿ ಆಯಿತು ಎನ್ನುತ್ತೇವೆ. ಚಿಕ್ಕಮನೆಯ ನಿರ್ಮಾಣ ಬೇಗನೆ ಆಯಿತು ಎನ್ನುತ್ತೇವೆ. ಆಗ ಕಾಲದಲ್ಲಿಯೂ ತಡ, ಬೇಗನೆ ಎಂಬುದು ಆರೋಪಿತವಾಗಿಬಿಡುತ್ತದೆ. (ಪ್ರಚಯ = ದೊಡ್ಡ ಪರಿಮಾಣ, ಅಪಚಯ = ಚಿಕ್ಕಪರಿಮಾಣ)

**ಅಸತಶ್ಚ ಕ್ರಮೋ ನಾಸ್ತಿ ಸ ಹಿ ಭೇತ್ತುಂ ನ ಶಕ್ಯತೇ ।**
**ಸತೋಽಪಿ ಚಾತ್ಮತತ್ತ್ವಂ ಯತ್ ತತ್ತಥೈವಾವತಿಷ್ಠತೇ ॥ ೩೬ ॥**

ಉತ್ಪತ್ತಿಗೆ ಪೂರ್ವದಲ್ಲಿ ಅಸತ್ ಆದ ದ್ರವ್ಯಕ್ಕೆ ಪೌರ್ವಾಪರ್ಯವೆಂಬ

ಕ್ರಮವಿಲ್ಲ. ಏಕೆಂದರೆ ಅದು ಇಲ್ಲದ ವಸ್ತುವಾದ್ದರಿಂದ ಅದಕ್ಕೆ ಪೌರ್ವಾಪರ್ಯವನ್ನು ಹೇಳಲಾಗುವುದಿಲ್ಲ. ಉತ್ಪನ್ನವಾದ ಮೇಲೆ ಸತ್ ಆದ ದ್ರವ್ಯದ ಸ್ವರೂಪವೂ ಹಾಗೆಯೇ ಕ್ರಮರಹಿತವಾಗಿ ಇದ್ದು ಬಿಡುತ್ತದೆ.

**ವಿವರಣೆ** : ಭಾವವೆಂದರೆ ಕಾರ್ಯದ್ರವ್ಯ, ಜನ್ಯವಸ್ತು. ಅದಕ್ಕೆ ಸತ್ ಅಸತ್ ಎಂದು ಎರಡು ರೂಪಗಳಿವೆ. ಅದರ ಉತ್ಪತ್ತಿಗೆ ಮೊದಲು ಮನಸ್ಸಿನಲ್ಲಿ ಸಂಕಲ್ಪಿತ–ವಾಗಿ ಬುದ್ಧಿಗೆ ಮಾತ್ರ ಅದು ಗೋಚರವಾಗುತ್ತವೆ. ಅದು ಬೌದ್ಧ ಪದಾರ್ಥ. ಬಾಹ್ಯರೂಪವಿಲ್ಲವಾದದ್ದರಿಂದ ಅದು ಅಸತ್. ಅದಕ್ಕೆ ಪೌರ್ವಾಪರ್ಯವೆಂಬ ಕ್ರಮವಿಲ್ಲ. ಅದು ಅವಯವಗಳ ಜೋಡಣೆಯಿಂದ ನಿಷ್ಪನ್ನವಾದಮೇಲೂ ಕ್ರಮವಿಲ್ಲ. ಏಕೆಂದರೆ ನಿರ್ಮಿತವಸ್ತುವಿನಲ್ಲಿ ನಿರ್ಮಾಣಕ್ರಿಯೆ ಯಾವುದೂ ಉಳಿದಿರುವುದಿಲ್ಲ. ಕ್ರಿಯೆ ಇಲ್ಲದಾಗ ಕ್ರಮವೆಲ್ಲಿಂದ ಬರುತ್ತದೆ? ಈ ಬಂಗಲೆ ತಡವಾಗಿ ನಿರ್ಮಿತವಾಯಿತು. ಈ ಚಿಕ್ಕಮನೆ ಬೇಗನೆ ನಿರ್ಮಿತವಾಯಿತು ಎಂದು ನಿರ್ಮಾಣ ಕಾಲದಲ್ಲಿ ತಡ, ಬೇಗನೆ ಎಂಬ ಪೌರ್ವಾಪರ್ಯವೂ ಕಾಲದಲ್ಲಿ ಆರೋಪಿತವೇ ಹೊರತು ವಾಸ್ತವವಲ್ಲ.

ಇಷ್ಟೇ ಅಲ್ಲ, ಭೂತ ಭವಿಷ್ಯತ್ ವರ್ತಮಾನ ಎಂಬ ಅಂಶಗಳೂ ಕಾಲದಲ್ಲಿ ಆರೋಪಿತವಾಗಿರುತ್ತವೆ.

**ಕ್ರಿಯೋಪಾಧಿಶ್ಚ ಸನ್ ಭೂತಭವಿಷ್ಯದ್ವರ್ತಮಾನತಾಃ ।**
**ಏಕಾದಶಭಿರಾಕಾರೈರ್ವಿಭಕ್ತಾಃ ಪ್ರತಿಪದ್ಯತೇ ॥ ೩೭ ॥**

ಕಾಲವು ಒಂದೇ ಆದರೂ ಕ್ರಿಯೆಯೆಂಬ ಉಪಾಧಿಯಿಂದ ಕೂಡಿದ್ದಾಗಿ ಹನ್ನೊಂದು ಆಕಾರಗಳಿಂದ ವಿಭಾಗಿಸಲ್ಪಟ್ಟ ಭೂತ, ಭವಿಷ್ಯತ್, ವರ್ತಮಾನ ಎಂಬ ಅವಸ್ಥೆಗಳನ್ನು ಪಡೆಯುತ್ತದೆ.

**ವಿವರಣೆ** : ಉತ್ಪನ್ನವಾಗಿ ಅನಂತರ ಮುಗಿದುಹೋದ ಕ್ರಿಯೆಯಿಂದ ಉಪಹಿತವಾದ ಕಾಲವು ಭೂತಕಾಲವೆನಿಸುತ್ತದೆ. ಉತ್ಪನ್ನವಾಗಿ ಧ್ವಸ್ತವಾದ ಕ್ರಿಯೆ ಭೂತಕಾಲಕ್ಕೆ ಉಪಾಧಿ–ವಿಶೇಷಣ. ಕ್ರಿಯೆಯು ಮುಂದೆ ಹುಟ್ಟುವುದೆಂದು ಸಂಭಾವಿತವಾದಾಗ, ಆ ಸಂಭಾವಿತಕ್ರಿಯೆಯಿಂದ ಉಪಹಿತವಾದ ಕಾಲವು ಭವಿಷ್ಯತ್ಕಾಲ. ಪ್ರಾರಂಭವಾಗಿ ಇನ್ನೂ ಸಮಾಪ್ತವಾಗದಿರುವ ಕ್ರಿಯೆಯಿಂದ ಉಪಹಿತವಾದ ಕಾಲವು ವರ್ತಮಾನಕಾಲ. 'ಪ್ರಾರಬ್ಧಾಪರಿಸಮಾಪ್ತತ್ವಂ ವರ್ತ–ಮಾನತ್ವಂ'. ಪ್ರಾರಬ್ಧ = ಆರಂಭವಾದದ್ದು. ಈ ಮೂರರಲ್ಲಿ ಒಟ್ಟು ಹನ್ನೊಂದು ಭೇದಗಳು –

**ಭೂತಃ ಪಂಚವಿಧಸ್ತತ್ರ ಭವಿಷ್ಯಂಶ್ಚ ಚತುರ್ವಿಧಃ ।**
**ವರ್ತಮಾನೋ ದ್ವಿಧಾಖ್ಯಾತ ಇತ್ಯೇಕಾದಶ ಕಲ್ಪನಾಃ ॥ ೩೮ ॥**

ಆ ಕಾಲವಿಭಾಗಗಳಲ್ಲಿ ಭೂತಕಾಲವು ಐದು ವಿಧ. ಭವಿಷ್ಯತ್ಕಾಲವು ನಾಲ್ಕುವಿಧ. ವರ್ತಮಾನಕಾಲವು ಎರಡು ವಿಧ. ಹೀಗೆ ಹನ್ನೊಂದು ವಿಧವಾದ ಕಲ್ಪನೆಗಳಿವೆ. (ಪರೋಕ್ಷ ಭೂತವು ಅನದ್ಯತನದಭೇದ, ಭೂತಕಾಲದ ಭೇದವಲ್ಲ)

**ಉದಾಹರಣ ಸಹಿತವಾದ ವಿವರಣೆ :**

ಭೂತಕಾಲ – ೫ ವಿಧ

೧. ಭೂತಸಾಮಾನ್ಯ – ಕಶ್ಚಿತ್ ಸಖಾ ಮಮ ಗೃಹಮಾಗಮತ್ (ಒಬ್ಬ ಮಿತ್ರನು ನನ್ನ ಮನೆಗೆ ಬಂದನು) ಈ ದಿನವೋ ನಿನ್ನೆಯೋ ಎಂದು ಹೇಳಿಲ್ಲವಾದ್ದರಿಂದ ಭೂತಸಾಮಾನ್ಯ. ಲುಙ್ ಪ್ರತ್ಯಯ.

೨. ಅದ್ಯತನಭೂತ – ಸಃ ಅದ್ಯ ಅಗಮತ್ (ಅವನು ಈ ದಿನ ಹೋದನು) ಲಙ್ ಪ್ರತ್ಯಯ.

೩. ಅನದ್ಯತನ ಭೂತ – ಮಾತುಲಃ ಪೂರ್ವೇದ್ಯುರಗಚ್ಛತ್ (ಸೋದರ ಮಾವನು ನಿನ್ನೆ ಹೋದನು) ಲಙ್ ಪ್ರತ್ಯಯ.

೪. ಅದ್ಯತನಾನದ್ಯತನ ಭೂತಸಮುದಾಯ – ಏತದ್ದಿನಂ ಯಾವತ್ ತ್ರಿಭಿರ್ದಿನೈಃ ಸಃ ಪೀಠಮಕರೋತ್ (ಈ ದಿನವೂ ಸೇರಿ ಮೂರುದಿನಗಳಲ್ಲಿ ಅವನು ಪೀಠವನ್ನು ನಿರ್ಮಿಸಿದನು) ಲಙ್ ಪ್ರತ್ಯಯ.

೫. ಭವಿಷ್ಯತ್ತಾದರೂ ಅಧ್ಯಾರೋಪಿತ ಭೂತಕಾಲ – ದೇವಶ್ಚೇದ–ವರ್ಷೀತ್ ತದಾ ಧಾನ್ಯಮವಾಪ್ಸ್ಮ (ಮಳೆ ಬಂದಿದ್ದರೆ ಕಾಳನ್ನು ಬಿತ್ತುತ್ತಿದ್ದೆವು) ಮಳೆ ಬಂದರೆ ಕಾಳನ್ನು ಬಿತ್ತುವೆವು – ಎಂದು ಭವಿಷ್ಯದರ್ಥ ಇಲ್ಲಿ ತೋರುತ್ತದೆ. ಆಶಂಸಾಯಾಂ ಭೂತವಚ್ಚ (೩–೩–೧೩೨) ಎಂಬ ಪಾಣಿನಿಸೂತ್ರದಿಂದ ಭವಿಷ್ಯದರ್ಥದಲ್ಲಿ ಭೂತೇ ಲಙ್ ಪ್ರತ್ಯಯ ಬಂದಿದೆ. ಇದು ಆರೋಪಿತವಾದ ಭೂತಕಾಲ ಪ್ರತ್ಯಯ. ಇದನ್ನು ಗೌಣ ಎನ್ನಬಹುದು. ವಿಕಲ್ಪದಿಂದ ವರ್ತಮಾನ ಭವಿಷ್ಯತ್ ಪ್ರತ್ಯಯಗಳೂ ಬರಬಹುದು. ಉದಾ: ದೇವಶ್ಚೇತ್ ವರ್ಷತಿ

ಧಾನ್ಯಂ ವಪಾಮಃ (ಮಳೆಬಂದರೆ ಕಾಳನ್ನು ಬಿತ್ತುತ್ತೇವೆ) ವರ್ತಮಾನೇ ಲಟ್. ದೇವಶ್ಚೇತ್ ವರ್ಷಿಷ್ಯತಿ ಧಾನ್ಯಂ ವಪ್ಸ್ಯಾಮಃ (ಮಳೆ ಬರುವುದಾದರೆ ಕಾಳನ್ನು ಬಿತ್ತುವೆವು) ಭವಿಷ್ಯತಿ ಲೃಟ್. ಕನ್ನಡದಲ್ಲಿಯೂ ಹೀಗೆಯೇ ಮೂರು ಕಾಲದ ಪ್ರತ್ಯಯಗಳು ಬರುತ್ತವೆಯೆಂಬುದನ್ನು ಗಮನಿಸಬೇಕು. ಬಭೂವ, ಜಗಾಮ ಮುಂತಾದವು ಪರೋಕ್ಷಾನದ್ಯತನ ಭೂತಕಾಲದಲ್ಲಿ ಲಿಟ್ ಪ್ರತ್ಯಯಾಂತಗಳು. ಪರೋಕ್ಷಭೂತವು ಅನದ್ಯತನದ ಭೇದ, ಭೂತಕಾಲದ ಭೇದವಲ್ಲವಾದ್ದರಿಂದ ಇಲ್ಲಿ ಗಣಿಸಿಲ್ಲ.

ಭವಿಷ್ಯತ್ಕಾಲ – ನಾಲ್ಕು ವಿಧ.

೧. ಭವಿಷ್ಯತ್ ಸಾಮಾನ್ಯ = ಇದಾನೀಂ ವರ್ಷಾಕಾಲಃ, ವೃಷ್ಟಿರ್ಭವಿಷ್ಯತಿ (ಈಗ ಮಳೆಗಾಲ. ಮಳೆ ಬರುವುದು) ಈ ದಿನವೋ ನಾಳೆಯೋ ನಾಡಿದ್ದೋ ಮಳೆ ಬರಬಹುದು. ಇದರಲ್ಲಿ ಅದ್ಯತನ – ಅನದ್ಯತನ ವಿಭಾಗವಿಲ್ಲ. ಲೃಟ್ ಪ್ರತ್ಯಯ.

೨. ಅದ್ಯತನ ಭವಿಷ್ಯತ್ = ಅದ್ಯಾಹಂ ಗ್ರಾಮಂ ಗಮಿಷ್ಯಾಮಿ. (ಈದಿನ ನಾನು ಹಳ್ಳಿಗೆ ಹೋಗುವೆನು).

೩. ಅನದ್ಯತನ ಭವಿಷ್ಯತ್ = ಶ್ವಃ ತವ ಗೃಹಮಾಗಂತಾಸ್ಮಿ (ನಾಳೆ ನಿನ್ನ ಮನೆಗೆ ಬರುವೆನು) ಲುಟ್ ಪ್ರತ್ಯಯ.

೪. ಅದ್ಯತನಾನದ್ಯತನ ಭವಿಷ್ಯತ್ ಸಮುದಾಯ = ಅದ್ಯ ಅನಿದ್ರಯಾ ರಾತ್ರಿರ್ಗಮಿಷ್ಯತಿ (ಈ ದಿನ ನಿದ್ರೆಯಿಲ್ಲದೆ ರಾತ್ರಿಯು ಕಳೆದು ಹೋಗುವುದು) ಮಧ್ಯರಾತ್ರಿಯವರೆಗೆ ಅದ್ಯತನ. ಅನಂತರ ಅನದ್ಯತನ. ಆದ್ದರಿಂದ ರಾತ್ರಿಯು ಎರಡು ಭವಿಷ್ಯತ್ಕಾಲಗಳಿಂದ ಸಂಮಿಶ್ರವಾಗಿದೆ. ಅದ್ಯತನದ ವಿವಕ್ಷೆಯಿಂದ ಲೃಟ್ ಪ್ರತ್ಯಯಬಂದಿದೆ. ಅನದ್ಯತನದ ವಿವಕ್ಷೆಯಿದ್ದರೆ ಲುಟ್ ಬರಬಹುದು. ಆಗ 'ರಾತ್ರಿರ್ಗಂತಾ' ಎಂದು ಹೇಳಬಹುದು. 'ಈ ದಿನ' ಎಂದು ಲೋಕವ್ಯವಹಾರವನ್ನನುಸರಿಸಿ ಬಳಸಿದ ಶಬ್ದ.

ವರ್ತಮಾನಕಾಲ – ಎರಡು ವಿಧ

೧. ಮುಖ್ಯವರ್ತಮಾನಕಾಲ = ಅದ್ಯ ಪಠಾಮಿ – ಅದ್ಯ ಪಠನ್ನಸ್ಮಿ (ಈಗ ಓದುತ್ತೇನೆ, ಓದುತ್ತಿದ್ದೇನೆ)

೨. ಅಮುಖ್ಯವರ್ತಮಾನ (ಅತಿದಿಷ್ಟ ವರ್ತಮಾನಕಾಲ). ಮನೆಗೆ ಬಂದಿರುವವನನ್ನು ಕುರಿತು ಯಾವಾಗ ಬಂದೆ? ಎಂದು ಕೇಳಿದಾಗ 'ಅಯಮಾಗಚ್ಛಾಮಿ' (ಈಗಷ್ಟೇ ಬರುತ್ತಿದ್ದೇನೆ) ಎಂದು ಉತ್ತರ ಹೇಳಬಹುದು. ಭೂತಕಾಲದಲ್ಲಿ ವರ್ತಮಾನವು ಅತಿದಿಷ್ಟವಾಗಿದೆ. ಇದು ವಿಕಲ್ಪವಾದ್ದರಿಂದ 'ಅಯಮಾಗತಃ' (ಈಗಷ್ಟೇ ಬಂದೆನು) ಎಂದೂ ಹೇಳಬಹುದು. 'ಉತ್ತರವನ್ನು ಹೇಳು' ಎಂದು ಸೂಚಿಸಿದಾಗ 'ಅಯಮಹಂ ವದಾಮಿ' = ಇದೋ, ಹೇಳುತ್ತೇನೆ ಹೇಳುತ್ತಿದ್ದೇನೆ, ಎನ್ನಬಹುದು. ಅಲ್ಲಿಯೂ ವದಿಷ್ಯಾಮಿ (ಹೇಳುವೆನು) ಎಂದು ಭವಿಷ್ಯತ್ಕಾಲವನ್ನು ಅನುಸರಿಸಿ ಹೇಳಬಹುದು. ವರ್ತಮಾನಸಾಮಿಪ್ಯೇ ವರ್ತಮಾನವದ್ವಾ (೩–೩–೧೩೧) ಎಂಬ ಸೂತ್ರದಿಂದ ವಿಕಲ್ಪವಾಗಿ ವರ್ತಮಾನಕಾಲದ ಪ್ರತ್ಯಯ ಬರುತ್ತದೆ.

ಈ ಪ್ರಕಾರ ಕಾಲವು ಹನ್ನೊಂದು ವಿಧವಾಗಿದೆ.

**ಕಾಲೇ ನಿಧಾಯ ಸ್ವಂ ರೂಪಂ ಪ್ರಜ್ಞಯಾ ಯನ್ನಿಗೃಹ್ಯತೇ ।**
**ಭಾವಾಸ್ತತೋ ನಿವರ್ತಂತೇ ತತ್ರ ಸಂಕ್ರಾಂತಶಕ್ತಯಃ ॥ ೩೯ ॥**

ಭಾವಪದಾರ್ಥಗಳ ಸ್ವರೂಪವು (ಭಾವಪದಾರ್ಥಗಳು ನಷ್ಟವಾದ ಮೇಲೂ) ಬುದ್ಧಿಯಿಂದ ಗೃಹೀತ(ಸ್ಮೃತ)ವಾಗುತ್ತದೆ. ಆದ್ದರಿಂದ ಆ ಭಾವಗಳು ತಮ್ಮ ಸ್ವರೂಪವನ್ನು (ತಮಗೆ ಆಧಾರವಾದ) ಕಾಲದಲ್ಲಿಟ್ಟು, ಸ್ಮರಣೆಗೆ ಕಾರಣವಾದ ವಿಷಯತಾಶಕ್ತಿಯನ್ನು ಕಾಲದಲ್ಲಿರಿಸಿದವುಗಳಾಗಿ ನಷ್ಟವಾಗುತ್ತವೆ.

**ವಿವರಣೆ** : ಭೂತಕಾಲ – ಇತ್ಯಾದಿ ವ್ಯವಹಾರಕ್ಕೆ ಆ ಕಾಲದಲ್ಲಿ ನಡೆಯುವ ಕ್ರಿಯೆಯೇ ಉಪಾಧಿಯೆಂದು ಹೇಳಿದ್ದಾಯಿತು. ಕ್ರಿಯೆಯು ಮುಗಿದು ಹೋದ ಮೇಲೆ ಅದು ಇಲ್ಲವಾಗುತ್ತದೆ. ಈಗ ಇಲ್ಲದೆ ನಷ್ಟವಾಗಿರುವ ಕ್ರಿಯೆಯು ಭೂತಕಾಲವ್ಯಪದೇಶಕ್ಕೆ ಹೇಗೆ ಉಪಾಧಿಯಾಗತ್ತದೆ? ಇಲ್ಲದ ವಸ್ತು ಕಾರಣವಾಗದು ಎಂಬ ಶಂಕೆಗೆ ಈ ಶ್ಲೋಕದಲ್ಲಿ ಸಮಾಧಾನವಿದೆ. ಜನ್ಯವಸ್ತುಗಳು ನಷ್ಟವಾಗುವಾಗ ತಮ್ಮ ಸೂಕ್ಷ್ಮಸ್ವರೂಪವನ್ನೂ ಸ್ಮರಣೆಗೆ ಬೇಕಾದ ವಿಷಯತಾಶಕ್ತಿಯನ್ನು ತಮಗೆ ಆಧಾರವಾದ ಕಾಲದಲ್ಲಿ ಇಟ್ಟು ಹೋಗಿರುತ್ತವೆ. ಕಾಲವು ಸರ್ವಾಧಾರವಾದ್ದರಿಂದ ಜನ್ಯಭಾವಗಳಲ್ಲಿರುವ ಕ್ರಿಯೆಗೂ ಕಾಲವು ಆಧಾರವಾಗಿದೆ. ಕ್ರಿಯೆಯು ನಷ್ಟವಾಗಿ ಭಾವವು ಪ್ರತ್ಯಕ್ಷವಾಗಿದ್ದರೆ ಕ್ರಿಯೆಯು ಮಾತ್ರ ಸ್ಮರಣೆಗೆ ಬರುತ್ತದೆ. ಭಾವಪದಾರ್ಥವು

ಪ್ರತ್ಯಕ್ಷವಲ್ಲದಿದ್ದಾಗ ಅಥವಾ ನಷ್ಟವಾದಾಗ ಆ ಪದಾರ್ಥವೂ ಅದರಲ್ಲಿದ್ದ ಕ್ರಿಯೆಯೂ ಸ್ಮರಣೆಗೆ ಬರುತ್ತವೆ. ದೇವದತ್ತನು ಊಟಮಾಡಿದನು – ಎಂದಾಗ ಅವನಲ್ಲಿದ್ದ ಭೋಜನಕ್ರಿಯೆ ಸ್ಮೃತವಾಗುತ್ತದೆ. ಗಡಿಗೆಯು ಒಡೆದು ಹೋಯಿತು – ಎಂದಾಗ ನಷ್ಟವಾದ ಗಡಿಗೆಯೂ ಅದರಲ್ಲಿದ್ದ ಒಡೆಯುವ ಕ್ರಿಯೆಯೂ ಸ್ಮರಣೆಗೆ ಬರುತ್ತವೆ. ಸ್ಮೃತವಾದದ್ದು ಸಹ ವರ್ತಮಾನದ ವಸ್ತುವಿನಂತೆ ಭೂತವ್ಯಪದೇಶಕ್ಕೆ ಉಪಾಧಿಯಾಗಿ ಕಾರಣವಾಗುತ್ತದೆ – ಎಂದು ತಾತ್ಪರ್ಯ.

**ಭಾವಿನಾಂ ಚೈವ ಯದ್ರೂಪಂ ತಸ್ಯ ಚ ಪ್ರತಿಬಿಂಬಕಂ ।**
**ಸುನಿರ್ಮೃಷ್ಟ ಇವಾದರ್ಶೇ ಕಾಲ ಏವೋಪಪದ್ಯತೇ ॥ ೪೦ ॥**

ಭವಿಷ್ಯತ್ಕಾಲದಲ್ಲಿ ಹುಟ್ಟುವ ಪದಾರ್ಥಗಳ ಸ್ವರೂಪವೂ ಸಹ ವಕ್ತೃವಿನ ಬುದ್ಧಿಯಿಂದ ಗೃಹೀತವಾಗುತ್ತದೆ. ಅದರ ಪ್ರತಿಬಿಂಬದಂತಿರುವ ಸೂಕ್ಷ್ಮ–ರೂಪವು ಸ್ವಚ್ಛವಾದ ಕನ್ನಡಿಯಲ್ಲಿ ಕಾಣುವ ಪ್ರತಿಬಿಂಬದಂತೆ, ನಿತ್ಯವಾದ ಕಾಲದಲ್ಲಿ ಇರುವುದು ಉಪಪನ್ನವಾಗಿದೆ.

**ವಿವರಣೆ** : ಕನ್ನಡಿಯಲ್ಲಿ ಕಾಣುವ ಮುಖದ ಪ್ರತಿಬಿಂಬವು ಮುಖವಲ್ಲ–ದಿದ್ದರೂ ಕನ್ನಡಿಯಲ್ಲಿರುತ್ತದೆ. ಹಾಗೆ ಬುದ್ಧಿಗೋಚರವಾದ ಪದಾರ್ಥವು ಕನ್ನಡಿ–ಯಂತಿರುವ ಕಾಲದಲ್ಲಿರುವುದು ಬುದ್ಧಿಗೆ ಗೋಚರಿಸುತ್ತದೆ. ಭವಿಷ್ಯತ್ಕಾಲದ ಬೌದ್ಧ–ವಸ್ತು ಕಾಲಕ್ಕೆ ಉಪಾಧಿಯಾಗಿ ಭವಿಷ್ಯತ್ಕಾಲವೆಂಬ ವ್ಯವಹಾರಕ್ಕೆ ಕಾರಣವಾಗುತ್ತದೆ. ಸ್ಮೃತವಾದ ಕ್ರಿಯೆ ಭೂತಕಾಲಕ್ಕೆ ಬೌದ್ಧವಾದ ಕ್ರಿಯೆ ಭವಿಷ್ಯತ್ಕಾಲಕ್ಕೆ ನಿಮಿತ್ತಗಳು. ಪದಾರ್ಥದೊಂದಿಗೆ ಅದರಲ್ಲಾಗುವ ಕ್ರಿಯೆ ಕಾಲಕ್ಕೆ ಉಪಾಧಿಯಾಗುತ್ತದೆ.

**ತೃಣಪರ್ಣಲತಾದೀನಿ ಯಥಾ ಸ್ರೋತೋಽನುಕರ್ಷತಿ ।**
**ಪ್ರವರ್ತಯತಿ ಕಾಲೋಽಪಿ ಮಾತ್ರಾ ಮಾತ್ರಾವತಾಂ ತಥಾ ॥ ೪೧ ॥**

ನದೀಪ್ರವಾಹವು ತನಗೆ ಸಿಕ್ಕಿದ ಹುಲ್ಲು ಎಲೆ ಬಳ್ಳಿ ಮೊದಲಾದವನ್ನು ಅವುಗಳ ಸ್ಥಾನದಿಂದ ಕದಲಿಸಿ ಹೇಗೆ ಎಳೆದುಕೊಂಡು ಹೋಗುವುದೋ ಮತ್ತೆ ಕೆಲವನ್ನು ತಳ್ಳಿ ದಡಕ್ಕೆ ಸೇರಿಸುವುದೋ ಹಾಗೆಯೇ ನಿರಂತರ ಪ್ರವೃತ್ತವಾದ ಕಾಲವೂ ಸಹ ಅವಯವಿಗಳ ಅವಯವಗಳನ್ನು ಪ್ರೇರಿಸಿ ಪರಿಣಾಮವನ್ನುಂಟುಮಾಡುತ್ತಲೇ ಇರುವುದು.

**ವಿವರಣೆ** : ಮಾತ್ರಾ ಎಂದರೆ ಅವಯವವೆಂದರ್ಥ. ಮೀಯತೇ ನಿರ್ಮೀ–

ಯತೇ ವಸ್ತು ಯಯಾ ಸಾ ಮಾತ್ರಾ ಎಂದು ವ್ಯುತ್ಪತ್ತಿ. ಯಾವುದರಿಂದ ಒಂದು ವಸ್ತುವಿನ ನಿರ್ಮಾಣವಾಗುತ್ತದೆಯೋ ಅದು ಅವಯವ.

ನದೀಪ್ರವಾಹವು ತನಗೆ ಸಿಕ್ಕಿದ ವಸ್ತುವನ್ನು ಎಳೆಯುತ್ತ ತಳ್ಳುತ್ತ ಹರಿಯುತ್ತಲೇ ಇರುವುದು. ತನ್ನ ವೇಗಕ್ಕೆ ನಿಲುಕಿದ ಪ್ರತಿಯೊಂದು ವಸ್ತುವಿನಲ್ಲಿಯೂ ಬದಲಾವಣೆ ಮಾಡುತ್ತಲೇ ಹೋಗುವುದು. ಹಾಗೆಯೇ ಕಾಲವೂ ಸತತವಾಗಿ ಮುಂದೆ ಚಲಿಸುತ್ತ ಜನ್ಯಪದಾರ್ಥಗಳಲ್ಲಿ ಪರಿವರ್ತನೆಯನ್ನು ಮಾಡುತ್ತಲೇ ಇರುವುದು. ಈ ಪರಿಣಾಮವು ಜನ್ಯವಸ್ತುಗಳ ಅವಯವಗಳಲ್ಲಾಗುತ್ತದೆ. ಆ ವಸ್ತುಗಳಲ್ಲಿ ಪರಮಾಣು ಪರ್ಯಂತರವಾದ ಅಂಶಗಳೆಲ್ಲವೂ ಅವಯವಗಳೇ. ಯಾವುದೇ ಒಂದು ಜನ್ಯವಸ್ತುವು ಪರಿಣಾಮ ಹೊಂದದೆ ಒಂದು ಕ್ಷಣವೂ ಇರುವುದಿಲ್ಲ. ಕ್ಷಯಿಸುತ್ತದೆ ಅಥವಾ ಬೆಳೆಯುತ್ತದೆ. ಕಲ್ಲುಬಂಡೆಯಲ್ಲಿಯೂ ಸೂಕ್ಷ್ಮವಾದ ಕ್ಷಯ ವೃದ್ಧಿಗಳುಂಟು.

**ಆವಿಶ್ಯೇವಾನುಸಂಧತ್ತೇ ಯಥಾ ಗತಿಮತಾಂ ಗತೀಃ ।**
**ವಾಯುಸ್ತಥೈವ ಕಾಲಾತ್ಮಾ ವಿಧತ್ತೇ ಕ್ರಮರೂಪತಾಮ್ ॥೪೨॥**

ಪ್ರಾಣವಾಯುವು ದೇಹಿಗಳ ಒಳಗೆ ಅವಯವಗಳಲ್ಲಿ ಪ್ರವೇಶಿಸಿ ಅವುಗಳ ಚಲನೆಗಳನ್ನು ವ್ಯವಸ್ಥಿತವಾಗಿ ಹೇಗೆ ಮಾಡುವುದೋ ಹಾಗೆಯೇ ಕಾಲವೂ ಸಹ ಭಾವಪದಾರ್ಥಗಳಲ್ಲಿ ನುಗ್ಗಿ, (ಹಿಂದೆ ಹೇಳಿದ ಅನುಜ್ಞಾ ಪ್ರತಿಬಂಧಗಳಿಂದ) ಅವುಗಳ ಕ್ರಿಯೆಯಲ್ಲಿ ಪೌರ್ವಾಪರ್ಯವೆಂಬ ಕ್ರಮವನ್ನುಂಟುಮಾಡುತ್ತದೆ.

**ವಿವರಣೆ** : ದೇಹದಲ್ಲಿ ಪ್ರಾಣವಾಯು ಐದು ವಿಧವಾಗಿದೆ –

ಹೃದಿ ಪ್ರಾಣೋ ಗುದೇಽಪಾನಃ ಸಮಾನೋ ನಾಭಿಸಂಸ್ಥಿತಃ ।
ಉದಾನಃ ಕಂಠದೇಶಸ್ಥೋ ವ್ಯಾನಃ ಸರ್ವಶರೀರಗಃ ॥

ಪ್ರಾಣವಾಯುವೇ ಬೇರೆಬೇರೆ ಸ್ಥಾನಗಳಲ್ಲಿ ವಿಭಿನ್ನಕ್ರಿಯೆಗಳನ್ನು ಮಾಡು–ವುದರಿಂದ ಐದು ಹೆಸರುಗಳನ್ನು ಪಡೆದಿದೆ. ಪ್ರಾಣ, ಅಪಾನ, ಸಮಾನ, ಉದಾನ ಮತ್ತು ವ್ಯಾನ – ಇವು ಐದು ಹೆಸರುಗಳು. ಅವನ್ನು ಪಂಚಪ್ರಾಣಗಳೆಂದೂ ಹೇಳು–ತ್ತಾರೆ. ಕಾಲವು ಕ್ರಿಯೆಯಿಂದ ಪರಿಚ್ಛಿನ್ನವಾಗಿದೆ. ಪರಿಚ್ಛೇದಕವಾದ ಕ್ರಿಯೆಯಲ್ಲಿರುವ ಪೌರ್ವಾಪರ್ಯವನ್ನು ಪರಿಚ್ಛಿನ್ನವಾದ ಕಾಲವು ಭಾವಪದಾರ್ಥಗಳಲ್ಲಿ ಆರೋ–ಪಿಸುತ್ತದೆ – ಎಂದು ತಾತ್ಪರ್ಯ. ಆವಿಶ್ಯೇವ = ಇಲ್ಲಿ 'ಇವ' ಶಬ್ದವು ವಾಕ್ಯಾಲಂ–ಕಾರದಲ್ಲಿ ಪ್ರಯುಕ್ತವಾಗಿದೆ. ಕಿಮಿವ ಪಠಸಿ, ಕಿಂಚಿದಿವ ದೇಹಿ, ಮುಹೂರ್ತಮಿವ ತಿಷ್ಠ – ಎಂಬಂತೆ.

**ಅಯನಪ್ರವಿಭಾಗಶ್ಚ ಗತಿಶ್ಚ ಜ್ಯೋತಿಷಾಂ ಧ್ರುವಾ ।**
**ನಿವೃತ್ತಿಪ್ರಭವಾಶ್ಚೈವ ಭೂತಾನಾಂ ತನ್ನಿಬಂಧನಾಃ ॥ ೪೩ ॥**

ಉತ್ತರಾಯಣ ದಕ್ಷಿಣಾಯನಗಳೆಂಬ ವಿಭಾಗವೂ ಗ್ರಹನಕ್ಷತ್ರಾದಿ ಜ್ಯೋತಿಗಳ ನಿಯತವಾದ ಉದಯಾಸ್ತಮಯಾದಿಗತಿಯೂ ಪೃಥಿವ್ಯಾದಿ ಪಂಚ ಮಹಾಭೂತಗಳ ವಿನಾಶ ಮತ್ತು ಜನ್ಮಗಳೂ ಕಾಲನಿಮಿತ್ತಕವಾದವು-ಗಳು.

**ವಿವರಣೆ** : ಉತ್ತರಾಯಣ ದಕ್ಷಿಣಾಯನಗಳು ಕಾಲದ ಅಳತೆಗೆ ಒಳಪಟ್ಟವು. ಸೂರ್ಯಚಂದ್ರಾದಿಗ್ರಹಗಳು, ಅಶ್ವಿನ್ಯಾದಿನಕ್ಷತ್ರಗಳು ಈದಿನ – ಎಂಬ ವಿಭಾಗವೂ ಕಾಲದ ಅಧೀನ. ಪೃಥಿವೀ, ಜಲ, ಅಗ್ನಿ, ವಾಯು, ಆಕಾಶ – ಎಂಬ ಪಂಚಮಹಾಭೂತಗಳು ಸೃಷ್ಟಿಕಾಲದಲ್ಲಿ ಹುಟ್ಟಿ ಪ್ರಳಯಕಾಲದಲ್ಲಿ ಲಯವಾಗತಕ್ಕವು.

**ಮಾತ್ರಾಣಾಂ ಪರಿಣಾಮಾ ಯೇ ಕಾಲವೃತ್ತ್ಯನುಯಾಯಿನಃ ।**
**ನಕ್ಷತ್ರಾಖ್ಯಾ ಪೃಥಕ್‌ತೇಷು ಚಿಹ್ನಮಾತ್ರಂ ತು ತಾರಕಾಃ ॥೪೪॥**

ಕಾಲದ ಪರಿಚ್ಛೇದಕ ವ್ಯಾಪಾರವನ್ನನುಸರಿಸಿ ಪಂಚಭೂತಗಳೆಂಬ ವಿಷಯಗಳಲ್ಲಿ ಆಗುವ ಯಾವ ಭೌತಿಕ ಪರಿಣಾಮಗಳುಂಟೋ ಅವುಗಳಲ್ಲಿ ಪುನರ್ವಸು, ಪುಷ್ಯ ಮುಂತಾದ ಹೆಸರೂ ಹಾಗೆಯೇ ಆ ಕಾಲದಲ್ಲಿಯೂ ಬರುತ್ತದೆ. ಈ ದಿನ ಅಶ್ವಿನೀ, ಭರಣೀ ಮುಂತಾದ ವ್ಯವಹಾರವು ಮುಖ್ಯ-ವಾದವು. ಆಕಾಶದಲ್ಲಿರುವ ನಕ್ಷತ್ರಕ್ಕೆ ಕಾಲದ ಹೆಸರು ಗೌಣವಾದ ಸಂಕೇತ ಮಾತ್ರ.

**ವಿವರಣೆ** : ಕಾಲವಿಶೇಷವು ನಕ್ಷತ್ರಗಳಿಗೂ ಯೋಗವನ್ನುಂಟು ಮಾಡುತ್ತದೆ. ಪುನರ್ವಸು ನಕ್ಷತ್ರದ ಯೋಗವಾದ ಕಾಲದಲ್ಲಿ ಭೌತಿಕ ಪರಿಣಾಮವಾಗಿ ಹುಟ್ಟಿದ ಶಿಶುವಿಗೆ ಪುನರ್ವಸು ಎಂದು ಹೆಸರು. ಪುಷ್ಯನಕ್ಷತ್ರದ ಯೋಗವಾದಾಗ ಹುಟ್ಟಿದವನಿಗೆ ಪುಷ್ಯ ಎಂದು ಹೆಸರು. ಇಲ್ಲಿ 'ಜಾತ' ಎಂಬ ಅರ್ಥದ ಪ್ರತ್ಯಯವು ಲೋಪವಾಗುತ್ತದೆ. ವ್ಯಾಕರಣ ಪ್ರಕ್ರಿಯೆ ಬೇರೆ ಬೇರೆ ಇದೆ. ಫಲ್ಗುಣ (ಅರ್ಜುನ), ರೇವತೀ, ರೋಹಿಣೀ – ಇತ್ಯಾದಿ ನಕ್ಷತ್ರನಾಮಗಳು ಇಲ್ಲಿ ಮುಖ್ಯವಾದವು. ಚಂದ್ರನಕ್ಷತ್ರಗಳ ಯೋಗವಾದ ಕಾಲವನ್ನು ಸಹ ಈ ದಿನ ಪುನರ್ವಸು, ನಾಳೆ ಪುಷ್ಯ – ಎಂದು ಹೇಳುವ ವ್ಯವಹಾರವಿದೆ. ಇಲ್ಲಿಯೂ ಸಹ ಕ್ರಿಯಾ ಕಾಲಗಳ ಸಂಬಂಧದಿಂದಾದ ಹೆಸರುಗಳಾದ್ದರಿಂದ ಪುನರ್ವಸು ಮುಂತಾದ ಶಬ್ದಗಳು

ಮುಖ್ಯಾರ್ಥದಲ್ಲಿವೆಯೆಂದು ತಿಳಿಯಬೇಕು. ಗಗನದ ತಾರೆಗಳನ್ನು ಈ ಹೆಸರಿನಿಂದ ಕರೆಯುವುದು ಬರಿಯ ಸಂಕೇತ. ಅದು ಕಾಲಸಂಬಂಧಿಯಲ್ಲ. ಕಾಲವು ಕ್ರಿಯೆ–ಯಲ್ಲಿಯೂ ಕಾಲಜನ್ಯ ವಸ್ತುವಿನಲ್ಲಿಯೂ ನಕ್ಷತ್ರದ ಹೆಸರನ್ನು ಎಳೆದೊಯ್ಯುತ್ತದೆ – ಎಂದು ತಾತ್ಪರ್ಯ. ಕಾಲನಿಮಿತ್ತಕವಾದ ನಾಮವು ಅನ್ವರ್ಥಕವಾದ್ದರಿಂದ ಮುಖ್ಯವಾದದ್ದು.

**ರುತೈರ್ಮೃಗಶಕುಂತಾನಾಂ ಸ್ಥಾವರಾಣಾಂ ಚ ವೃತ್ತಿಭಿಃ ।**
**ಛಾಯಾದಿಪರಿಣಾಮೈಶ್ಚ ಋತುಧಾಮಾ ನಿರೂಪ್ಯತೇ ॥ ೪೫ ॥**

ಹಸು ಎಮ್ಮೆ ನರಿ ಮುಂತಾದ ಮೃಗಗಳ ಮತ್ತು ಕೋಗಿಲೆ, ನವಿಲು, ಹಂಸ – ಮುಂತಾದ ಹಕ್ಕಿಗಳ ಕೂಗುಗಳಿಂದಲೂ ಸ್ಥಾವರಗಳಾದ ಮರ, ಬಳ್ಳಿ ಮೊದಲಾದವುಗಳ ವರ್ತನೆಗಳಿಂದಲೂ ನೆರಳು, ಬಿಸಿಲು ಮುಂತಾದವುಗಳ ಪರಿಣಾಮ ಸ್ವರೂಪಗಳಿಂದ ಋತುಗಳಿಗೆ ಆಶ್ರಯ ಸ್ಥಾನವಾದ ಎಂದರೆ ಋತು ಸ್ವರೂಪವನ್ನು ಧರಿಸುವ ಕಾಲದ ಸ್ವರೂಪವು ಯಾವುದೆಂದು ಗೊತ್ತಾಗುತ್ತದೆ.

**ವಿವರಣೆ** : ಹಸು, ಎಮ್ಮೆಗಳು ಕೂಗುವ ಪರಿಯಿಂದ ಅವುಗಳಿಗೆ ಗರ್ಭಧರಿಸುವ ಸಮಯವು ಬಂದಿದೆಯೆಂದು ಗೊತ್ತಾಗುತ್ತದೆ. ನರಿಯ ಕೂಗಿನಿಂದ ರಾತ್ರಿ ಎಷ್ಟು ಕಳೆಯಿತೆಂದೂ ಈಗ ರಾತ್ರಿಯೆಂದೂ ತಿಳಿಯುತ್ತದೆ. ಮರಬಳ್ಳಿಗಳು ಚಿಗುರುವುದನ್ನೂ ಎಲೆಗಳು ಉದುರುವುದನ್ನೂ ಕಂಡ ಈಗ ಯಾವ ಋತುವೆಂದು ನಿರ್ಧರಿಸಬಹುದು. ನೆರಳು ಯಾವದಿಕ್ಕಿಗೆ ಎಷ್ಟುದೂರ ವ್ಯಾಪಿಸಿದೆಯೆಂಬುದನ್ನು ಗಮನಿಸಿ ಹಗಲು ಎಷ್ಟು ಹೊತ್ತಾಗಿದೆಯೆಂಬುದನ್ನು ಊಹಿಸಬಹುದು. ಬಿಸಿಲಿನ ಕಠೋರತೆಯಿಂದ ಯಾವ ಋತುವೆಂಬುದನ್ನೂ ತಿಳಿಯಬಹುದು. ಹೀಗೆಯೇ ಮಳೆ, ಹಿಮಪಾತ, ಚಳಿ – ಇವುಗಳಿಂದ ಋತು ಯಾವುದೆಂಬುದನ್ನು ಗೊತ್ತು ಮಾಡಬಹುದು.

**ನಿರ್ಭಾಸೋಪಗಮೋ ಯೋಽಯಂ ಕ್ರಮವಾನಿವ ದೃಶ್ಯತೇ ।**
**ಅಕ್ರಮಸ್ಯಾಪಿ ವಿಶ್ವಸ್ಯ ತತ್ ಕಾಲಸ್ಯ ವಿಚೇಷ್ಟಿತಮ್ ॥ ೪೬ ॥**

ಕ್ರಮರಹಿತವಾದ ಈ ವಿಶ್ವದ ಅವಬೋಧವು ಕ್ರಮಸಹಿತವಾಗಿದೆಯೋ ಎಂಬಂತೆ ಕಾಣುವುದಷ್ಟೆ. ಅದು ಕಾಲಶಕ್ತಿಯ ಕಾರ್ಯವಾಗಿರುತ್ತದೆ.

**ವಿವರಣೆ** : ಈ ವಿಶ್ವವು ಪರಬ್ರಹ್ಮದ ವಿವರ್ತವಾಗಿದೆ. ಈ ಪ್ರಪಂಚವು ಬರಿಯ

ತೋರಿಕೆಯದೇ ಹೊರತು ವಾಸ್ತವಾದದ್ದಲ್ಲ. ಆದ್ದರಿಂದ ಇದರ ಉತ್ಪತ್ತಿಗೆ ಯಾವ ಕ್ರಮವೂ ಇಲ್ಲ. ಈ ವಿಷಯವನ್ನು ವಾಕ್ಯಪದೀಯದ ಸಂಬಂಧಸಮುದ್ದೇಶದಲ್ಲಿ ಪ್ರತಿಪಾದಿಸಿದ್ದಾಗಿದೆ. ಕಾಲವೆಂಬ ಬ್ರಹ್ಮಶಕ್ತಿಯು ಅವಿದ್ಯೆಯೆನಿಸುತ್ತದೆ. ಜೀವಾತ್ಮರ ವ್ಯವಹಾರಸಿದ್ಧಿಗೆ ಇದು ಉಪಯುಕ್ತವಾಗಿದೆ. ಇದನ್ನು ಬ್ರಹ್ಮಕಾಂಡದಲ್ಲಿಯೂ ಆರು ಭಾವವಿಕಾರಗಳಿವೆಯೆಂದು

ಅಧ್ಯಾಹಿತಕಲಾಂ ಯಸ್ಯ ಕಾಲಶಕ್ತಿಮುಪಾಶ್ರಿತಾಃ ।
ಜನ್ಮಾದಯೋ ವಿಕಾರಾಃ ಷಡ್ ಭಾವಭೇದಸ್ಯ ಯೋನಯಃ ॥

ಎಂಬ ಕಾರಿಕೆಯಲ್ಲಿ ಪ್ರತಿಪಾದಿಸಿದ್ದಾಗಿದೆ. ಬೀಜ–ಮೊಳಕೆ–ಗಿಡ–ಮರ ಎಂಬುದು ಕ್ರಮ. ಬಾಲ್ಯ–ಯೌವನ–ಮುಪ್ಪು ಎಂಬುದೂ ಕ್ರಮ. ಇವೆಲ್ಲವೂ ಕಾಲ ಶಕ್ತಿಯೆಂಬ ಅವಿದ್ಯೆಯಿಂದ ತೋರತಕ್ಕದ್ದು. ವಾಸ್ತವದಲ್ಲಿ ಯಾವ ಕ್ರಮವೂ ಇಲ್ಲ. ಇದೆಲ್ಲ ಬರಿಯ ತೋರಿಕೆ, ಕಾಲಶಕ್ತಿಯ ಚೇಷ್ಟೆ.

**ದೂರಾಂತಿಕವ್ಯವಸ್ಥಾನಮಧ್ವಾಧಿಕರಣಂ ಯಥಾ ।**
**ಚಿರಕ್ಷಿಪ್ರವ್ಯವಸ್ಥಾನಂ ಕಾಲಾಧಿಕರಣಂ ತಥಾ ॥ ೪೭ ॥**

ಅಧಿಕರಣವಾದ ಒಂದೇ ದಾರಿಯು ಇವನಿಗೆ ದೂರ–ಅವನಿಗೆ ಹತ್ತಿರ ಎಂದು ಹೇಗೆ ವ್ಯವಸ್ಥಿತವಾಗುವುದೋ ಹಾಗೆಯೇ ಒಂದೇ ಅಧಿಕರಣವಾದ ಕಾಲದಲ್ಲಿ ಇದು ದೀರ್ಘಕಾಲ – ಇದು ಶೀಘ್ರಕಾಲ ಎಂಬ ವ್ಯವಸ್ಥೆ–ಯುಂಟಾಗುತ್ತದೆ.

**ವಿವರಣೆ :** ನಾಲ್ಕು ಮೈಲಿಗಳ ದೂರದಲ್ಲಿ ಒಂದು ದೇವಸ್ಥಾನವಿದೆಯೆಂದು ತಿಳಿಯೋಣ. ಅದು ಚಿಕ್ಕಬಾಲಕನಿಗೆ ದೂರದ ದಾರಿ. ಯುವಕನಿಗೆ ಹತ್ತಿರದ ದಾರಿ. ಎತ್ತಿನಗಾಡಿ ಪ್ರಯಾಣಕ್ಕೆ ದೂರವಾದದ್ದು ಮೋಟಾರ್‌ಕಾರಿನ ಪ್ರಯಾಣಕ್ಕೆ ಹತ್ತಿರವಾಗುತ್ತದೆ. ಕರ್ತೃವಿನ ಗಮನಭೇದವೆಂಬ ಉಪಾಧಿಯಿಂದ ಒಂದೇ ದಾರಿ ದೂರವೂ ಹತ್ತಿರವೂ ಆಗಿಬಿಡುತ್ತದೆ. ಹಾಗೆಯೇ ದೊಡ್ಡಕಾರ್ಯವನ್ನು ಮಾಡುವಾಗ ಕ್ರಿಯೆಗಳು ಅಧಿಕವಾಗುವುದರಿಂದ ದೀರ್ಘಕಾಲದಲ್ಲಿ ಅದು ಮುಗಿಯುತ್ತದೆ. ಚಿಕ್ಕ ಕಾರ್ಯವಾದರೆ ಕ್ರಿಯೆಯು ಅಲ್ಪವಾಗುವುದರಿಂದ ಶೀಘ್ರವಾಗಿ ಮುಗಿಯುತ್ತದೆ. ಒಂದೇ ಕಾಲದಲ್ಲಿ ಕ್ರಿಯೆಗಳೂ ದೀರ್ಘಕಾಲ ಶೀಘ್ರಕಾಲ ಎಂಬ ವ್ಯವಹಾರಕ್ಕೆ ಉಪಾಧಿಗಳಾಗುತ್ತವೆ.

**ತಸ್ಯಾಭಿನ್ನಸ್ಯ ಕಾಲಸ್ಯ ವ್ಯವಹಾರೇ ಕ್ರಿಯಾಕೃತಾಃ ।**
**ಭೇದಾ ಇವ ತ್ರಯಃ ಸಿದ್ಧಾ ಯಾನ್ ಲೋಕೋ ನಾತಿವರ್ತತೇ ॥ ೪೮ ॥**

ಹೀಗೆ ಭೇದವೇ ಇಲ್ಲದೆ ಏಕರೂಪವಾಗಿರುವ ಕಾಲಕ್ಕೆ ವ್ಯವಹಾರಾರ್ಥ–ವಾಗಿ ಕ್ರಿಯೆಗಳೆಂಬ ಉಪಾಧಿಗಳಿಂದ ಭೇದಗಳಿವೆಯೋ ಎಂಬಂತೆ ಭೂತ, ಭವಿಷ್ಯತ್, ವರ್ತಮಾನಗಳೆಂಬ ಮೂರು ಕಾಲಭೇದಗಳು ಸಿದ್ಧವಾಗುತ್ತವೆ. ಈ ಭೇದಗಳನ್ನು ಲೋಕವು ವ್ಯವಹಾರದಲ್ಲಿ ಪಾಲಿಸುತ್ತಿದೆ. ಇವನ್ನು ಅತಿಕ್ರಮಿಸುವುದಿಲ್ಲ (ಏಕೆಂದರೆ ನಾಲ್ಕನೆಯ ಕಾಲಭೇದವಿಲ್ಲ.)

**ವಿವರಣೆ** : ಒಂದೇ ಆದ ಅಭಿನ್ನವಾದ ಕಾಲದಿಂದ ಲೋಕವ್ಯವಹಾರವನ್ನು ನಡೆಸಲು ಶಕ್ಯವಾಗುವುದಿಲ್ಲ. ಆದ್ದರಿಂದ ಔಪಾಧಿಕವಾದ ಮೂರು ಕಾಲ–ಭೇದಗಳನ್ನು ಜನರು ಅಂಗೀಕರಿಸಿದ್ದಾರೆ. ಹಿಂದೆ ಹೇಳಿದ ಹನ್ನೊಂದು ಕಾಲಭೇದಗಳು ಭೂತಭವಿಷ್ಯದ್ ವರ್ತಮಾನಗಳೆಂಬ ಮೂರು ಕಾಲಗಳಲ್ಲಿ ಸೇರಿಹೋಗುತ್ತವೆ.

**ಏಕಸ್ಯ ಶಕ್ತಯಸ್ತಿಸ್ರಃ ಕಾಲಸ್ಯ ಸಮವಸ್ಥಿತಾಃ ।**
**ಯತ್ಸಂಬಂಧೇನ ಭಾವಾನಾಂ ದರ್ಶನಾದರ್ಶನೇ ಸತಾಮ್ ॥ ೪೯ ॥**

ಏಕರೂಪವಾದ ಕಾಲಕ್ಕೆ ಭೂತ ಭವಿಷ್ಯದ್ವರ್ತಮಾನಗಳೆಂಬ ಮೂರು ಶಕ್ತಿಗಳಿವೆ. ಈ ಶಕ್ತಿಗಳ ಸಂಬಂಧದಿಂದ ಇರತಕ್ಕ ಭಾವಪದಾರ್ಥಗಳ ದರ್ಶನ–ಅದರ್ಶನಗಳೆರಡೂ ಆಗುತ್ತವೆ.

**ವಿವರಣೆ** : ಬ್ರಹ್ಮಶಕ್ತಿಯಾದ ಕಾಲಕ್ಕೆ ನಾನಾ ಸಾಮರ್ಥ್ಯಗಳಿವೆ. 'ಪರಾಽಸ್ಯ ಶಕ್ತಿರ್ವಿವಿಧೈವ ಶ್ರೂಯತೇ' ಎಂದು ಶ್ರುತಿಯೇ ಹೇಳಿದೆ. ಸತ್ಕಾರ್ಯವಾದದಂತೆ ಗಿರಿ, ನದೀ, ಘಟ, ಪಟಾದಿಗಳು ಸದಾ ಇರತಕ್ಕವು. ಅವುಗಳ ನಾಶವೆಂದರೆ ಅದರ್ಶನ. 'ನಶ–ಅದರ್ಶನೇ' ಎಂಬ ಧಾತುವಿನಿಂದ ನಾಶ ಶಬ್ದವು ಸಿದ್ಧವಾಗು–ತ್ತದೆ. ಈ ವಸ್ತುಗಳು ಸೂಕ್ಷ್ಮವಾದ ಪರಮಾಣು ಸ್ಥಿತಿಯನ್ನು ಅಥವಾ ಉಪಾದಾನ ಕಾರಣದ ಸ್ವರೂಪವನ್ನು ತಳೆದಾಗ ಕಾಣುವುದಿಲ್ಲ. ವಸ್ತುಗಳ ನಾಶವೆಂದರೆ ಈ ಅದರ್ಶನವೇ. ಅವು ದರ್ಶನವಾಗುವ ಸ್ಥಿತಿಯನ್ನು ಪಡೆಯುವುದು ಉತ್ಪತ್ತಿ. ಆ ಸ್ವರೂಪದಲ್ಲಿಯೇ ಇದ್ದಾಗ ಅವುಗಳ ಸ್ಥಿತಿ. ಅದರ್ಶನವಾದಾಗ ನಾಶ. ಇವು ಮೂರು ಅವಸ್ಥೆಗಳೂ ಕಾಲದ ಮೂರು ಶಕ್ತಿಗಳ ಸಂಬಂಧದಿಂದ ಆಗುತ್ತವೆ.

**ದ್ವಾಭ್ಯಾಂ ಸ ಕಿಲ ಶಕ್ತಿಭ್ಯಾಂ ಭಾವಾನಾಂ ವರಣಾತ್ಮಕಃ ।**
**ಶಕ್ತಿಸ್ತು ವರ್ತಮಾನಾಖ್ಯಾ ಭಾವರೂಪಪ್ರಕಾಶಿನೀ ॥ ೫೦ ॥**

ಕಾಲವು ಭೂತಭವಿಷ್ಯತ್ತುಗಳೆಂಬ ಎರಡು ಶಕ್ತಿಗಳಿಂದ ಭಾವಪದಾರ್ಥ-ಗಳನ್ನು ಮರೆಮಾಡತಕ್ಕದ್ದಾಗಿದೆಯಷ್ಟೆ. ವರ್ತಮಾನವೆಂಬ ಇನ್ನೊಂದು ಶಕ್ತಿಯಾದರೋ ಮರೆಯಾಗಿರುವ ಭಾವಪದಾರ್ಥಗಳನ್ನು ಪ್ರಕಾಶಗೊಳಿಸಿ ತೋರಿಸತಕ್ಕದ್ದಾಗಿದೆ. ವರಣ = ಆವರಿಸಿ ಮರೆಮಾಡುವುದು, ತಿರೋಧಾನ, ಆಚ್ಛಾದನ.

**ವಿವರಣೆ** : ಸತ್ಕಾರ್ಯವಾದದಂತೆ ಎಲ್ಲ ಭಾವಗಳೂ ಉಪಾದಾನಕಾರಣದಲ್ಲಿ ಮರೆಯಾಗಿರುತ್ತವೆ. ಗಡಿಗೆಯು ಉಪಾದಾನಕಾರಣವಾದ ಮಣ್ಣಿನಲ್ಲಿ ಸೂಕ್ಷ್ಮ-ರೂಪದಿಂದ ಇರುತ್ತದೆ. ಗಡಿಗೆಯನ್ನು ಮಾಡುವುದೆಂದರೆ, ಸೂಕ್ಷ್ಮ ರೂಪದಲ್ಲಿರುವ ಗಡಿಗೆಯನ್ನೇ ಸ್ಥೂಲರೂಪದಿಂದ ಪ್ರಕಾಶಗೊಳಿಸುವುದು ಎಂದರ್ಥ. ಹೀಗೆ ಎಲ್ಲ ವಸ್ತುಗಳಿಗೂ ಅನ್ವಯಿಸಿಕೊಳ್ಳಬೇಕು. ಕಾಲದ ವರ್ತಮಾನಶಕ್ತಿಯಿಂದ ಮೊದಲು ಮರೆಯಾಗಿದ್ದ ಗಡಿಗೆಯೇ ಕಾಣಿಸಿಕೊಳ್ಳುತ್ತದೆ.

**ಅನಾಗತಾ ಜನ್ಮಶಕ್ತೇಃ ಶಕ್ತಿರಪ್ರತಿಬಂಧಿಕಾ ।**
**ಅತೀತಾಖ್ಯಾ ತು ಯಾ ಶಕ್ತಿಸ್ತಯಾ ಜನ್ಮ ನಿರುಧ್ಯತೇ ॥ ೫೧ ॥**

ಇನ್ನೂ ಪ್ರಾಪ್ತವಾಗದೆ ಅನಾಗತವಾದ ಭವಿಷ್ಯಚ್ಛಕ್ತಿಯು ಭಾವದ್ರವ್ಯಗಳ ಜನ್ಮಶಕ್ತಿಯಾದ ವರ್ತಮಾನಶಕ್ತಿಯನ್ನು ಪ್ರತಿಬಂಧಿಸುವುದಿಲ್ಲ. ಅತೀತವಾದ ಭೂತಶಕ್ತಿಯು ಮಾತ್ರ ವಸ್ತುವಿನ ಜನ್ಮವನ್ನು ತಡೆದು ವರ್ತಮಾನಶಕ್ತಿಯನ್ನು ನಿರೋಧಿಸುತ್ತದೆ.

**ವಿವರಣೆ** : ಭವಿಷ್ಯಚ್ಛಕ್ತಿಯು ವಸ್ತುವನ್ನು ತೋರಿಸದೆ ಮರೆಮಾಡುತ್ತದೆಯಷ್ಟೆ. ವರ್ತಮಾನಶಕ್ತಿಯು ಅದನ್ನು ತಡೆದು ವಸ್ತುವನ್ನು ಕಾಣಿಸುತ್ತದೆ. ಆಗ ಭವಿಷ್ಯಚ್ಛಕ್ತಿಯೇ ವರ್ತಮಾನಶಕ್ತಿಯನ್ನು ತಡೆದು ವಸ್ತುವು ಕಾಣಿಸದಂತೆಯೇ ಏಕೆ ಮಾಡುವುದಿಲ್ಲ? ಹಾಗಲ್ಲ; ಕಾಲದ ಮೂರು ಶಕ್ತಿಗಳಿಗೂ ಪ್ರವೃತ್ತವಾಗಲು ಅವಕಾಶಬೇಕು. ವರ್ತಮಾನಶಕ್ತಿಗೆ ಅನುಕೂಲವಾದ ಕಾರಣವು ಒದಗಿದಾಗ ಅನಾಗತವಾದ ಭವಿಷ್ಯಚ್ಛಕಿಯು ಅಡ್ಡಬರುವುದಿಲ್ಲ. ಏಕೆಂದರೆ ವರ್ತಮಾನವೇ ಕಾಲಾಂತರದಲ್ಲಿ ಭವಿಷ್ಯಚ್ಛಕ್ತಿಯಾಗಿರುವುದರಿಂದ ಅವೆರಡೂ ಸ್ನೇಹಿತರಂತೆ ವರ್ತಿಸುತ್ತವೆ. ಅತೀತವಾದ ಭೂತಶಕ್ತಿಯು ಮಾತ್ರ ವರ್ತಮಾನ ಭವಿಷ್ಯತ್ತು-

ಗಳೆರಡನ್ನೂ ಬಾಧಿಸುತ್ತದೆ. ಭೂತಶಕ್ತಿಯು ಪ್ರಬಲವಾದದ್ದು. ಸತ್ತವನು ಮತ್ತೆ ಬದುಕುವುದಿಲ್ಲ. ಕಳೆದ ಬಾಲ್ಯ ಮತ್ತೆ ಬರುವುದಿಲ್ಲ.

**ತಮಃಪ್ರಕಾಶವತ್ತ್ವೇತೇ ತ್ರಯೋಽಧ್ವಾನೋ ವ್ಯವಸ್ಥಿತಾಃ ।**
**ಅಕ್ರಮಾಸ್ತೇಷು ಭಾವಾನಾಂ ಕ್ರಮಃ ಸಮುಪಲಭ್ಯತೇ ॥ ೫೨ ॥**

ಭೂತಭವಿಷ್ಯದ್ವರ್ತಮಾನಗಳೆಂಬ ಈ ಮೂರು ಮಾರ್ಗಗಳು ಕತ್ತಲು ಬೆಳಕುಗಳಂತೆ ವ್ಯವಸ್ಥಿತವಾಗಿವೆ. ಇವುಗಳಲ್ಲಿ ಪೌರ್ವಾಪರ್ಯವೆಂಬ ಕ್ರಮವು ಸ್ವತಃ ಇಲ್ಲದಿದ್ದರೂ (ಈ ಶಕ್ತಿಗಳ ಮಹಿಮೆಯಿಂದ) ಭಾವದ್ರವ್ಯಗಳಲ್ಲಿ ಕ್ರಮವು ಕಂಡುಬರುತ್ತದೆ.

**ವಿವರಣೆ :** ಮಾರ್ಗಗಳಲ್ಲಿ ಪಥಿಕರು ಗಮನಾಗಮನಗಳನ್ನು ಮಾಡುವಂತೆ ಭಾವಗಳು ಈ ಮೂರು ಶಕ್ತಿಗಳಲ್ಲಿ ವಿವಿಧ ಪರಿಣಾಮಗಳನ್ನು ಅನುಭವಿಸುತ್ತ ಸಂಚರಿಸುತ್ತವೆಯಾದ್ದರಿಂದ ಈ ಶಕ್ತಿಗಳನ್ನು ಮಾರ್ಗ(ರಸ್ತೆ)ಗಳೆಂದೂ ರೂಪಿಸ–ಲಾಗಿದೆ. ಭೂತಭವಿಷ್ಯಚ್ಛಕ್ತಿಗಳು ಭಾವಪದಾರ್ಥಗಳ ಅದರ್ಶನಕ್ಕೆ ಕಾರಣಗಳಾದ್ದ–ರಿಂದ ಅವು ಕತ್ತಲೆಯಂತೆ ಇವೆ. ವರ್ತಮಾನಶಕ್ತಿಯು ಬೆಳಕಿನಂತೆ ಭಾವವಸ್ತು–ಗಳನ್ನು ಕಾಣಿಸುತ್ತದೆ. ಈ ಮೂರು ಶಕ್ತಿಗಳೂ ನಿತ್ಯವಾದ ಕಾಲಶಕ್ತಿಯ ಪ್ರಕಾರಗಳು. ಕಾಲವು ನಿತ್ಯವಾದ್ದರಿಂದ ಅದಕ್ಕೆ ಪೌರ್ವಾಪರ್ಯವಿಲ್ಲ. ಆದರೂ ಔಪಾಧಿಕಗಳಾದ ಭೂತಭವಿಷ್ಯಚ್ಛಕ್ತಿಗಳು ಭಾವಗಳಿಗೆ ಅದರ್ಶನವನ್ನೂ ವರ್ತಮಾನಶಕ್ತಿಯು ದರ್ಶನವನ್ನೂ ಉಂಟುಮಾಡಿ ಅವುಗಳಿಗೆ ಪೌರ್ವಾಪರ್ಯಗಳೆಂಬ ಕ್ರಮವನ್ನು ರೂಪಿಸುತ್ತವೆ.

**ದ್ವೌ ತು ತತ್ರ ತಮೋರೂಪಾವೇಕಸ್ಯಾಲೋಕವತ್ ಸ್ಥಿತಿಃ ।**
**ಅತೀತಮಪಿ ಕೇಷಾಂಚಿತ್ ಪುನರ್ವಿಪರಿವರ್ತತೇ ॥ ೫೩ ॥**

ಈ ಮೂರು ಶಕ್ತಿಭೇದಗಳಲ್ಲಿ ಅತೀತ (ಭೂತ), ಅನಾಗತ (ಭವಿಷ್ಯತ್) ಎಂಬ ಎರಡು ಮಾರ್ಗಗಳು ಭಾವಗಳನ್ನು ಆವರಿಸಿ ಮುಚ್ಚಿಬಿಡುತ್ತವೆ–ಯಾದ್ದರಿಂದ ತಮಃಸ್ವಭಾವದವು. ವರ್ತಮಾನಮಾರ್ಗವು ಭಾವಗಳ ಪ್ರಕಾಶಕವಾದ್ದರಿಂದ ಅದರ ಸ್ಥಿತಿಯು ಸತ್ತ್ವಗುಣ ಸ್ವಭಾವವುಳ್ಳದ್ದು. ಕೆಲವರ ಮತದಂತೆ ಅತೀತವಾದ (ನಷ್ಟವಾದ) ವಸ್ತುವೇ ಪರಿಣಾಮಗೊಂಡು ವರ್ತಮಾನದಂತೆ ಕಾಣಿಸಿಕೊಳ್ಳುತ್ತದೆ.

**ವಿವರಣೆ** : ಸಾಂಖ್ಯದರ್ಶನದಂತೆ ಕಾಲವು ತ್ರಿಗುಣಾತ್ಮಕವಾದ ಪ್ರಕೃತಿಯ

ಪರಿಣಾಮವಾಗಿದೆ. ರಜಸ್ಸು ಪ್ರವರ್ತಕ. ಅದು ಭೂತಭವಿಷ್ಯತ್ತುಗಳಲ್ಲಿ ಭಾವಪದಾರ್ಥಗಳು ಕಾಣದಂತೆ ಪ್ರತಿಬಂಧಿಸುತ್ತದೆ. ವರ್ತಮಾನದಲ್ಲಿ ಕಾಣುವಂತೆ ಅನುಜ್ಞೆಯನ್ನಿತ್ತು ಭಾವಗಳನ್ನು ತೋರಿಸುತ್ತದೆ. ಸಾಂಖ್ಯರು ಸತ್ಕಾರ್ಯವಾದಿಗಳು. ಯಾವ ವಸ್ತುವೂ ಹೊಸದಾಗಿ ಹುಟ್ಟುವುದಿಲ್ಲವೆಂದೂ ಸೂಕ್ಷ್ಮವಾಗಿ ಮೊದಲು ಮಣ್ಣಿನಲ್ಲಿರುವ ಘಟವೇ ಸ್ಥೂಲವಾಗಿ ಪರಿಣಮಿಸಿದಾಗ ಕಾಣುತ್ತದೆಯೆಂದೂ ಅವರ ಮತ. ಹಾಗೆಯೇ ಸ್ಥೂಲವಾದದ್ದು ಸೂಕ್ಷ್ಮಸ್ಥಿತಿಯನ್ನು ಹೊಂದಿದಾಗ ನಷ್ಟವಾಯಿತು ಎನ್ನುತ್ತೇವೆ. ಹೀಗೆ ನಷ್ಟವಾದದ್ದೇ ಮತ್ತೆ ಸ್ಥೂಲವಾಗಿ ಪರಿಣಮಿಸುತ್ತದೆ. ಯಾವುದೂ ಆತ್ಯಂತಿಕ ನಾಶವನ್ನು ಹೊಂದುವುದಿಲ್ಲ.

ವೇದಾಂತದರ್ಶನದಲ್ಲಿಯೂ ಬ್ರಹ್ಮಶಕ್ತಿಯಾದ ಕಾಲವು ತ್ರಿಗುಣಾತ್ಮಕವಾದದ್ದು. ಇದು ತನ್ನ ಪ್ರತಿಬಂಧ-ಅನುಜ್ಞಾಕ್ರಿಯೆಗಳಿಂದ ಭಾಪದಾರ್ಥಗಳ ದರ್ಶನಾ-ದರ್ಶನಗಳನ್ನು ನಿರ್ವಹಿಸುತ್ತದೆ. ಆದರೆ ನಷ್ಟವಾದದ್ದೇ ಮತ್ತೆ ಕಾಣಿಸುತ್ತದೆ-ಎಂದು ಅಂಗೀಕರಿಸಬೇಕಾಗಿಲ್ಲ.

**ಯುಗಪದ್ವರ್ತಮಾನತ್ವಂ ತದ್ಧರ್ಮಾ ಪ್ರತಿಪದ್ಯತೇ ।**
**ಕೇಷಾಂಚಿದ್ ವರ್ತಮಾನತ್ವಾಚ್ಚ್ಯುತಿ ತದ್ವದತೀತತಾಮ್ ॥ ೫೪ ॥**

ತದ್ಧರ್ಮಾ = ಅತೀತ-ಅನಾಗತ-ವರ್ತಮಾನರೂಪಗಳಾದ ಘಟತ್ವಾದಿ ಧರ್ಮಗಳುಳ್ಳ ಘಟಪಟಾದಿ ವಸ್ತುವು ಏಕಕಾಲದಲ್ಲಿಯೇ ಅತೀತತ್ವ ಅನಾಗ-ತತ್ವಗಳಿರುವಾಗಲೇ ವರ್ತಮಾನತ್ವವನ್ನು ಪಡೆದುಕೊಳ್ಳುತ್ತದೆ. ವರ್ತಮಾನತ್ವ-ವಿರುವಾಗಲೇ ಹಿಂದೆ ಹೇಳಿದಂತೆ ಅತೀತತ್ವ ಅನಾಗತತ್ವಗಳನ್ನೂ ಹೊಂದು-ತ್ತದೆ.

**ವಿವರಣೆ** : ಘಟಪಟಾದಿಭಾವಗಳು ಸದಾ ಇದ್ದೇ ಇರುತ್ತವೆ. ಘಟತ್ವಾದಿ ಧರ್ಮಗಳು ನಿತ್ಯವಾದ್ದರಿಂದ ಅವುಗಳಿಗೆ ಆಶ್ರಯವಾದ ಘಟಾದಿವ್ಯಕ್ತಿಗಳು ಸದಾ ಇದ್ದೇ ಇರಬೇಕು. ಸ್ಥೂಲತ್ವ, ಆಕೃತಿ ಮುಂತಾದ ಕೆಲವು ಧರ್ಮಗಳು ಹೋಗು-ತ್ತವೆ, ಬರುತ್ತವೆ. ಆದ್ದರಿಂದ ಧರ್ಮಿಯಾದ ವಸ್ತು ಸದಾ ವರ್ತಮಾನವಾಗಿಯೇ ಇರುತ್ತದೆ. ಸ್ಥೂಲತ್ವಾದಿ ಧರ್ಮಗಳು ಬಂದಾಗ ಕಾಣಿಸಿಕೊಳ್ಳುತ್ತವೆ. ಅದು ವರ್ತಮಾನಾವಸ್ಥೆ ಎನ್ನಬಹುದು. ಆ ಧರ್ಮಗಳು ಹೋದೊಡನೆ ಭಾವಪದಾರ್ಥಕ್ಕೆ ಅತೀತತ್ವ ಬರುತ್ತದೆ. ಆ ಧರ್ಮಗಳು ಇನ್ನೂ ಬರದಿದ್ದಾಗ ಅನಾಗತಾವಸ್ಥೆಯನ್ನು ಪಡೆದಿದೆಯೆಂದು ಲೋಕ ವ್ಯವಹಾರ.

ಇಲ್ಲಿ ಅಸತ್ಕಾರ್ಯವಾದ, ಸತ್ಕಾರ್ಯವಾದ ಎಂಬ ಎರಡು ವಾದಗಳಿವೆ. ಅಸತ್ಕಾರ್ಯವಾದದಲ್ಲಿ ಘಟವು ಮೊದಲು ಇರಲಿಲ್ಲ. ಅದು ಹುಟ್ಟುತ್ತದೆ. ಆಮೇಲೆ ನಾಶವಾಗುತ್ತದೆ. ಇನ್ನೂ ಹುಟ್ಟದಿರುವಾಗ (ಭವಿಷ್ಯತ್) ಅನಾಗತಮಾರ್ಗ. ಹುಟ್ಟಿದಮೇಲೆ ವರ್ತಮಾನಮಾರ್ಗ, ನಾಶವಾದಾಗ ಅತೀತಮಾರ್ಗ.

ಸತ್ಕಾರ್ಯವಾದದಲ್ಲಿ ಎರಡು ಮತಗಳು. ಒಂದು ಸಾಂಖ್ಯರದು, ಇನ್ನೊಂದು ವೇದಾಂತಿಗಳದು. ಸತ್ಕಾರ್ಯವಾದದ ಪ್ರಕಾರ ಘಟಾದಿ ಭಾವವಸ್ತುವಿಗೂ ಅದರ ಧರ್ಮಗಳಾದ ಅವಯವಗಳಿಗೂ ಸೂಕ್ಷ್ಮವಾದ ಭೇದ ಉಂಟು. ಈ ಅವಯವ-ಗಳು ರೂಪಾಂತರ ಹೊಂದಿದಾಗ ಘಟಾದಿಪದಾರ್ಥವೇ ಅತೀತವಾಯಿತೆಂದು ಹೇಳುತ್ತಾರೆ. ಅವಯವಗಳು ಪರಿಣಮಿಸಿ ಸ್ಥೂಲರೂಪವನ್ನು ಪಡೆದಾಗ ವರ್ತ-ಮಾನವಾಗುತ್ತದೆ. ಅವಯವಗಳು ಮುಂದೆ ಸ್ಥೂಲರೂಪವನ್ನು ಪಡೆಯುವಾಗ ಭವಿಷ್ಯತ್ ಎಂಬ ವ್ಯವಹಾರ ಬರುತ್ತದೆ. ಒಟ್ಟಿನಲ್ಲಿ ಆಕೃತಿ ಭೇದಗಳು ವಾಸ್ತವ.

ವೇದಾಂತಿಗಳ ಮತದಲ್ಲಿ ಯಾವುದೂ ಪರಿಣಾಮವನ್ನು ಹೊಂದಿ ಇನ್ನೊಂದು ರೂಪವನ್ನು ತಳೆಯುವುದಿಲ್ಲ. ಕೆಲವು ಧರ್ಮಗಳು ಕಾಣಿಸಿಕೊಂಡಾಗ ವರ್ತಮಾನಾವಸ್ಥೆ. ಕಾಣಿಸಿಕೊಂಡು ಆಮೇಲೆ ಅದೃಶ್ಯವಾದರೆ ಅತೀತವೆಂದು ವ್ಯವಹಾರ. ಆ ಧರ್ಮಗಳು ಮುಂದೆ ಕಾಣಿಸಿಕೊಳ್ಳುತ್ತವೆ ಎಂಬ ವಿವಕ್ಷೆ ಇದ್ದಾಗ ಅನಾಗತವೆಂದು ವ್ಯವಹಾರ. ಅವೆಲ್ಲವೂ ಗೋಚರಿಸುತ್ತಿದ್ದರೆ ವರ್ತಮಾನ ಸ್ಥಿತಿಯಾಗುತ್ತದೆ. ಯಾವುದೂ ಹುಟ್ಟುವುದೂ ಇಲ್ಲ, ಹೋಗುವುದೂ ಇಲ್ಲ. ವ್ಯವಹಾರವಿರುವವರೆಗೆ ಕಾಣಿಸಿಕೊಳ್ಳುತ್ತದೆ. ಇದು ವ್ಯಾಕರಣ ಮಹಾಭಾಷ್ಯಕಾರರ ಮತ ಮತ್ತು ವೇದಾಂತಿ ಸಂಮತ.

**ಹೇತೂಪಕಾರಾದಾಕ್ಷಿಪ್ತೋ ವರ್ತಮಾನತ್ವಮಾಗತಃ ।**
**ಶಾಂತಹೇತೂಪಕಾರಃ ಸನ್ ಪುನರ್ನೋಪೈತಿ ದರ್ಶನಮ್ ॥ ೫೫ ॥**

ಒಂದಾನೊಂದು ಹೇತುವಿನ ಉಪಕಾರದಿಂದ ದರ್ಶನಪಥಕ್ಕೆ ಬಂದ ಧರ್ಮಿಯಾದ ಭಾವಪದಾರ್ಥವು ವರ್ತಮಾನಸ್ಥಿತಿಯನ್ನು ಪಡೆದಿರುತ್ತದೆ. ಹೇತುವಿನ ಉಪಕಾರವು ನಿಂತೊಡನೆ ಆ ಧರ್ಮಿಯು ಮತ್ತೆ ಕಾಣಿಸಿ-ಕೊಳ್ಳುವುದಿಲ್ಲ (ಅದರ್ಶನವನ್ನು ಹೊಂದುತ್ತದೆ).

**ವಿವರಣೆ** : ಅತೀತ, ವರ್ತಮಾನ-ಎಂಬ ಸ್ಥಿತಿಗಳು ಪರಸ್ಪರ ವಿರುದ್ಧವಾದವು. ಒಂದೇ ವಸ್ತುವಿನಲ್ಲಿ ಈ ಎರಡೂ ಸ್ಥಿತಿಗಳು ಇರುವುದು ಹೇಗೆ? ಎಂಬ ಪ್ರಶ್ನೆಗೆ

ಇಲ್ಲಿ ಉತ್ತರವಿದೆ. ಪ್ರತಿಯೊಂದು ಪದಾರ್ಥವೂ ಪ್ರಾಣಿಗಳ ಸುಖದುಃಖ ಭೋಗಾರ್ಥವಾಗಿ ಇರುತ್ತದೆ. ಪ್ರಾಣಿಗಳ ಅದೃಷ್ಟವು ಪಕ್ವವಾದಾಗ ಅದು ಕಾಲವನ್ನು ಪ್ರೇರಿಸುತ್ತದೆ. ಅದೃಷ್ಟವು ಹೇತು. ಪ್ರೇರಣೆ ಅದರ ಉಪಕಾರ. ಆಗ ಕಾಲದ ಅನುಜ್ಞೆಯಿಂದ ಭಾವಪದಾರ್ಥವು ದರ್ಶನಪಥಕ್ಕೆ ಬಂದು ವರ್ತಮಾನವಾಗುತ್ತದೆ. ಈ ಪದಾರ್ಥವು ತ್ರಿಗುಣಾತ್ಮಕವಾದದ್ದು. ಗುಣತ್ರಯವು ನಿತ್ಯವಾದದ್ದು. ಘಟಪಟಾದಿ ಪದಾರ್ಥವು ತನ್ನ ಆಕಾರದೊಡನೆ ನಿತ್ಯವೆಂದು ನಾವು ಹೇಳುವುದಿಲ್ಲ. ಸತ್ತ್ವಾದಿ ಗುಣಸ್ವರೂಪದಿಂದ ನಿತ್ಯವೆನ್ನುತ್ತೇವೆ. ಹೇತುವು ಪ್ರಾಪ್ತವಾದಾಗ ಆಕಾರಸಹಿತವಾಗಿ ಗೋಚರಿಸುತ್ತದೆ. ಗುಣತ್ರಯವು ಶಾಶ್ವತವಾದದ್ದರಿಂದ ಈ ಪದಾರ್ಥವೂ ನಿತ್ಯವೇ ಆಗಿದೆ. ಜ್ಞಾನಿಯಾದ ಪ್ರಾಚೀನಾಚಾರ್ಯನೊಬ್ಬನು ಹೇಳಿದ್ದಾನೆ 'ತದೇವ ತ್ರೈಲೋಕ್ಯಂ ವ್ಯಕ್ತೇರಪೈತಿ ನ ಸತ್ತ್ವಾತ್' ಎಂದು, ಇದರ ಅರ್ಥ ಹೀಗೆ. ತದೇವ = ಗುಣತ್ರಯಮಯವೇ ಆದ, ತ್ರೈಲೋಕ್ಯಂ = ಲೋಕತ್ರಯವು, ವ್ಯಕ್ತೇಃ = ಅಭಿವ್ಯಕ್ತಿ–ಯಿಂದ, ಹಾಗೆಯೇ ಅಭಿವ್ಯಕ್ತಿಯನ್ನು ಪಡೆಯದೆ, ಅಪೈತಿ = ಗೋಚರವಾಗದೆ ಹೋಗುತ್ತದೆ, ಸತ್ತ್ವಾತ್ = ಸತ್ತ್ವ ಪ್ರಧಾನವೂ ತನಗೆ ಕಾರಣವೂ ಅದ ಗುಣತ್ರಯದಿಂದ ನ = ಬೇರೆಯಾಗುವುದಿಲ್ಲ. ವ್ಯಾಖ್ಯಾನಕಾರನಾದ ಹೇಲಾರಾಜನು ಈ ವಾಕ್ಯವನ್ನು ಉದಾಹರಿಸಿದ್ದಾನೆ. ಯಾವ ಆಚಾರ್ಯನು ಇದನ್ನು ಹೇಳಿದ್ದಾನೆಂಬುದು ತಿಳಿಯದು.

**ದ್ವೇ ಏವ ಕಾಲಸ್ಯ ವಿಭೋಃ ಕೇಷಾಂಚಿತ್ ಶಕ್ತಿವರ್ತ್ಮನೀ ।**
**ಕರೋತಿ ಯಾಭ್ಯಾಂ ಭಾವಾನಾಮುನ್ಮೀಲನನಿಮೀಲನೇ ॥ ೫೬ ॥**

ಕೆಲವರ ಅಭಿಪ್ರಾಯದಂತೆ ಪ್ರಭುವಾದ ಕಾಲಕ್ಕೆ ಶಕ್ತಿಯ ಮಾರ್ಗಗಳು ಎರಡೇ ಇವೆ. ಅನುಜ್ಞಾ ಪ್ರತಿಬಂಧಗಳೆಂಬ ಈ ಎರಡರಿಂದಲೇ ಭಾವಪದಾರ್ಥಗಳ ದರ್ಶನಾದರ್ಶನಗಳನ್ನು ಕಾಲವು ನಿರ್ವಹಿಸುತ್ತದೆ.

**ವಿವರಣೆ** : ಇಲ್ಲಿ ವಿಭುವೆಂದರೆ ಪ್ರಭು, ಸರ್ವಶಕ್ತ ಎಂದರ್ಥ. ಶಕ್ತಿಯ ಮಾರ್ಗಗಳು, ಶಕ್ತಿರೂಪವಾದ ಮಾರ್ಗಗಳು ಎಂದು 'ಶಕ್ತಿವರ್ತ್ಮನೀ' ಎಂಬ ಶಬ್ದಕ್ಕೆ ಎರಡು ಬಗೆಯಲ್ಲಿಯೂ ಅರ್ಥ ಹೇಳಬಹುದು. ಅತೀತ, ಅನಾಗತಮಾರ್ಗ–ಗಳೆರಡೂ ಅದರ್ಶನವನ್ನುಂಟುಮಾಡತಕ್ಕವೇ. ಸತ್ಕಾರ್ಯವಾದದಲ್ಲಿ ಅತ್ಯಂತಾ–ಭಾವವಿಲ್ಲ. ಮತಾಂತರದಲ್ಲಿ ಇದ್ದರೂ ಅದು ಅದರ್ಶನದಲ್ಲಿಯೇ ಸೇರಿ ಹೋಗುತ್ತದೆ. ಅನ್ಯೋನ್ಯಾಭಾವವು ವರ್ತಮಾನಕ್ಕೆ ಅನ್ವಯಿಸತಕ್ಕದ್ದು. ಪ್ರಕೃತದಲ್ಲಿ ಅನುಪಯುಕ್ತ. ಪ್ರತಿಬಂಧಶಕ್ತಿಯು ಅದರ್ಶನವನ್ನೂ ಅನುಜ್ಞಾಶಕ್ತಿಯು ದರ್ಶನ–ವನ್ನೂ ಉಂಟುಮಾಡುವುದರಿಂದ ಅತೀತಾನಾಗತಗಳಿಗೆ ಎರಡು ಶಕ್ತಿಗಳೇ ಸಾಕಾಗುತ್ತವೆ.

**ಕಲಾಭಿಃ ಪೃಥಗರ್ಥಾಭಿಃ ಪ್ರವಿಭಕ್ತಂ ಸ್ವಭಾವತಃ ।**
**ಕೇಚಿದ್ ಬುದ್ಧ್ಯನುಸಂಹಾರಲಕ್ಷಣಂ ತಂ ಪ್ರಚಕ್ಷತೇ ॥ ೫೭ ॥**

ಪೃಥಗರ್ಥಾಭಿಃ = ಕ್ರಿಯೆಯಲ್ಲಿಯೇ ಇರುವ ಒಳಭೇದಗಳಿಂದ ಪರಸ್ಪರ ಭಿನ್ನ ಸ್ವರೂಪಗಳನ್ನು ತಳೆದಿರುವ ಮತ್ತು ಕಾಲಕ್ಕಿಂತ ಅತಿರಿಕ್ತಗಳಾ–ಗಿರುವ, ಕಲಾಭಿಃ = ಕ್ರಿಯಾವಯವಗಳಿಂದ ಸಹಜವಾಗಿ ವಿಭಕ್ತವಾಗಿದ್ದು ಅನಂತರ ಬುದ್ಧಿಯಿಂದಾಗುವ ಸಂಕಲನವೇ ಕಾಲವೆಂದು ಕೆಲವರು ಹೇಳುತ್ತಾರೆ.

**ವಿವರಣೆ** : ಕಾಲವು ಪ್ರತ್ಯೇಕವಾದ ಒಂದು ವಸ್ತುವಲ್ಲ. ಬುದ್ಧಿಯಿಂದಾಗುವ ಕ್ರಿಯಾಸಂಕಲನವೇ ಕಾಲವೆಂದು ಕೆಲವರ ಅಭಿಪ್ರಾಯವಿದೆ. ಹೇಗೆಂದರೆ ಕ್ರಿಯೆಯು ಅನೇಕ ವ್ಯಾಪಾರಗಳ ಸಮುದಾಯ. ಅಡುಗೆಮಾಡುವುದು ಒಂದು ಕ್ರಿಯೆ ಎನ್ನುತ್ತೇವೆ. ಆದರೆ ಇದರಲ್ಲಿ ಕ್ರಿಯಾರೂಪಗಳಾದ ಅನೇಕ ಅವಯವಗಳಿರುತ್ತವೆ. ಅಕ್ಕಿಯನ್ನು ತೊಳೆಯುವುದು, ಅದನ್ನು ಪಾತ್ರೆಯಲ್ಲಿರಿಸಿ ನೀರು ಸೇರಿಸುವುದು, ಒಲೆಯನ್ನು ಹೊತ್ತಿಸಿ ಅದರ ಮೇಲೆ ಪಾತ್ರೆಯನ್ನಿಡುವುದು, ಸೌಟಿನಿಂದ ತೊಳಸುವುದು. ಇವೆಲ್ಲ ಪರಸ್ಪರ ಭಿನ್ನಸ್ವರೂಪದ ಕ್ರಿಯೆಗಳು. ಈ ಕ್ರಿಯೆಗಳ (ವ್ಯಾಪಾರಗಳ) ಸಮುದಾಯವೇ ಅಡುಗೆ ಮಾಡುವುದು ಎಂಬ ಕ್ರಿಯೆ. ಹಳ್ಳಿಗೆ ಹೋಗುವುದು ಒಂದು ಕ್ರಿಯೆ. ಅದರಲ್ಲಿ ಒಂದೊಂದು ಹೆಜ್ಜೆಯನ್ನೆತ್ತಿ ಮುಂದಿಡು–ವುದೂ ಕ್ರಿಯೆಯೇ. ಇಂತಹ ಕ್ರಿಯೆಗಳ ಸಮುದಾಯವನ್ನು ಗಮನಕ್ರಿಯೆ ಎಂದು ಹೇಳುತ್ತೇವೆ. ಸರ್ವತ್ರ ಈ ರೀತಿ ಊಹಿಸಿಕೊಳ್ಳಬಹುದು. ಈ ಕ್ರಿಯಾವಯವಗಳನ್ನು ಬುದ್ಧಿಯು ಗ್ರಹಿಸಿ, ಅವು ಅಲ್ಪವಾಗಿದ್ದರೆ ಬೇಗನೆ ಅಡುಗೆಮಾಡುತ್ತಾನೆ ಎಂದೂ ಅಧಿಕವಾಗಿದ್ದರೆ ತಡವಾಗಿ ಮಾಡುತ್ತಾನೆ ಎಂದೂ ಹೇಳುತ್ತೇವೆ. ಹೀಗೆ ಎಲ್ಲ ಕ್ರಿಯೆಗಳಲ್ಲಿಯೂ ಅವಯವ ಕ್ರಿಯೆಗಳ ಸಂಕಲನವು ಸಹಜವಾಗಿ ಬುದ್ಧಿಯ–ಲ್ಲಾಗುತ್ತದೆ. ಈ ಸಂಕಲನಾತ್ಮಕ ಬುದ್ಧಿಯೇ ಚಿರ, ಕ್ಷಿಪ್ರ–ಇತ್ಯಾದಿ ವ್ಯವಹಾರಕ್ಕೆ ಕಾರಣ. ಇದಕ್ಕೆ ಕಾಲವು ಬೇಕಾಗಿಲ್ಲ. ಚಿರ, ಕ್ಷಿಪ್ರ – ಇತ್ಯಾದಿ ವ್ಯವಹಾರಗಳು ಕ್ರಿಯಾರೂಪವಾದ ಉಪಾಧಿಯ ಭೇದದಿಂದ ಕಾಲದಲ್ಲಾಗುತ್ತವೆ ಎಂದು ಹೇಳಲಾಗಿತ್ತು. ಈಗಲಾದರೋ ಸೂಕ್ಷ್ಮಕ್ರಿಯಾಭೇದಗಳ ಗಣನಾತ್ಮಕ ಬುದ್ಧಿಭೇದವೇ ಚಿರ, ಕ್ಷಿಪ್ರ ಇತ್ಯಾದಿ ವ್ಯವಹಾರಗಳಿಗೆ ನಿಮಿತ್ತವೆಂದೂ ಈ ಗಣನಾತ್ಮಕ ಬುದ್ಧಿಭೇದವನ್ನೇ ಕಾಲವೆಂದು ಲೋಕವು ವ್ಯವಹರಿಸುತ್ತೆಯೆಂದೂ ಹೇಳಲಾಗಿದೆ. ಈ ಮತದಲ್ಲಿ ಕಾಲವೆಂಬ ಒಂದು ತತ್ತ್ವವಿಲ್ಲ. ಸಂಕಲನಾತ್ಮಕ ಬುದ್ಧಿಯೇ ಕಾಲವೆನಿಸುತ್ತದೆ. ವಿಜ್ಞಾನವಾದಿಗಳಾದ ಬೌದ್ಧರ ಮತವಿದು.

**ಜ್ಞಾನಾನುಗತಶಕ್ತಿಂ ವಾ ಬಾಹ್ಯಂ ವಾ ಸತ್ಯತಃ ಸ್ಥಿತಂ ।**
**ಕಾಲಾತ್ಮಾನಮನಾಶ್ರಿತ್ಯ ವ್ಯವಹರ್ತುಂ ನ ಶಕ್ಯತೇ ॥ ೫೮ ॥**

ಕಾಲವೆಂದರೆ ಬುದ್ಧಿಯಲ್ಲಿ ಅನುಗತವಾಗಿ ಬುದ್ಧಿಯ ಆಕಾರಗಳೇ ಆದ ಗಣನಾತ್ಮಕ ಶಕ್ತಿಗಳುಳ್ಳ ಬುದ್ಧಿಭೇದವೆಂದಾಗಲು ಅಥವಾ ನಮ್ಮ ಮತದಂತೆ ಬುದ್ಧಿಭೇದಕ್ಕೆ ಹೊರತಾಗಿ ಪರಮಾರ್ಥವಾದ ಕಾಲವೆಂದು ತತ್ತ್ವವಿದೆ–ಯೆಂದೇ ಆಗಲಿ, ಉಭಯಥಾ ಕಾಲವೆಂಬ ವಸ್ತುವನ್ನು ಆಶ್ರಯಿಸದೆ ಲೋಕದಲ್ಲಿ ವ್ಯವಹರಿಸುವುದಕ್ಕೇ ಆಗುವುದಿಲ್ಲ.

**ವಿವರಣೆ** : ಕಾಲವೆಂಬ ಒಂದು ಪದಾರ್ಥವು ಪರಮಾರ್ಥವಾಗಿ ಇದೆಯೇ ಇಲ್ಲವೆ? – ಎಂಬುದನ್ನು ವಿವೇಚಿಸಿ ನಮ್ಮ ಸಿದ್ಧಾಂತವನ್ನು ಸ್ಥಾಪಿಸುವುದಕ್ಕಾಗಿ ನಾವು ಹೊರಟಿಲ್ಲ. ಲೋಕದ ಶಾಬ್ದಿಕ ವ್ಯವಹಾರದಲ್ಲಿ ಭೂತ ವರ್ತಮಾನ ಭವಿಷ್ಯತ್ ಎಂಬ ಕಾಲಭೇದಗಳಿವೆಯಷ್ಟೇ. ಈ ಭೇದಗಳು ಕಾಲದಲ್ಲಿ ಹೇಗೆ ಉಂಟಾಗುತ್ತವೆ–ಎಂಬುದಿಷ್ಟೇ ಈಗ ಪರೀಕ್ಷಿಸಬೇಕಾದದ್ದು.

ಹಾಗಲ್ಲದೆ ಕಾಲ ಸ್ವರೂಪವನ್ನೇ ವಿಚಾರಿಸಲು ಹೊರಟರೆ, ಅದು ವ್ಯವಸ್ಥಿತ–ವಾಗುವುದೇ ಇಲ್ಲ –

**ತಿಸ್ರೋಽಭಾವಸ್ಯ ಭಾವಸ್ಯ ಕೇಷಾಂಚಿತ್ ಭಾವಶಕ್ತಯಃ ।**
**ತಾಭಿಃ ಸ್ವಶಕ್ತಿಭಿಃ ಸರ್ವಂ ಸದೈವಾಸ್ತಿ ಚ ನಾಸ್ತಿ ಚ ॥ ೫೯ ॥**

ಕೆಲವರ (ಸಾಂಖ್ಯರ) ಮತದಂತೆ ಭಾವವಸ್ತುಗಳಲ್ಲಿರುವ ಶಕ್ತಿಗಳು ಸತ್ತ್ವ ರಜಸ್ಸು ತಮಸ್ಸು ಎಂದು ಮೂರು. ಇವು ಭಾವವಸ್ತುಗಳ ಅಭಾವಕ್ಕೂ ಭಾವ(ಅಸ್ತಿತ್ವ)ಕ್ಕೂ ಪ್ರಯೋಜಕಗಳಾಗಿವೆ. ತಮ್ಮಲ್ಲಿರುವ ಈ ಮೂರು ಶಕ್ತಿ–ಗಳಿಂದ ಎಲ್ಲ ವಸ್ತುವೂ ಯಾವಾಗಲೂ ಇರುತ್ತದೆ. ಮತ್ತು ಇಲ್ಲವಾಗುತ್ತದೆ.

**ವಿವರಣೆ** : ಸಾಂಖ್ಯಸಿದ್ಧಾಂತದಲ್ಲಿ ಪ್ರಕೃತಿಯು ತ್ರಿಗುಣಾತ್ಮಕವಾದದ್ದು. ಸಕಲ ಜಡವಸ್ತುಗಳೂ ಪ್ರಕೃತಿಯ ವಿಕಾರಗಳೇ ಆದ್ದರಿಂದ ಎಲ್ಲವೂ ಸತ್ತ್ವರಜಸ್ತಮೋ–ಮಯಗಳಾಗಿವೆ. ವಸ್ತುಗಳಲ್ಲಿರುವ ಶಕ್ತಿಗಳೆಂದರೂ ಈ ಮೂರು ಗುಣಗಳೇ. ಇವು–ಗಳಲ್ಲಿ ಸತ್ತ್ವವು ಪ್ರಕಾಶಕವಾದ್ದರಿಂದ ಭಾವಗಳನ್ನು ಕಾಣಿಸಿ ವರ್ತಮಾನ ಸ್ಥಿತಿ–ಯನ್ನು ತಂದುಕೊಡುತ್ತದೆ. ತಮಸ್ಸು ಆಚ್ಛಾದಕವಾದ್ದರಿಂದ ಭಾವಗಳ ಸ್ವರೂಪ–ವನ್ನು ಮರೆಮಾಡಿ ಭೂತ (ಅತೀತ) ಭವಿಷ್ಯತ್ (ಅನಾಗತ) ಸ್ಥಿತಿಗಳನ್ನು ತಂದು ಕೊಡುತ್ತದೆ. ರಜಸ್ಸು ಈ ಸ್ಥಿತಿಗಳಿಗೆ ಪ್ರವರ್ತಕ. ಪ್ರಕೃತಿಯು ನಿತ್ಯವಾದ್ದರಿಂದ

ಸಮಸ್ತಭಾವಗಳೂ ಸದಾ ಇರುತ್ತವೆ ಎನ್ನಬಹುದು. ತಮೋಗುಣದಿಂದ ಅವು ಮರೆಯಾದಾಗ 'ಇಲ್ಲ' ಎಂದೂ ಹೇಳಬಹುದು. ಇವೇ ವಸ್ತುಗಳ ದರ್ಶನ–ಅದರ್ಶನಗಳು. ಈ ವಿಚಾರವು ಹಿಂದೆ ಉಕ್ತವಾಗಿದೆ. ಭಿನ್ನಾಭಿಪ್ರಾಯಗಳನ್ನು ಸಂಗ್ರಹಿಸುವುದಕ್ಕಾಗಿ ಪುನರುಕ್ತವಾಗಿದೆ.

**ಸತ್ತ್ವಾದವ್ಯತಿರೇಕೇಣ ತಾಸ್ತಿಸ್ರೋಽಪಿ ವ್ಯವಸ್ಥಿತಾಃ ।**
**ಕ್ರಮಸ್ತಾಸ್ತದಭೇದಾಚ್ಚ ಸದಸತ್ತ್ವಂ ನ ಭಿದ್ಯತೇ ॥ ೬೦ ॥**

ಈ ಮೂರು ಭೂತಾದಿಶಕ್ತಿಗಳು, ಸತ್ತ್ವಾತ್ = ಭಾವಪದಾರ್ಥದಿಂದ ಭಿನ್ನವಾಗದೆ ಅದರೊಡನೆ ಅಭೇದದಿಂದಲೇ ವ್ಯವಸ್ಥಿತವಾಗಿವೆ. ಈ ವ್ಯವಸ್ಥೆಯೇ ಕ್ರಮ ಎನ್ನಿಸಿದೆ. ಈ ಕ್ರಮವಿರುವುದರಿಂದ ಭೂತಾದಿಶಕ್ತಿಗಳು ತಾವಿರುವ ಭಾವಗಳಿಗೆ ಸತ್ತ್ವ(ಅಸ್ತಿತ್ವ) ಅಸತ್ತ್ವ(ನಾಸ್ತಿತ್ವ)ಗಳೆರಡನ್ನು ಏಕ–ಕಾಲದಲ್ಲಿ ಮಾಡುವುದಿಲ್ಲ. ಭೂತಾದಿ ಮೂರು ಶಕ್ತಿಗಳಿಗೂ ಭಾವದ್ರವ್ಯಕ್ಕೂ ಅಭೇದ. ಭಾವದ್ರವ್ಯಕ್ಕೂ ಅದರಲ್ಲಿರುವ ಭೂತಾದಿ ಶಕ್ತಿಗಳಿಗೂ ಅಭೇದ. ಆದ್ದರಿಂದ ಇವು ಮೂಲವಸ್ತುವಾದ ಗುಣತ್ರಯರೂಪವಾದ ಮೂಲಶಕ್ತಿ–ಗಳಿಗೆ ಅಭಿನ್ನವಾದವು. ಆದ್ದರಿಂದ ಒಂದು ಭಾವದ ಸತ್ತ್ವ, ಅಸತ್ತ್ವಗಳು ವಿರುದ್ಧವಲ್ಲ.

**ವಿವರಣೆ :** ಸತ್ತ್ವ, ರಜಸ್ಸು, ತಮಸ್ಸು – ಇವು ಗುಣತ್ರಯ. ಇವುಗಳಿಂದ ಘಟಾದಿ ಭಾವವಸ್ತು ಉತ್ಪನ್ನವಾಗಿದೆ. ಮಣ್ಣಿನಿಂದ ಹುಟ್ಟಿದ ಗಡಿಗೆಗೂ ಮಣ್ಣಿಗೂ ಗಡಿಗೆಗೂ ಹೇಗೆ ಭೇದವಿಲ್ಲವೋ ಹಾಗೆ ಗುಣತ್ರಯಕ್ಕೂ ಭಾವವಸ್ತುವಿಗೂ ಭೇದ–ವಿಲ್ಲ. ಗುಣತ್ರಯದಲ್ಲಿ ದರ್ಶನಾದರ್ಶನಗಳೆಂಬ ಶಕ್ತಿಗಳಿವೆ. ಇವು ಒಂದಾದಮೇಲೆ ಒಂದರಂತೆ ಕ್ರಮದಿಂದ ವರ್ತಿಸುತ್ತವೆ. ಕ್ರಮದಿಂದ ವರ್ತಿಸುವ ಈ ಶಕ್ತಿಗಳಿಗೂ ಗುಣತ್ರಯಕ್ಕೂ ಅಭೇದ. 'ಶಕ್ತಿಶಕ್ತಿಮತೋರಭೇದಃ' ಎಂಬ ನ್ಯಾಯದಂತೆ ಶಕ್ತಿ–ಮತ್ತಾದ ಗುಣತ್ರಯಕ್ಕೂ ಈ ಶಕ್ತಿಗಳಿಗೂ ಭೇದವಿಲ್ಲ. ಗುಣತ್ರಯಾತ್ಮಕವಾದ ಭಾವ–ವಸ್ತುವಿನಲ್ಲಿಯೂ ಈ ಶಕ್ತಿಗಳು ಸಂಕ್ರಾಂತವಾಗಿ ಬಂದಿರುತ್ತವೆ. ಭಾವವಸ್ತುವಿಗೂ ಈ ಶಕ್ತಿಗಳಿಗೂ ಅಭೇದ. ಈ ಶಕ್ತಿಗಳಿಗೂ ಗುಣತ್ರಯಕ್ಕೂ ಅಭೇದ. 'ತದಭಿನ್ನಾಭಿ–ನ್ನಸ್ಯ ತದಭಿನ್ನತ್ವಂ' ಎಂಬ ಒಂದು ನ್ಯಾಯ ಉಂಟು. ಮೂಲವಸ್ತುವಿಗೆ ಅಭಿನ್ನ–ವಾದ ಇನ್ನೊಂದು ವಸ್ತುವಿಗೆ ಅಭಿನ್ನವಾದ ಮತ್ತೊಂದು ವಸ್ತುವಿಗೂ ಮೂಲ ವಸ್ತುವಿನೊಡನೆ ಅಭೇದವೇ ಇರುತ್ತದೆ ಎಂದು ಇದರ ಅರ್ಥ. ಉದಾಹರಣೆ – ತೇಗದಮರದಿಂದ ಹಲಗೆಯಾಗುತ್ತದೆ. ತೇಗದಮರ ಹಲಗೆಗಳಿಗೆ ಅಭೇದ.

ಹಲಗೆಯಿಂದ ಪೆಟ್ಟಿಗೆ ಹುಟ್ಟುತ್ತದೆ. ಹಲಗೆಗೂ ಪೆಟ್ಟಿಗೆಗೂ ಅಭೇದ. ಹೀಗಿರುವಾಗ ಪೆಟ್ಟಿಗೆಗೂ ತೇಗದಮರಕ್ಕೂ ಅಭೇದವೇ. ಹಾಗೆಯೇ ಭಾವದ ದರ್ಶನಾದರ್ಶನ ಶಕ್ತಿಗಳಿಗೂ ಗುಣತ್ರಯಕ್ಕೂ ಅಭೇದವೇ. ಏವಂಚ ಪ್ರಕೃತಿಯ (ಗುಣತ್ರಯದ) ಈ ಶಕ್ತಿಗಳೇ ಭಾವವಸ್ತುವಿನ ಶಕ್ತಿಗಳಾಗಿ ಕ್ರಮದಿಂದ ವರ್ತಿಸುತ್ತವೆ. ದರ್ಶನಶಕ್ತಿಯಿಂದ ವರ್ತಮಾನ ಮಾರ್ಗವೂ ಅದರ್ಶನ ಶಕ್ತಿಯಿಂದ ಭೂತಭವಿಷ್ಯತ್ತುಗಳೆಂಬ ಮಾರ್ಗಗಳೂ ನಿಷ್ಪನ್ನವಾಗುತ್ತವೆ. ಇವು ಕ್ರಮವ್ಯವಸ್ಥೆಯಿಂದ ವರ್ತಿಸುತ್ತವೆ. ಆದ್ದರಿಂದ ಒಂದೇ ವಸ್ತುವಿನಲ್ಲಿ ಸತ್ತ್ವ, ಅಸತ್ತ್ವಗಳೆರಡೂ ವಿರುದ್ಧವಾಗುವುದಿಲ್ಲ.

**ದರ್ಶನಾದರ್ಶನೇ ನೈಕಂ ದೃಷ್ಟಾದೃಷ್ಟಂ ತದೇವ ತು ।**
**ಅಧ್ವನಾಮೇಕತಾ ನಾಸ್ತಿ ನ ಚ ಕಿಂಚಿನ್ನಿವರ್ತತೇ ॥ ೬೧ ॥**

(ವರ್ತಮಾನಾದಿ ಶಕ್ತಿಗಳ ವ್ಯಾಪಾರಗಳಾದ) ದರ್ಶನ ಮತ್ತು ಅದರ್ಶನಗಳು ಒಂದೇ ಅಲ್ಲ, ಬೇರೆ ಬೇರೆ ವ್ಯಾಪಾರಗಳು. ಆದರೆ ಅವುಗಳಿಂದ ದೃಷ್ಟವೂ ಅದೃಷ್ಟವೂ ಆಗುವ ವಸ್ತು ಒಂದೇ ಆಗಿರುತ್ತದೆ. ವರ್ತಮಾನಾದಿ ಶಕ್ತಿತ್ರಯಗಳಾದ ಮಾರ್ಗಗಳಿಗೆ ಏಕತೆ ಇಲ್ಲ. ಯಾವ ವಸ್ತುವೂ ಆತ್ಯಂತಿಕವಾಗಿ ವಿನಾಶ ಹೊಂದುವುದಿಲ್ಲ.

**ವಿವರಣೆ** : ವರ್ತಮಾನ ಶಕ್ತಿಯಿಂದ ವಸ್ತುಗಳ ಪ್ರಕಾಶನವೇ ದರ್ಶನ. ಅತೀತ–ಅನಾಗತಶಕ್ತಿಗಳಿಂದ ವಸ್ತುಗಳ ತಿರೋಧಾನವು (ಆಚ್ಛಾದನವು) ಅದರ್ಶನ. ಅವು ಪರಸ್ಪರ ವಿರುದ್ಧಗಳಾದ್ದರಿಂದ ಇವುಗಳಿಗೆ ಅಭೇದವಿಲ್ಲ. ಇವೆರಡೂ ಭಿನ್ನ ವ್ಯಾಪಾರಗಳು. ಆದರೆ ಈ ವ್ಯಾಪಾರಗಳಿಗೆ ಒಂದೇ ವಸ್ತು ವಿಷಯವಾಗಬಹುದು. ಒಂದೇ ಘಟವು ದರ್ಶನಾದರ್ಶನಗಳೆರಡನ್ನೂ ಪಡೆಯುತ್ತದೆ. ಆದ್ದರಿಂದ ದರ್ಶನಾದರ್ಶನಗಳನ್ನುಂಟುಮಾಡುವ ವರ್ತಮಾನಾದಿ ಶಕ್ತಿಗಳಿಗೂ ಏಕತೆ ಇಲ್ಲ. ಈ ಶಕ್ತಿಗಳಿಗೆ ಗುರಿಯಾಗುವ ವಸ್ತುವಿಗೆ ಮಾತ್ರ ಏಕತೆ ಇರುತ್ತದೆ. ಅದರ್ಶನವೆಂದರೆ ಆತ್ಯಂತಿಕ ವಿನಾಶವಲ್ಲ. ವಿನಷ್ಟವಾದ ವಸ್ತುವು ಸೂಕ್ಷ್ಮರೂಪದಿಂದ (ಉಪಾದಾನ ಕಾರಣರೂಪದಿಂದ) ಇದ್ದೇ ಇರುತ್ತದೆ. ಇದು ಸತ್ಕಾರ್ಯವಾದಿಗಳ ಸಿದ್ಧಾಂತ.

**ಶಕ್ತ್ಯಾತ್ಮದೇವತಾಪಕ್ಷೈರ್ಭಿನ್ನಂ ಕಾಲಸ್ಯ ದರ್ಶನಂ ।**
**ಪ್ರಥಮಂ ತದವಿದ್ಯಾಯಾಂ ಯದ್ವಿದ್ಯಾಯಾಂ ನ ವಿದ್ಯತೇ ॥ ೬೨ ॥**

ಕಾಲವೆಂದರೆ ಪರಬ್ರಹ್ಮದ ಶಕ್ತಿ, ಆತ್ಮವೇ ಕಾಲ, ಕಾಲವು ಒಂದು ದೇವತೆ – ಎಂಬ ಪಕ್ಷಗಳಿರುವುದರಿಂದ ಕಾಲದರ್ಶನವು ಅನೇಕ ವಿಧ–

ವಾಗಿದೆ. ಪ್ರಥಮ ಪಕ್ಷಕ್ಕೆ ಸೇರಿದ ಪರಬ್ರಹ್ಮಶಕ್ತಿಯು ಸಂಸಾರ ಕಾರಣವಾದ ಅವಿದ್ಯೆ ಇರುವಾಗ. ಆತ್ಮಸಾಕ್ಷಾತ್ಕಾರ ರೂಪವಾದ ವಿದ್ಯೆ(ಜ್ಞಾನ) ಹುಟ್ಟಿದಾಗ ಅದು ಇರುವುದಿಲ್ಲ.

**ವಿವರಣೆ** : ಬ್ರಹ್ಮಶಕ್ತಿಯೇ ಕಾಲವೆಂಬುದು ಗ್ರಂಥಕಾರನಾದ ಭರ್ತೃಹರಿಯ ಪಕ್ಷ. ಅವಿದ್ಯೆ ಇರುವವರೆಗೆ ಸಂಸಾರವಿರುತ್ತದೆ. ಸಂಸಾರವಿದ್ದಾಗ ವ್ಯವಹಾರಕ್ಕಾಗಿ ಕಾಲವು ಆವಶ್ಯಕ. ಸಂಸಾರ ದಶೆಯಲ್ಲಿಯೇ ಈ ಕಾಲದ ವಿವೇಚನೆ ಹೊರಟಿದೆ. ಅದ್ವೈತಾತ್ಮದರ್ಶನವಾದಾಗ ಸಂಸಾರ ವ್ಯವಹಾರಗಳೆಲ್ಲಾ ತೊಲಗಿ ಹೋಗಿರುತ್ತವೆ. ಆದ್ದರಿಂದ ಮುಕ್ತಾತ್ಮನಿಗೆ ಕಾಲದ ಆವಶ್ಯಕತೆಯೂ ಇಲ್ಲ, ಕಾಲವು ತೋರುವುದೂ ಇಲ್ಲ.

ಇಲ್ಲಿ ಹೇಳಬೇಕಾದ ಇನ್ನೂ ಕೆಲವು ಅಂಶಗಳುಂಟು. ಕೆಲವು ವ್ಯಾಖ್ಯಾನ–ಕಾರರು ಈ ಶ್ಲೋಕದಲ್ಲಿರುವ ಶಕ್ತಿ ಶಬ್ದಕ್ಕೆ ಕಾರಣದಲ್ಲಿರುವ ಕಾರಣಶಕ್ತಿಯೇ ಕಾಲವೆಂದು ವ್ಯಾಖ್ಯಾನ ಮಾಡಿದ್ದಾರೆ. ಅಂಕುರಕ್ಕೆ ಬೀಜವು ಕಾರಣ, ಬೀಜಶಕ್ತಿಯು ಮೊಳಕೆಯೊಡೆಯುವುದಕ್ಕೆ ಅನುಜ್ಞೆಯನ್ನಿತ್ತಾಗ ಮೊಳಕೆ ಹುಟ್ಟುತ್ತದೆ. ಕಾಂಡವಾಗು–ವುದನ್ನು ಪ್ರತಿಬಂಧಿಸುತ್ತದೆ. ಮೊಳಕೆ ಹುಟ್ಟಿದ ಮೇಲೆ ಕಾಂಡವಾಗಲು ಅನುಮತಿ ಕೊಡುತ್ತದೆ. ಗಿಡವಾಗುವುದನ್ನು ಪ್ರತಿಬಂಧಿಸುತ್ತದೆ. ಹೀಗೆ ಅನುಜ್ಞಾಪ್ರತಿಬಂಧ–ಗಳಿಂದ ಬೀಜಶಕ್ತಿಯೇ ಕಾಲವಾಗುತ್ತದೆ ಎಂದು ಅವರ ಅಭಿಪ್ರಾಯ.

ಇದು ಯುಕ್ತವಲ್ಲ. ಪ್ರತಿಯೊಂದು ಭಾವದ ಉತ್ಪತ್ತಿಗೂ ಕಾರಣವು ಆವಶ್ಯಕ. ಬೀಜದಿಂದ ಮೊಳಕೆ, ಮೊಳಕೆಯಿಂದ ಕಾಂಡ ಈ ರೀತಿ ಹುಟ್ಟುವುದು ಕಾರಣದ ಸಾಮರ್ಥ್ಯವನ್ನನುಸರಿಸಿ – ಎಂಬುದೇನೋ ಸರಿ. ಆದರೆ ಅನುಜ್ಞಾ ಪ್ರತಿಬಂಧಗಳ–ನ್ನುಂಟು ಮಾಡಲು ಕಾರಣಕ್ಕೆ ಸಾಮರ್ಥ್ಯವಿಲ್ಲ. ಒಂದೇ ಸಲಕ್ಕೆ ಮೊಳಕೆ, ಕಾಂಡ ಮುಂತಾದವು ಏಕೆ ಹುಟ್ಟುವುದಿಲ್ಲ? ಅದನ್ನು ನಿಯಂತ್ರಿಸಿ ಕ್ರಮವಾಗಿ ತಡೆತಡೆದು ಕಾರ್ಯವನ್ನು ಹುಟ್ಟಿಸಲು ಬೇರೆ ಶಕ್ತಿಯೊಂದಿರಬೇಕು. ಅದೇ ಕಾಲವೆನಿಸುತ್ತದೆ. ಭಾವಗಳ ಉತ್ಪತ್ತಿ, ವೃದ್ಧಿ, ನಾಶಗಳಲ್ಲಿ ಒಂದು ಕ್ರಮವಿರುವುದರಿಂದ ಈ ಕ್ರಮವೆಂಬ ಕಾಲಶಕ್ತಿಯನ್ನು ಅವಶ್ಯವಾಗಿ ಒಪ್ಪಿಕೊಳ್ಳಬೇಕಾಗಿದೆ. ಈ ಕ್ರಮ ಎಲ್ಲ ಭಾವ–ಪದಾರ್ಥಗಳಿಗೂ ಉಪಾಧಿಯಾಗಿ ಇದ್ದೇ ಇರುತ್ತದೆ. ಬೀಜಾದಿ ಕಾರಣಗಳಿಗೆ ಕಾರ್ಯೋತ್ಪತ್ತಿಯಲ್ಲಿ ಕಾಲವು ಸಹಕಾರಿಯಾಗಿರುತ್ತದೆ.

ಪರಮಾತ್ಮನ ಶಕ್ತಿಯು ಕಾಲವೆಂಬ ದರ್ಶನವು ಅನುಗುಣವಾದದ್ದು. ಆತ್ಮನು ಕಾಲವೆಂಬುದು ಎರಡನೆಯ ಪಕ್ಷ. ಇಲ್ಲಿ ಆತ್ಮನೆಂದರೆ ಜೀವಾತ್ಮ. ಅವಿದ್ಯಾ ನಿಮಿತ್ತ–ದಿಂದ ಪರಮಾರ್ಥವನ್ನು ತಿಳಿಯಲು ಅಸಮರ್ಥನಾದ ಜೀವನು ಭಾವಪದಾರ್ಥ–

ಗಳಲ್ಲಿ ಕ್ರಮವನ್ನು ಕಾಣುತ್ತಾನೆ. ಸರ್ವಗತನಾದ ಪರಮಾತ್ಮನ ಶಕ್ತಿಯೇ ಜೀವಗತವಾಗಿರುವುದರಿಂದ ಜೀವಾತ್ಮನ ಶಕ್ತಿಯೇ ಕಾಲವೆಂದರೂ ಸರಿ. ಶಕ್ತಿಯ ಕಾಲತ್ವವನ್ನು ಜೀವಾತ್ಮನಲ್ಲಿ ಆರೋಪಿಸಿ ಜೀವಾತ್ಮನೇ ಕಾಲವೆಂದು ಶ್ಲೋಕದಲ್ಲಿ ಹೇಳಿದ್ದಾರೆ.

ಇನ್ನು ಕೆಲವರು ಶರೀರಧಾರಿಯೂ ಮಹಾಪ್ರಭಾವ ಶಾಲಿಯೂ ಆದ ಒಬ್ಬ ದೇವತೆಯೇ ಕಾಲವೆಂದು ತಿಳಿಯುತ್ತಾರೆ. ಈ ವಿವಿಧವಾದ ಕಾಲದರ್ಶನ ಪಕ್ಷಗಳಲ್ಲಿ ಶಕ್ತಿಯು ಕಾಲವೆಂಬ ಪಕ್ಷವೇ ಸಿದ್ಧಾಂತರೂಪವಾದ ದರ್ಶನ. ಪರಮಾತ್ಮನ ಶಕ್ತಿಗಳೇ ಅಲ್ಲವೆ ದುರ್ಗಾ, ಕಾಳೀ, ಸರಸ್ವತೀ ಮುಂತಾದ ಸ್ತ್ರೀ ದೇವತಾ ರೂಪದಲ್ಲಿ ವಿಜೃಂಭಿಸುತ್ತಿರುವುದು? ಉಪಾಸನಾರ್ಥವಾಗಿ ರೂಪಕಲ್ಪನೆ. ಸಂಸಾರ ಹೇತುವಾದ ಅವಿದ್ಯೆಯಲ್ಲಿ ಕಾಲದರ್ಶನವೇ ಮೊದಲನೆಯದು. ಕಾಲಶಕ್ತಿಯ ಸಹಕಾರದಿಂದಲೇ ಅವಿದ್ಯಾಶಕ್ತಿಗೆ ಸೃಷ್ಟಿ ಸಾಮರ್ಥ್ಯವು ಬರುತ್ತದೆ. ದ್ವೈತವಿಲ್ಲದೆ ಸಂಸಾರವಿಲ್ಲ. ದೇಶಕಾಲಗಳಿಲ್ಲದೆ ದ್ವೈತವಿಲ್ಲ. ಬ್ರಹ್ಮತತ್ತ್ವವಾದರೋ ಕ್ರಮರಹಿತವೂ ಕಾಲರಹಿತವೂ ವಿದ್ಯಾಸ್ವರೂಪವೂ ಆದದ್ದು. ಅದು ಅವಿದ್ಯಾನಿಮಿತ್ತದಿಂದ ಉದ್ಭೂತವಾದ ಕಾಲ-ಶಕ್ತಿಯ ಸಹಕಾರದಿಂದ ಜಗತ್ತಿನ ಸೃಷ್ಟಿಯನ್ನು ವಿವರ್ತಕ್ರಮದಲ್ಲಿ ಆರಂಭಿಸುತ್ತದೆ. ಹೀಗೆ ಅವಿದ್ಯಾ ಕಲ್ಪಿತವಾದ ಶಕ್ತಿಯೇ ಕಾಲವಾಗಿರುವುದರಿಂದ ಕಾಲವಿಮರ್ಶೆಯಲ್ಲಿ 'ಇದು ಯುಕ್ತ ಅದು ಅಯುಕ್ತ' ಎಂದು ವಾದವನ್ನು ಬೆಳೆಸುವುದು ವ್ಯರ್ಥವೇ ಸರಿ. ವ್ಯವಹಾರಕ್ಕೆ ಅವಶ್ಯಕವಾದ್ದರಿಂದ ಲೋಕಾನುಭವಕ್ಕೆ ಹೊಂದುವಷ್ಟು ಕಾಲವಿವೇಚನೆ ಸಾಕಾಗುತ್ತದೆ.

ನಿತ್ಯವಾದ ಕಾಲವು ಒಂದೇ ಆಗಿದೆಯೆಂದೂ ಕ್ರಮವು ಅದರಲ್ಲಿ ಆರೋಪಿತ-ವಾಗಿ ಚಿರ, ಕ್ಷಿಪ್ರ - ಇತ್ಯಾದಿ ವ್ಯವಹಾರಗಳು ಬರುತ್ತವೆಯೆಂದೂ ಹೇಳುವುದಾದರೆ, ವರ್ಣಗಳು ನಿತ್ಯವಾದವು ಎಂಬ ಸಿದ್ಧಾಂತಕ್ಕೆ ಭಂಗವಾದೀತು. ಹೇಗೆಂದರೆ -

**ಅಭೇದೇ ಯದಿ ಕಾಲಸ್ಯ ಹ್ರಸ್ವದೀರ್ಘಪ್ಲುತಾದಿಷು ।**
**ದೃಶ್ಯತೇ ಭೇದನಿರ್ಭಾಸಃ ಸ ಚಿರಕ್ಷಿಪ್ರಬುದ್ಧಿವತ್ ॥ ೬೩ ॥**

**ಹ್ರಸ್ವದೀರ್ಘಪ್ಲುತಾವೃತ್ತ್ಯಾ ನಾಲಿಕಾಸಲಿಲಾದಿಷು**
**ಕಥಂ ಪ್ರಚಯಯೋಗಃ ಸ್ಯಾತ್ ಕಲ್ಪನಾಮಾತ್ರಹೇತುಕಃ ॥೬೪॥**

ಹ್ರಸ್ವ, ದೀರ್ಘ, ಪ್ಲುತ - ಇವುಗಳ ಉಚ್ಚಾರಣೆ ಮುಂತಾದ ಸ್ಥಳಗಳಲ್ಲಿ ಉಚ್ಚಾರಣೆಯ ಕಾಲದಲ್ಲಿ ವಾಸ್ತವವಾಗಿ ಅಭೇದವಿದ್ದರೂ ಕಲ್ಪಿತಭೇದವು ತೋರುತ್ತದೆ ಎನ್ನಬೇಕಾಗುವುದು. 'ಈ ಕಾರ್ಯವು ಆಗಲು ಚಿರಕಾಲ

ಹಿಡಿಯಿತು, ಈ ಕಾರ್ಯವು ಕ್ಷಿಪ್ರಕಾಲದಲ್ಲಾಯಿತು’ ಎಂಬಲ್ಲಿ ಕ್ರಿಯಾ-ವಯವಗಳ ಸಂಖ್ಯೆಯ ಬಹುತ್ವ, ಅಲ್ಪತ್ವಗಳ ಆರೋಪದಿಂದ ಚಿರ, ಕ್ಷಿಪ್ರ ವ್ಯವಹಾರಗಳ ಬುದ್ಧಿಯುಂಟಾಗುವುದೆಂದು, ಹಿಂದೆ ಹೇಳಿದಂತೆ ಉಚ್ಚಾರಣ ಕ್ರಿಯೆಗಳ ಸಂಖ್ಯೆಯ ಆರೋಪದಿಂದ ಹ್ರಸ್ವಾದಿ ವರ್ಣಗಳಲ್ಲಿ ಕಲ್ಪಿತಭೇದ-ಬುದ್ಧಿ ಹುಟ್ಟುವುದೆಂದು ಹೇಳಬೇಕಾಗುತ್ತದೆ.

ಹಾಗಾದರೆ (ಹ್ರಸ್ವಾದಿಗಳನ್ನು ಉಚ್ಚರಿಸುವಾಗ ಒಂದು ಕೊಳವೆಯಲ್ಲಿ ನೀರು ಸುರಿಯುತ್ತದೆ ಎಂದು ಇಟ್ಟುಕೊಳ್ಳೋಣ). ಹ್ರಸ್ವವನ್ನು ಉಚ್ಚರಿಸುವಾಗ ಕೊಳವೆಯಲ್ಲಿ ಎಷ್ಟು ನೀರು ಸುರಿಯುತ್ತದೆಯೋ ಅದಕ್ಕಿಂತ ಅಧಿಕವಾಗಿ ದೀರ್ಘವನ್ನುಚ್ಚರಿಸಿದಾಗ ಹರಿಯುತ್ತದೆ. ಅದಕ್ಕಿಂತಲೂ ಅಧಿಕವಾಗಿ ಪ್ಲುತವನ್ನುಚ್ಚರಿಸಿದಾಗ ಹರಿಯುತ್ತದೆ. ನೀರಿನಲ್ಲಿ ಕ್ರಮವಾಗಿ ಪ್ರಚಯವು (ಆಧಿಕ್ಯವು) ಹೇಗಾಗುತ್ತದೆ? ಕಾಲಭೇದವು ಕೇವಲ ಕಲ್ಪಿತವಾಗಿದ್ದರೆ ಸುರಿದ ನೀರಿನಲ್ಲಿ ಪ್ರಚಯ-ಅಪಚಯಗಳು ಆಗಲು ಕಾರಣವೇನು?

**ವಿವರಣೆ** : ಚಿರಕಾಲ, ಕ್ಷಿಪ್ರಕಾಲ – ಇತ್ಯಾದಿ ವ್ಯವಹಾರವು ಕ್ರಿಯಾವಯವಗಳ ಸಂಖ್ಯಾಭೇದದಿಂದ ಕಾಲದಲ್ಲಿ ಆರೋಪಿತವಾಗಿ ನಡೆಯುತ್ತದೆಯೆಂದೂ ವಾಸ್ತವ-ವಾಗಿ ಕಾಲದಲ್ಲಿ ಭೇದವಿಲ್ಲವೆಂದೂ ಹಿಂದೆ ತಿಳಿಸಿದೆ. ಆ ಪಕ್ಷದಲ್ಲಿ ಹ್ರಸ್ವ, ದೀರ್ಘ, ಪ್ಲುತಗಳ ಉಚ್ಚಾರಣೆಗೆ ಒಂದೇ ಕಾಲ ಸಾಕು ಎನ್ನಬೇಕಾದೀತು. ಅದನ್ನು ಯಾರೂ ಒಪ್ಪಲಾರರು. ವ್ಯಾಕರಣಶಾಸ್ತ್ರವಂತೂ ಒಪ್ಪುವುದಿಲ್ಲ. ಶಿಕ್ಷಾಶಾಸ್ತ್ರವೂ ಒಪ್ಪುವುದಿಲ್ಲ.

ಏಕಮಾತ್ರೋ ಭವೇದ್ ಹ್ರಸ್ವಃ ದ್ವಿಮಾತ್ರೋ ದೀರ್ಘ ಉಚ್ಯತೇ ।
ತ್ರಿಮಾತ್ರಸ್ತು ಪ್ಲುತೋ ಜ್ಞೇಯಃ ವ್ಯಂಜನಂತ್ವರ್ಧಮಾತ್ರಕಮ್ ॥

ಎಂದು ಶಿಕ್ಷಾಶಾಸ್ತ್ರವು ಹೇಳುತ್ತದೆ. ಮಾತ್ರಾ ಎಂದರೆ ಹ್ರಸ್ವಸ್ವರದ ಉಚ್ಚಾರಣೆಗೆ ಬೇಕಾಗುವಷ್ಟು ಸಮಯ.

ಕಾಲಭೇದವು ಆರೋಪದಿಂದಾಗುತ್ತದೆಯೆಂದು ಹಿಂದೆ ಪ್ರತಿಪಾದಿಸ-ಲಾಗಿದೆಯಷ್ಟೆ. ಆ ಹೇಳಿಕೆಯನ್ನು ಒರೆಗೆ ಹಚ್ಚಿ ಪರೀಕ್ಷಿಸಲಾಗುವುದು. ಹ್ರಸ್ವಾದಿಗಳ ಉಚ್ಚಾರಣೆಯಲ್ಲಿ ತೋರುವ ಕಾಲಭೇದವು ಆರೋಪಿತವೆಂದೂ ವಾಸ್ತವವಲ್ಲ-ವೆಂದೂ ಹೇಳುವುದಾದರೆ, ಅವುಗಳ ಉಚ್ಚಾರಣೆಯ ಕಾಲದಲ್ಲಿ ಕೊಳವೆಯಿಂದ ಸುರಿಯುವ ನೀರಿನ ಪ್ರಮಾಣದಲ್ಲಿ ಹೆಚ್ಚು ಕಡಿಮೆಗಳಾಗಲು ಕಾರಣವೇನು? ಕಲ್ಪಿತವಾದ ನೀರಿನಿಂದ ಬಾಯಾರಿಕೆ ನೀಗುವುದಿಲ್ಲ. ಕಲ್ಪಿತ ದೀಪದಿಂದ ಬೆಳಕು

ಬರುವುದೂ ಇಲ್ಲ. ಆದ್ದರಿಂದ ಹ್ರಸ್ವಾದಿಗಳಲ್ಲಿ ಕಾಲಭೇದವು ಪರಮಾರ್ಥವಾಗಿ ಇದೆಯೆಂದು ಅಂಗೀಕರಿಸಬೇಕಾಗುತ್ತದೆ. ಆಗ ಹ್ರಸ್ವವೇ ಪ್ರಚಿತವಾಗಿ ದೀರ್ಘವೂ ಪ್ಲುತವೂ ಆಗುತ್ತದೆ ಎಂದಾದರೆ ವರ್ಣವು ವಿಕಾರಗೊಳ್ಳುತ್ತದೆ ಎಂದು ಸಿದ್ಧವಾಗುವುದರಿಂದ ವರ್ಣವು ನಿತ್ಯವೆಂಬ ಸಿದ್ಧಾಂತಕ್ಕೆ ಭಂಗ ಉಂಟಾಗುತ್ತದೆ. ಹಾಗಲ್ಲದೆ ದೀರ್ಘಪ್ಲುತಗಳೇ ಭಿನ್ನವರ್ಣಗಳೆಂದು ಹೇಳಿದರೆ ಕಾಲವ್ಯಾಪಾರಕ್ಕೆ ಅಧೀನವಾಗಿ ಹುಟ್ಟುತ್ತವೆ ಎಂದಾಗುತ್ತದೆ. ಯಾವುದು ಹುಟ್ಟುತ್ತದೆಯೋ (ಜನ್ಯವೋ) ಅದು ನಿತ್ಯವಲ್ಲವಾದ್ದರಿಂದ ವರ್ಣವು ನಿತ್ಯವೆಂಬ ಸಿದ್ಧಾಂತಕ್ಕೆ ಆಗಲೂ ಭಂಗ–ವಾಗುತ್ತದೆ. ಇದು ಪೂರ್ವಪಕ್ಷಿಯ ಆಕ್ಷೇಪ.

ಈ ಆಕ್ಷೇಪಕ್ಕೆ ಸಮಾಧಾನ ಹೀಗೆ –

**ಅಭಿವ್ಯಕ್ತಿನಿಮಿತ್ತಸ್ಯ ಪ್ರಚಯೇನ ಪ್ರಚೀಯತೇ ।**
**ಅಭಿನ್ನಮಪಿ ಶಬ್ದಸ್ಯ ತತ್ತ್ವಮಪ್ರಚಯಾತ್ಮಕಮ್ ॥ ೬೫ ॥**

ಶಬ್ದಸ್ಯ = ಹ್ರಸ್ವದೀರ್ಘಾದಿವರ್ಣದ, ಅಪ್ರಚಯಾತ್ಮಕಂ = ಪ್ರಚಯ–ರಹಿತವಾದ, ತತ್ತ್ವಂ = ಸತ್ಯಸ್ವರೂಪವು, ಅಭಿನ್ನಮಪಿ = ಕಾಲಕೃತಭೇದ–ರಹಿತವಾಗಿದ್ದರೂ. ಅಭಿವ್ಯಕ್ತಿ ನಿಮಿತ್ತಸ್ಯ = ವರ್ಣಾಭಿವ್ಯಕ್ತಿಗೆ ಕಾರಣವಾದ ಧ್ವನಿಯ, ಪ್ರಚಯೇನ = ಪ್ರಚಯದಿಂದ, ಪ್ರಚೀಯತೇ = ಪ್ರಚಿತವಾಗಿ ಪ್ರತೀತವಾಗುತ್ತದೆ.

**ವಿವರಣೆ** : ನಮ್ಮ ಕಿವಿಗೆ ಕೇಳಿಸತಕ್ಕ ಶಬ್ದವು ಧ್ವನಿರೂಪವಾದದ್ದು. ಇದಕ್ಕೆ ಪ್ರಾಕೃತಧ್ವನಿಯೆಂದು ಹೆಸರು. ಈ ಧ್ವನಿಯಿಂದ ನಿಜವಾದ ಶಬ್ದ ಅಥವಾ ವರ್ಣವು ಅಭಿವ್ಯಕ್ತವಾಗುತ್ತದೆ. ನಾವು ಉಚ್ಚರಿಸುವುದು ಧ್ವನಿಯನ್ನು. ಅದರಿಂದ ಅಭಿವ್ಯಕ್ತ–ವಾಗತಕ್ಕದ್ದು ನಿತ್ಯವಾದ ಶಬ್ದ. ಧ್ವನಿಯು ಕ್ರಿಯಾಜನ್ಯವಾದ್ದರಿಂದ ಅನಿತ್ಯ. ಅದರಿಂದ ವ್ಯಂಗ್ಯವಾದ ಶಬ್ದವು ನಿತ್ಯ – ಎಂದು ವ್ಯಾಕರಣಶಾಸ್ತ್ರದ ಸಿದ್ಧಾಂತ. ಮೀಮಾಂಸ–ಕರೂ ವರ್ಣವು ನಿತ್ಯವೆಂದು ಒಪ್ಪಿದ್ದಾರೆ. ಆದ್ದರಿಂದ ವೇದವೂ ನಿತ್ಯವೆಂಬುದು ಸಿದ್ಧವಾಗುತ್ತದೆ. 'ವಾಚಾ ವಿರೂಪನಿತ್ಯಯಾ' ಎಂದು ಶ್ರುತಿವಚನವಿದೆ. ಆದ್ದರಿಂದ ದೀರ್ಘಪ್ಲುತಾದಿಗಳ ವ್ಯಂಜಕವಾದ ಧ್ವನಿಯಲ್ಲಿ ಪ್ರಚಯವಿದೆ. ಆದ್ದರಿಂದ ಪೂರ್ವಪಕ್ಷದಲ್ಲಿ ಹೇಳಿದ ಕೊಳವೆ ನೀರಿನ ಜಲಪ್ರಮಾಣದಲ್ಲಿ ಪ್ರಚಯಾಪಚಯ–ಗಳಿರಲು ಬಾಧೆ ಏನೂ ಇಲ್ಲ. ಶ್ರೋತೃವಿಗೆ ಧ್ವನಿವರ್ಣಗಳ ಭೇದವು ತಿಳಿಯದೆ ಇರುವುದರಿಂದ ಆಕ್ಷೇಪ ಹುಟ್ಟಿದೆ. ಅನಾದಿಯಾದ ಅಧ್ಯಾಸದಿಂದ ಧ್ವನಿಯನ್ನೇ ವರ್ಣವೆಂದು ತಿಳಿದುಕೊಂಡಿರುವುದರಿಂದ ಧ್ವನಿಗತವಾದ ಪ್ರಚಯವು ವರ್ಣಗತ–

ವೆಂದು ಭ್ರಮೆ ಇರುತ್ತದೆ. ವ್ಯಂಜಕವಾದದ್ದು ಧ್ವನಿ. ವ್ಯಂಗ್ಯವಾದದ್ದು ವರ್ಣ. ಆದ್ದರಿಂದ ಪೂರ್ವಪಕ್ಷಿಯ ಆಕ್ಷೇಪವು ನಿಲ್ಲುವುದಿಲ್ಲ.

**ಏವಂ ಮಾತ್ರಾತುರೀಯಸ್ಯ ಭೇದೋ ದಾಶತಯಸ್ಯ ವಾ ।**
**ಪರಿಮಾಣವಿಕಲ್ಪೇನ ಶಬ್ದಾತ್ಮನಿ ನ ವಿದ್ಯತೇ ॥ ೬೬ ॥**

ಹೀಗೆ ಹ್ರಸ್ವದೀರ್ಘಪ್ಲುತಗಳಂತೆ ಒಂದು ಮಾತ್ರೆಯ ನಾಲ್ಕನೇ ಒಂದು ಭಾಗಕ್ಕಾಗಲಿ ಹತ್ತು ಮಂಡಲಗಳಾಗಿ ವಿಭಕ್ತವಾದ ಋಗ್ವೇದ ಸಮುದಾಯ-ಕ್ಕಾಗಲಿ ಕಾಲ ಪರಿಮಾಣಭೇದದಿಂದ ಶಬ್ದತತ್ತ್ವದಲ್ಲಿ ವಾಸ್ತವವಾದ ಭೇದವಿಲ್ಲ.

**ವಿವರಣೆ** : ಕಾಲಭೇದವು ವ್ಯಂಜಕವಾದ ಧ್ವನಿಯಲ್ಲಿರುತ್ತದೆ. ವ್ಯಂಗ್ಯವಾದ ವರ್ಣವೂ ನಿತ್ಯವಾದ್ದರಿಂದ ಅದರಲ್ಲಿ ಕಾಲಭೇದವಿರುವುದಿಲ್ಲ ಋಗ್ವೇದವನ್ನು ಹತ್ತು ಮಂಡಲಗಳನ್ನಾಗಿ ವಿಂಗಡಿಸಿದ್ದಾರೆ. ದಶ ಅವಯವಾಃ ಯೇಷಾಂ ತೇ ದಶತಯಾಃ ಋಗ್ವೇದಾಃ 'ಸಂಖ್ಯಾಯಾ ಅವಯವೇ ತಯಪ್ (೫-೨-೪೨) ಎಂಬ ಸೂತ್ರದಿಂದ ತಯಪ್ ಪ್ರತ್ಯಯ. ಅದರ ಮೇಲೆ ಸಮೂಹಾರ್ಥದಲ್ಲಿ ಅಣ್‌ಪ್ರತ್ಯಯ. ಅರುವತ್ತನಾಲ್ಕು ವರ್ಣಗಳಿರುವ ಋಗ್ವೇದರಾಶಿ ಎಂದು ಅಭಿಪ್ರಾಯ. ಉಚ್ಚಾರಣ ಕ್ರಿಯೆಯ ಪ್ರಚಯ ಅಪಚಯಗಳು ಉಚ್ಚರಿಸಲ್ಪಡುವ ಧ್ವನಿಗೆ ಸಂಬಂಧಿಸಿದವು. ಧ್ವನಿಯಿಂದ ವರ್ಣವು ಅಭಿವ್ಯಕ್ತವಾಗುತ್ತದೆ, ಉಚ್ಚಾರಿತವಾಗುವುದಿಲ್ಲ. ವರ್ಣವು ನಿತ್ಯವಾದ್ದರಿಂದ ಸದಾ ಇದ್ದೇ ಇರುತ್ತದೆ. ಹೊಸದಾಗಿ ಹುಟ್ಟುವುದಿಲ್ಲ. ಕತ್ತಲೆಯಲ್ಲಿ-ರುವ ಗಡಿಗೆಯು ದೀಪದಿಂದ ಅಭಿವ್ಯಕ್ತವಾಗುವಂತೆ, ಧ್ವನಿಯಿಂದ ವರ್ಣವು ಅಭಿವ್ಯಕ್ತವಾಗುತ್ತದೆ. ಆದ್ದರಿಂದ ವರ್ಣವು ಕಾಲದ ವ್ಯಾಪ್ತಿಗೆ ಒಳಪಡುವುದಿಲ್ಲ.

**ಅನುನಿಷ್ಪಾದಿಕಲ್ಪೇನ ಯೇಽಂತರಾಲ ಇವ ಸ್ಥಿತಾಃ ।**
**ಶಬ್ದಾಸ್ತೇ ಪ್ರತಿಪತ್ತ್ರೂಣಾಮುಪಾಯಾಃ ಪ್ರತಿಪತ್ತಯೇ ॥ ೬೭ ॥**

(ಪ್ರಾಕೃತಧ್ವನಿಯಿಂದ ಶಬ್ದವು ಅಭಿವ್ಯಕ್ತವಾದ ಮೇಲೆ) ಅದರ ಅನುರ-ಣನಕ್ಕೆ ಸದೃಶವಾದ ರೀತಿಯಲ್ಲಿ ಶ್ರೋತೃವಿನ ಕಿವಿಯೊಳಗಿವೆಯೋ ಎಂಬಂತೆ ಕಾಣುವ ವೈಕೃತ ಧ್ವನಿಗಳು ಶ್ರೋತೃಗಳಿಗೆ ಶಬ್ದದ ಪ್ರಚಯಾಪಚಯ-ಗಳನ್ನರಿಯಲು ದಾರಿಗಳಾಗಿವೆ.

**ವಿವರಣೆ** : ಪ್ರಕೃತಿಯೆಂದರೆ ಸ್ವಭಾವವೆಂದರ್ಥ, ಪ್ರಾಕೃತ = ಸ್ವಾಭಾವಿಕ. ಸ್ವಾಭಾವಿಕ ಧ್ವನಿಯು ಶಬ್ದತತ್ತ್ವವನ್ನು ಮೊದಲು ವ್ಯಂಜಿಸುತ್ತದೆ. ವರ್ಣವು ವ್ಯಕ್ತವಾದ ಮೇಲೆ ಮಾತಾಡುವವನು ಆ ಧ್ವನಿಯನ್ನು ಎಳೆದು ಉಚ್ಚಾರಣೆಯನ್ನು

ಮುಗಿಸುತ್ತಾನೆ. ಹಾಗೆ ಎಳೆದ ಅಥವಾ ಸಂಕೋಚಿಸಿದ ಧ್ವನಿಗೆ ವೈಕೃತವೆಂದು ಹೆಸರು. ಈ ವೈಕೃತ ಧ್ವನಿಗಳಿಂದ ಮಾತಿನಲ್ಲಿ ದ್ರುತ, ವಿಲಂಬಿತ, ಮಧ್ಯಮ – ಎಂಬ ಮೂರು ಭೇದಗಳುಂಟಾಗುತ್ತವೆ. ಬೇಗಬೇಗ ಮಾತಾಡಿದಾಗ ದ್ರುತವೃತ್ತಿ. ಮೆಲ್ಲಗೆ ನಿಧಾನವಾಗಿ ಮಾತಾಡಿದರೆ ವಿಲಂಬಿತ ವೃತ್ತಿ. ಸರ್ವಸಾಧಾರಣವಾಗಿ ನುಡಿದರೆ ಮಧ್ಯಮ ವೃತ್ತಿ – ಎಂದು ಹೆಸರುಗಳು. ಈ ವೈಕೃತ ಧ್ವನಿಗಳು ಪ್ರಾಕೃತಧ್ವನಿಗಳಿಗೆ ಅಂಟಿಕೊಂಡಿರುವುದರಿಂದ ಪ್ರತಿಧ್ವನಿಗಳ ರೂಪದಲ್ಲಿ ಶೀಘ್ರವಾಗಿ ಬಂದು ಕಿವಿಯಲ್ಲಿ ಸೇರಿಕೊಂಡಂತೆ ಪ್ರತೀತವಾಗುತ್ತವೆ. ದ್ರುತ, ವಿಲಂಬಿತ – ಮುಂತಾದ ಸಮಸ್ತ ಭೇದಗಳೂ ಧ್ವನಿಗೆ ಸೇರಿದವು. ಅವು ಯಾವ ವಿಕಾರವನ್ನೂ ವರ್ಣದಲ್ಲಿ ಉಂಟುಮಾಡುವುದಿಲ್ಲ. ಗಟ್ಟಿಯಾಗಿ ಕೂಗಲಿ, ಮೆಲ್ಲಗೆ ಹೇಳಲಿ – ಅದು ವರ್ಣಕ್ಕೆ ಸೇರಿದ್ದಲ್ಲ. ಧ್ವನಿಗೆ ಸೇರಿದ್ದು.

**ವಿಶಿಷ್ಟಮವಧಿಂ ತಂ ತಮುಪಾದಾಯ ಪ್ರಕಲ್ಪತೇ ।**
**ಕಾಲಃ ಕಲಾವತಾಮೇಕಃ ಕ್ಷಣಮಾಸರ್ತುಭೇದಭಾಕ್ ॥ ೬೮ ॥**

ಕಲಾವತಾಂ = ಅವಯವ ವಿಶಿಷ್ಟಗಳಾದ ಜನ್ಯಭಾವಗಳಿಗೆ, ಅವ–ಚ್ಛೇದಕವಾದ ಪರಿಮಿತಿಯಿಂದ ಅಳೆಯುವ ಸಾಧನವಾದ ಕಾಲವು, ವಿಶಿಷ್ಟ–ವಾದ = ವಿಲಕ್ಷಣವಾದ ಸೂರ್ಯೋದಯ ಸೂರ್ಯಾಸ್ತಮಯಾದಿ ರೂಪದ ಅವಧಿಯನ್ನು ಅನುಸರಿಸಿ, ಕ್ಷಣ, ಮಾಸ, ಋತು–ಮುಂತಾದ ಹೆಸರನ್ನು ಧರಿಸಲು ಸಮರ್ಥವಾಗುತ್ತದೆ.

**ವಿವರಣೆ** : ಕಾಲವು ಅಖಂಡವಾದ ಒಂದೇ ನಿತ್ಯಪದಾರ್ಥವಾದರೂ ಉಪಾಧಿಗಳಿಂದ ಬೇರೆ ಬೇರೆ ವಿಭಾಗ ಹೊಂದಿ ಅದಕ್ಕೆ ತಕ್ಕಂತೆ ಕ್ಷಣ, ಮಾಸ, ಋತು, ವರ್ಷ, ಹಗಲು, ರಾತ್ರಿ ಇತ್ಯಾದಿ ನಾಮಗಳನ್ನು ಧರಿಸುತ್ತದೆ. ಕ್ಷಣ, ಮಾಸ – ಮುಂತಾದವು ಕಾಲದ ಅಳತೆಯ ಪ್ರಕಾರಗಳು. ಈ ಶ್ಲೋಕದಲ್ಲಿ 'ಕಲಾವತಾಂ' ಶಬ್ದವಾದ ಮೇಲೆ 'ಅವಚ್ಛೇದಕಃ' ಎಂಬ ಶಬ್ದವನ್ನು ಅಧ್ಯಾಹಾರ ಮಾಡಿಕೊಳ್ಳಬೇಕು.

**ಬುದ್ಧ್ಯವಗ್ರಹಭೇದಾಚ್ಚ ವ್ಯವಹಾರಾತ್ಮನಿ ಸ್ಥಿತಃ ।**
**ತಾವಾನೇವ ಕ್ಷಣಃ ಕಾಲೋ ಯುಗಮನ್ವಂತರಾಣಿ ವಾ॥ ೬೯ ॥**

ಬುದ್ಧಿಯ ಗ್ರಹಣಭೇದದಿಂದ ಎಂದರೆ ಸಂಕಲನಾತ್ಮಕಬುದ್ಧಿಯಿಂದ ಗೃಹೀತವಾದ ಪರಿಮಾಣವುಳ್ಳ ಕಾಲವು ಕ್ಷಣವೆಂದು ವ್ಯವಹಾರದಲ್ಲಿದೆ. ಈ

ಕ್ಷಣವೇ ಪ್ರಚಯವನ್ನು ಹೊಂದಿ ಯುಗ ಮನ್ವಂತರ – ಇತ್ಯಾದಿ ಹೆಸರನ್ನು ಪಡೆಯುತ್ತದೆ.

**ವಿವರಣೆ :** ಹಿಂದಿನ ಶ್ಲೋಕದಲ್ಲಿ ಮಾಸ, ಋತು – ಮುಂತಾದವು ವಿವಿಧ ಪರಿಮಾಣಗಳನ್ನನುಸರಿಸಿ, ಬೇರೆ ಬೇರೆ ಹೆಸರನ್ನು ಪಡೆದಿವೆ ಎಂದು ಹೇಳಿದೆ. ಈಗ ಕ್ಷಣ ಒಂದೇ ಮೂಲಭೂತವಾದ ಕಾಲ ವಿಭಾಗವೆಂದೂ ಈ ಕ್ಷಣಗಳ ಸಮೂಹಗಳು ಬೇರೆ ಬೇರೆ ನಿಮಿತ್ತಗಳಿಂದ ದಿನ, ಪಕ್ಷ, ಮಾಸ, ಋತು – ಮುಂತಾದ ಹೆಸರುಗಳನ್ನು ಪಡೆದಿವೆ ಎಂದೂ ಸಿದ್ಧಾಂತಪಕ್ಷವನ್ನು ತಿಳಿಸಲಾಗಿದೆ. ಅಕ್ಕಿಯು ಒಂದು ಕಾಳು ನೂರು ಗ್ರಾಂ ಎಂದರೆ ಈ ಕಾಳುಗಳ ಸಮುದಾಯ. ಒಂದು ಕೆ.ಜಿ. ಅಕ್ಕಿಯೆಂದರೂ ಕಾಳುಗಳ ಸಮುದಾಯವೇ. ಕೇವಲ ಅಕ್ಕಿ ಕಾಳೇ ನೂರು ಗ್ರಾಂ ತೂಕ ಇರುವುದಿಲ್ಲ. ಮಾಸ ಎನ್ನುವುದು ಕಾಲಗಳ ಸಮುದಾಯ. ಅಖಂಡವಾದ ಮಾಸವೆಂಬ ಕಾಲವಿಲ್ಲ.

**ಪ್ರತಿಬಂಧಾಭ್ಯನುಜ್ಞಾಭ್ಯಾಂ ನಾಲಿಕಾವಿವರಾಶ್ರಿತೇ ।**
**ಯದಂಭಸಿ ಪ್ರಕ್ಷರಣಂ ತತ್ಕಾಲಸ್ಯೈವ ಚೇಷ್ಟಿತಮ್ ॥ ೭೦ ॥**

(ಘಟಿಕಾಯಂತ್ರದ) ಕೊಳವೆಯ ರಂಧ್ರವನ್ನಾಶ್ರಯಿಸಿ ಬರುವ ನೀರಿನಲ್ಲಿ ಪ್ರತಿಬಂಧ ಅನುಮತಿಗಳ ನಿಮಿತ್ತದಿಂದ ಸುರಿಯುವ ಕ್ರಿಯೆಯೇನುಂಟು, ಅದೂ ಸಹ ಕಾಲದ ಚೇಷ್ಟೆಯೇ ಸರಿ.

**ವಿವರಣೆ** : ಹಿಂದಿನ ಕಾಲದಲ್ಲಿ ಗಡಿಯಾರಕ್ಕೆ ಬದಲಾಗಿ 'ಘಟೀಕಾರ' ಎಂಬ ಒಂದು ಉಪಕರಣದಿಂದ ಕಾಲವನ್ನು ತಿಳಿಯುತ್ತಿದ್ದರು. ಹಿತ್ತಾಳೆ ಅಥವಾ ತಾಮ್ರದ ಒಂದು ಗಿಂಡಿ. ಅದರ ಕೆಳಗೆ ಗೊತ್ತಾದ ಪ್ರಮಾಣದ ಒಂದು ರಂಧ್ರವಿದ್ದು ಅದಕ್ಕೆ ಒಂದು ಕೊಳವೆಯನ್ನು ಜೋಡಿಸಿ, ಅದರ ಕೆಳಗೆ ಇನ್ನೊಂದು ಚಿಕ್ಕ ಪಾತ್ರೆಯನ್ನಿಡುತ್ತಿದ್ದರು. ಮೇಲಿನ ಗಿಂಡಿಗೆ ನೀರನ್ನು ತುಂಬಿದಾಗ ಒಂದಾನೊಂದು ಅಳತೆಯಲ್ಲಿ ನೀರು ತೊಟ್ಟು ತೊಟ್ಟಾಗಿ ಕೆಳಗಿನ ಪಾತ್ರೆಗೆ ಬೀಳುತ್ತಿತ್ತು. ಆ ನೀರಿನ ಪ್ರಮಾಣದಿಂದ ಕಾಲವನ್ನು ಗೊತ್ತುಮಾಡಿಕೊಳ್ಳುತ್ತಿದ್ದರು.

ನೀರಿನ ಪ್ರಕ್ಷರಣ (ಸುರಿಯುವಿಕೆ)ವು ತಡೆತಡೆದು ಆಗುವುದರಿಂದ ಈ ಪ್ರಕ್ಷರಣವೇ (ಸ್ರುತಿಯೇ) ಕಾಲವಾಗಲಿ, ಅತಿರಿಕ್ತವಾದ ಇನ್ನೊಂದು ಕಾಲವನ್ನೇಕೆ ಒಪ್ಪಬೇಕು? ಎಂಬ ಶಂಕೆಗೆ ಈ ಶ್ಲೋಕದಲ್ಲಿ ಉತ್ತರವನ್ನು ಹೇಳಿದ್ದಾರೆ. ಕೊಳವೆಯಲ್ಲಿ ನೀರು ತಡೆತಡೆದು ಹರಿಯುವುದೇಕೆ? ಜಲವೇ ತನ್ನನ್ನು ತಾನೇ ನಿಯಂತ್ರಿಸಿಕೊಳ್ಳಲಾರದು. ಆದ್ದರಿಂದ ಜಲಕ್ಕೆ ಅತಿರಿಕ್ತವಾದ ಇನ್ನೊಂದು

ವಸ್ತುವಿರಲೇ ಬೇಕು. ಅದು ಜಲವನ್ನು ನಿಯಂತ್ರಿಸುತ್ತದೆ. ಆ ನಿಯಂತ್ರಣ ಶಕ್ತಿಯನ್ನು ಕಾಲವೆನ್ನುತ್ತೇವೆ. ನೀರು ತಡೆತಡೆದು ಸುರಿಯುವುದು ಕಾಲಶಕ್ತಿಯ ಪ್ರತಿಬಂಧ – ಅನುಮತಿಗಳಿಂದ ಎಂದು ಅಭಿಪ್ರಾಯ.

ಆ ಕೊಳವೆಯಿಂದ ಒಂದು ತೊಟ್ಟು ನೀರು ಬಿದ್ದರೆ ಒಂದು ಕ್ಷಣವಾಗುತ್ತದೆ. ಅದನ್ನು ರೆಪ್ಪೆ ಮುಚ್ಚಿ ಬಿಡುವ ಕ್ರಿಯೆಯು ಪರಿಚ್ಛೇದಿಸುತ್ತದೆ. ನಿಮಿಷ ಕ್ರಿಯೆಯನ್ನು ಬುದ್ಧಿಕಲ್ಪಿತ ಕಾಲವು ಅಳೆಯುತ್ತದೆ. ಹೀಗೆ ಕ್ರಿಯೆಯನ್ನು ಕಾಲವೂ ಕಾಲವನ್ನು ಕ್ರಿಯೆಯೂ ಪರಿಚ್ಛೇದಿಸುತ್ತ ಹೋದಾಗ ಕಡೆಯಲ್ಲಿ ಕಾಲವೇ ಪರಿಚ್ಛೇದಕವಾಗಿ ನಿಲ್ಲುತ್ತದೆ. ಹೇಗೆಂದರೆ ಕ್ರಿಯೆ ಜನ್ಯವಸ್ತುವಿನಲ್ಲಿರುತ್ತದೆ. ಜನ್ಯವಸ್ತು ಕಾಲಕ್ಕೆ ಅಧೀನ–ವಾಗಿರುತ್ತದೆ. ಆದ್ದರಿಂದ ಕಾಲಶಕ್ತಿಗೆ ಒಳಪಡದಿರುವುದು ಪ್ರಕಾಶ ರೂಪವಾದ ನಿತ್ಯಚೈತನ್ಯ ಒಂದೇ. ಅದರ ಮಾಯಾಶಕ್ತಿಯೇ ಕಾಲವೆಂದು ಸಿದ್ಧಾಂತ.

ಈಗಿನ ಗಡಿಯಾರಗಳಲ್ಲಿ ನಿಮಿಷ ಅಥವಾ ಸೆಕೆಂಡಿನ ಮುಳ್ಳು ಮುಂದಕ್ಕೆ ಸರಿಯುವುದಷ್ಟೆ. ಅದನ್ನು ಘಟೀಕಾರದಿಂದ ತೊಟ್ಟಿಕ್ಕುವ ನೀರಿಗೆ ಹೋಲಿಸಿ–ಕೊಳ್ಳಬಹುದು.

**ಅಲ್ಪೇ ಮಹತಿ ವಾ ಛಿದ್ರೇ ತತ್ಸಂಬಂಧೇ ನ ಭಿದ್ಯತೇ ।**
**ಕಾಲಸ್ಯ ವೃತ್ತಿರಾತ್ಮಾಪಿ ತಮೇವಾಸ್ಯಾನುವರ್ತತೇ ॥ ೭೧ ॥**

ಕೊಳವೆಯ ರಂಧ್ರವು ಚಿಕ್ಕದಿರಲಿ ಅಥವಾ ದೊಡ್ಡದಿರಲಿ, ಅದರೊಡನೆ ನೀರಿನ ಸಂಬಂಧವಾದಾಗ ಕಾಲದ ಪ್ರತಿಬಂಧ–ಅನುಮತಿ ರೂಪವಾದ ವ್ಯಾಪಾರವು ಭಿನ್ನವಾಗುವುದಿಲ್ಲ. ಕಾಲದ ಆತ್ಮವು–ಸ್ವರೂಪವು ರಂಧ್ರದ ಸಂಬಂಧವನ್ನು ಅನುಸರಿಸುತ್ತದೆ.

**ವಿವರಣೆ :** ಘಟೀಕಾಯಂತ್ರದ ಕೊಳವೆಯ ರಂಧ್ರವು ಚಿಕ್ಕದಾಗಿದ್ದರೂ ದೊಡ್ಡದಾಗಿದ್ದರೂ ಕಾಲವು ತನ್ನ ಅನುಮತಿ ಪ್ರತಿಬಂಧಗಳನ್ನು ನಿಲ್ಲಿಸುವುದಿಲ್ಲ, ಬದಲಾಯಿಸುವುದಿಲ್ಲ. ರಂಧ್ರವು ಚಿಕ್ಕದಾದರೆ ಕಡಿಮೆ ಜಲವೂ ದೊಡ್ಡದಾದರೆ ಹೆಚ್ಚು ಜಲವೂ ಹರಿಯಬಹುದು. ತೊಟ್ಟು ನೀರಿನ ಪ್ರಮಾಣವು ಹೆಚ್ಚು ಕಡಿಮೆ ಆಗಬಹುದು. ಕಾಲವು ತನ್ನ ಸ್ವರೂಪವನ್ನು ಬದಲಾಯಿಸುವುದಿಲ್ಲ. ಪ್ರತಿಬಂಧ ಅನುಮತಿಗಳನ್ನು ಕೊಡುತ್ತಲೇ ಇರುವುದು. ಪ್ರತಿಯೊಂದು ಕ್ರಿಯೆಯಲ್ಲಿಯೂ ಕ್ರಮವನ್ನು ಏರ್ಪಡಿಸುವುದು ಕಾಲಶಕ್ತಿಯೇ.

**ಆಕ್ರೀಡ ಇವ ಕಾಲಸ್ಯ ದೃಶ್ಯತೇ ಯಃ ಸ್ವಶಕ್ತಿಭಿಃ ।**
**ಬಹುರೂಪಸ್ಯ ಭಾವೇಷು ಬಹುಧಾ ತೇನ ಭಿದ್ಯತೇ ॥ ೭೨ ॥**

ತನ್ನ ಅನುಜ್ಞಾ ಪ್ರತಿಬಂಧ ರೂಪದಲ್ಲಿರುವ ಶಕ್ತಿಗಳಿಂದ ಬಹುರೂಪ–ಗಳನ್ನು ಧರಿಸಿದ ಕಾಲದ ಆಟವೋ ಎಂಬಂತೆ ಭಾವ ಪದಾರ್ಥಗಳಲ್ಲಿ ತೋರುವ ವೈವಿಧ್ಯದಿಂದ ಕಾಲವು ವರ್ತಮಾನಾದಿ ರೂಪದಿಂದ ಭಿನ್ನವಾಗಿ ಕಂಡುಬರುತ್ತದೆ.

**ವಿವರಣೆ** : ಸಮಸ್ತ ಭಾವಪದಾರ್ಥಗಳಲ್ಲಿರುವ ಕಾರಣ ಶಕ್ತಿಯನ್ನು ಪ್ರತಿಬಂಧಿಸುವ ಮತ್ತು ಅನುಜ್ಞೆಯನ್ನಿತ್ತು ಪ್ರೇರಿಸುವ ಸಾಮರ್ಥ್ಯವು ಕಾಲಕ್ಕೆ ಇದೆ. ಆದ್ದರಿಂದ ಕಾಲವು ಭಾವಪದಾರ್ಥಗಳ ಪ್ರಭುವಾಗಿದೆ. ಇದು ಆ ಪದಾರ್ಥಗಳನ್ನು ಆಡಿಸುತ್ತ ವರ್ತಮಾನಾದಿ ವೈಚಿತ್ರ್ಯಗಳಿಂದ ಸ್ವರೂಪಭೇದವನ್ನು ಪಡೆಯುತ್ತದೆ.

**ತ್ವಚಿಸಾರಸ್ಯ ವಾ ವೃದ್ಧಿಂ ತೃಣರಾಜಸ್ಯ ವಾ ದಧತ್ ।**
**ತಾವತ್ ತದ್ವೃದ್ಧಿಯೋಗೇನ ಕಾಲತತ್ತ್ವಂ ವಿಕಲ್ಪತೇ ॥ ೭೩ ॥**

ತ್ವಚಿಸಾರಸ್ಯ ವಾ ವೃದ್ಧಿಂ = ಬಿದಿರಿನ ವೃದ್ಧಿಯನ್ನಾಗಲಿ ಅಥವಾ ತೃಣ–ರಾಜಸ್ಯ ವಾ = ತಾಳೆಮರದ ವೃದ್ಧಿಯನ್ನಾಗಲಿ, ದಧತ್ = ಉಂಟು–ಮಾಡುವ ಕಾಲತತ್ತ್ವಂ = ಕಾಲಸ್ವರೂಪವು, ತಾವತ್ = ಪ್ರತಿಜ್ಞಾನುಮತಿ–ಗಳನ್ನು ನೀಡುವ ಕಾರಣರೂಪದಲ್ಲಿ ಅಷ್ಟೇ ಆಗಿ ಅಭಿನ್ನವಾಗಿರುತ್ತದೆ. ತದ್‌ವೃದ್ಧಿಯೋಗೇನ = ಬಿದಿರು ತಾಳೆ ಮರಗಳ ವೃದ್ಧಿ ಸಂಬಂಧದಿಂದ ಮಾತ್ರ ಭಿದ್ಯತೇ = ಭಿನ್ನವಾಗಿರುತ್ತದೆ.

**ವಿವರಣೆ** : ಬಿದಿರಿನ ಬೆಳೆಗೆ ಸ್ವಲ್ಪಕಾಲ ಸಾಕು, ತಾಳೆಮರದ ಬೆಳೆಗೆ ದೀರ್ಘಕಾಲ ಬೇಕು. ಪ್ರತಿಬಂಧಾನುಮತಿಗಳ ವಿಷಯದಲ್ಲಿ ಕಾಲವು ಏಕ ಸ್ವರೂಪವಾಗಿರುತ್ತದೆ. ಬೆಳೆಯ ವಿಷಯದಲ್ಲಿ ಅಲ್ಪಕಾಲ, ದೀರ್ಘಕಾಲ ಎಂಬ ಭೇದ ಉಂಟಾಗುತ್ತದೆ. ಹೀಗೆ ಸಾಪೇಕ್ಷವಾಗಿ ಅಲ್ಪ, ದೀರ್ಘ ಎಂಬ ಭೇದವು ಇತರ ಸ್ಥಳಗಳಲ್ಲಿಯೂ ಬರುತ್ತದೆ. ಉದಾ:

೧. ಜನ್ಮಭೇದದಿಂದ ಕಾಲಭೇದ – ಮನುಷ್ಯರಲ್ಲಿ ಗರ್ಭಧಾರಣೆಯು ಒಂಬತ್ತು ತಿಂಗಳು. ಎಮ್ಮೆಯಲ್ಲಿ ಹನ್ನೊಂದು ತಿಂಗಳು.

೨. ಸ್ಥಿತಿಭೇದದಿಂದ – ಬಾಳೆಮರವು ಸ್ವಲ್ಪಕಾಲ ಇರುತ್ತದೆ. ಅರಳಿಮರವು ಬಹಳಕಾಲ ಇರುತ್ತದೆ.

೩. ವಿನಾಶ ಭೇದದಿಂದ – ಮಣ್ಣಿನ ಗಡಿಗೆ ಸ್ವಲ್ಪ ಕಾಲ ಬಾಳುತ್ತದೆ. ಹಿತ್ತಾಳೆ ಪಾತ್ರೆ ಬಹಳ ಕಾಲ ನಾಶವಾಗುವುದಿಲ್ಲ.

೪. ಅವಸ್ಥಾಭೇದದಿಂದ – ಇದು ಸ್ವಲ್ಪ ಕಾಲದ ಹಿಂದೆ ಕಟ್ಟಿಸಿದ ಮನೆ. ಅದು ಬಹಳ ಕಾಲದ ಹಿಂದೆ ಕಟ್ಟಿಸಿದ ಮನೆ.

ಈ ಪ್ರಕಾರ ನಿಮಿತ್ತ ಭೇದದಿಂದ ಎಂದರೆ ಉಪಾಧಿ ಭೇದದಿಂದ ಕಾಲಭೇದವು ಆಗುತ್ತದೆ. ಪ್ರತಿಬಂಧಾನುಮತಿಗಳ ವಿಷಯದಲ್ಲಿ ಮಾತ್ರ ಕಾಲತತ್ತ್ವದಲ್ಲಿ ಭೇದವಿಲ್ಲ.

**ವ್ಯತಿಕ್ರಮೇಽಪಿ ಮಾತ್ರಾಣಾಂ ತಸ್ಯ ನಾಸ್ತಿ ವ್ಯತಿಕ್ರಮಃ ।**
**ನ ಗಂತೃಗತಿಭೇದೇನ ಮಾರ್ಗಭೇದೋಽಸ್ತಿ ಕಶ್ಚನ ॥ ೭೪ ॥**

ಮಾತ್ರಾಣಾಂ = ಭಾವದ ಅವಸ್ಥೆಗಳ, ವ್ಯತಿಕ್ರಮೇಽಪಿ = ವಿನಾಶ–ವಾದರೂ (ಪರಿವರ್ತನವಾದರೂ) ತಸ್ಯ = ಅವುಗಳ ಆಧಾರವಾದ ಕಾಲದ, ವ್ಯತಿಕ್ರಮಃ = ವಿನಾಶವು, ನಾಸ್ತಿ = ಇಲ್ಲ. ಪ್ರಯಾಣಿಕರ ತಿರುಗಾಟದ ಭೇದದಿಂದ ಆಧಾರವಾದ ರಸ್ತೆಯಲ್ಲಿ ಯಾವ ಭೇದವೂ ಆಗುವುದಿಲ್ಲ.

**ವಿವರಣೆ** : ಭಾವವಸ್ತುಗಳ ಅವಸ್ಥಾ ಭೇದದಿಂದ ಕಾಲದಲ್ಲಿಯೂ ಭೇದವಾಗುವುದಾದರೆ, ಭಾವವಸ್ತುವಾಗಲಿ ಅದರ ಅವಸ್ಥೆಯಾಗಲಿ ನಾಶವಾದಾಗ ಕಾಲವೂ ನಾಶವಾಗಬೇಕಾದೀತು. ಆಗ ಕಾಲವು ನಿತ್ಯವೆಂಬುದು ಘಟಿಸುವುದಿಲ್ಲ ಎಂಬ ಶಂಕೆಗೆ ಉತ್ತರವಿದು. ಮಳೆಗಾಲ ಕಳೆಯಿತು, ಚಳಿಗಾಲ ಮುಗಿಯಿತು, ವಸಂತ ಕಾಲವು ಪ್ರಾಪ್ತವಾಯಿತು – ಎಂದಾಗ ಕಾಲಕ್ಕೆ ನಾಶವಾಗುವುದಿಲ್ಲ. ಕಾಲವು ಹುಟ್ಟುವುದೂ ಇಲ್ಲ. ಮಳೆ, ಚಳಿಗಳು ನಾಶವಾದವು ವಸಂತಕಾಲದ ಧರ್ಮವು ಪ್ರಾಪ್ತವಾಯಿತು ಎಂದಿಷ್ಟೇ ಅರ್ಥ. ತಿರುಗಾಡುವ ಜನರು ಇಲ್ಲದೆ ಹೋದರೆ ರಸ್ತೆ ನಾಶವಾಗುವುದಿಲ್ಲ. ಜನರು ತಿರುಗಾಟವನ್ನಾರಂಭಿಸಿದರೆ ರಸ್ತೆ ಹೊಸದಾಗಿ ಹುಟ್ಟುವುದೂ ಇಲ್ಲ.

**ಉದಯಾಸ್ತಮಯಾವೃತ್ತ್ಯಾ ಜ್ಯೋತಿಷಾಂ ಲೋಕಸಿದ್ಧಯಾ ।**
**ಕಾಲಸ್ಯಾವ್ಯತಿಪಾತೇಽಪಿ ತಾದ್ಧರ್ಮ್ಯಮಿವ ಲಕ್ಷ್ಯತೇ ॥ ೭೫ ॥**

ಸೂರ್ಯಾದಿ ಜ್ಯೋತಿಗಳ ಉದಯಾಸ್ತಮಯಗಳು ಪುನರಾವೃತ್ತಿ–ಗೊಳ್ಳುವುದು ಲೋಕಸಿದ್ಧವಾಗಿದೆ. ನಿತ್ಯವಾದ ಕಾಲಕ್ಕೆ ಉದಯಾಸ್ತಮಯ–ಗಳಿಲ್ಲದಿದ್ದರೂ ಆ ಜ್ಯೋತಿಗಳಲ್ಲಿರುವ ಉದಯಾಸ್ತಮಯ ಗುಣಗಳು

ಕಾಲಕ್ಕೂ ಇವೆಯೋ ಎಂಬಂತೆ ಕಾಣಿಸುತ್ತದೆ.

**ವಿವರಣೆ** : ಹಿಂದೆ ಹೇಳಿದುದರ ವಿವರಣೆ. ಗ್ರಹ ನಕ್ಷತ್ರಗಳ ಗತಿಯನ್ನು ಕಾಲದಲ್ಲಿ ಆರೋಪಿಸಿ, 'ಹಗಲು ಕಳೆಯಿತು, ರಾತ್ರಿ ಬಂದಿತು. ರಾತ್ರಿ ಕಳೆಯಿತು. ಚೈತ್ರಮಾಸ ಹೋಗಿ ವೈಶಾಖ ಮಾಸ ಬಂದಿತು' ಎಂದು ಲೋಕವ್ಯವಹಾರವಿದೆ. ಕಾಲವು ಹೋಗುವುದೂ ಇಲ್ಲ; ಬರುವುದೂ ಇಲ್ಲ.

**ಆದಿತ್ಯಗ್ರಹನಕ್ಷತ್ರಪರಿಸ್ಪಂದಮಥಾಪರೇ ।**
**ಭಿನ್ನಮಾವೃತ್ತಿಭೇದೇನ ಕಾಲಂ ಕಾಲವಿದೋ ವಿದುಃ ॥ ೭೬ ॥**

ಇನ್ನು ಕೆಲವು ಕಾಲವಿದರಾದರೋ ಸೂರ್ಯ, ಗ್ರಹ, ನಕ್ಷತ್ರಗಳ ಆವರ್ತನ ಭೇದದಿಂದ ಅನೇಕರೂಪವಾದ ಸಂಚಾರವನ್ನೇ ಕಾಲವೆಂದು ತಿಳಿದಿದ್ದಾರೆ.

**ವಿವರಣೆ** : ಸೂರ್ಯಾದಿಗಳ ಚಲನೆಯೇ ಕಾಲವೆಂದು ಕೆಲವರ ಮತವಿದೆ. ಸೂರ್ಯನು ಗ್ರಹವೇ ಆದರೂ ಬ್ರಾಹ್ಮಣವಸಿಷ್ಠನ್ಯಾಯದಂತೆ ಪ್ರಾಮುಖ್ಯವನ್ನು ತೋರಿಸುವುದಕ್ಕಾಗಿ ಶ್ಲೋಕದಲ್ಲಿ 'ಆದಿತ್ಯ' ಎಂಬ ಪದವನ್ನು ಸೇರಿಸಲಾಗಿದೆ. 'ಬ್ರಾಹ್ಮಣರು ಬಂದರು, ವಸಿಷ್ಠರೂ ಬಂದರು' ಎಂದು ಹೇಳುವುದುಂಟು. ವಸಿಷ್ಠರು ಬ್ರಾಹ್ಮಣರೇ ಆಗಿದ್ದರೂ ಅವರಿಗೆ ಪ್ರಾಮುಖ್ಯವನ್ನು ಹೇಳುವುದಕ್ಕಾಗಿ ಆ ಬಗೆಯ ನುಡಿ ವ್ಯವಹಾರದಲ್ಲಿದೆ. ಸೂರ್ಯನ ಉದಯದಿಂದ ಅಸ್ತಮಯದವರೆಗೆ ಆಗುವ ಸಂಚಾರವೇ ಹಗಲು. ಅಸ್ತಮಯದಿಂದ ಉದಯದವರೆಗಿನ ಕಾಲವು ರಾತ್ರಿ. ಹದಿನೈದು ದಿವಸಗಳವರೆಗೆ ಈ ಹಗಲು ರಾತ್ರಿಗಳು ಆವರ್ತನೆಗೊಂಡರೆ ಒಂದು ಪಕ್ಷ. ಹಾಗೆಯೇ ಚಂದ್ರನ ಗತಿಯಿಂದ ಈ ದಿನ ಅಶ್ವಿನೀ, ಈ ದಿನ ಭರಣಿ, ಈ ದಿನ ಹುಣ್ಣಿಮೆ – ಇತ್ಯಾದಿ ವ್ಯವಹಾರಗಳು ಬರುತ್ತವೆ. ಏವಂಚ ಇವುಗಳ ಸಂಚಾರ–ಕ್ರಿಯೆಯೇ ಕಾಲ ಎಂದು ಕೆಲವರ ಅಭಿಪ್ರಾಯವಿದೆ. ಭೂಮಿಯು ಸುತ್ತುವುದ–ರಿಂದ ಹಗಲು ರಾತ್ರಿಗಳಾದರೂ ಆ ಕ್ರಿಯೆಯನ್ನು ಸೂರ್ಯನಲ್ಲಿ ಆರೋಪಿಸಿ 'ಸೂರ್ಯೋದಯ, ಸೂರ್ಯಾಸ್ತಮಯ' ಎಂದು ಸಕಲರೂ ಲೋಕದಲ್ಲಿ ವ್ಯವಹರಿಸುತ್ತಾರೆ. ಆದ್ದರಿಂದ ಸೂರ್ಯನ ಸಂಚಾರ ಕ್ರಿಯೆ ಎಂದು ಲೋಕದೃಷ್ಟಿಯಿಂದ ಹೇಳಲಾಗಿದೆ.

**ಕ್ರಿಯಾಂತರಪರಿಚ್ಛೇದೇ ಪ್ರವೃತ್ತಾ ಯಾ ಕ್ರಿಯಾಂ ಪ್ರತಿ ।**
**ನಿರ್ಜ್ಞಾತಪರಿಮಾಣಾ ಸಾ ಕಾಲ ಇತ್ಯಭಿಧೀಯತೇ ॥ ೭೭ ॥**

ಒಂದು ಕ್ರಿಯೆಯ ಪರಿಮಾಣವು ಮೊದಲೇ ಜ್ಞಾತವಾಗಿದ್ದಾಗ ಆ ಕ್ರಿಯೆಯು ಕ್ರಿಯಾಂತರವನ್ನು ಪರಿಚ್ಛೇದಿಸಲು ಪ್ರವೃತ್ತವಾದರೆ, ಆ ಕ್ರಿಯೆಗೆ ಮಾತ್ರ ಅದು ಕಾಲವೆನಿಸುತ್ತದೆ.

**ವಿವರಣೆ** : ಸೂರ್ಯಾದಿ ಜ್ಯೋತಿಗಳ ಗತಿರೂಪವಾದ ಸಂಚಾರವು ದಿವಸ, ರಾತ್ರಿ, ಪೂರ್ಣಿಮೆ – ಇತ್ಯಾದಿ ಶಬ್ದಗಳಿಂದ ವಾಚ್ಯವಾಗುತ್ತದೆಯಷ್ಟೆ. ಅದು ಕಾಲವಾಚಿಯೆಂದು ಪ್ರಸಿದ್ಧವಾಗಿದೆ. ಅದು ಕ್ರಿಯಾಂತರವನ್ನು ಪರಿಚ್ಛೇದಿಸಿ ಪರಿಚ್ಛೇದಿಸಿ ಕಾಲಶಬ್ದವಾಚ್ಯವಾಗುವುದು ಪ್ರಸಿದ್ಧವಾಗಿದೆ. ಉದಾ: ದಿವಸಮಧೀತೇ, ರಾತ್ರಿಂ ಶೇತೇ. ಒಂದು ಹಗಲು ಪೂರ್ತಿ ಓದುತ್ತಾನೆ. ಒಂದು ರಾತ್ರಿ ಪೂರ್ತಿಯಾಗಿ ನಿದ್ರಿಸುತ್ತಾನೆ – ಎಂದರ್ಥ. ಇಲ್ಲಿ ದಿವಸಾದಿ ಶಬ್ದಗಳು ಕಾಲವಾಚಕಗಳೆಂದು ಎಲ್ಲರೂ ಬಲ್ಲರು. ಹಾಗಲ್ಲದೆ ಪ್ರಸಿದ್ಧ ಕಾಲವಾಚಿಯಾಗದಿದ್ದರೂ ಒಂದು ಕ್ರಿಯೆಯು ಬೇರೆ ಪ್ರಮಾಣದಿಂದ ಎಷ್ಟು ಕಾಲ ಉಳ್ಳದ್ದೆಂದು ತಿಳಿದಿರುವಾಗ, ಅದು ಕ್ರಿಯೆಯೊಂದನ್ನು ಪರಿಚ್ಛೇದಿಸಿದರೆ ಆಗ ಆ ಕ್ರಿಯಾ ವಿಷಯದಲ್ಲಿ ಮಾತ್ರ ಕಾಲವೆನಿಸುತ್ತದೆ. ಉದಾ: ಗೋದೋಹಮಾಸ್ತೇ = ಹಸುವಿನ ಹಾಲನ್ನು ಕರೆಯುವವರೆಗೆ ಇರುತ್ತಾನೆ. ಹಾಲನ್ನು ಕರೆಯಲು ಎಷ್ಟು ಕಾಲಬೇಕೆಂಬುದು ಲೋಕಾನುಭವದಿಂದ ಗೊತ್ತಿರುತ್ತದೆ. ದಿವಸ, ರಾತ್ರಿಗಳಂತೆ ಗೋದೋಹವು ಪ್ರಸಿದ್ಧವಾದ ಕಾಲವಾಚಿಯಲ್ಲ. 'ಇರುವಿಕೆ' ಎಂಬ ಕ್ರಿಯೆಯನ್ನು ಪರಿಚ್ಛೇದಿಸು–ವುದರಿಂದ ಪ್ರಕೃತದಲ್ಲಿ ಇದು ಕಾಲವಾಚಿಯಾಗಿದೆ. ಪೂಜಾವಸಾನಮುಪವಿಶತಿ = ಪೂಜೆ ಮುಗಿಯುವವರೆಗೆ ಕುಳಿತಿರುತ್ತಾನೆ. ಇಲ್ಲಿ ಪೂಜಾವಸಾನದ ಪ್ರಮಾಣವು ತಿಳಿದಿದೆ. ಇದೂ ಕಾಲವಾಚಿಯಲ್ಲ. ಪ್ರಕೃತದಲ್ಲಿ ಉಪವೇಶನ ಕ್ರಿಯೆಯನ್ನು ಪರಿಚ್ಛೇದಿಸುವುದರಿಂದ ಆ ಕ್ರಿಯೆಯು ಕಾಲವೆನಿಸುತ್ತದೆ. ಹೀಗೆ ಕಾಲವಾಚಕತ್ವವು ಆಯಾ ಕ್ರಿಯೆಗೆ ಮಾತ್ರ ಮೀಸಲಾದ್ದರಿಂದ ಮೇಲ್ಕಂಡ ಶ್ಲೋಕದಲ್ಲಿ 'ಕ್ರಿಯಾಂ ಪ್ರತಿ' ಎಂದು ಕ್ರಿಯಾಶಬ್ದವನ್ನು ಮತ್ತೆ ಬಳಸಲಾಗಿದೆ. ಮೇಲ್ಕಂಡ ಎಲ್ಲ ಉದಾಹರಣೆಗಳಲ್ಲಿಯೂ 'ಅಕರ್ಮಕಧಾತುಭಿರ್ಯೋಗೇ ದೇಶಃ ಕಾಲೋ ಭಾವೋ ಗಂತವ್ಯೋಽಧ್ವಾ ಚ ಕರ್ಮಸಂಜ್ಞಕ ಇತಿ ವಾಚ್ಯಮ್' ಎಂಬ ವಾರ್ತಿಕದಿಂದ ಭಾವವಾಚಿಯ ಮೇಲೆ ದ್ವಿತೀಯಾ ಬಂದಿದೆ.

**ಜ್ಞಾನೇ ರೂಪಸ್ಯ ಸಂಕ್ರಾಂತಿರ್ಜ್ಞಾನೇನೈವಾನುಸಂಹೃತಿಃ ।**
**ಅತಃ ಕ್ರಿಯಾಂತರಾಭಾವೇ ಸಾ ಕ್ರಿಯಾ ಕಾಲ ಇಷ್ಯತೇ ॥೭೮॥**

ಜ್ಞಾನದಲ್ಲಿ ರೂಪಸ್ಯ = ಬಾಹ್ಯವಾದ ಕಾಲಾಕಾರದ, ಸಂಕ್ರಾಂತಿಃ =

ಪ್ರತಿಬಿಂಬದಂತೆ ಕ್ರಿಯೆಯ ಸಂಕ್ರಮಣವಾಗುತ್ತದೆ. ಆ ಕ್ರಿಯೆಯ ಗಣನ ರೂಪವಾದ ಅನುಸಂಹಾರವು ಜ್ಞಾನದಿಂದಲೇ ಆಗುತ್ತದೆ. ಆದ್ದರಿಂದ ಬಾಹ್ಯಕ್ರಿಯೆಗಳಿಲ್ಲದಿದ್ದಾಗ ಜ್ಞಾನರೂಪದಲ್ಲಿರುವ ಕ್ರಿಯೆಯೇ ಕಾಲವೆನಿಸುತ್ತದೆ.

**ವಿವರಣೆ** : ಕ್ರಿಯೆಯೇ ಕಾಲವಾದರೆ, ಒಬ್ಬನು ಯಾವ ಕ್ರಿಯೆಯನ್ನೂ ಕಾಣದೆ ಬಾಗಿಲು ಹಾಕಿಕೊಂಡು ಕೋಣೆಯಲ್ಲಿರುತ್ತಾನೆ, ಆಗ ಆತನಿಗೆ ಕಾಲಜ್ಞಾನವಾಗು–ವುದು ಹೇಗೆ? ಎಂಬ ಶಂಕೆಗೆ ಇದು ಉತ್ತರ. ಆತನು ಹೊರಗಿನ ಕ್ರಿಯೆಯನ್ನು ಕಾಣದಿದ್ದರೂ ಸಂಸ್ಕಾರಬಲದಿಂದ ಹೊರಗಿನ ಕ್ರಿಯೆಯನ್ನು ಸ್ಮರಿಸಿಕೊಳ್ಳುತ್ತಾನೆ, ಅಥವಾ ತನ್ನ ಉಸಿರಾಟವೆಂಬ ಕ್ರಿಯೆಯನ್ನು ಗಮನಿಸಿ ಅನುಸಂಹಾರಬುದ್ಧಿ–ಯಿಂದ ಕ್ರಿಯಾಸಂತತಿಯ ಪ್ರಮಾಣವನ್ನು ನಿರ್ಧರಿಸಿಕೊಳ್ಳುತ್ತಾನೆ. ಆಗ ಅಲ್ಪಕಾಲವೆ, ದೀರ್ಘಕಾಲವೆ? – ಇತ್ಯಾದಿ ವಿಚಾರವು ಹೊಳೆಯುತ್ತದೆ. ಆದ್ದರಿಂದ ಕ್ರಿಯೆಯೇ ಕಾಲವೆಂದರೆ ದೋಷವೇನೂ ಇಲ್ಲ. ಈ ಅಂತರ ಕ್ರಿಯೆಯೇ ಬಾಹ್ಯಕ್ರಿಯೆಯನ್ನು ಪರಿಚ್ಛೇದಿಸುತ್ತದೆ.

ಈ ಪಕ್ಷದಲ್ಲಿ ಕ್ರಿಯೆಯೇ ಕಾಲವೆಂದೂ ಕ್ರಿಯಾತಿರಿಕ್ತವಾದ ಕಾಲವಿಲ್ಲವೆಂದೂ ಹೇಳಲಾಯಿತು. ಕ್ರಿಯೆಯು ಕಾಲವೆಂದಾದರೆ ಅದು ಇನ್ನೊಂದು ಕ್ರಿಯೆಯನ್ನು ಪರಿಚ್ಛೇದಿಸಲೇ ಬೇಕು. ಆಗ ಎದ್ದುಕೊಳ್ಳುವ ಪ್ರಶ್ನೆಗೆ ಉತ್ತರವಿದು –

**ಭೂತೋ ಘಟ ಇತೀಯಂ ಚ ಸತ್ತಾಯಾ ಏವ ಭೂತತಾ ।**
**ಭೂತಾ ಸತ್ತೇತಿ ಸತ್ತಾಯಾಃ ಸತ್ತಾ ಭೂತಾಭಿಧೀಯತೇ ॥ ೭೯ ॥**

'ಭೂತೋ ಘಟಃ' ಎಂಬಲ್ಲಿ ತೋರುವ ಭೂತತ್ವವು (ಅತೀತತ್ವವು) ಸತ್ತೆಗೇ ಸರಿ, ಘಟಕ್ಕಲ್ಲ. 'ಭೂತಾಸತ್ತಾ' ಎಂಬಲ್ಲಿ ಸತ್ತಾ ಶಬ್ದಕ್ಕೆ ಸತ್ತಾಭೂತಾ = ದ್ರವ್ಯಾಯಮಾಣಸತ್ತಾ ಎಂದರ್ಥ.

**ವಿವರಣೆ** : ಭೂತೋ ಘಟಃ = ಘಟವು ಇತ್ತು ಎಂಬ ಪ್ರಯೋಗ ಉಂಟಷ್ಟೆ. ಇಲ್ಲಿ ಭೂ ಧಾತುವಿಗೆ 'ಸತ್ತಾ' (ಅಸ್ತಿತ್ವ = ಇರುವಿಕೆ) ಎಂದರ್ಥ. ಅದರ ಮುಂದಿರುವ 'ಕ್ತ' ಪ್ರತ್ಯಯಕ್ಕೆ ಭೂತಕಾಲವೆಂದರ್ಥ. ಈ ಭೂತಕಾಲಕ್ಕೆ ಅನ್ವಯ ಯಾವುದರಲ್ಲಿ? ಘಟದಲ್ಲಂತೂ ಅಲ್ಲ. ಘಟವು ದ್ರವ್ಯವಾದ್ದರಿಂದ ಅದರೊಡನೆ ಕಾಲಕ್ಕೆ ಅನ್ವಯ ಬರುವುದಿಲ್ಲ. ಭೂಧಾತ್ವರ್ಥವಾದ ಸತ್ತೆಯು ಕ್ರಿಯೆಯಾದ್ದರಿಂದ ಅದರಲ್ಲಿ ಅನ್ವಯವೆನ್ನುವಂತೆಯೂ ಇಲ್ಲ. ಸತ್ತಾ ಎಂಬುದು ನಿತ್ಯವೆಂದು ದಾರ್ಶನಿಕರ ಸಿದ್ಧಾಂತವಿದೆ. ನಿತ್ಯವಾದ ಸತ್ತೆಗೆ ನಾಶವಿಲ್ಲವಾದ್ದರಿಂದ ಅದರಲ್ಲಿ ಅತೀತತ್ವವು ಎಂದರೆ ಭೂತತ್ವವು ಬರುವುದಿಲ್ಲ – ಎಂಬ ಶಂಕೆಗೆ ಉತ್ತರ ಹೀಗೆ.

ಧಾತ್ವರ್ಥವಾದ ಸತ್ತಾ ಎಂಬುದು ಕ್ರಿಯಾರೂಪವಾದ್ದರಿಂದ ಭೂತಕಾಲವನ್ನು ಸತ್ತಾ ಎಂಬ ಕ್ರಿಯೆಯ ಮೂಲಕ ದ್ರವ್ಯವಾದ ಘಟದಲ್ಲಿ ಅನ್ವಯಿಸಬೇಕು. ಹಾಗೆ ಪರಂಪರೆಯಿಂದ ಕ್ರಿಯಾದ್ವಾರಾ ದ್ರವ್ಯದಲ್ಲಿ ಅನ್ವಯ ಬರುತ್ತದೆ – ಎಂದು ಸಮಾಧಾನ. ನಾಶವು ಘಟಕ್ಕೆ ಆಯಿತೆಂದು ತಾತ್ಪರ್ಯ.

ಹಾಗಾದರೆ 'ಸತ್ತಾ ಭೂತಾ' (ಸತ್ತೆಯು ನಾಶವಾಯಿತು) ಎಂಬಲ್ಲಿ ಹೇಗೆ? ಇಲ್ಲಿ ಸಾಕ್ಷಾತ್ ಸತ್ತೆಯಲ್ಲಿಯೇ ಭೂತತ್ವ ತೋರುತ್ತದೆ – ಎಂದರೆ ಅದಕ್ಕೆ ಸಮಾಧಾನ ಹೀಗೆ – ಇಲ್ಲಿ 'ಸತ್ತಾ' ಶಬ್ದವು ಭಾವಾರ್ಥದಲ್ಲಿ ಬಂದ 'ತಲ್' ಪ್ರತ್ಯಯಾಂತವಾಗಿದೆ. ಇದು ಪ್ರಾತಿಪದಿಕವಾದ್ದರಿಂದ ಇಲ್ಲಿ ಸತ್ತೆ ದ್ರವ್ಯಸ್ವರೂಪವನ್ನು ಪಡೆದು ಲಿಂಗ ವಚನಕಾರಕಗಳ ಸಂಬಂಧವನ್ನು ಪಡೆಯುತ್ತಿದೆ. ಆದ್ದರಿಂದ ದ್ರವ್ಯಾಯಮಾಣವಾದ (ದ್ರವ್ಯದಂತೆ ತೋರುವ) ಈ ಸತ್ತಾ ಪದಾರ್ಥದಲ್ಲಿ ಭೂತತ್ವವು ಬರಬಹುದು. ಸತ್ತೆಯು ನಿತ್ಯವಾದರೂ ಅನಿತ್ಯವಾದ ಘಟಾದಿಗಳ ಯೋಗದಿಂದ ಅನಿತ್ಯದಂತೆ ಭಾಸವಾಗುತ್ತದೆ. 'ಘಟಸ್ಯ ಸತ್ತಾ ಭೂತಾ' ಎಂದರ್ಥ. ಘಟದ ಅಸ್ತಿತ್ವವು ಮುಗಿಯಿತು ಎಂದು ತಾತ್ಪರ್ಯ. ಹೀಗೆ ಅನಿತ್ಯ ವಸ್ತುಗಳ ಸಂಬಂಧದಿಂದ ಸತ್ತೆಯಲ್ಲಿ ಕಾಲತ್ರಯದ ಯೋಗವು ಬರಬಹುದು. ಕಾಲವು ನಿತ್ಯವಾದದ್ದು. ಕ್ರಿಯೆಗಿಂತ ಭಿನ್ನವಾದದ್ದು ಎಂಬ ಸಿದ್ಧಾಂತಪಕ್ಷದಲ್ಲಿಯೂ ಈ ಸಮಾಧಾನವನ್ನೇ ಹೇಳಬೇಕು. ಇಲ್ಲಿಗೆ ಕಾಲಸ್ವರೂಪದ ವಿಚಾರವು ಮುಗಿಯಿತು.

ಇಲ್ಲಿ ಕಾಲನಿಮಿತ್ತಕವಾದ ಶಾಸ್ತ್ರವ್ಯವಹಾರವನ್ನು ವಿಚಾರಿಸಬೇಕಾಗಿದೆ. ಮೊದಲು ಹೇಳಬೇಕಾದದ್ದು ಇಷ್ಟು – ದರ್ಶನಭೇದದಿಂದ ಕೆಲವು ವಸ್ತುಗಳು ಪಾರಮಾರ್ಥಿಕವಾಗಿ ನಿತ್ಯವಾದವು. ಕೆಲವು ವ್ಯಾವಹಾರಿಕವಾಗಿ ನಿತ್ಯವಾದವು. ಉಭಯ ಪಕ್ಷಗಳಲ್ಲಿಯೂ ಆತ್ಮನಿದ್ದಾನೆ, ಆಕಾಶವಿದೆ, ದಿಕ್ಕು ಇದೆ, ಕಾಲವಿದೆ, ಪರ್ವತಗಳಿವೆ – ಎಂದು ವರ್ತಮಾನ ಕಾಲದ ಪ್ರಯೋಗವಿದೆ. ಈ ನಿತ್ಯಪದಾರ್ಥಗಳಲ್ಲಿ ಸ್ಥಿತಿ (ಇರುವಿಕೆ) ಮೊದಲಾದ ಕೆಲವು ಧರ್ಮಗಳು ಸರ್ವದಾ ಇರುವುದರಿಂದ ವರ್ತಮಾನಕಾಲವನ್ನು ಪ್ರಯೋಗಿಸುವುದರಲ್ಲಿ ತೊಡಕು ಇದೆ. 'ವರ್ತಮಾನೇ ಲಟ್' (೩–೨–೧೨೩) ಎಂಬ ಸೂತ್ರದ ಮಹಾಭಾಷ್ಯದಲ್ಲಿ 'ನಿತ್ಯಪ್ರವೃತ್ತೇ ಚ ಕಾಲಾವಿಭಾಗಾತ್' ಶಂಕೆಯನ್ನೆತ್ತಿ ಸಮಾಧಾನ ಹೇಳಿದ್ದಾರೆ. ಆ ವಿಚಾರವನ್ನು ಹೀಗೆ ಸಂಗ್ರಹಿಸಬಹುದು – ಸತತವೂ ವಿಚ್ಛೇದವಿಲ್ಲದೆ ಇರತಕ್ಕ ಶಾಶ್ವತವಸ್ತುಗಳಿಗೆ ಭೂತ ಭವಿಷ್ಯದ್ ವರ್ತಮಾನಗಳೆಂಬ ಕಾಲವಿಭಾಗವಿಲ್ಲ. ಹಿಮಾಲಯ ಪರ್ವತವಿದ್ದಿತು – ಎಂದು ಹೇಳಿದರೆ, ಆ ಪರ್ವತವು ಈಗ ಇಲ್ಲ, ಮುಂದೆ ಇರುವುದಿಲ್ಲ – ಎಂಬ ವಿಪರೀತಾರ್ಥವು ತೋರಿಬಿಡುತ್ತದೆ. ಈ ಮೂರು ಕಾಲಗಳೂ ಪರಸ್ಪರ ಪ್ರತಿದ್ವಂದ್ವಿಗಳು. ಕಾಲವಿಭಾಗವು ನಿತ್ಯವಸ್ತುಗಳಿಗೆ

ಇಲ್ಲವಾದ್ದರಿಂದ ಹಿಮಾಲಯ ಪರ್ವತವಿದೆ, ದೇವರಿದ್ದಾನೆ ಇತ್ಯಾದಿ ವರ್ತಮಾನ–ಕಾಲದ ಪ್ರತ್ಯಯವು ಬರುವುದು ಹೇಗೆ? ಪ್ರಯೋಗವಂತೂ ಇದೆ. ಆದ್ದರಿಂದ ವರ್ತಮಾನಕಾಲವಿದ್ದರೂ ನಿತ್ಯವಸ್ತುಗಳಿಗೆ ಸಂಬಂಧಿಸಿದಂತೆ ಆ ಪ್ರತ್ಯಯವನ್ನು ವಿಧಿಸಬೇಕಾಗುತ್ತದೆ – ಎಂದು ಶಂಕೆ ಹುಟ್ಟುತ್ತದೆ. ವರ್ತಮಾನವೆಂದರೆ ಸಂಪ್ರತಿ ಇರತಕ್ಕದ್ದು. ನಿತ್ಯ ಪದಾರ್ಥವು ಸಂಪ್ರತಿ ಇರುವುದರಿಂದ ವರ್ತಮಾನಕಾಲದ ಪ್ರತ್ಯಯವು ಬರಲು ಅಡ್ಡಿಯೇನು? ಎಂದು ಮತ್ತೆ ಪ್ರಶ್ನೆ ಹುಟ್ಟುತ್ತದೆ. ಅದಕ್ಕೆ ಉತ್ತರವೇನೆಂದರೆ, ಹಿಂದೆ ಹೇಳಿದಂತೆ ಈ ಮೂರು ಕಾಲಗಳೂ ಪ್ರತಿದ್ವಂದ್ವಿಗಳಾ–ಗಿದ್ದು ಒಂದನ್ನೊಂದು ವ್ಯಾವರ್ತಿಸುತ್ತವೆ. ಘಟವು ಇತ್ತು ಎಂದರೆ ಈಗ ಇಲ್ಲವೆಂದು ಅರ್ಥವಾಗುತ್ತದೆ. ಭೂತಕಾಲವು ವರ್ತಮಾನ ಭವಿಷ್ಯತ್ಕಾಲಗಳನ್ನು ವ್ಯಾವರ್ತಿಸು–ತ್ತವೆ. 'ಊಟಮಾಡುತ್ತಾನೆ' ಎಂಬಲ್ಲಿ ವರ್ತಮಾನ ಕಾಲವು ಭೂತಭವಿಷ್ಯತ್ತುಗಳನ್ನು ವ್ಯಾವರ್ತಿಸುತ್ತದೆ. ಇಲ್ಲಿ ಭಾವಿಯನ್ನು ತೆಗೆಯಲಾಗುವುದು–ಎಂಬ ಭವಿಷ್ಯತ್ಕಾಲವು ಭೂತವರ್ತಮಾನಗಳನ್ನು ವ್ಯಾವರ್ತಿಸುತ್ತದೆ. ಹೀಗೆ ಕಾಲದಿಂದ ಉಪಕಾರವನ್ನು ಪಡೆಯುವ ಅನಿತ್ಯವಸ್ತುಗಳಿಗೆ ಮಾತ್ರ ಕಾಲತ್ರಯವು ಯುಕ್ತವಾದದ್ದು. ನಿತ್ಯ ವಸ್ತುಗಳಿಗೆ ಕಾಲಭೇದವು ಹೊಂದುವುದಿಲ್ಲ.

ಲೋಕದಲ್ಲಿ ಜನರು 'ಹಿಮವತ್‌ಪರ್ವತ ಹಿಂದೆ ಇತ್ತು. ಈಗ ಇದೆ, ಮುಂದೆ ಇರುವುದು' ಎಂದು ಹೇಳುವುದರಿಂದ ಈ ಪ್ರತ್ಯಯಗಳು ಬರಲು ಅಡ್ಡಿಯಿಲ್ಲ – ಎಂಬ ಸಮಾಧಾನವು ಯುಕ್ತವಲ್ಲ. ಸೂರ್ಯನಿಗೆ ಉದಯಾಸ್ತಮಾನಗಳಿಲ್ಲ–ದಿದ್ದರೂ ಲೋಕದಲ್ಲಿ 'ಸೂರ್ಯನು ಹುಟ್ಟುತ್ತಾನೆ, ಮುಳುಗುತ್ತಾನೆ' ಎಂದು ಹೇಳುತ್ತಾರೆ. ಹೀಗೆ ಹೇಳಿದ ಮಾತ್ರದಿಂದ ಸೂರ್ಯನಿಗೆ ಉದಯಾಸ್ತಮಯಗಳು ಸಂಭವಿಸುವುದಿಲ್ಲ. ನಮಗೆ ಶಾಸ್ತ್ರೀಯವಾದ ಉತ್ತರಬೇಕು. ಜನರ ಪ್ರಯೋಗಕ್ಕೆ ಬೇರೆ ಉಪಪತ್ತಿಯನ್ನು ಹೇಳಬಹುದು.

ಈಗ ಶಾಸ್ತ್ರೀಯ ಸಿದ್ಧಾಂತ ಹೀಗೆ – ಈ ಎಲ್ಲ ಶಂಕೆಗಳಿಗೆ ಉತ್ತರವಾಗಿ ಮಹಾಭಾಷ್ಯದಲ್ಲಿ 'ಭೂತಭವಿಷ್ಯದ್‌ವರ್ತಮಾನಾನಾಂ ರಾಜ್ಞಾಂ ಯಾಃ ಕ್ರಿಯಾಃ ತಾಸ್ತಿಷ್ಠತೇರಧಿಕರಣಮ್' ಎಂದು ಹೇಳಿದ್ದಾರೆ. 'ಹಿಮಾಲಯಃ ಅಭೂತ್, ಹಿಮಾಲಯಃ ಅಸ್ತಿ, ಹಿಮಾಲಯೋ ಭವಿಷ್ಯತಿ' ಎಂಬಲ್ಲಿ ಆಯಾ ಕಾಲದಲ್ಲಿರುವ ರಾಜರ ಕ್ರಿಯೆಗಳ ಕಾಲವು ಹಿಮಾಲಯದ ಸ್ಥಿತಿಗೆ ಅಧಿಕರಣ ಎಂದರ್ಥ. ಅಭಿಪ್ರಾಯವೇನೆಂದರೆ, ನಿತ್ಯವಾದ ಕಾಲದಲ್ಲಿ ವರ್ತಮಾನಾದಿ ಭೇದವು ಪರಿಚ್ಛೇದಕವಾದ ಉಪಾಧಿಯಿಂದ ಬರುತ್ತದೆ. ಹಿಮಾಲಯದ ಸ್ಥಿತಿಗೆ ಆಯಾ ಕಾಲದಲ್ಲಿ ಇರಬಹುದಾದ ರಾಜರ ಕ್ರಿಯಾಕಾಲವು ಪರಿಚ್ಛೇದಕವಾದ ಉಪಾಧಿ.

ರಾಜರೂ ಅವರ ಕ್ರಿಯೆಗಳೂ ಅನಿತ್ಯವಾದವು. ಅವುಗಳಿಗೆ ಕಾಲವಿಭಾಗ ಉಂಟು. ಅವರ ಕ್ರಿಯೆಗಳ ಕಾಲವೇ ನಿತ್ಯವಸ್ತುಗಳ ಕ್ರಿಯೆಯಲ್ಲಿ ತೋರುತ್ತದೆ. ಪಾಂಡವರು ವನವಾಸಕ್ಕೆ ಹೋದಾಗ ಹಿಮಾಲಯ ಪರ್ವತ ಇದ್ದಿತು. ಗಂಗಾನದಿ ಹರಿಯುತ್ತಿತ್ತು ಎಂದು ಹೇಳಬಹುದು. ಅವರು ವನವಾಸಕ್ಕೆ ಹೋದ ಭೂತಕಾಲವು ಹಿಮಾಲಯ ಮತ್ತು ಗಂಗಾನದಿಗಳ ಕ್ರಿಯೆಗಳಿಗೆ ಉಪಾಧಿಯಾಗಿದೆ. ಹೀಗೆ ವರ್ತಮಾನ, ಭವಿಷ್ಯತ್ತುಗಳನ್ನೂ ಊಹಿಸಿ ತಿಳಿದುಕೊಳ್ಳಬಹುದು. 'ರಾಜ್ಞಾಂ' ಎಂಬುದು ಪ್ರಸಿದ್ಧರಾದವರಿಗೆ ಉದಾಹರಣೆ. ಸಂದರ್ಭಾನುಸಾರವಾಗಿ ಕ್ರಿಯೆಯು ಇತರರಿಗೆ ಸಂಬಂಧಿಸಿದ್ದೂ ಆಗಬಹುದು. ಈ ವಿಷಯವನ್ನೀಗ ಕಾರಿಕೆಯಲ್ಲಿ ಹೇಳುತ್ತಾರೆ –

**ಪರತೋ ಭಿದ್ಯತೇ ಸರ್ವಮಾತ್ಮಾ ತು ನ ವಿಕಲ್ಪ್ಯತೇ ।**
**ಪರ್ವತಾದಿಸ್ಥಿತಿಸ್ತಸ್ಮಾತ್ ಪರರೂಪೇಣ ಭಿದ್ಯತೇ ॥ ೮೦ ॥**

ಸಮಸ್ತ ಭಾವ ಪದಾರ್ಥವೂ ಪರವಸ್ತುವಿನಿಂದ ಭೇದವನ್ನು ಪಡೆಯುತ್ತದೆ. ಸ್ವಸ್ವರೂಪವು ತಾನಾಗಿ ಯಾವ ಭೇದವನ್ನೂ ಪಡೆಯುವುದಿಲ್ಲ. ಸ್ವರೂಪವು ತಾನಾಗಿ ಭೇದವನ್ನು ಪಡೆಯುವುದಿಲ್ಲವಾದ್ದರಿಂದ ಪರ್ವತಾದಿ–ಗಳ ಸತ್ತೆಯು ಅನ್ಯನಿಷ್ಠಸತ್ತಾದಿ ಧರ್ಮದಿಂದ ಭೇದವನ್ನು ಪಡೆಯುತ್ತದೆ.

**ವಿವರಣೆ** : ಪರ್ವತ, ಸಮುದ್ರ, ನದೀ ಮೊದಲಾದವು ವ್ಯಾವಹಾರಿಕವಾಗಿ ನಿತ್ಯಪದಾರ್ಥಗಳು. ಸತ್ತಾ ಎಂದರೆ ಇರುವಿಕೆ. ಅದು ಸ್ವಸ್ವರೂಪಧಾರಣೆ. ಯಾವ ವಸ್ತುವಿಗೇ ಆಗಲಿ ಭೇದವು ಪ್ರತಿಯೋಗಿಯಾದ ಪರವಸ್ತುವಿನಿಂದ ಬರುವುದೇ ಹೊರತು ತಾನಾಗಿ ತನ್ನಲ್ಲಿ ಭೇದವಾಗುವುದಿಲ್ಲ. ಪರ್ವತಾದಿಗಳ ಸತ್ತೆಯು ನಿತ್ಯವಾದದ್ದು. ಅದರಲ್ಲಿ ಭೇದವಿಲ್ಲ. ಆದರೂ ಪರ್ವತವಿತ್ತು – ಮುಂತಾದ ಪ್ರಯೋಗವು ಸತ್ತೆಯ ಭೇದವನ್ನು ತೋರಿಸುವುದರಿಂದ ಸತ್ತೆಯಲ್ಲಿ ಭೂತಾದಿಕಾಲವು ಹೇಗೆ ಯುಕ್ತವೆಂಬ ಪ್ರಶ್ನೆ ಹುಟ್ಟುತ್ತದೆ. ಪರರೂಪದಿಂದ ಭೇದವು ತೋರುತ್ತದೆ ಎಂದು ಅದಕ್ಕೆ ಉತ್ತರ. ಹಿಮಾಲಯ ಪರ್ವತವಿತ್ತು – ಎಂದರೆ ಯಾವಾಗ? ಎಂಬ ಪ್ರಶ್ನೆ ಹುಟ್ಟುತ್ತದೆ. ಯಾವನೋ ಒಬ್ಬ ರಾಜನಿದ್ದಾಗ, ಯಾವನೋ ಒಬ್ಬ ವ್ಯಕ್ತಿ ಇದ್ದಾಗ – ಎಂದು ಹೇಳಲೇಬೇಕು. ಅವನು ಅನಿತ್ಯ ವಸ್ತುವಾದ್ದರಿಂದ ಅವನ ಸತ್ತೆಯಲ್ಲಿ ಭೂತಕಾಲವಿರುತ್ತದೆ. ಅಥವಾ ಅವನ ಇನ್ನೊಂದು ಕ್ರಿಯೆಯಲ್ಲಿ ಭೂತಕಾಲವಿರುತ್ತದೆ. ಭೂತಕಾಲ ವಿಶಿಷ್ಟವಾದ ಆ ಕ್ರಿಯೆ ಹಿಮಾಲಯದ ಸತ್ತೆಗೆ ಉಪಾಧಿಯಾಗಿರುತ್ತದೆ. ಆಗಲೇ ಭೂತಕಾಲದ ಪ್ರಯೋಗವು ಹಿಮಾಲಯಕ್ಕೆ ಸಂಬಂಧಿಸಿ ಬರುತ್ತದೆ. ಸ್ವತಃ ಬರುವುದಿಲ್ಲ.

**ಪ್ರಸಿದ್ಧಭೇದಾ ವ್ಯಾಪಾರಾ ವಿರೂಪಾವಯವಕ್ರಿಯಾಃ ।**
**ಸಾಹಚರ್ಯೇಣ ಭಿದ್ಯಂತೇ ಸರೂಪಾವಯವಕ್ರಿಯಾಃ ॥೮೧॥**

ವಿರೂಪವಾದ ಅವಯವ ಕ್ರಿಯೆಗಳುಳ್ಳ ಧಾತ್ವರ್ಥ ವ್ಯಾಪಾರಗಳು ತಮ್ಮಲ್ಲಿಯೇ ಭೇದ ಉಳ್ಳವುಗಳೆಂದು ಲೋಕದಲ್ಲಿ ಪ್ರಸಿದ್ಧವಾಗಿವೆ. ಅವುಗಳ ಸಾಹಚರ್ಯದಿಂದ ಸರೂಪಾವಯವಕ್ರಿಯೆಗಳುಳ್ಳ ಸ್ಥಿತ್ಯಾದಿ ವ್ಯಾಪಾರಗಳೂ ತಮ್ಮಲ್ಲಿಯೇ ಭೇದಗಳನ್ನು ಪಡೆದುಕೊಳ್ಳುತ್ತವೆ.

**ವಿವರಣೆ** : ಧಾತ್ವರ್ಥವ್ಯಾಪಾರವು ಕ್ರಿಯಾಸಮುದಾಯ ರೂಪವಾಗಿರುತ್ತದೆ. ಈ ಕ್ರಿಯೆಗಳು ವ್ಯಾಪಾರದ ಅವಯವಗಳು. ಪಚತಿ = ಅಡುಗೆ ಮಾಡುತ್ತಾನೆ. ಅಡುಗೆ ಮಾಡುವುದು ಒಂದು ವ್ಯಾಪಾರವೆನಿಸುತ್ತದೆ. ಇದರಲ್ಲಿ ಅವಾಂತರ ಕ್ರಿಯೆಗಳಿವೆ. ಅಕ್ಕಿಯನ್ನು ಪಾತ್ರೆಗೆ ಹಾಕುವುದು, ಅದನ್ನು ತೊಳೆಯುವುದು ಒಲೆಗೆ ಉರಿಹತ್ತಿಸುವುದು, ಪಾತ್ರೆಯನ್ನು ಒಲೆಯ ಮೇಲಿಡುವುದು, ಸೌಟಿನಿಂದ ತೊಳಸುವುದು – ಇತ್ಯಾದಿಗಳು ಅವಾಂತರ ವ್ಯಾಪಾರಗಳು ಅಥವಾ ಕ್ರಿಯೆಗಳು. ಈ ಅವಾಂತರ ಕ್ರಿಯೆಗಳಲ್ಲಿರುವ ಪರಸ್ಪರ ಭೇದಗಳು ಎಲ್ಲರಿಗೂ ತಿಳಿದವು. ಕಾಷ್ಠಂ ಭಿನತ್ತಿ = ಸೌದೆಯನ್ನು ಒಡೆಯುತ್ತಾನೆ. ಒಡೆಯುವ ವ್ಯಾಪಾರದಲ್ಲಿ ಅನೇಕ ಕ್ರಿಯೆಗಳಿವೆ. ಕೊಡಲಿಯನ್ನು ಹಿಡಿದುಕೊಳ್ಳುವುದು, ಅದನ್ನು ಮೇಲಕ್ಕೆ ಎತ್ತುವುದು, ಬಲವಾಗಿ ಸೌದೆಗೆ ಪೆಟ್ಟು ಹಾಕುವುದು, ಇವೆಲ್ಲವೂ ಅವಾಂತರ ಕ್ರಿಯೆಗಳು. ವ್ಯಾಪಾರದ ಅವಯವಗಳು. ಇವುಗಳಲ್ಲಿರುವ ಭೇದಗಳೂ ಪ್ರಸಿದ್ಧವಾದವೇ. ಹಾಗೆ ಸಾಮಾನ್ಯವಾಗಿ ಪಚಿ ಭಿದಿ – ಮುಂತಾದ ಧಾತ್ವರ್ಥ ವ್ಯಾಪಾರಗಳೆಲ್ಲವೂ ಪ್ರಸಿದ್ಧವಾದ ಪರಸ್ಪರ ಭೇದವುಳ್ಳ ಅವಾಂತರ ಕ್ರಿಯೆಗಳನ್ನು ಒಳಗೊಂಡಿವೆ.

ಹೀಗೆ ಸಮಸ್ತ ವ್ಯಾಪಾರ (ಕ್ರಿಯೆ)ಗಳಲ್ಲಿಯೂ ಅವಯವಕ್ರಿಯೆಗಳು ಇದ್ದೇ ಇರುತ್ತವೆ. ಅವು ಒಂದೊಂದಾಗಿ ನಡೆಯುತ್ತವೆ. ಆದ್ದರಿಂದಲೇ ಕ್ರಿಯೆಯು ಸಾಧ್ಯಸ್ವರೂಪವುಳ್ಳದ್ದೆನಿಸಿಕೊಂಡಿದೆ. ಸಾಧ್ಯತ್ವವಿಲ್ಲದ್ದು ಕ್ರಿಯೆಯೇ ಅಲ್ಲ. ಪಚಿ, ಭಿದಿ ಮೊದಲಾದ ಕ್ರಿಯೆಗಳಲ್ಲಿ ಅವಯವ ಕ್ರಿಯೆಗಳು ಭಿನ್ನಸ್ವರೂಪಗಳಾದ್ದರಿಂದ ನಮಗೆ ಸ್ಪಷ್ಟವಾಗಿ ಅವು ತೋರುತ್ತವೆ. ಆದರೆ ಪರ್ವತಃ ಅಸ್ತಿ, ಸಮುದ್ರಃ ಅಸ್ತಿ – ಎಂಬಲ್ಲಿ ಸ್ಥಿತಿಯು ಕ್ರಿಯೆಯಾದರೂ ಅವಯವಕ್ರಿಯೆ ಪ್ರತೀತವಾಗುವುದಿಲ್ಲ. ಏಕೆಂದರೆ ಸ್ಥಿತಿಯ ಅವಯವ ಕ್ರಿಯೆಗಳು ಸರೂಪವಾದವು, ವಿರೂಪಗಳಲ್ಲ. ಸ್ಥಿತಿಯೆಂದರೆ ಸ್ವಸ್ವರೂಪಧಾರಣೆ. ಈ ಕ್ರಿಯೆ ಪರ್ವತದ ಸ್ವರೂಪವು ಕೆಡದಂತೆ ಬಿಗಿಯಾಗಿ ಹಿಡಿದಿರುವುದೇ ಆಗಿದೆ. ಪ್ರತಿಕ್ಷಣದಲ್ಲಿಯೂ ಈ ಬಿಗಿಹಿಡಿಯುವ ಅವಾಂತರ–ಕ್ರಿಯೆಗಳು ನಡೆಯುತ್ತಲೇ ಇರುವುವು. ಸಾಧ್ಯಸ್ವರೂಪದಲ್ಲಿರುವುದರಿಂದಲೇ 'ಅಸ್ತಿ'

ಎಂಬಲ್ಲಿ ಅಸ್ ಧಾತ್ವರ್ಥವಾದ ಸ್ಥಿತಿಯು ಕ್ರಿಯೆ ಎನ್ನಿಸುತ್ತದೆ. ಈ ಅವಾಂತರ ಕ್ರಿಯೆಗಳು ಏಕರೂಪವಾಗಿರುವುದರಿಂದ ನಮಗೆ ಭೇದವು ತಿಳಿಯುವುದಿಲ್ಲ. ಏವಂಚ ಈ ಅವಾಂತರಕ್ರಿಯೆಗಳು ಒಂದಾದಮೇಲೆ ಒಂದು ನಡೆಯತಕ್ಕವು. ರಾಜರು ಅಥವಾ ಇತರರು ಹೋಗುವುದು, ಬರುವುದು, ಜಗಳವಾಡುವುದು ಮುಂತಾದ್ದರಲ್ಲಿ ವಿರೂಪವಾದ ಅವಾಂತರ ಕ್ರಿಯೆಗಳಲ್ಲಿ ಭೇದವು ಸ್ಪಷ್ಟವಾಗಿದೆ. ಸ್ಪಷ್ಟಭೇದವುಳ್ಳ ಈ ಕ್ರಿಯೆಗಳು 'ಸ್ಥಿತಿ' ಕ್ರಿಯೆಯಲ್ಲಿಯೂ ಅಸ್ಪಷ್ಟವಾದ ಅವಾಂತರ ಕ್ರಿಯೆಗಳಿವೆಯೆಂದು ಜ್ಞಾಪಿಸುತ್ತವೆ. ಈ ಜ್ಞಾಪಕ ಕ್ರಿಯೆಗಳೇ ಪರಿಚ್ಛೇದ–ಕಗಳೆನಿಸುತ್ತವೆ. ಆದಿತ್ಯ, ಚಂದ್ರ, ನಕ್ಷತಾದಿಗಳ ಗತಿಯೂ ಪರಿಚ್ಛೇದಕವಾಗಬಹುದು. ಈ ಪ್ರಕಾರವಾಗಿ ಪರ್ವತಾದಿಗಳ ಸ್ಥಿತಿ ಕ್ರಿಯೆಯಲ್ಲಿಯೂ ಅವಾಂತರ ಭೇದಗಳಿದ್ದು ಅವುಗಳಿಗೂ ಕಾಲವು ಆಧಾರವಾಗಿರುವುದರಿಂದ ಹಿಮಾಲಯ ಪರ್ವತವಿತ್ತು ಎಂಬ ಪ್ರಯೋಗ ಬರಬಹುದು. ಹಿಮಾಲಯದ 'ಸ್ಥಿತಿ'ಯಲ್ಲಿರುವ ಅವಾಂತರ ಕ್ರಿಯೆಗಳು ಗತಿಸಿದಾಗ ಭೂತಕಾಲ, ಸಂಪ್ರತಿ ಇರುವುದನ್ನು ಎಣಿಕೆಗೆ ತೆಗೆದು–ಕೊಂಡಾಗ ವರ್ತಮಾನ ಕಾಲ, ಮುಂದೆ ಬರುವ ಅವಾಂತರ ಕ್ರಿಯೆಗಳನ್ನು ಗಮನದಲ್ಲಿರಿಸಿದಾಗ ಭವಿಷ್ಯತ್ಕಾಲ – ಹೀಗೆ ಕಾಲತ್ರಯವೂ ನಿತ್ಯಪದಾರ್ಥಕ್ಕೆ ಸಂಭವಿಸುತ್ತದೆ.

**ವ್ಯವಧಾನಮಿವೋಪೈತಿ ನಿವೃತ್ತ ಇವ ದೃಶ್ಯತೇ ।**
**ಕ್ರಿಯಾಸಮೂಹೋ ಭುಜ್ಯಾದಿರಂತರಾಲಪ್ರವೃತ್ತಿಭಿಃ ॥ ೮೨ ॥**

**ನ ಚ ವಿಚ್ಛಿನ್ನರೂಪೋಽಪಿ ಸೋಽವಿರಾಮಾನ್ನಿವರ್ತತೇ ।**
**ಸರ್ವೈವ ಹಿ ಕ್ರಿಯಾನ್ಯೇನ ಸಂಕೀರ್ಣೇವೋಪಲಭ್ಯತೇ॥ ೮೩ ॥**

ಅವಯವ ಕ್ರಿಯಾ ಸಮೂಹ ರೂಪವಾದ ಭುಜಿ ಕ್ರಿಯೆ (ಊಟ–ಮಾಡುವುದು) ಮೊದಲಾದದ್ದು ಮಧ್ಯದಲ್ಲಿ ನಡೆಯುವ ಚಿಕ್ಕ ಕ್ರಿಯೆಗಳಿಂದ ವ್ಯವಧಾನವನ್ನು ಹೊಂದಿತೋ ಎಂಬಂತೆಯೂ ಭುಜಿ ಕ್ರಿಯೆಯು ಮುಗಿ–ಯಿತೋ ಎಂಬಂತೆಯೂ ಕಾಣುತ್ತದೆ. (ವ್ಯವಧಾನವೂ ಆಗಿರುವುದಿಲ್ಲ, ಮುಗಿದೂ ಇರುವುದಿಲ್ಲ)

ಆ ಭೋಜನಾದಿ ಕ್ರಿಯೆಯು ವಿಚ್ಛಿನ್ನವಾದಂತೆ ತೋರಿದರೂ ನಿಲ್ಲದೆ ಮುಂದೆ ನಡೆಯುವುದರಿಂದ ಮುಗಿದಿರುವುದಿಲ್ಲ. ವಸ್ತುತಃ ಸಕಲಕ್ರಿಯೆಯೂ ಮಧ್ಯದಲ್ಲಿ ಕ್ರಿಯಾಂತರದಿಂದ ಸಂಕೀರ್ಣವಾದಂತೆಯೇ ಇರುವುದು ಕಂಡು ಬರುತ್ತದೆ.

**ವಿವರಣೆ** : ಭೋಜನಾದಿಕ್ರಿಯೆಯು ಅವಯವ ಕ್ರಿಯಾ ಸಮುದಾಯರೂಪ–ವಾದದ್ದು. ತೃಪ್ತಿಯೆಂಬ ಫಲಪರ್ಯಂತವಾದ ವ್ಯಾಪಾರವು ಭೋಜನಕ್ರಿಯೆ. ಅದು ನಡೆಯುವಾಗ ಅದರ ಅವಯವವಲ್ಲದ ಕ್ರಿಯೆಯೂ ನಡೆಯಬಹುದು. ಆಗ ಭೋಜನಕ್ರಿಯೆ ವ್ಯವಹಿತವಾಯಿತೆಂದೋ ಮುಗಿಯಿತೆಂದೋ ಹೇಳಲಾಗುವುದಿಲ್ಲ. ಒಬ್ಬನು ಊಟಮಾಡುತ್ತಿರುವಾಗ ಮಾತಾಡಬಹುದು, ನಗಬಹುದು. ಅಷ್ಟರಿಂದ ಭೋಜನಕ್ರಿಯೆ ಮುಗಿದಂತಲ್ಲ. ತೃಪ್ತಿಯಾಗುವವರೆಗೂ ಭೋಜನ ಕ್ರಿಯೆಯು ನಡೆಯುತ್ತದೆ. ಆದ್ದರಿಂದ ಮಧ್ಯಸ್ಥವಾದ ಇತರ ಕ್ರಿಯೆಗಳು ನಡೆದರೂ 'ಭೋಜನ ಮಾಡುತ್ತಿದ್ದಾನೆ' ಎಂದು ವರ್ತಮಾನಕಾಲದ ರೂಪವೇ ಕ್ರಿಯಾಪದಕ್ಕೆ ಇರುತ್ತದೆ. ಅದು ಭೋಜನಕ್ರಿಯೆಯ ಅನುವೃತ್ತಿಯನ್ನೇ ಸೂಚಿಸುತ್ತದೆ. ಮಧ್ಯದಲ್ಲಿ ವಿಚ್ಛೇದವು ದೀರ್ಘಕಾಲದವರೆಗೆ ನಡೆದರೂ ಫಲವು ದೊರೆಯುವವರೆಗೆ ಆ ಕ್ರಿಯೆ ವರ್ತಮಾನ ಕಾಲದಲ್ಲಿಯೇ ಇರುತ್ತದೆ. ಮನೆ ಕಟ್ಟಿಸುತ್ತಿದ್ದಾನೆ – ಎಂಬ ಕ್ರಿಯೆಗೆ ಮನೆಯು ಫಲ. ಮನೆಯ ನಿರ್ಮಾಣ ಒಂದು ವರ್ಷದ ಮೇಲೆ ಆಗುತ್ತದೆ. ನಡುವೆ ನೂರಾರು ವಿಭಿನ್ನ ಕ್ರಿಯೆಗಳು ನಡೆದರೂ 'ಮನೆ' ಕಟ್ಟಿಸುತ್ತಿದ್ದಾನೆ ಎಂಬ ಪ್ರಯೋಗಕ್ಕೆ ಚ್ಯುತಿ ಇಲ್ಲ. ಏಕೆಂದರೆ ಮನೆ ಎಂಬ ಫಲವು ಇನ್ನೂ ನಿಷ್ಪನ್ನವಾಗಿರು–ವುದಿಲ್ಲ. ಫಲಪರ್ಯಂತವಾದ ವ್ಯಾಪಾರವು ಧಾತ್ವರ್ಥವಾಗಿರುವುದು ಇದಕ್ಕೆ ಕಾರಣ. ಸಕಲ ಕ್ರಿಯೆಗಳ ಪರಿಸ್ಥಿತಿಯೂ ಹೀಗೆಯೇ. ನಡುವೆ ಕ್ರಿಯಾಂತರವು ಸೇರಿಕೊಂಡು ಪ್ರಕೃತವಾದ ಧಾತ್ವರ್ಥ ವ್ಯಾಪಾರವು ಸಂಕೀರ್ಣವಾದಂತೆ ತೋರು–ತ್ತದೆ. ಪತ್ರವನ್ನು ಬರೆಯುವಾಗ ನಡುವೆ ಕಣ್ಣುಮುಚ್ಚಿ ತೆರೆಯಬೇಕಾಗುವುದು. ಉಚ್ಛ್ವಾಸನಿಶ್ವಾಸಗಳು ನಡೆದಿರುತ್ತವೆ. ಆದರೂ ಪತ್ರವನ್ನು ಬರೆಯುವ ಕ್ರಿಯೆ ಮುಗಿದಿರುವುದಿಲ್ಲವಾದ್ದರಿಂದ 'ಪತ್ರವನ್ನು ಬರೆಯುತ್ತಿದ್ದಾನೆ' ಎಂಬ ಪ್ರಯೋಗಕ್ಕೆ ಚ್ಯುತಿ ಇಲ್ಲ.

**ತದಂತರಾಲದೃಷ್ಟಾ ವಾ ಸರ್ವೈವಾವಯವಕ್ರಿಯಾ ।**
**ಸಾದೃಶ್ಯಾತ್ ಸತಿ ಭೇದೇ ತು ತದಂಗತ್ವೇನ ಗೃಹ್ಯತೇ ॥ ೮೪ ॥**

ಅಥವಾ ಉದ್ದಿಷ್ಟ ಕ್ರಿಯೆಯ ನಡುವೆ ಕಂಡುಬರುವ ಹಸಿತ, ಸಂಲಾ–ಪಾದಿಗಳು ಉದ್ದಿಷ್ಟಕ್ರಿಯೆಯ ಅವಯವಗಳೆಂದು ಗ್ರಹಿಸಬಹುದು. ಅದಕ್ಕೆ ಸಾದೃಶ್ಯವು ಕಾರಣ. ಅವಯವಕ್ರಿಯೆಗೂ ನಡುವೆ ಬರುವ ಹಸಿತಾದಿಗಳಿಗೂ ಭೇದವೇ ಇವೆ ಎಂದಾದರೆ ಉದ್ದಿಷ್ಟಕ್ರಿಯೆಗೆ ಉಪಕಾರಿಯಾದ ಅಂಗಕ್ರಿಯೆ–ಯೆಂದಾದರೂ ತಿಳಿಯಬಹುದು.

**ವಿವರಣೆ** : ಭೋಜನ ಮಾಡುವಾಗ ನೀರನ್ನು ಕುಡಿಯಬೇಕಾಗುತ್ತದೆ.

ಅನ್ನವನ್ನು ಸಾಂಬಾರಿನೊಡನೆ ಸೇರಿಸಿ ಕಲಸಬೇಕಾಗುತ್ತದೆ. ರೊಟ್ಟಿಯನ್ನು ಮುರಿದು ಪಲ್ಯದೊಡನೆ ಸೇರಿಸಬೇಕಾಗುತ್ತದೆ. ಈ ಕ್ರಿಯೆಗಳು ಭೋಜನದ ಅವಯವ-ಕ್ರಿಯೆಗಳು. ಹಾಗೆಯೇ ಹಸಿತ ಸಂಬಾರಗಳೂ ಭೋಜನದೊಡನೆ ನಡೆಯುವ ಅವಯವಕ್ರಿಯೆಗಳೆಂದು ತಿಳಿಯಬೇಕು. ಅವಯವಕ್ರಿಯೆಗಳು ಭೋಜನಕ್ಕೆ ವಿಚ್ಛೇದನವನ್ನು ಮಾಡುವುದಿಲ್ಲ. ಅವಯವಕ್ರಿಯೆಗಳು ನಡೆಯದೆ ಭೋಜನವೇ ನೆರವೇರುವುದಿಲ್ಲ. ಹಸಿತ, ಸಂಲಾಪಗಳಿಲ್ಲದಿದ್ದರೂ ಭೋಜನಕ್ರಿಯೆ ನಡೆಯಬಲ್ಲ-ದಾದ್ದರಿಂದ ಹಸಿತ ಸಂಲಾಪಗಳು ಭೋಜನಕ್ರಿಯೆಯ ಅವಯವಗಳಲ್ಲವೆಂದೂ ಅವಯವಕ್ರಿಯೆಗಳಿಗೂ ಹಸಿತಾದಿಗಳಿಗೂ ಭೇದವಿದೆಯೆಂದೂ ಹೇಳುವುದಾದರೆ, ಹಸಿತಾದಿಗಳು ಸಹಕಾರಿಗಳಾದ ಕ್ರಿಯೆಗಳೆಂದು ಗ್ರಹಿಸಬಹುದು. ಪಲ್ಲಕ್ಕಿಯನ್ನು ಇಬ್ಬರು ಹೊರುವಾಗ ಇನ್ನೊಬ್ಬನು ಬಂದು ತಾನೂ ಪಲ್ಲಕ್ಕಿಯನ್ನು ಹೆಗಲಿಗೇರಿಸಿ ಉಳಿದವರಿಗೆ ಉಪಕಾರ ಮಾಡುತ್ತಾನೆ. ಆಗ ಪಲ್ಲಕ್ಕಿಯನ್ನು ಹೊರುವ ಕ್ರಿಯೆಗೆ ಭಂಗವೇನೂ ಬರುವುದಿಲ್ಲ. ಹಸಿತ ಸಂಲಾಪಗಳೂ ಸುಖಭೋಜನಕ್ಕೆ ಸಹಕರಿಸು-ವುದರಿಂದ ಭೋಜನಕ್ರಿಯೆಗೆ ಭಂಗವಿಲ್ಲ ಎಂದು ತಿಳಿಯಬೇಕು. ಏವಂಚ ಫಲಪರ್ಯಂತವಾದ ವ್ಯಾಪಾರ ಸಮೂಹವು ಕ್ರಿಯೆಯೆಂದೂ ನಡುವೆ ಬರುವ ಕ್ರಿಯಾಂತರವ್ಯವಧಾನವನ್ನು ಅದು ಸಹಿಸಿಕೊಳ್ಳುತ್ತದೆಯೆಂದೂ ಸಿದ್ಧವಾಯಿತು. ಇದರಿಂದ 'ನಾವು ಈ ಮನೆಯಲ್ಲಿ ಹತ್ತು ವರ್ಷಗಳಿಂದ ವಾಸಮಾಡುತ್ತಿದ್ದೇವೆ' 'ಅವನು ಹನ್ನೆರಡು ವರ್ಷಗಳಿಂದ ಪಾಠಹೇಳುತ್ತಿದ್ದಾನೆ. ಮುಂತಾದ ಪ್ರಯೋಗಗಳು ಸಿದ್ಧವಾಗುತ್ತವೆ.

ಈಗ ವರ್ತಮಾನ ಕ್ರಿಯೆಯೇ ಇಲ್ಲವೆಂದು ಆಕ್ಷೇಪ –

**ಸದಸದ್ವಾಪಿ ವಸ್ತು ಸ್ಯಾತ್ ತೃತೀಯಂ ನಾಸ್ತಿ ಕಿಂಚನ ।**
**ತೇನ ಭೂತಭವಿಷ್ಯಂತೌ ಮುಕ್ತ್ವಾ ಮಧ್ಯಂ ನ ವಿದ್ಯತೇ ॥ ೮೫ ॥**

ಯಾವುದೇ ವಸ್ತು ಸತ್ ಆಗಿರುತ್ತದೆ ಅಥವಾ ಅಸತ್ ಆಗಿರುತ್ತದೆ. ಸತ್-ಅಸತ್ ಎಂಬ ಉಭಯ ರೂಪವಾದ ಮೂರನೆಯದು ಯಾವುದೂ ಇಲ್ಲ. ಆದ್ದರಿಂದ ಭೂತ, ಭವಿಷ್ಯತ್ ಎಂಬ ಎರಡು ಭಾವಗಳನ್ನು ಬಿಟ್ಟು ಮಧ್ಯದಲ್ಲಿ ವರ್ತಮಾನ ಎಂಬುದಿಲ್ಲ.

**ವಿವರಣೆ** : ಕ್ರಿಯೆಯು ಸಾಧ್ಯಮಾನ ಸ್ವಭಾವವುಳ್ಳದ್ದು. ಪಚತಿ ಎಂದಾಗ ಪಾಕದ ಅವಯವಕ್ರಿಯೆಗಳು ಒಂದಾದಮೇಲೆ ಒಂದು ನಡೆಯುತ್ತ ಕ್ರಿಯೆಯು ಸಾಧ್ಯವಾಗುತ್ತಿದೆ ಎಂದರ್ಥ. ಈ ಅವಯವಕ್ರಿಯೆಯನ್ನು ಭಾವ ಎಂದು

ವ್ಯವಹರಿಸುತ್ತಾರೆ. ಈ ಭಾವವು ಒಂದೊಂದು ಅತಿಸೂಕ್ಷ್ಮವಾದ ಕ್ಷಣದಲ್ಲಿ ಹುಟ್ಟಿ ನಷ್ಟವಾಗುತ್ತದೆ. ಬುದ್ಧಿಗೋಚರವಾದ ಕ್ಷಣದಲ್ಲಿ ಅದು ಹುಟ್ಟಿದ ಕ್ಷಣವು ನಷ್ಟವಾಗಿರುತ್ತದೆ. ಈ ಸೂಕ್ಷ್ಮವಾದ ಕ್ರಿಯಾವಯವವು ಸಿದ್ಧವಾದ್ದರಿಂದ ಅದರ ಅಧಿಕರಣ ಕ್ಷಣವು ಭೂತ (ಅತೀತ)ವಾಯಿತು. ಭಾವಿಕ್ಷಣದಲ್ಲಿ ಹುಟ್ಟುವ ಭಾವವು ಭವಿಷ್ಯತ್ತಿಗೆ ಸೇರುತ್ತದೆ. ಬುದ್ಧಿಗೆ ಗೋಚರವಾದ ಅಧಿಕರಣಕಾಲವು ಭೂತವಾಗಿರುತ್ತದೆ ಅಥವಾ ಭವಿಷ್ಯತ್ ಆಗಿರುತ್ತದೆ. ಹೀಗೆ ಎಲ್ಲ ಕ್ರಿಯಾವಯವಗಳ ಗತಿಯೂ ಆದಾಗ ಭಾವಸಮುದಾಯ ರೂಪವಾದ ಧಾತ್ವರ್ಥ ಕ್ರಿಯೆಗೆ ಅಧಿಕರಣಕಾಲವು ಯಾವುದು? ಎಲ್ಲ ಕ್ಷಣಗಳೂ ನಷ್ಟವಾಗಿರುತ್ತವೆಯಾದ್ದರಿಂದ ಕಾಲವು ಅತೀತವಾಗಿರುತ್ತದೆ. ಅದು ಭೂತಕಾಲವೇ ಹೊರತು ವರ್ತಮಾನವಲ್ಲ. ಮುಂದೆ ಹುಟ್ಟುವ ಕ್ರಿಯೆಗೆ ಅಧಿಕರಣಕಾಲವು ಭವಿಷ್ಯತ್ಕಾಲ. ಏವಂಚ ವರ್ತಮಾನಕಾಲದ ಕ್ರಿಯೆ ಇಲ್ಲವೆನ್ನಬೇಕಾಗುತ್ತದೆ. ಆದ್ದರಿಂದ ಮಹಾಭಾಷ್ಯದಲ್ಲಿ ಕ್ರಿಯೆಯು ಪ್ರತ್ಯಕ್ಷವಲ್ಲವೆಂದೂ ಅನುಮಾನ ಗಮ್ಯವೆಂದೂ ಹೇಳಿದ್ದಾರೆ. ಕ್ರಿಯಾಶ್ರಯವಾದ ಕೈ, ಕಾಲು – ಮೊದಲಾದದ್ದು ನಮಗೆ ಕಾಣುತ್ತದೆಯೇ ಹೊರತು ಕ್ರಿಯೆ ಕಾಣಿಸುವುದಿಲ್ಲ. ಕೈಕಾಲುಗಳು ಚಲಿಸಿದಾಗ ಒಂದು ಸ್ಥಳದಿಂದ ಇನ್ನೊಂದು ಸ್ಥಳವನ್ನು ಅವು ಮುಟ್ಟುತ್ತವೆ. ಅವುಗಳಲ್ಲಾಗುವ ಸಂಯೋಗ ವಿಭಾಗಗಳಿಂದ ಕೈಕಾಲುಗಳಲ್ಲಿ ಕ್ರಿಯೆ ಇದೆಯೆಂದು ಅನುಮಾನ ಪ್ರಮಾಣದಿಂದ ತಿಳಿಯುತ್ತೇವೆ ಎಂದು ಅಭಿಪ್ರಾಯ. ಒಟ್ಟಿನಲ್ಲಿ ಕ್ರಿಯೆಯು ಸಿದ್ಧವಾದಾಗ ಸತ್ ಎನಿಸುತ್ತದೆ. ಆಗ ಕ್ರಿಯೆ ಅತೀತವಾಗಿದ್ದು ಬುದ್ಧಿಗಮ್ಯವಾಗುತ್ತದೆ. ಅಸಿದ್ಧವಾದಾಗ ಭವಿಷ್ಯತ್ ಆಗಿ ಅಸತ್ ಎನಿಸುತ್ತದೆ. ಅದೂ ಬೌದ್ಧವೇ. ಕ್ರಿಯೆಯು ಸಿದ್ಧವಾದರೆ ಭೂತಕಾಲ,ಅಸಿದ್ಧವಾದರೆ ಭವಿಷ್ಯತ್ಕಾಲ. ವರ್ತಮಾನ ಕ್ರಿಯೆ ಯಾವುದು ?

**ನಿರ್ವೃತ್ತಿರೂಪಮೇಕಸ್ಯ ಭೇದಾಭಾವಾನ್ನ ಕಲ್ಪತೇ ।**
**ಸದಸದ್ವಾಪಿ ತೇನೈಕಂ ಕ್ರಮರೂಪಂ ಕಥಂ ಭವೇತ್ ॥ ೮೬ ॥**

ಏಕಸ್ಯ = ಅವಯವರೂಪವಾದ ಒಂದು ಕ್ಷಣಿಕ ಕ್ರಿಯೆಗೆ, ಭೇದಾಭಾ–ವಾತ್ = ಅದರಲ್ಲಿ ವಿಭಾಗವಿಲ್ಲದ್ದರಿಂದ, ನಿರ್ವೃತ್ತಿರೂಪಂ = ಕ್ರಮರೂಪ–ವಾದ ಕ್ರಿಯಾ ನಿಷ್ಪತ್ತಿಯು, ನ ಕಲ್ಪತೇ = ಸಿದ್ಧವಾಗುವುದಿಲ್ಲ. ಒಂದು ವಸ್ತು ಸತ್ ಆಗಿರಬೇಕು ಅಥವಾ ಅಸತ್ ಆಗಿರಬೇಕು. ತೇನ = ಆದ್ದರಿಂದ, ಏಕಂ = ಅವಯವ ಕ್ರಿಯೆಯು, ಕ್ರಮರೂಪಂ = ಕ್ರಮನಿಷ್ಪತ್ತಿಯುಳ್ಳದ್ದು (ಸಾಧ್ಯ–ಮಾನವಾದದ್ದು) ಕಥಂ ಭವೇತ್ = ಹೇಗೆ ಆದೀತು?

**ವಿವರಣೆ** : ಸಾಧ್ಯಮಾನವಾಗಿರುವುದು ಕ್ರಿಯೆ. 'ಪಚತಿ' ಎಂಬಲ್ಲಿ ಪಾಕ-ಕ್ರಿಯೆಯು ಸಾಧ್ಯಮಾನಾವಸ್ಥೆಯಲ್ಲಿರುತ್ತದೆ. ಆ ಸ್ಥಿತಿಯಲ್ಲಿದ್ದಾಗ ಅದು ವರ್ತ-ಮಾನವಾಗಬಹುದಲ್ಲವೇ? ಎಂಬ ಶಂಕೆಗೆ ಉತ್ತರವಿದು. 'ಪಾಕ' ಎಂಬುದು ಹಿಂದೆ ಹೇಳಿದಂತೆ ಕ್ರಿಯಾಸಮುದಾಯ ರೂಪವಾದದ್ದು. ಅದು ನಿಷ್ಪನ್ನವಾಗಿದೆಯೇ? ಇಲ್ಲವೆ? ನಿಷ್ಪನ್ನವಾಗಿದ್ದರೆ 'ಸತ್' ಆಗುತ್ತದೆ. ಆಗ ಕ್ರಿಯೆಯು ಸಾಧ್ಯಮಾನ-ಸ್ಥಿತಿಯಲ್ಲಿರುವುದಿಲ್ಲ. ಆದ್ದರಿಂದ ಆ ಪಾಕಕ್ರಿಯೆ ಭೂತಕಾಲಕ್ಕೆ ಸೇರುತ್ತದೆ. ನಿಷ್ಪನ್ನ-ವಾಗಿಲ್ಲದಿದ್ದರೆ ಅದು 'ಅಸತ್' ಆಗುತ್ತದೆ. ಅದು ಭವಿಷ್ಯತ್ಕಾಲಕ್ಕೆ ಸೇರುತ್ತದೆ. ಅದು ನಿಷ್ಪಾದ್ಯಮಾನವಾಗುವಾಗ ಪಾಕದ ಅವಯವಕ್ರಿಯೆಗಳಿರುತ್ತವೆಯೇ ಹೊರತು ಸಮುದಾಯವಿರುವುದಿಲ್ಲ. ಒಂದೊಂದು ಅವಯವವೂ ಸತ್ ಅಥವಾ ಅಸತ್ ಆಗಿರುತ್ತದೆಯೆಂದು ಹಿಂದೆ ತಿಳಿಸಿದೆ. ಅವಯವದಲ್ಲಿ ವಿಭಾಗವಿಲ್ಲವಾದ್ದರಿಂದ ಕ್ರಮರೂಪತೆ ಇಲ್ಲ. ಆದ್ದರಿಂದ ಕ್ರಿಯೆಗೆ ವರ್ತಮಾನಸ್ಥಿತಿ ಬರಲಾರದು.

**ಬಹೂನಾಂ ಚಾನವಸ್ಥಾನಾದೇಕಮೇವೋಪಲಭ್ಯತೇ ।**
**ಯಥೋಪಲಬ್ಧಿಸ್ಮರಣಂ ತತ್ರ ಚಾಪ್ಯುಪಪದ್ಯತೇ ॥ ೮೭ ॥**

ಅವಯವ ವ್ಯಾಪಾರಗಳು ಬಹಳ ಇರುವುದರಿಂದ ಅದು ಏಕಕಾಲದಲ್ಲಿ ಇರುವುದಿಲ್ಲ. ಆದ್ದರಿಂದ ನಮಗೆ ಉಪಲಬ್ಧವಾಗತಕ್ಕದ್ದು ಒಂದೊಂದು ಮಾತ್ರ. (ಆ ಒಂದೊಂದು ವ್ಯಾಪಾರದಲ್ಲಿ ವಿಭಾಗವಿಲ್ಲವಾದ್ದರಿಂದ ಕ್ರಮರೂಪವಿರುವುದಿಲ್ಲ.) ವ್ಯಾಪಾರ ಸಮುದಾಯದ ಸ್ಮರಣೆಯು ಅಲ್ಲಿಯೂ ಅನುಭವವಾದಂತೆಯೇ ಬರುತ್ತದೆ.

**ವಿವರಣೆ** : ಕ್ರಿಯೆಗೆ ಕ್ರಮರೂಪತೆಯನ್ನು ತರಬೇಕಾಗಿದೆಯಷ್ಟೆ. ಅದನ್ನು ಹೀಗೆ ಉಪಪಾದಿಸಬಹುದು. ಕ್ರಿಯಾವಯವಗಳ ಸಮುದಾಯವು ಏಕಕಾಲದಲ್ಲಿ ಸ್ಮರಣೆಗೆ ಬರುತ್ತದೆ. ಸಮುದಾಯದಲ್ಲಿ ಕ್ರಮರೂಪತೆ ಇದೆ. ಕ್ರಿಯಾಕ್ಷಣಗಳು ಕ್ರಮವಾಗಿರುತ್ತವೆ. ಫಲಪರ್ಯಂತವೂ ವ್ಯಾಪಾರಗಳು ವರ್ತಮಾನ ಕಾಲವೇ ಆಗಿರುವುದರಿಂದ ಸ್ಮೃತವಾದ ಕ್ರಿಯಾಸಮುದಾಯದ ಕಾಲವು ವರ್ತಮಾನವೇ ಆಗುತ್ತದೆ. ಏವಂಚ ವರ್ತಮಾನಕ್ರಿಯೆ ಸಂಭವಿಸುತ್ತದೆಯಲ್ಲವೆ? ಹಾಗಲ್ಲ. ಅನುಭವವು ಹೇಗೆ ಆಗಿರುವುದೋ ಹಾಗೆಯೇ ಸ್ಮರಣೆ ಬರುತ್ತದೆ. ಒಂದೊಂದು ಅವಯವಕ್ರಿಯೆಯೂ ಕ್ರಮರಹಿತವಾಗಿಯೇ ಅನುಭವಕ್ಕೆ ಬಂದಿರುವುದರಿಂದ ಸ್ಮರಣೆಯೂ ಹಾಗೆಯೇ ಕ್ರಮರಹಿತವಾಗಿ ಬರುತ್ತದೆ. ಸ್ಮರಣೆಗೆ ಅವಯವ ಕ್ರಿಯೆಗಳು ಸ್ವಸ್ವರೂಪದಲ್ಲಿ ಕ್ರಮರಹಿತವಾಗಿಯೇ ಬರುತ್ತವೆ.

**ಸದಸದ್ರೂಪಮೇಕಂ ಸ್ಯಾತ್ ಸರ್ವಸ್ಯೈಕತ್ವಕಲ್ಪನೇ ।**
**ನಿರ್ವೃತ್ತಿರೂಪಂ ನಿರ್ವೃತ್ತೇಃ ಸಾಮಾನ್ಯಮಥವಾ ಭವೇತ್ ॥ ೮೮ ॥**

ಸರ್ವಸ್ಯ = ಎಲ್ಲಾ ಅವಯವ ವ್ಯಾಪಾರಗಳ ಸಮೂಹಕ್ಕೆ, ಏಕತ್ವಕಲ್ಪನೇ = ಸಮೂಹವೇ ಒಂದು ಕ್ರಿಯೆಯೆಂದು ಕಲ್ಪಿಸಿಕೊಂಡಾಗ, ಏಕಂ = ಒಂದಾದ ಕ್ರಿಯಾತ್ಮಕ ವಸ್ತು, ಸದಸದ್ರೂಪಂ = ಸತ್ ಅಸತ್ ಎಂದು ಉಭಯಾತ್ಮಕವಾದೀತು. (ಇದು ಯುಕ್ತವಲ್ಲ; ಅನುಭವಕ್ಕೆ ವಿರುದ್ಧವಾಗುತ್ತದೆ) ಅಥವಾ ಹಾಗೆ ಕಲ್ಪಿಸಿಕೊಂಡರೂ ಸಮೂಹರೂಪ ಕ್ರಿಯೆಗೆ ಬೇಕಾದ ನಿರ್ವೃತ್ತೇಃ = ಸಾಧ್ಯಸ್ವಭಾವಸಿದ್ಧಿಗೆ, ನಿರ್ವೃತ್ತಿರೂಪಂ = ನಿಷ್ಪತ್ತಿ ಯೋಗ್ಯ–ತೆಯು, ಸಾಮಾನ್ಯಂ = ಎಲ್ಲ ಅವಯವಗಳಲ್ಲಿಯೂ ಅನ್ವಯಗೊಳ್ಳುವ ಸಾಮಾನ್ಯ ಧರ್ಮವು, ಭವೇತ್ = ಇರಬೇಕಾಗುತ್ತದೆ.

**ವಿವರಣೆ** : ಸ್ಮರಣೆಗೆ ಏಕಕಾಲದಲ್ಲಿ ಎಲ್ಲ ವ್ಯಾಪಾರಗಳು ಬಂದರೂ ಸಮೂಹವಾದ ಕ್ರಿಯೆಯು ಸದಸದ್ರೂಪವೆನ್ನಬೇಕಾಗುತ್ತದೆ. ಇದು ವಿರುದ್ಧ–ವಾದ್ದರಿಂದ ಒಂದು ವಸ್ತುವಿಗೆ ಉಭಯರೂಪತೆ ಇರುವುದಿಲ್ಲ. ಇದೆಯೆಂದು ಒಪ್ಪಿಕೊಂಡರೂ ಆ ಸಮೂಹಕ್ಕೆ ವರ್ತಮಾನತೆ ಬರುವುದಿಲ್ಲ. ಸಮೂಹಕ್ಕೆ ಕ್ರಿಯಾಸ್ವರೂಪವು ಬರಬೇಕಾದರೆ ಕ್ರಮಿಕತ್ವವು ಆವಶ್ಯಕ. ಸಮೂಹದಲ್ಲಿ ಕ್ರಮಿಕತ್ವವಿದ್ದರೂ ಅವಯವ ವ್ಯಾಪಾರದಲ್ಲಿ ಕ್ರಮಿಕತ್ವವಿಲ್ಲವಾದ್ದರಿಂದ ಅವಯವ ವ್ಯಾಪಾರವು ಸ್ಮರಣೆಗೆ ಬಂದಾಗ ಕ್ರಮಿಕತ್ವವಿರುವುದಿಲ್ಲ. ಕ್ರಮಿಕತ್ವವಿಲ್ಲದ್ದು ಕ್ರಿಯೆಯೇ ಅಲ್ಲವಾದ್ದರಿಂದ ಅವುಗಳ ಸಮುದಾಯವು ಕ್ರಿಯೆ ಎನಿಸಿಕೊಳ್ಳುವುದು ಹೇಗೆ? ಏವಂಚ ಕ್ರಿಯೆಯು ವರ್ತಮಾನವಾಗುವುದು ಹೇಗೆ?

ಈ ಆಕ್ಷೇಪಕ್ಕೆ ಸಮಾಧಾನವು ಹೀಗಿರುವುದು –

**ಕಾರ್ಯೋತ್ಪತ್ತೌ ಸಮರ್ಥಂ ವಾ ಸ್ವೇನ ಧರ್ಮೇಣ ತದ್ಯಥಾ ।**
**ಆತ್ಮತತ್ತ್ವೇನ ಗೃಹ್ಯೇತ ಸಾ ಚಾಸ್ಮಿನ್ ವರ್ತಮಾನತಾ ॥ ೮೯ ॥**

ಕಾರ್ಯವಾದ ಫಲದ ಉತ್ಪತ್ತಿಗೆ ಸಮರ್ಥವಾದ ಯಾವ ಕ್ರಿಯಾ–ಸಮುದಾಯ ಉಂಟೋ ಅದು ತನ್ನ ಕ್ರಮರೂಪವಾದ ಸ್ವರೂಪದಿಂದ ಯುಕ್ತವಾಗಿ ಆತ್ಮತತ್ತ್ವವಾದ ಬುದ್ಧಿಯಿಂದ ಗೃಹೀತವಾಗುತ್ತದೆ. ಆ ಕ್ರಿಯಾ–ಸಮೂಹದಲ್ಲಿ ವರ್ತಮಾನತೆ ಇರುತ್ತದೆ.

**ವಿವರಣೆ** : ಧಾತ್ವರ್ಥ ವ್ಯಾಪಾರವು ಫಲಪರ್ಯಂತವಾದದ್ದು. ಅದರ

ಅವಯವ ಕ್ರಿಯೆಗಳು ಭಿನ್ನ ಸ್ವರೂಪವಾದರೂ ಒಂದೇ ಫಲದ ನಿಷ್ಪತ್ತಿಗೆ ಎಲ್ಲವೂ ಕಾರಣಗಳಾದ್ದರಿಂದ ಅವು ಸಮಾನ ಧರ್ಮವುಳ್ಳವು. ಅವುಗಳೆಲ್ಲವೂ ಸೇರಿ ಬುದ್ಧಿಯಿಂದ ಗೃಹೀತವಾಗುತ್ತದೆ. ಅವೆಲ್ಲವೂ ಸೇರಿ ಒಂದೇ ಕ್ರಿಯೆಯೆಂದು ಬುದ್ಧಿಯು ಕಲ್ಪಿಸಿಕೊಳ್ಳುತ್ತದೆ. ಒಂದೇ ಕ್ರಿಯೆಯೆಂದು ಬುದ್ಧಿಯು ಗ್ರಹಿಸಿದಾಗ ಅವಯವಕ್ರಿಯೆಗಳು ಕ್ರಮವಾಗಿ ಹುಟ್ಟುವುದರಿಂದ ಕ್ರಮಿಕತ್ವವೂ ಆ ಕ್ರಿಯೆಯಲ್ಲಿ ತೋರುತ್ತದೆ. ಅವಯವಕ್ರಿಯೆಗಳು ಸದಸದ್ರೂಪಗಳಾದರೂ ಅವುಗಳಲ್ಲಿ ವರ್ತಮಾನತೆ ಬರಬಹುದು. ಏಕೆಂದರೆ ಕ್ರಿಯೆಯ ಸದ್ರೂಪಸ್ಥಿತಿಯು ವರ್ತಮಾನವಲ್ಲ. ವರ್ತಮಾನವೆಂದರೆ ಪ್ರಾರಬ್ಧಾಪರಿಸಮಾಪ್ತತ್ವ. ಆರಂಭವಾಗಿ ಮುಗಿಯದಿರುವುದೇ ವರ್ತಮಾನತೆ. ಪಚತಿ–ಎಂಬಲ್ಲಿ ಅಕ್ಕಿಯಲ್ಲಾಗುವ ವಿಕ್ಲಿತ್ತಿ ಫಲ. ವಿಕ್ಲಿತ್ತಿಯು (ಅಕ್ಕಿಬೆಂದು ಅರಳುವುದು) ಆಗುವವರೆಗೂ ನಡೆಯುವ ಅವಯವಕ್ರಿಯೆಗಳೆಲ್ಲವೂ ವರ್ತಮಾನಕಾಲಕ್ಕೆ ಸೇರುತ್ತವೆ. ಬುದ್ಧಿ ಗೃಹೀತವಾದ ಸಮುದಾಯಾತ್ಮಕ ಕ್ರಿಯೆಯು ಫಲಪರ್ಯಂತವಾಗಿ ವರ್ತಮಾನವೇ ಆಗಿರುತ್ತದೆ. ಫಲಪರ್ಯಂತವಾದ ವ್ಯಾಪಾರಸಮೂಹವು ಫಲೋತ್ಪತ್ತಿಗೆ ಸಮರ್ಥವೇ ಹೊರತು, ಪ್ರತ್ಯೇಕವಾಗಿ ವ್ಯಾಪಾರವಾವುದೂ ಸಮರ್ಥವಲ್ಲ.

ಕ್ರಿಯೆಯೆಂಬುದು ಚೇಷ್ಟಾರೂಪವಾದ ದೈಹಿಕ ವ್ಯಾಪಾರ. ಅದು ಹುಟ್ಟುವುದಕ್ಕೆ ಮೊದಲು ಜ್ಞಾನ, ಇಚ್ಛೆ, ಯತ್ನ – ಎಂಬ ಮೂರು ಮಾನಸ ವ್ಯಾಪಾರಗಳು ನಡೆಯುತ್ತವೆ. ಅನಂತರ ಕ್ರಿಯಾವಯವ ವ್ಯಾಪಾರಗಳು ಕ್ರಮಿಕವಾಗಿ ನಡೆಯುತ್ತವೆ. ಅವು ನಡೆಯುವಾಗಲೂ ಸಂಕಲನಾತ್ಮಕ ಬುದ್ಧಿಯಿಂದ ಗೃಹೀತವಾಗಿ ಏಕಕ್ರಿಯಾಭಿಮಾನಕ್ಕೆ ಒಳಗಾಗಿರುತ್ತದೆ. ಆಗ ಸಂಕಲನಾತ್ಮಕ ಬುದ್ಧಿಯಿಂದ ಗೃಹೀತವಾದರೂ ಕ್ರಮವಿಶಿಷ್ಟವಾಗಿ ಪ್ರತೀತವಾಗುವುದರಿಂದ ಒಂದು ಕ್ರಿಯೆಯಾಗಿ ತೋರುತ್ತದೆ. ಫಲಪರ್ಯಂತವಾದ ವ್ಯಾಪಾರಗಳು ಸದಸದ್ರೂಪಗಳಾದರೂ ಸಮೂಹಾಲಂಬನ ಜ್ಞಾನದಲ್ಲಿ ತೋರುವ ಕ್ರಮವು ಅಧ್ಯಸ್ತವಾದದ್ದು. ಅಧ್ಯಸ್ತ ಕ್ರಮವುಳ್ಳ ಈ ಕ್ರಿಯೆಯು ಫಲಪರ್ಯಂತವೂ ವರ್ತಮಾನವೇ ಆಗುವುದರಿಂದ ವರ್ತಮಾನಕಾಲದ ಲಟ್ ಪ್ರಯೋಗದಲ್ಲಿ ಯಾವ ದೋಷವೂ ಇಲ್ಲ. ಅಧ್ಯಸ್ತ = ಆರೋಪಿತ, ವಸ್ತುತಃ ಇಲ್ಲದಿದ್ದರೂ ಇದೆಯೆಂಬ ಗ್ರಹಿಕೆಗೆ ಒಳಗಾದದ್ದು.

**ಕ್ರಿಯಾಪ್ರಬಂಧರೂಪಂ ಯದಧ್ಯಾತ್ಮಂ ವಿನಿಗೃಹ್ಯತೇ ।**
**ಸಂಕ್ರಾಂತಬಿಂಬಮೇಕತ್ರ ತಾಮಾಹುರ್ವರ್ತಮಾನತಾಮ್ ॥ ೯೦ ॥**

ಯತ್ ಕ್ರಿಯಾಪ್ರಬಂಧರೂಪಂ = ಯಾವ ಕ್ರಿಯಾಸಮೂಹರೂಪವು, ಅಧ್ಯಾತ್ಮಂ = ಸಮೂಹಾಲಂಬನಜ್ಞಾನದಲ್ಲಿ, ಸಂಕ್ರಾಂತಬಿಂಬಂ =

ಸಂಕ್ರಾಂತಾಕಾರವುಳ್ಳದ್ದಾಗಿ, ಏಕತ್ರ = ಆ ಒಂದೇ ಬುದ್ಧಿಯಲ್ಲಿ, ವಿನಿಗೃಹ್ಯತೇ = ಸ್ಪಷ್ಟವಾಗಿ ಗೃಹೀತವಾಗುತ್ತದೆಯೋ, ತಾಂ = ಆ ಗ್ರಹಣರೂಪವಾದ ಕ್ರಿಯೆಯನ್ನು, ವರ್ತಮಾನತಾಂ = ವರ್ತಮಾನ ಸ್ವಭಾವವದ್ದೆಂದು, ಆಹುಃ = ಹೇಳುತ್ತಾರೆ.

**ವಿವರಣೆ** : ಹಿಂದಿನ ಕಾರಿಕೆಯಲ್ಲಿ ಹೇಳಿದ ವಿಷಯವನ್ನೇ ಇಲ್ಲಿ ವಿಶದಪಡಿಸಲಾಗಿದೆ. ಒಂದು ಕ್ರಿಯೆಯಲ್ಲಿ ಅನೇಕ ವ್ಯಾಪಾರಗಳಿದ್ದರೂ ಅವುಗಳ ಸಮೂಹವು ಕ್ರಮವಾಗಿ ಬುದ್ಧಿಗೋಚರವಾಗುತ್ತದೆ. ಅನುಭವದ ಸಂಸ್ಕಾರವು ಕ್ರಮವನ್ನು ಸಮೂಹದಲ್ಲಿ ರೂಪಿಸುತ್ತದೆ. ಫಲಪರ್ಯಂತವಾದ ವ್ಯಾಪಾರಗಳಲ್ಲಿ ಪ್ರತಿಯೊಂದು ವ್ಯಾಪಾರವೂ ವರ್ತಮಾನವಾಗಿದ್ದು ನಷ್ಟವಾದರೂ ಸಮೂಹ–ಜ್ಞಾನದಲ್ಲಿ ಅವೆಲ್ಲವೂ ವರ್ತಮಾನವಾಗಿಯೇ ಪ್ರತೀಕವಾಗುತ್ತವೆ. ಫಲೋತ್ಪತ್ತಿಯ ನಡುವೆಯೂ ಅದು ವರ್ತಮಾನವೇ. 'ಪ್ರಾರಬ್ಧಾಪರಿಸಮಾಪ್ತತ್ವಂ ವರ್ತಮಾನತ್ವಂ' ಎಂಬುದನ್ನಿಲ್ಲಿ ಸ್ಮರಿಸಿಕೊಳ್ಳಬೇಕು. ಸಮೂಹಜ್ಞಾನಗೋಚರವಾದ ಬಾಹ್ಯಕ್ರಿಯೆಯು ಏಕವೆಂದೂ ಜ್ಞಾನನಿಷ್ಠವಾದ ಬೌದ್ಧಕ್ರಿಯೆಯೂ ಏಕವೆಂದೂ ವ್ಯಾಖ್ಯಾನಗಳಲ್ಲಿ ಮತಭೇದವಿದ್ದಂತೆ ತೋರುತ್ತದೆ. ತಾತ್ಪರ್ಯ ಒಂದೇ ಆಗಿದೆ. ವರ್ತಮಾನಕಾಲದ ವಿಚಾರವು ಮುಗಿಯಿತು.

**ಕ್ರಿಯಾತಿಪತ್ತಿರತ್ಯಂತಂ ಕ್ರಿಯಾನುತ್ಪತ್ತಿಲಕ್ಷಣಾ ।**
**ನ ಚ ಭೂತಮನುತ್ಪನ್ನಂ ನ ಭವಿಷ್ಯತ್ ತಥಾವಿಧಮ್ ॥೯೧॥**

ಲೃಙ್ ಪ್ರತ್ಯಯಕ್ಕೆ ನಿಮಿತ್ತವಾದ ಕ್ರಿಯಾತಿಪತ್ತಿಯು ಆತ್ಯಂತಿಕವಾಗಿ ಕ್ರಿಯೆಯ ಅನುತ್ಪತ್ತಿ ರೂಪವಾಗಿದೆ. ಉತ್ಪತ್ತಿಯಾಗದ ಕ್ರಿಯೆಯು ಭೂತಕಾಲಕ್ಕೆ ಸೇರಿದ್ದೆಂದು ಹೇಳಲಾಗುವುದಿಲ್ಲ. ಹಾಗೆ ಆತ್ಯಂತಿಕವಾಗಿ ಉತ್ಪನ್ನವಾಗದ ಕ್ರಿಯೆಯು ಭವಿಷ್ಯತ್ಕಾಲಕ್ಕೆ ಸೇರಿದ್ದೆಂದೂ ಹೇಳಲಾಗುವುದಿಲ್ಲ. (ಆದರೆ ಯಾವಾಗಲಾದರೂ ಸಂಭವಿಸಬಹುದಾದ ಕ್ರಿಯೆಗೆ ಮಾತ್ರ ಭೂತ ಭವಿಷ್ಯತ್ಕಾಲಗಳು ಬರಬಹುದು).

**ವಿವರಣೆ** : 'ಲಿಙ್ ನಿಮಿತ್ತೇ ಲೃಙ್ ಕ್ರಿಯಾತಿಪತ್ತೌ' ಎಂದು ಪಾಣಿನಿಸೂತ್ರವಿದೆ (೩–೩–೧೩೯) ಹೇತುಹೇತುಮದ್ಭಾವಾದಿಗಳೂ ಲಿಙ್ ನಿಮಿತ್ತಗಳು. ಹೇತು = ಕಾರಣ, ಹೇತುಮತ್ = ಕಾರ್ಯ. ಲಿಙ್‌ನಿಮಿತ್ತವಿದ್ದು ಕಾರ್ಯಕಾರಣ ಕ್ರಿಯೆ–ಗಳೆರಡೂ ನಿಷ್ಪನ್ನವಾಗಲಿಲ್ಲ ಎಂಬ ಅರ್ಥವು ತೋರುವಾಗ ಭವಿಷ್ಯತ್ಕಾಲದಲ್ಲಿ ಧಾತುವಿಗೆ ಲೃಙ್ ಪ್ರತ್ಯಯಬರುತ್ತದೆ ಎಂದು ಸೂತ್ರಾರ್ಥ. ಈ ಲೃಙ್‌ಪ್ರತ್ಯಯವನ್ನು

ಮುಂದೆ ಭೂತಕಾಲದಲ್ಲಿಯೂ ವಿಧಿಸಿದ್ದಾರೆ. ಅತಿಪತ್ತಿ ಎಂದರೆ ಅನಿಷ್ಪತ್ತಿ – ಕ್ರಿಯೆ ನಡೆಯದಿರುವುದು. ಉದಾ :

೧. ಸುವೃಷ್ಟಿಶ್ಚೇದಭವಿಷ್ಯತ್, ಸುಭಿಕ್ಷಮಭವಿಷ್ಯತ್ ।

ಇಲ್ಲಿ ಸುವೃಷ್ಟಿಯು ಹೇತು (ಕಾರಣ), ಸುಭಿಕ್ಷವು ಹೇತುಮತ್.

(ಕಾರ್ಯ). ಸುವೃಷ್ಟಿಯಾಗಿದ್ದರೆ ಸುಭಿಕ್ಷವಾಗುತ್ತಿತ್ತು – ಎಂದು ಅರ್ಥ. ಸುವೃಷ್ಟಿಯಾಗಲೂ ಇಲ್ಲ, ಆದ್ದರಿಂದ ಸುಭಿಕ್ಷವಾಗಲೂ ಇಲ್ಲ – ಎಂದು ಅಭಿಪ್ರಾಯ. ಕಳೆದ ವರ್ಷದ ಸುದ್ದಿಯಾದರೆ ಭೂತಕಾಲವಾಗುತ್ತದೆ.

ಮುಂದಿನವರ್ಷ ಸುವೃಷ್ಟಿಯಾದರೆ ಸುಭಿಕ್ಷವಾಗುತ್ತಿತ್ತು ಎಂದು ಅಭಿಪ್ರಾಯ–ವಾದರೆ ಭವಿಷ್ಯತ್ಕಾಲವಾಗುತ್ತದೆ. ಮುಂದಿನ ವರ್ಷ ಸುವೃಷ್ಟಿಯಾಗುವುದಿಲ್ಲ ಎಂಬ ಸಂಭಾವನೆಯಿದ್ದಾಗ ಮಾತ್ರ ಹೇಳಬೇಕಾದ ವಾಕ್ಯವಿದು.

೨. ಯದಿ ಪ್ರಾತಃ ಸೇವಕಃ ಆಗಮಿಷ್ಯತ್, ಮಧ್ಯಾಹ್ನಾತ್ ಪರಂ ವಸ್ತ್ರಾಣಿ ಅಕ್ಷಾಲಯಿಷ್ಯತ್.

ಇಂದು ಬೆಳಗ್ಗೆ ಸೇವಕನು ಬಂದಿದ್ದರೆ, ಮಧ್ಯಾಹ್ನದ ಮೇಲೆ ಬಟ್ಟೆಗಳನ್ನು ಒಗೆಯುತ್ತಿದ್ದನು. ಅವನು ಬರಲಿಲ್ಲ, ವಸ್ತ್ರಗಳನ್ನು ಒಗೆಯಲಿಲ್ಲ ಎಂದರ್ಥ. ಸೇವಕನ ಆಗಮನ ಭೂತ ಕಾಲಕ್ಕೆ ಸೇರಿದ್ದು. ವಸ್ತ್ರಕ್ಷಾಲನ ಭವಿಷ್ಯತ್ಕಾಲಕ್ಕೆ ಸೇರಿದ್ದು. ಒಂದೇ ವಾಕ್ಯದಲ್ಲಿ ಭೂತ ಭವಿಷ್ಯತ್ ಕ್ರಿಯೆಗಳೆರಡರ ಪ್ರಾಪ್ತಿಯೂ ಇರಬಹುದು. ಇವೆಲ್ಲವೂ ಸಂಭಾವಿತ ಕ್ರಿಯೆಗಳು. ಇವುಗಳಿಗೆ ಭೂತಕಾಲ, ಭವಿಷ್ಯತ್ಕಾಲಗಳೆರಡೂ ಇರ–ಬಹುದು. ಇವುಗಳನ್ನು ನಿಷೇಧಿಸಲೂ ಬಹುದು. ಆದರೆ ಎಲ್ಲಿ ಕ್ರಿಯೆಗಳು ಸಂಭಾವಿತಗಳಾಗುವುದೇ ಇಲ್ಲವೋ ಅವುಗಳಿಗೆ ಭೂತಭವಿಷ್ಯತ್ತುಗಳು ಹೇಗೆ ಬರುತ್ತವೆ – ಎಂದು ಆಕ್ಷೇಪ ಹುಟ್ಟುತ್ತದೆ. ಅದಕ್ಕೆ ಈ ಶ್ಲೋಕದಲ್ಲಿ ಸಮಾಧಾನ ವಿದೆ–

**ಪ್ರಾಗ್ ವಿರುದ್ಧಕ್ರಿಯೋತ್ಪಾದಾನ್ನಿರ್ವೃತ್ತೇ ವಾ ವಿರೋಧಿನಿ ।**
**ವ್ಯಾಪಾರೇಽವಧಿಭೇದೇನ ವಿಷಯಸ್ತತ್ರ ಭಿದ್ಯತೇ ॥ ೯೨ ॥**

ಪ್ರಾಗ್ ವಿರುದ್ಧಕ್ರಿಯೋತ್ಪಾದಾತ್ = ಹೇತುಕ್ರಿಯೆಗೆ ವಿರುದ್ಧವಾದ ಕ್ರಿಯೆಯು ಉತ್ಪನ್ನವಾಗುವುದಕ್ಕೆ ಮೊದಲು, ವಾ = ಅಥವಾ, ವಿರೋಧಿನಿ ವ್ಯಾಪಾರೇ = ವಿರುದ್ಧವಾದ ಕ್ರಿಯೆಯು, ನಿರ್ವೃತ್ತೇ = ನಿಷ್ಪನ್ನವಾದಮೇಲೆ ಅವಧಿಭೇದೇನ = ಸಂಭಾವ್ಯ ಕ್ರಿಯೆಗಳ ಅವಧಿಯು ಭಿನ್ನವಾಗುವುದರಿಂದ,

ತತ್ರ = ಆ ವಾಕ್ಯಗಳಲ್ಲಿ, ವಿಷಯಃ = ಕ್ರಿಯೆಯ ಭವಿಷ್ಯದ್ರೂಪವೂ ಭೂತರೂಪವೂ ಭಿದ್ಯತೇ = ಭಿನ್ನವಾಗುತ್ತದೆ.

**ವಿವರಣೆ** : ಸಂಭಾವಿತ ಕ್ರಿಯೆಗಳು ನಡೆಯದೇ ಹೋಗುವುದಕ್ಕೆ ಕಾರಣ–ವಾಗಿ ವಿರುದ್ಧ ಕ್ರಿಯೆಯೊಂದಿರಬೇಕಾಗುತ್ತದೆ. ಉದಾ: 'ಯದಿ ಕಮಲಕಮಾಹ್ವಾ–ಸ್ಯತ್, ಶಕಟಂ ನ ಪರ್ಯಭವಿಷ್ಯತ್ । ಕಿಂ ತು ನೈವಂ ಭೂತಂ, ಕಮಲಕಸ್ಯ ದೇಶಾಂತರಗಮನಾತ್ = ಕಮಲಕನನ್ನು ಕರೆದು ಬರಮಾಡಿಕೊಂಡಿದ್ದರೆ ಗಾಡಿಯು (ಅತಿಭಾರವನ್ನು ಹೇರಿದ್ದರಿಂದ ಮುಂದೆ ಹೋಗಲಾರದೆ) ಸೋಲನ್ನು ಅನುಭವಿಸುತ್ತಿರಲಿಲ್ಲ. ಆದರೆ ಕಮಲಕನನ್ನು ಕರೆಯಲಾಗಲಿಲ್ಲ. ಅವನು ದೇಶಾಂ–ತರಕ್ಕೆ ಹೋಗಿ ಬಿಟ್ಟಿದ್ದನು' ಕಮಲಕನು ಸಮರ್ಥನಾದ ಒಬ್ಬ ಗಾಡಿ ಹೊಡೆಯುವ ಶಾಕಟಿಕ. ಅವನು ಬಂದಿದ್ದರೆ ಅತಿಭಾರವನ್ನು ಗಾಡಿಗೆ ಹೇರುತ್ತಿರಲಿಲ್ಲ. ಆದ್ದರಿಂದ ಗಾಡಿಗೆ ಸೋಲು ಸಂಭವಿಸುತ್ತಿರಲಿಲ್ಲ ಎಂದು ಅಭಿಪ್ರಾಯ.

ಕಮಲಕನು ದೇಶಾಂತರಕ್ಕೆ ಹೋದದ್ದರಿಂದ ಅವನನ್ನು ಆಹ್ವಾನಿಸಿ ಬರಮಾಡಿ ಕೊಳ್ಳುವುದು ಅತ್ಯಂತ ಅಸಂಭಾವಿತವಾಗಿತ್ತು. ಆತ್ಯಂತಿಕವಾಗಿ ಹುಟ್ಟದೆ ಇರುವ ಕ್ರಿಯೆಯನ್ನು ಭೂತಕಾಲದ್ದೆಂದು ಹೇಳುವುದು ಹೇಗೆ?

ಮೇಲ್ಕಂಡ ವಾಕ್ಯವನ್ನು ಭವಿಷ್ಯತ್ಕಾಲಕ್ಕೂ ಅನ್ವಯಿಸಬಹುದು. 'ಈಗ ಕಮಲಕನನ್ನು ಆಹ್ವಾನಿಸಲಾಗುವುದಿಲ್ಲ. ಬಂದರೆ ಗಾಡಿಗೆ ಪರಿಭವವಾಗದು' ಎಂಬ ಅಭಿಪ್ರಾಯದಲ್ಲಿಯೂ ಹಾಗೆಯೇ ಲೃಙ್ ಪ್ರತ್ಯಯವನ್ನು ಬಳಸಬಹುದು. ಆಗಲೂ ಆಹ್ವಾನವು ಅಸಂಭಾವ್ಯ. ಹೀಗೆ ಭೂತ ಭವಿಷ್ಯತ್ತಿನ ಕ್ರಿಯೆಗಳು ಅಸಂಭಾವಿತ–ವಾದಾಗ ಅವನ್ನು ನಿಷೇಧಿಸುವುದು ಅರ್ಥವಿಲ್ಲದ್ದಾಗುತ್ತದೆ. ಈ ಆಕ್ಷೇಪಕ್ಕೆ ಉತ್ತರವಾಗಿ ಮೇಲ್ಕಂಡ ಶ್ಲೋಕವು ಹೊರಟಿದೆ. ವಿಷಯವು ಕಠಿಣವಾದ್ದರಿಂದ ಸುಲಭವಾಗಿ ತಿಳಿಯುವಂತೆ ತಾತ್ಪರ್ಯವನ್ನು ಮಾತ್ರ ಇಲ್ಲಿ ಬರೆಯಲಾಗುವುದು. ಉದಾಹೃತ ವಾಕ್ಯದಲ್ಲಿ 'ನ ಪರ್ಯಭವಿಷ್ಯತ್' ಎಂಬಲ್ಲಿ 'ನ' ಶಬ್ದವಿದೆ. ಆದ್ದರಿಂದ ಆಗಬೇಕಾಗಿದ್ದ ಕಾರ್ಯವು ಪರಿಭವಾಭಾವ. ಅದರ ಅತಿಪತ್ತಿ ಎಂದರೆ ಪರಿಭವಾ–ಭಾವದ ಅಭಾವ. ಅಭಾವ ಕ್ರಿಯೆಯಲ್ಲಿ ವೈಯಾಕರಣಮತದಲ್ಲಿ ಪರಿಭವಾಭಾವ–ವೆಂದರೆ ಆರೋಪಿತ ಪರಿಭವವೆಂದರ್ಥ. ಅದು ಕ್ರಿಯೆಯಾಗುತ್ತದೆ. ಪರಿಭವಾ–ಭಾವದ ಅಭಾವವೆಂದರೆ ಮೊದಲನೆಯ ಪರಿಭವವೇ ಆಗುತ್ತದೆ. ಆದ್ದರಿಂದ ಪರಿಭವ, ಪರಿಭವಾಭಾವ, ಪರಿಭವಾಭಾವಾಭಾವ – ಇವು ಮೂರೂ ಕ್ರಿಯಾವಾಚಿಗಳು.

ಕಮಲಕನ ಆಹ್ವಾನಕ್ಕೆ ಅವನ ದೇಶಾಂತರಗಮನವು ವಿರುದ್ಧವಾದ ಕ್ರಿಯೆ. ಪರಿಭವಾಭಾವಕ್ಕೆ ಗಾಡಿಯಲ್ಲಿ ಅತಿಭಾರವನ್ನು ಹೇರಿದ್ದು ವಿರುದ್ಧಕ್ರಿಯೆ. ವಿರೋಧಿ ಕ್ರಿಯೆಯಾದ ದೇಶಾಂತರ ಗಮನಕ್ಕೆ ಪೂರ್ವದಲ್ಲಿ ಕಮಲಕನ ಆಹ್ವಾನವು ಸಾಧ್ಯವಿತ್ತು. ವಿವಕ್ಷಾನುಸಾರ ಈ ಆಹ್ವಾನವು ಭೂತವೋ ಭವಿಷ್ಯತ್ತೋ ಆಗಬಹುದು. ಇದಕ್ಕೆ ದೇಶಾಂತರಗಮನವನ್ನು ಅವಧಿಯಾಗಿ ತಿಳಿಯಬೇಕು. ದೇಶಾಂತರ ಗಮನಕ್ಕೆ ಪೂರ್ವದಲ್ಲಾಗುವ ಆಹ್ವಾನವು ಭೂತವಾದರೆ ಅದರ ಅತಿಪತ್ತಿಯೂ ಭೂತವಾಗಲಡ್ಡಿ ಇಲ್ಲ. ಪರಿಭವಾಭಾವಕ್ಕೆ ವಿರುದ್ಧ ಹೇತುವಾದದ್ದು ಅತಿಭಾರವನ್ನು ಹೇರುವುದು. ಈ ವಿರುದ್ಧ ಹೇತುವು ನಡೆದಮೇಲೆ ಪರಿಭವವು ನಡೆಯಲಡ್ಡಿಯಿಲ್ಲ. ಅದು ವಿವಕ್ಷಾನುಸಾರವಾಗಿ ಭೂತವೋ ಭವಿಷ್ಯತ್ತೋ ಆಗುತ್ತದೆ. ಪರಿಭಾವಾಭಾವದ ಅನಿಷ್ಪತ್ತಿ ಎಂದರೆ ಪರಿಭವಾಭಾವಾಭಾವ. ಅದು ಪರಿಭವವೇ. ಪರಿಭವವಾಗು–ತ್ತಿರಲಿಲ್ಲ – ಎಂದರೆ ಪರಿಭವವಾಯಿತು ಎಂದರ್ಥ. ಈ ಕಾರ್ಯಕ್ರಿಯೆಗೆ ಅತಿಭಾರವನ್ನು ಹೇರಿದ್ದು ಕಾರಣ. ಹೇರಿದ ಅನಂತರ ಈ ಕಾರ್ಯಕ್ಕೆ ಅಡ್ಡಿ ಇಲ್ಲ. ಇದಕ್ಕೆ ಅತಿಭಾರದ ಹೇರಿಕೆ ಪೂರ್ವಾವಧಿಯಾಗಿದೆ.

ಒಟ್ಟಿನಲ್ಲಿ ಏನಾಯಿತೆಂದರೆ, ಅತ್ಯಂತ ಅಸಂಭಾವಿತವಾದ ಕ್ರಿಯೆಯು ನಡೆಯದಿರಲು ಕಾರಣವಾದದ್ದು ಇಲ್ಲದಾಗ ಆ ಕ್ರಿಯೆಯು ನಡೆಯುತ್ತದೆ. ಅದು ಸಂಭಾವಿತವಾದ್ದರಿಂದ ಅದರ ಭೂತ ಭವಿಷ್ಯತ್ಕಾಲಗಳು ಅಸಂಭಾವಿತ ಕ್ರಿಯೆಗೂ ಅನ್ವಯಿಸುತ್ತವೆ ಎಂದು ಸಿದ್ಧವಾಯಿತು. ಲೃಙ್ ವಿಷಯವು ಮುಗಿಯಿತು.

**ವ್ಯಭೀಚಾರೇ ನಿಮಿತ್ತಸ್ಯ ಸಾಧುತ್ವಂ ನ ಪ್ರಕಲ್ಪತೇ ।**
**ಭಾವ್ಯಾಸೀದಿತಿ ಸೂತ್ರೇಣ ತತ್ ಕಾಲೇಽನ್ಯತ್ರ ಶಿಷ್ಯತೇ॥ ೯೩ ॥**

ಭಾವ್ಯಾಸೀತ್ (ಮುಂದೆ ಹುಟ್ಟತಕ್ಕವನು ಇದ್ದನು) ಇತ್ಯಾದಿ ಪ್ರಯೋಗ–ಗಳಲ್ಲಿ ವಿಹಿತಪ್ರತ್ಯಯಕ್ಕೆ ನಿಮಿತ್ತವಾದ ಕಾಲಕ್ಕೆ ವ್ಯಭಿಚಾರವಾಗಿ ಬೇರೆ ಕಾಲದಲ್ಲಿ ಪ್ರತ್ಯಯವು ಬಂದರೆ, ಆ ಪ್ರಯೋಗಕ್ಕೆ ಸಾಧುತ್ವವು ಸಿದ್ಧವಾಗುವು–ದಿಲ್ಲ. ಆದಕಾರಣ 'ಧಾತು ಸಂಬಂಧೇ ಪ್ರತ್ಯಯಾಃ' (೩–೪–೧) ಎಂಬ ಸೂತ್ರದಿಂದ ಸ್ವಕಾಲಕ್ಕೆ ಬೇರೆಯಾದ ಕಾಲದಲ್ಲಿಯೂ ಸಾಧುತ್ವವನ್ನು ಉಪದೇಶಿಸಲಾಗಿದೆ.

**ವಿವರಣೆ** : ಈ ವ್ಯಾಕರಣಶಾಸ್ತ್ರದಲ್ಲಿ ಲಟ್, ಲಿಟ್ ಮುಂತಾದ ನಾನಾ–ಪ್ರತ್ಯಯಗಳು ವರ್ತಮಾನವೇ ಮೊದಲಾದ ನಿಯತ ಕಾಲಗಳಲ್ಲಿ ವಿಹಿತವಾಗಿವೆ. ಆ ಪ್ರತ್ಯಯಗಳನ್ನು ಕಾಲಾಂತರದಲ್ಲಿ ಪ್ರಯೋಗಿಸಿದರೆ ಪ್ರಯೋಗವು ಅಸಾಧುವಾಗು–

ತ್ತದೆ. ಹೇಗೆಂದರೆ 'ಭಾವ್ಯಾಸೀತ್' ಎಂಬಲ್ಲಿ 'ಭಾವೀ' ಶಬ್ದಕ್ಕೆ ಭವಿಷ್ಯದರ್ಥದಲ್ಲಿ ಣಿನಿ ಪ್ರತ್ಯಯ ಬಂದಿದೆ. ಮುಂದೆ ಹುಟ್ಟತಕ್ಕವನು, ಮುಂದೆ ಆಗತಕ್ಕದ್ದು ಎಂದು ಶಬ್ದಾರ್ಥ. ಆಸೀತ್ (ಇತ್ತು) ಎಂಬುದು ಭೂತಕಾಲದ ಕ್ರಿಯೆ. ಅಸಂಗತವಾದ ಈ ಜೋಡಿಯ ಪ್ರಯೋಗವು ಅಸಾಧ್ಯ. 'ಅಗ್ನಿಷ್ಟೋಮಯಾಜೀ ಅಸ್ಯ ಪುತ್ರೋ ಭವಿತಾ' ಎಂದು ಇನ್ನೊಂದು ವಾಕ್ಯ. ಯಾಜೀ ಎಂಬುದು ಭೂತಕಾಲದ ಣಿನಿ ಪ್ರತ್ಯಯವನ್ನು ಹೊಂದಿದೆ. ಅಗ್ನಿಷ್ಟೋಮಯಾಜೀ = ಅಗ್ನಿಷ್ಟೋಮಯಾಗವನ್ನು (ಹಿಂದೆ) ಮಾಡಿದವನು. ಅಗ್ನಿಷ್ಟೋಮಯಾಗ ಮಾಡಿದವನು ಈತನಿಗೆ ಪುತ್ರನಾಗಿ ಹುಟ್ಟುವನು – ಎಂದು ಆ ವಾಕ್ಯದ ಅರ್ಥ. ಇಲ್ಲಿಯೂ ಭೂತಭವಿಷ್ಯತ್ತುಗಳ ಮಿಶ್ರಣವಿದೆ. 'ವಸನ್ ದದರ್ಶಾವತರಂತಮಂಬರಾತ್' ಎಂದು ಶಿಶುಪಾಲ ವಧದಲ್ಲಿ ಪ್ರಯೋಗವಿದೆ. ಶ್ರೀಕೃಷ್ಣನು ವಸುದೇವನ ಮನೆಯಲ್ಲಿ ವಾಸಮಾಡುತ್ತಿರು–ವಾಗ, ಆಕಾಶದಿಂದ ಇಳಿದು ಬರುತ್ತಿದ್ದ ನಾರದರನ್ನು ಕಂಡನು – ಎಂದರ್ಥ. ವಸನ್, ಅವತರಂತಂ – ಇವೆರಡೂ ವರ್ತಮಾನ ಕಾಲದವು. ದದರ್ಶ ಎಂಬುದು ಭೂತಕಾಲದಲ್ಲಿದೆ. ಹೀಗೆ ಹೊಂದಾಣಿಕೆಯಿಲ್ಲದ ಪ್ರಯೋಗಗಳಿಗೆ ಸಾಧುತ್ವವನ್ನು 'ಧಾತು ಸಂಬಂಧೇ ಪ್ರತ್ಯಯಾಃ' ಎಂಬ ಸೂತ್ರವು ಸಾಧಿಸುತ್ತದೆ. ಇಂತಹ ಪ್ರಯೋಗ ಕನ್ನಡದಲ್ಲಿಯೂ ಇದೆ. ಉದಾ :– ಅವನು ಹೇಳುವವನಾಗಿದ್ದನು. ಶ್ರೀರಾಮನು ರಾವಣನನ್ನು ಕೊಲ್ಲುವವನಾಗಿ ಅವತರಿಸಿದನು. ಹಸು ಮೇಯುತ್ತ ಇದ್ದಿತು.

ಈ ಸೂತ್ರದ ಅರ್ಥ ಹೀಗೆ – ಧಾತುಗಳಿಗೆ ಸ್ವತಃ ಸಂಬಂಧವು ಸಂಭವಿಸು–ವುದಿಲ್ಲವಾದ್ದರಿಂದ ಧಾತುಶಬ್ದಕ್ಕೆ ಧಾತ್ವರ್ಥವೆಂದರ್ಥ. ಎರಡು ಅರ್ಥಗಳಿಗೂ ಅಥವಾ ಬಹಳ ಅರ್ಥಗಳಿಗೆ ಸಂಬಂಧವಿರಬಹುದು. ಆದ್ದರಿಂದ ಧಾತ್ವೋಃ ಸಂಬಂಧಃ, ಧಾತೂನಾಂ ಸಂಬಂಧಃ ಎಂದು ವಿಗ್ರಹಿಸಬಹುದು. ಸಂಬಂಧವಾಗು–ವುದು ಅರ್ಥಗಳಿಗೆ ಮಾತ್ರ. ಸಾಧನ (ಕಾರಕ) ದ್ವಾರಾ ಧಾತ್ವರ್ಥಗಳಿಗೆ ವಿಶೇಷಣ ವಿಶೇಷ್ಯಭಾವ ಸಂಬಂಧವಿರುತ್ತದೆ. ಲೋಕದಲ್ಲಿ ಕಂಡುಬರುವ ಕೆಲವು ಪ್ರಯೋಗ–ಗಳಿಗೆ ಸಾಧುತ್ವವನ್ನು ಹೇಳುವುದು ಮಾತ್ರ ಈ ಸೂತ್ರದ ಉದ್ದೇಶವಾಗಿರುತ್ತದೆ. ಅಂತಹ ಶಿಷ್ಟಪ್ರಯೋಗಗಳಿದ್ದಾಗ ಯಾವ ಕಾಲದಲ್ಲಿ ಪ್ರತ್ಯಯವು ವಿಹಿತವಾಗಿ–ದೆಯೋ ಅದಕ್ಕಿಂತ ಅನ್ಯಕಾಲದಲ್ಲಿಯೂ ಆ ಪ್ರತ್ಯಯವು ಬರುತ್ತದೆ – ಎಂದರ್ಥ. ಈ ಪ್ರತ್ಯಯವಿಧಾನವು ವಿಶೇಷಣಕ್ಕೆ ಮಾತ್ರ, ವಿಶೇಷ್ಯಕ್ಕಲ್ಲ. 'ಭಾವ್ಯಾಸೀತ್ – ಎನ್ನುವುದಕ್ಕೆ ಭವಿಷ್ಯತ್ಕಾಲದ ಭವನ ಕ್ರಿಯೆಗೆ ಕರ್ತೃವಾದವನೇ ಕರ್ತೃವಾಗಿರುವ ಭೂತಕಾಲದ ಸತ್ತಾ' ಎಂದರ್ಥ. ಇಲ್ಲಿ ಭವನಕ್ರಿಯಾವಾಚಕವು ವಿಶೇಷಣವಾದ್ದ–ರಿಂದ ಭೂಧಾತುವಿನ ಮೇಲೆ ಭವಿಷ್ಯತ್ಕಾಲದಲ್ಲಿ ವಿಹಿತವಾದ 'ಣಿನಿ' ಪ್ರತ್ಯಯವು ಭೂತಕಾಲದಲ್ಲಿ ಬಂದಿದೆ.

'ಅಗ್ನಿಷ್ಟೋಮಯಾಜೀ ಪುತ್ರೋ ಭವಿತಾ' – ಯಾಜೀ ಎಂಬಲ್ಲಿ ಭೂತ ಕಾಲವಿಹಿತವಾದ ಣಿನಿಯು ಭವಿಷ್ಯತ್ಕಾಲದಲ್ಲಿ ಬಂದಿದೆ. 'ಅಗ್ನಿಷ್ಟೋಮ ಯಾಗವನ್ನು ಮಾಡಿದ ಪುತ್ರನು ಹುಟ್ಟುವನು' ಎಂದರೆ ಅಸಂಗತವಾಗುತ್ತದೆ. ಆದ್ದರಿಂದ ಅಗ್ನಿಷ್ಟೋಮಯಾಗವನ್ನು ಮುಂದೆ ಮಾಡುವ ಪುತ್ರನು ಹುಟ್ಟುವನು ಎಂದು ಅರ್ಥವಾಗಬೇಕು. ಆದ್ದರಿಂದ ಭವಿಷ್ಯದರ್ಥದಲ್ಲಿ ಣಿನಿ ಬಂದಿದೆ. 'ವಸನ್ ದದರ್ಶ' ಎಂಬಲ್ಲಿ ಭೂತಾರ್ಥದಲ್ಲಿ ವರ್ತಮಾನಕಾಲದ ಪ್ರತ್ಯಯ ಬಂದಿದೆ. ಆದ್ದರಿಂದ ಆಸೀತ್, ಭವಿತಾ, ದದರ್ಶ – ಇತ್ಯಾದಿ ವಿಶೇಷ್ಯ ಕ್ರಿಯೆಗಳಿಗೆ ಅನುಗುಣವಾಗಿ ವಿಶೇಷಣ ಕ್ರಿಯಾವಾಚಕ ಧಾತುಗಳ ಮೇಲೆ ಸ್ವಕಾಲವನ್ನತಿಕ್ರಮಿಸಿ ವಿಶೇಷ್ಯ ಕ್ರಿಯೆಯ ಕಾಲದಲ್ಲಿ ಪ್ರತ್ಯಯಗಳನ್ನು 'ಧಾತುಸಂಬಂಧೇ ಪ್ರತ್ಯಯಾಃ' ಎಂಬ ಸೂತ್ರವು ವಿಧಿಸಿದೆ. ಈ ಸೂತ್ರವೇ ಬೇಡವೆಂದು ವಾರ್ತಿಕಕಾರರ ಮತವಿದೆ. ವಿವರಣೆ ಮಹಾಭಾಷ್ಯದಲ್ಲಿ ಬಂದಿದೆ. ಅದನ್ನೀಗ ಸಂಗ್ರಹಿಸಲಾಗುತ್ತದೆ.

**ಸ್ವಕಾಲ ಏವ ಸಾಧುಶ್ಚೇತ್ ಕಾಲಭೇದೇ ಗತಿಃ ಕಥಂ ।**
**ವಾಕ್ಯಾರ್ಥಾದತದರ್ಥೇಷು ವಿಶಿಷ್ಟತ್ವಂ ನ ಸಿಧ್ಯತಿ ॥ ೯೪ ॥**

ಭಾವಿ, ಯಾಜೀ, ವಸನ್ – ಮುಂತಾದ ಶಬ್ದವು ತನಗೆ ವಿಹಿತವಾದ ಕಾಲದಲ್ಲಿ ಸಾಧುವಾಗಿಯೇ ಇರುತ್ತದೆ. ತೊಂದರೆ ಏನು? ಹಾಗಲ್ಲ; ಭಿನ್ನ–ಕಾಲದಲ್ಲಿರುವ ಆಸೀತ್ ಇತ್ಯಾದಿ ಶಬ್ದಗಳ ಯೋಗದಲ್ಲಿ ಗತಿ (ಅರ್ಥಪ್ರತೀತಿ) ಹೇಗೆ? ಆ ಅರ್ಥವಿಲ್ಲದೆ ಭಿನ್ನಕಾಲಿಕಗಳಾದ ಆಸೀತ್ – ಇತ್ಯಾದಿ ಶಬ್ದಗಳ ಯೋಗವಿದ್ದಾಗ ವಿಶಿಷ್ಟವಾಕ್ಯಾರ್ಥವು ಸಿದ್ಧಿಸದೆ ಹೋಗುತ್ತದೆಯಾದ್ದರಿಂದ ವಿಶೇಷ್ಯದ ಕಾಲಕ್ಕೆ ಅನುಗುಣವಾಗಿ ವಿಶೇಷಣದ ಕಾಲವು ತಾನಾಗಿ ಬದಲಾ–ಯಿಸಿಕೊಳ್ಳುತ್ತದೆ ಆದ್ದರಿಂದ ಸೂತ್ರ ಬೇಡ ಎಂದು ಅಭಿಪ್ರಾಯ. (ವಾರ್ತಿಕದ ಶೈಲಿಯಲ್ಲಿ ಈ ಕಾರಿಕೆಗಳಿರುವುದರಿಂದ ಹೆಚ್ಚು ಅಧ್ಯಾಹಾರ ಆವಶ್ಯಕವಾಗಿದೆ).

**ವಿವರಣೆ** : ಭಾವಿ ಶಬ್ದವು ಭವಿಷ್ಯದರ್ಥದಲ್ಲಿಯೇ ಇರಲಿ. ಅದು ಸಾಧು–ಶಬ್ದವೇ ಆಗಿರುತ್ತದೆ. ಸಿದ್ಧವಾದ ಆ ಶಬ್ದವನ್ನು ಆಸೀತ್ ಇತ್ಯಾದಿ ಕ್ರಿಯಾಪದದೊಡನೆ ಸೇರಿಸಬಹುದು. ಆದ್ದರಿಂದ 'ಧಾತು ಸಂಬಂಧೇ ಪ್ರತ್ಯಯಾಃ' ಎಂಬ ಸೂತ್ರ ಬೇಕಾಗಿಲ್ಲ. ಆದರೆ ಆಸೀತ್ ಎಂಬುದು ಭೂತಕಾಲದಲ್ಲಿರುವುದರಿಂದ ಭಾವಿ ಶಬ್ದದ ಅನ್ವಯ ಬರುವುದಿಲ್ಲ. ಅರ್ಥವು ಕೆಡುತ್ತದೆ – ಎಂದು ಆಕ್ಷೇಪ ಹುಟ್ಟುತ್ತದೆ. ಸಮಾಧಾನವೇನೆಂದರೆ, ಆ ಸಂದರ್ಭದಲ್ಲಿ ವಾಕ್ಯಾರ್ಥವು ಕೆಡುವ ಕಾರಣ ವಿಶೇಷ್ಯವಾಗಿ 'ಆಸೀತ್' ಎಂಬುದಕ್ಕೆ ಅನುಗುಣವಾಗಿ ಭಾವಿಶಬ್ದದ ಅರ್ಥವೂ ಭೂತಕಾಲದ್ದಾಗಿ ಪರಿವರ್ತಿತವಾಗುತ್ತದೆ – ಎಂದು ಅಭಿಪ್ರಾಯ. ಭಾವಿ

ಕೃತ್ಯಮಾಸೀತ್ – ಎಂದರೆ ಮುಂದೆ ಆಗಬೇಕಾದ ಕೃತ್ಯವಿತ್ತು ಎಂದರ್ಥ. ಆ ಕಾಲಕ್ಕೆ ಕೃತ್ಯವು ಭವಿಷ್ಯತ್ತಿನದಾದರೂ ಈ ಮಾತನ್ನು ನುಡಿಯುವ ಕಾಲದಲ್ಲಿ ಅದು ಸಹಜವಾಗಿ ಭೂತಕಾಲದ್ದೇ ಆಗಿಬಿಡುತ್ತದೆ. ಆದ್ದರಿಂದ ಸೂತ್ರವು ಬೇಡ. ಸೂತ್ರವಿದ್ದರೆ ಇಲ್ಲಿ ವಿವಕ್ಷಿತವಾದ ಅರ್ಥವು ತೋರುವುದೂ ಇಲ್ಲ. ಹೇಗೆಂದರೆ –

**ತದರ್ಥಶ್ಚೇದವಯವೋ ಭಾವಿನೋ ಭೂತತಾಗತಿಃ ।**
**ನ ಸ್ಯಾದತ್ಯಂತಭೂತತ್ವಮೇವೈಕಂ ತತ್ರ ಸಂಭವೇತ್ ॥ ೯೫ ॥**

ಅವಯವಃ = 'ಭಾವಿ ಕೃತ್ಯಮಾಸೀತ್' ಎಂಬ ವಾಕ್ಯದ ಅವಯವ–ವಾದ ಭಾವಿಶಬ್ದವು, ತದರ್ಥಶ್ಚೇತ್ = ಪ್ರಧಾನವಾದ 'ಆಸೀತ್' ಎಂಬುದರ ಕಾಲದ ಅರ್ಥವುಳ್ಳದ್ದಾದರೆ, ಭಾವಿನಃ = ವಿವಕ್ಷಿತವಾದ ಭವಿಷ್ಯತ್ತಿನ ಕೃತ್ಯಕ್ಕೆ ಭೂತತಾಗತಿಃ = ಅತೀತತ್ವಜ್ಞಾನವು, ನ ಸ್ಯಾತ್ = ಆಗದೆ ಹೋದೀತು. ತತ್ರ = ಆ ವಾಕ್ಯದಲ್ಲಿ, ಏಕಂ = ಒಂದೇ ಆದ, ಅತ್ಯಂತ ಭೂತತ್ವಮೇವ = ಅತ್ಯಂತ ಭೂತತ್ವವೇ, ಸಂಭವೇತ್ = ಸಂಭವಿಸಿಬಿಟ್ಟೀತು.

**ವಿವರಣೆ** : ಭಾವಿಶಬ್ದವು ಭವಿಷ್ಯದರ್ಥದಲ್ಲಿಯೇ ಇರುವುದು ಆವಶ್ಯಕ. ಉದಾ:– ತದಾ ಚೈತ್ರೋ ನಿರ್ಗತಃ। ತಸ್ಯ ಭಾವಿ ಕೃತ್ಯಮಾಸೀತ್ = ಆಗ ಚೈತ್ರನು ಹೊರಟು ಹೋದನು. ಅವನಿಗೆ ಮುಂದೆ ಮಾಡಬೇಕಾದ ಕೃತ್ಯವಿತ್ತು. ಚೈತ್ರನು ನಿರ್ಗಮಿಸಿದ ಕಾಲಕ್ಕೆ ಕೃತ್ಯವು ಭವಿಷ್ಯತ್ತಿನದಾದ್ದರಿಂದ 'ಣಿನಿ' ಪ್ರತ್ಯಯ ಬಂದಿದೆ. ಈ ಮಾತನ್ನು ನುಡಿಯುವ ಕಾಲದ ಅಪೇಕ್ಷೆಯಿಂದ ಅದು ಭೂತಕಾಲಕ್ಕೆ 'ಆಸೀತ್' ಎಂಬುದಕ್ಕೆ ಅನುಗುಣವಾಗಿ ತನ್ನಷ್ಟಕ್ಕೆ ಪರಿವರ್ತಿತವಾಗುತ್ತದೆ. ಹಾಗಲ್ಲದೆ 'ಭಾವಿ' ಎಂಬ ಶಬ್ದವೇ 'ಭೂತ' ಎಂಬ ಅರ್ಥದಲ್ಲಿ ಬಂದರೆ, ಚೈತ್ರನು ನಿರ್ಗಮಿಸುವಾಗಲೇ ಆ ಕೃತ್ಯವು ನಡೆದು ಹೋಗಿತ್ತು ಎಂದರ್ಥವಾಗಿ ಬಿಡುತ್ತದೆ. ಚೈತ್ರನು ಹೊರಟು ಹೋದುದಕ್ಕೆ ಕಾರಣವೂ ಸಿಗುವುದಿಲ್ಲ. ಆ ಅರ್ಥವು ವಿವಕ್ಷಿತವಲ್ಲ. ಭಾವಿಯೂ ಭೂತಕಾಲದ್ದು, ಆಸೀತ್ ಭೂತಕಾಲದ್ದು – ಎರಡೂ ಸೇರಿ ಅತ್ಯಂತ ಭೂತವಾಗಿಬಿಡುತ್ತದೆ. ಇದು ಸರಿಯಲ್ಲ.

**ವಿಶಿಷ್ಟಕಾಲತಾ ಪೂರ್ವಂ ತಥಾಪಿ ತು ವಿಶೇಷಣೇ ।**
**ಆಶ್ರಯಾತ್ ಸೋಽಂತರಂಗತ್ವಾತ್ ತತ್ರ ಸಾಧುರ್ಭವಿಷ್ಯತಿ ॥ ೯೬ ॥**

'ಯಥಾ' ಶಬ್ದಕ್ಕೆ ಅಧ್ಯಾಹಾರ. ಪೂರ್ವಂ = ಆಸೀತ್ ಮುಂತಾದ ಪದಾಂತರ ಸಂಬಂಧಕ್ಕೆ ಮೊದಲು, ಯಥಾ = ಹೇಗೆ, ವಿಶಿಷ್ಟಕಾಲತಾ = ಭಾವಿ – ಇತ್ಯಾದಿ ಶಬ್ದಕ್ಕೆ ಭವಿಷ್ಯದಾದಿ ಕಾಲವಿಶೇಷ ವಾಚಕತ್ವ ಇದೆಯೋ,

ವಿಶೇಷಣೇಽಪಿ ತು = ಆಸೀತ್ ಇತ್ಯಾದಿ ಶಬ್ದದೊಡನೆ ಸೇರಿ ವಿಶೇಷಣ–ವಾದಾಗಲೂ, ತಥಾ = ಹಾಗೆಯೇ ಭವಿಷ್ಯದಾದಿ ಕಾಲ ವಾಚಕತ್ವವು ಇರುತ್ತದೆ. ಏಕೆಂದರೆ ಆಶ್ರಯಾತ್ = ಣಿನಿ ಪ್ರತ್ಯಯವು ಭವಿಷ್ಯತ್ಕಾಲವನ್ನು ಆಶ್ರಯಿಸಿಕೊಂಡಿದೆಯಾದ್ದರಿಂದ, ಹಾಗೆಯೇ ಇತರ ಪ್ರತ್ಯಯಗಳೂ ಸಹ, ಸಃ = ಭಾವ್ಯಾದಿಶಬ್ದವು, ತತ್ರ = ಭವಿಷ್ಯದಾದಿ ಕಾಲದಲ್ಲಿಯೇ, ಸಾಧುರ್ಭವಿಷ್ಯತಿ = ಸಾಧುಶಬ್ದವಾಗುವುದು.

**ವಿವರಣೆ:** ಪೂರ್ವೋಕ್ತ ರೀತಿಯಲ್ಲಿ 'ಭಾವಿ' ಶಬ್ದವು ಭೂತಾರ್ಥವನ್ನು ಬೋಧಿಸಿದರೆ, ತನ್ನ ಭವಿಷ್ಯತ್ಕಾಲ ವಾಚಕತ್ವ ಬಿಟ್ಟುಹೋಗುವುದಲ್ಲವೆ? ಆಗ ಅದು ಅಸಾಧುಶಬ್ದವಾಗಿ ಬಿಡುತ್ತದೆ ಎಂಬ ಶಂಕೆಗೆ ಸಮಾಧಾನವೇನೆಂದರೆ, ಭಾವಿ ಮುಂತಾದ ಶಬ್ದವು ಯಾವ ಅರ್ಥದಲ್ಲಿ ಸಾಧುವೋ ಆ ಅರ್ಥವು ಬಿಟ್ಟು–ಹೋಗುವುದಿಲ್ಲ. ಹಿಂದೆ ಹೇಳಿದಂತೆ ಭೂತಕಾಲಾಪೇಕ್ಷೆಯಿಂದ ಭಾವಿ ಕೃತ್ಯವು ಭವಿಷ್ಯತ್ತೇ ಆಗಿರುತ್ತದೆ. 'ಭಾವಿ ಕೃತ್ಯಮಾಸೀತ್' ಎಂದು ನುಡಿಯುವ ಕಾಲದ ಅಪೇಕ್ಷೆಯಿಂದ ಭೂತಕಾಲದ್ದಾಗುತ್ತದೆ. ಭವಿಷ್ಯತ್ತ್ವವನ್ನು ಬಿಡದೆಯೇ ಭೂತಕಾಲ–ವನ್ನೇ ಅನುಸರಿಸುತ್ತದೆ – ಎಂಬುದನ್ನು ಸೂಕ್ಷ್ಮದೃಷ್ಟಿಯಿಂದ ವಿವೇಚಿಸಿಕೊಳ್ಳಬೇಕು.

ಹೀಗೆಯೇ 'ಅಗ್ನಿಷ್ಟೋಮಯಾಜೀ ಅಸ್ಯ ಪುತ್ರೋ ಜನಿತಾ' = ಅಗ್ನಿ–ಷ್ಟೋಮಯಾಗ ಮಾಡಿದವನು ಇವನಿಗೆ ಪುತ್ರನಾಗಿ ಹುಟ್ಟುವನು – ಎಂಬಲ್ಲಿಯೂ 'ಯಾಜೀ' ಎಂಬಲ್ಲಿರುವ ಭೂತಕಾಲದ ಪ್ರತ್ಯಯಕ್ಕೆ ಭವಿಷ್ಯತ್ಕಾಲವು 'ಜನಿತಾ' ಎಂಬುದರ ಯೋಗವಿದ್ದಾಗ ತೋರುತ್ತದೆ ಎಂದು ತಿಳಿಯಬೇಕು. 'ಭೂತೇ' ಎಂಬ ಅಧಿಕಾರದಲ್ಲಿ 'ಕರಣೇ ಯಜಃ' (೩–೨–೮೫) ಎಂಬ ಸೂತ್ರದಿಂದ ಣಿನಿ ಪ್ರತ್ಯಯವನ್ನು ವಿಧಿಸಿದ್ದಾರೆ. ಜನಿತಾ ಎನ್ನುವುದು ಭವಿಷ್ಯದರ್ಥದಲ್ಲಿರುವ ಲುಡಂತ ಕ್ರಿಯಾಪದ, ಭೂತಾರ್ಥದಲ್ಲಿಯೇ ಣಿನಿ ಬಂದಿದೆಯಾದ್ದರಿಂದ ಇದು ಸಾಧು ಶಬ್ದ. ಕಾಲಾಂತರದಲ್ಲಿ ಆ ಪುತ್ರನು ಅಗ್ನಿಷ್ಟೋಮವನ್ನು ಮಾಡಿದವನು ಎನ್ನಿಸಿಕೊಳ್ಳು–ತ್ತಾನೆ. ಹಾಗೆ ಪ್ರಸಿದ್ಧಿಯಾಗುವ ಕಾಲದ ಅಪೇಕ್ಷೆಯಿಂದ ಯಾಗವು ಭೂತಕಾಲದ್ದೇ ಆಗುತ್ತದೆ. 'ಜನಿತಾ' ಎಂಬ ಕ್ರಿಯಾಪದದ ಯೋಗದಲ್ಲಿದ್ದಾಗ, ಹೇಳುವ ಕಾಲದ ಅಪೇಕ್ಷೆಯಿಂದ ಭವಿಷ್ಯತ್ತು ತೋರುತ್ತದೆ. ಇದರಿಂದ ಬಾಧೆ ಏನೂ ಇಲ್ಲ. 'ಧಾತು ಸಂಬಂಧೇ ಪ್ರತ್ಯಯಾಃ' ಎಂದು ಸೂತ್ರವನ್ನಾರಂಭಿಸಿದರೆ ಅತ್ಯಂತ ಭವಿಷ್ಯತ್ತು ತೋರುತ್ತದೆ. 'ಮುಂದೆ ಯಾಗ ಮಾಡುವವನು, ಮುಂದೆ ಹುಟ್ಟುವನು' ಎಂದು ಅರ್ಥವಾಗುವುದು. ಇದು ವಿವಕ್ಷಿತವಲ್ಲ. ಆಗ ಯಾಗಮಾಡುವ ನಿಶ್ಚಯ ತೋರುವುದಿಲ್ಲ. ಜನ್ಮಾಂತರದಲ್ಲಿ ಯಾಗ ಮಾಡತಕ್ಕವನಾದರೂ ಆಗಬಹುದು! – ಎಂಬ ಅರ್ಥತೋರೀತು.

ಇದಿಷ್ಟು ವಾರ್ತಿಕಕಾರರ ಮತ. ಪದಸಂಸ್ಕಾರ ಪಕ್ಷವನ್ನವಲಂಬಿಸಿ ಆ ಸೂತ್ರವು ಬೇಡವೆಂದು ಅವರು ಹೇಳಿದ್ದಾರೆ. ಆದರೆ ವಾಕ್ಯಸಂಸ್ಕಾರ ಪಕ್ಷದಲ್ಲಿ ಸೂತ್ರವು ಆವಶ್ಯಕ –

**ಆಮಿಶ್ರ ಏವ ಪ್ರಕ್ರಾಂತಃ ಸ ಪದಾರ್ಥಸ್ತಥಾವಿಧಃ ।**
**ಕೇವಲಸ್ಯ ವಿಮಿಶ್ರತ್ವಂ ನಿತ್ಯೇಽರ್ಥೇ ನೋಪಪದ್ಯತೇ ॥ ೯೭ ॥**

ತಥಾವಿಧಃ = 'ಆಸೀತ್' ಇತ್ಯಾದಿ ಪದಾರ್ಥದೊಡನೆ ಸಂಬಂಧಿಸುವ ಸ ಪದಾರ್ಥಃ = ಭಾವಿ ಇತ್ಯಾದಿ ಪದದ ಅರ್ಥವು, ಆಮಿಶ್ರ ಏವ = ಆಸೀತ್ ಇತ್ಯಾದಿಗಳೊಡನೆ ಸಂಬದ್ಧವಾಗಿಯೇ, ಪ್ರಕ್ರಾಂತಃ = ವ್ಯುತ್ಪಾದಿತ–ವಾಗಿರುತ್ತದೆ. ನಿತ್ಯೇಽರ್ಥೇ = ಅರ್ಥವು ನಿತ್ಯವಾಗಿರುವಾಗ ಕೇಲವಸ್ಯ = 'ಆಸೀತ್' ಇತ್ಯಾದಿ ಶಬ್ದಾರ್ಥದೊಡನೆ ಮಿಶ್ರವಾಗದ ಪದಾರ್ಥಕ್ಕೆ, ವಿಮಿಶ್ರತ್ವಂ = ಅನಂತರ ಮಿಶ್ರವಾಗುವುದು, ನೋಪಪದ್ಯತೇ = ಯುಕ್ತವಲ್ಲ.

**ವಿವರಣೆ** : 'ಸಿದ್ಧೇ ಶಬ್ದಾರ್ಥಸಂಬಂಧೇ' ಎಂಬ ವಾರ್ತಿಕವು ಶಬ್ದ, ಅರ್ಥ, ಅವೆರಡರ ಸಂಬಂಧ – ಇವಿಷ್ಟು ನಿತ್ಯವೆಂದು ಹೇಳಿದೆ. ಇದು ಸರ್ವವೈಯಾ–ಕರಣರಿಗೂ ಸಂಮತ. ಲೋಕದಲ್ಲಿ ವ್ಯವಹಾರಕ್ಕಾಗಿ ವಾಕ್ಯವನ್ನು ಪ್ರಯೋಗಿಸುತ್ತಾ–ರೆಯೇ ಹೊರತು ಬರಿಯ ಶಬ್ದವನ್ನಲ್ಲ. ವ್ಯಾಕರಣವು ಪ್ರಯುಕ್ತವಾದ ಶಬ್ದಕ್ಕೆ ಸಾಧುತ್ವವನ್ನು ವ್ಯವಸ್ಥಾಪಿಸುತ್ತದೆ. ವಾಕ್ಯದ ಅಂಗವಾದ ಶಬ್ದವು ಇನ್ನೊಂದು ಪದದ ಅರ್ಥದೊಡನೆ ಸಂಬದ್ಧವಾಗಿಯೇ ಇರುತ್ತದೆ. ಆದ್ದರಿಂದ ಸಂಬದ್ಧವಾದ ಪದಾರ್ಥವನ್ನು ಬೋಧಿಸುವ ಶಬ್ದಕ್ಕೇ ಅನ್ವಾಖ್ಯಾನವನ್ನು ಮಾಡಬೇಕು. ಮೊದ–ಲೊಂದು ಅರ್ಥದಲ್ಲಿ ವ್ಯುತ್ಪತ್ತಿಯನ್ನು ಹೇಳಿ ಆಮೇಲೆ ಪದಾಂತರವನ್ನು ಸೇರಿಸಿದಾಗ ಆ ಅರ್ಥವು ಇನ್ನೊಂದು ವಿಧವಾಗುತ್ತದೆ ಎಂದು ಹೇಳಿದರೆ ಅರ್ಥವು ನಿತ್ಯವೆಂಬುದು ಕೂಡದೆ ಹೋಗುತ್ತದೆ. ಆದ್ದರಿಂದ ಅರ್ಥಾಂತರದೊಡನೆ ಮಿಶ್ರವಾದ್ದನ್ನೇ ಮೊದಲು ಇಟ್ಟುಕೊಂಡು ಸಾಧುತ್ವವನ್ನು ಹೇಳಬೇಕು. ಭಾವಿ ಶಬ್ದವೂ ಹಾಗೆ ಅನ್ಯಾರ್ಥ ಸಂಬದ್ಧವಾಗಿಯೇ ಭವಿಷ್ಯತ್ಕಾಲವನ್ನು ಸೂಚಿಸುತ್ತದೆ. ಯಾಜಿ ಶಬ್ದವು ಮೊದಲೇ ಭೂತಾರ್ಥದಲ್ಲಿ ವ್ಯುತ್ಪನ್ನವಾಗಿದೆ. ಅವು ತಮ್ಮ ಅರ್ಥಕ್ಕೆ ವಿರುದ್ಧವಾಗಿ ಆಸೀತ್, ಜನಿತಾ – ಇತ್ಯಾದಿಗಳೊಡನೆ ಸೇರಿದಾಗ ಬೇರೊಂದು ಅರ್ಥವನ್ನು ಬೋಧಿಸುತ್ತವೆಯೆನ್ನುವುದು ಯುಕ್ತವಲ್ಲ. 'ಆದ್ದರಿಂದ ಧಾತು ಸಂಬಂಧೇ ಪ್ರತ್ಯಯಾಃ' ಎಂಬ ಸೂತ್ರವು ಆವಶ್ಯಕ.

**ಶುದ್ಧೇ ಚ ಕಾಲೇ ವ್ಯಾಖ್ಯಾತಮಾಮಿಶ್ರೇ ನ ಪ್ರಸಿದ್ಧ್ಯತಿ ।**
**ಸಾಧುತ್ವಮಯಥಾಕಾಲಂ ತತ್ ಸೂತ್ರೇಣೋಪದಿಶ್ಯತೇ ॥ ೯೮ ॥**

ಭೂತಕಾಲದ ಸಂಸರ್ಗವಿಲ್ಲದೆ ಶುದ್ಧವಾದ ಭವಿಷ್ಯತ್ಕಾಲದಲ್ಲಿ ಭಾವೀ ಎಂಬುದರ ಣಿನಿ ಪ್ರತ್ಯಯದ ಸಾಧುತ್ವವು ಭವಿಷ್ಯದರ್ಥದಲ್ಲಿ ವಿಹಿತವಾಗಿದೆ. ಅದು ಭೂತಸಂಮಿಶ್ರ ಭವಿಷ್ಯತ್ಕಾಲದಲ್ಲಿ ಸಿದ್ಧವಾಗುವುದಿಲ್ಲ. ಆದ್ದರಿಂದ ಶುದ್ಧ ಭವಿಷ್ಯತ್ ಅಲ್ಲದ ಭೂತಮಿಶ್ರ ಭವಿಷ್ಯತ್ತಿನಲ್ಲಿ ಣಿನಿಯು 'ಧಾತುಸಂಬಂಧೇ ಪ್ರತ್ಯಯಾಃ' ಎಂಬ ಸೂಕ್ತದಿಂದ ಉಪದಿಷ್ಟವಾಗುತ್ತದೆ.

**ವಿವರಣೆ** : ಭಾವೀ ಎಂಬಲ್ಲಿ ಶುದ್ಧ ಭವಿಷ್ಯತ್ಕಾಲದಲ್ಲಿ ಣಿನಿ ಪ್ರತ್ಯಯವನ್ನು ವಿಧಿಸಿದ್ದಾರೆ. ಭಾವಿ ಕೃತ್ಯಮಾಸೀತ್ – ಎಂಬಲ್ಲಿ ಹಿಂದೆ ಹೇಳಿದಂತೆ ಭೂತ ಸಂಮಿಶ್ರವಾದ ಭವಿಷ್ಯತ್ತು ತೋರುತ್ತದೆ. ಇಲ್ಲಿ ಣಿನಿ ಬರುವುದು ಹೇಗೆ? ಆದ್ದರಿಂದ ಅಲ್ಲಿಯೂ ಣಿನಿ ಪ್ರತ್ಯಯವು ಬರಲೆಂದು 'ಧಾತುಸಂಬಂಧೇ ಪ್ರತ್ಯಯಾಃ' ಎಂಬ ಸೂತ್ರವನ್ನು ರಚಿಸಬೇಕಾಯಿತು. ಪೂರ್ವೋಕ್ತ ಕಾರಿಕೆಯ ವಿವರಣೆ ಇದು.

ಭಾವಿಕೃತ್ಯಮಾಸೀತ್ – ಎಂಬಲ್ಲಿ ಆಸೀತ್ ಎಂಬುದೇ ಭವಿಷ್ಯತ್ಕಾಲ ಸಂಮಿಶ್ರವಾದ ಭೂತಕಾಲದಲ್ಲಿ ಬಂದಿದೆ – ಎಂದೇಕೆ ಹೇಳಬಾರದು? 'ಮುಂದೆ ಆಗ ಬೇಕಾದ ಕೃತ್ಯವು ನಡೆದದ್ದಾಗುವುದು' ಎಂದು ಆ ವಾಕ್ಯದ ಅರ್ಥವಾಗಲಿ ಎಂಬ ಶಂಕೆಗೆ ಉತ್ತರವಿದು.

**ಆಖ್ಯಾತಪದವಾಚ್ಯೇಽರ್ಥೇ ನಿರ್ವರ್ತ್ಯತ್ವಾತ್ ಪ್ರಧಾನತಾ ।**
**ವಿಶೇಷಣಂ ತದಾಕ್ಷೇಪಾತ್ ತತ್ಕಾಲೇ ವ್ಯವತಿಷ್ಠತೇ ॥ ೯೯ ॥**

ಆಖ್ಯಾತ = ತಿಙಂತವಾದ ಈ ಕ್ರಿಯಾಪದ. ತಿಙಂತದ ಅರ್ಥವಾದ ಕ್ರಿಯೆಯಲ್ಲಿ, ಅದು (ಕ್ರಿಯೆ)ನೆರವೇರಬೇಕಾದ ಸಾಧ್ಯವಾದ್ದರಿಂದ ಪ್ರಾಧಾನ್ಯ–ವಿರುತ್ತದೆ. ಈ ಪ್ರಧಾನ ಕ್ರಿಯೆಯು ತನ್ನ ಉಪಕಾರಕ್ಕಾಗಿ ಕಾರಕವನ್ನು ಆಕಾಂಕ್ಷಿಸುವುದರಿಂದ ಕಾರಕವು ತಿಙಂತಾರ್ಥಕ್ಕೆ ವಿಶೇಷಣವಾಗುತ್ತದೆ. ಅದು ಅಪ್ರಧಾನವಾದ್ದರಿಂದ 'ಆಸೀತ್' ಮುಂತಾದ್ದರ ಕಾಲವನ್ನು ಅನುಸರಿಸಿ ಅದರ ಕಾಲದಲ್ಲಿ ತಾನು ವ್ಯವಸ್ಥಿತವಾಗಿಬಿಡುತ್ತದೆ.

**ವಿವರಣೆ** : ಭೂತಂ ಭಾವ್ಯಾಯ ಉಪದಿಶ್ಯತೇ, ಸಿದ್ಧಂ ಸಾಧ್ಯಾಯ ಉಪದಿಶ್ಯತೇ – ಎಂಬ ನ್ಯಾಯಗಳು ಒಂದೇ ಅರ್ಥ ಉಳ್ಳವು. ಯಾವುದು ಸಿದ್ಧವಾಗಿದೆಯೋ ಅದು ಸಾಧ್ಯವಾದ್ದನ್ನು ಅನುಸರಿಸಿ ಅದಕ್ಕೆ ಉಪಕರಿಸುತ್ತದೆ ಎಂದು ಅಭಿಪ್ರಾಯ. ವಾಕ್ಯದಲ್ಲಿ ಕ್ರಿಯಾಪದವು ಪ್ರಧಾನವಾದದ್ದು. ಏಕೆಂದರೆ ಕ್ರಿಯೆಯು ಮುಂದೆ ಸಾಧ್ಯವಾದ್ದರಿಂದ ಅದಕ್ಕೆ ಪ್ರಾಧಾನ್ಯ ಉಂಟು. ಉಳಿದವು ಈ ಕ್ರಿಯೆಗೆ ವಿಶೇಷಣವಾಗಿ ಅದನ್ನು ಉಪಕರಿಸುತ್ತವೆ. 'ಭಾವಿ ಕೃತ್ಯಮಾಸೀತ್' ಎಂಬಲ್ಲಿ

ಭಾವಿಕೃತ್ಯವು ಕರ್ತೃಕಾರಕ. ಆಸೀತ್ ಎಂಬ ಸಾಧ್ಯಕ್ರಿಯೆಗೆ ವಿಶೇಷಣ. ಆದ್ದರಿಂದ ಸಾಧ್ಯವಾದ ಸತ್ತಾರೂಪದ ಭೂತಕ್ರಿಯೆಯ ಕಾಲವನ್ನು ಭಾವಿಶಬ್ದವು ಅನುಸರಿಸುತ್ತದೆಯೇ ಹೊರತು ಭಾವಿಕ್ರಿಯೆಯ ಭವಿಷ್ಯತ್ಕಾಲವನ್ನು ಪ್ರಧಾನವಾದ ಸತ್ತಾ ಕ್ರಿಯೆಯು ಅನುಸರಿಸುವುದಿಲ್ಲ. ಭಾವಿ ಶಬ್ದದ ಅರ್ಥವು ಕ್ರಿಯಾ ವಿಶಿಷ್ಟವಾದ ವಸ್ತುವೇ ಹೊರತು ಕ್ರಿಯೆಯಲ್ಲ.

ಗುಣಾನಾಂ ಪ್ರಧಾನಾನುರೋಧಿತ್ವಂ, ನತು ಪ್ರಧಾನಸ್ಯ ಗುಣಾನುರೋಧಿತ್ವಂ। ಎಂದು ತಾತ್ಪರ್ಯ. ಗುಣ = ಅಪ್ರಧಾನ, ವಿಶೇಷಣ ರೂಪವಾದದ್ದು.

**ಸಂಪ್ರತ್ಯಯಾನುಕಾರೋ ವಾ ಶಬ್ದವ್ಯಾಪಾರ ಏವ ವಾ ।**
**ಅಧ್ಯಸ್ಯತೇ ವಿರುದ್ಧೇಽರ್ಥೇ ನ ಚ ತೇನ ವಿರುಧ್ಯತೇ॥ ೧೦೦ ॥**

ಭಾವೀ ಇತ್ಯಾದಿ ಸ್ಥಳದಲ್ಲಿ ಆ ಶಬ್ದಾರ್ಥಜ್ಞಾನಕ್ಕೆ ಭೂತಕಾಲ ಭವಿಷ್ಯ-ತ್ಕಾಲಗಳೆರಡೂ ವಿಷಯಗಳಾಗಿರುತ್ತವೆ. ಇವೆರಡರ ಸಂಮಿಳಿತ ಜ್ಞಾನವೇ ಸಂಪ್ರತ್ಯಯ. ಈ ಜ್ಞಾನದಲ್ಲಿ ಭೂತವಾದರೆ ಭವಿಷ್ಯತ್ತಿನ ಆಕಾರವೂ ಭವಿಷ್ಯತ್ ಆದರೆ ಭೂತಕಾಲದ ಆಕಾರವೂ ಆರೋಪಿತವಾಗಿರುತ್ತದೆ. ಅಥವಾ ಭಾವಿ-ಶಬ್ದದ ಅಭಿಧಾ ಶಕ್ತಿಗೇ ವಿರುದ್ಧಾರ್ಥದಲ್ಲಿ ಬೋಧಕತ್ವವು ಆರೋಪಿತವಾಗು-ತ್ತದೆ. ಆದ್ದರಿಂದ ಭೂತಭವಿಷ್ಯತ್ತುಗಳಿಗೆ ಇಲ್ಲಿ ವಿರೋಧವಿಲ್ಲ.

**ವಿವರಣೆ** : ಈ ಪ್ರತ್ಯಯಗಳಿಗೆ ವಿರುದ್ಧಕಾಲದ ಸಂಬಂಧವಿದ್ದರೂ ದೋಷ-ವಿಲ್ಲ. ಮೊದಲು ಪ್ರತ್ಯಯಗಳು ತಮಗೆ ವಿಹಿತವಾದ ಕಾಲದಲ್ಲಿಯೇ ಬರುತ್ತವೆ. ಹೇಗೆಂದರೆ ಅಗ್ನಿಷ್ಟೋಮಯಾಜೀ ಎಂಬಲ್ಲಿ ಭೂತಕಾಲದಲ್ಲಿ ಣಿನಿ ಬಂದಿದೆ. ಆಗ್ನಿಷ್ಟೋಮಯಾಗವನ್ನು ಮಾಡಿದವನು ಎಂದರ್ಥ. ಅನಂತರ ಜನಿತಾ ಶಬ್ದದ ಯೋಗವಿದ್ದಾಗ ಭವಿಷ್ಯತ್ಕಾಲದೊಡನೆ ಹೊಂದುವುದಿಲ್ಲವಾದ್ದರಿಂದ ಭೂತಕಾಲವು ಭವಿಷ್ಯತ್ಕಾಲದಲ್ಲಿ ಆರೋಪಿತವಾಗುತ್ತದೆ. ಅಥವಾ ಶಬ್ದಶಕ್ತಿಯೇ ಭವಿಷ್ಯತ್ತನ್ನು ಬೋಧಿಸುವಂತೆ ಆರೋಪಿತವಾಗುತ್ತದೆ. ಆಗ 'ಈತನಿಗೆ ಒಬ್ಬ ಮಗನು ಹುಟ್ಟು-ವನು. ಅವನು ಕೆಲವು ವರ್ಷಗಳಾದ ಮೇಲೆ ಅಗ್ನಿಷ್ಟೋಮವನ್ನು ಮಾಡಿ ಅಗ್ನಿ-ಷ್ಟೋಮಯಾಜೀ' ಎಂಬ ಖ್ಯಾತಿಯನ್ನು ಗಳಿಸುವನು ಎಂದು ಆ ವಾಕ್ಯದ ಅರ್ಥ.

**ಭೂತಂ ಭವಿಷ್ಯದಿತ್ಯೇತೌ ಪ್ರತ್ಯಯೌ ವರ್ತಮಾನತಾಮ್ ।**
**ಅತ್ಯಜಂತೌ ಪ್ರಪದ್ಯೇತೇ ವಿರುದ್ಧಾಶ್ರಯರೂಪತಾಮ್ ॥ ೧೦೧ ।**

ಭೂತಂ = ಒಂದು ಭೂತಕಾಲ, ಭವಿಷ್ಯತ್ = ಇನ್ನೊಂದು ಭವಿಷ್ಯ-

ತ್ಕಾಲ – ಹೀಗೆ ವಿರುದ್ಧ ವಿಷಯಗಳ, ಪ್ರತ್ಯಯೌ = ಜ್ಞಾನಗಳು, ವರ್ತಮಾನತಾಂ = ವಾಸ್ತವವಾದ ಒಂದು ಕಾಲವನ್ನು, ಅತ್ಯಜಂತೌ = ತ್ಯಜಿಸದೆಯೇ, ವಿರುದ್ಧಾಶ್ರಯರೂಪತಾಮ್ = ವಿರುದ್ಧವಾದ ಎರಡು ಕಾಲಗಳ ಸ್ವರೂಪವನ್ನು ಪ್ರಪದ್ಯೇತೇ = ಪಡೆಯುತ್ತವೆ.

**ವಿವರಣೆ** : ಹಾಗೆ ಸ್ವಕಾಲವನ್ನು ತ್ಯಜಿಸದೆಯೇ ಇನ್ನೊಂದು ಕಾಲದಲ್ಲಿ ಅಧ್ಯಾರೋಪವನ್ನು ಮಾಡಿದಾಗ ಆ ಕಾಲವನ್ನೂ ಬೋಧಿಸುವುದು ವಿರುದ್ಧವಲ್ಲ. ಯಾರಾದರೂ ಬೇಗನೆ ಬರುವಂತೆ ತ್ವರೆ ಪಡಿಸಿದಾಗ 'ಇದೋ ಬಂದೆ' ಎನ್ನುತ್ತೇವೆ. ಭವಿಷ್ಯತ್ಕಾಲದಲ್ಲಿ ಭೂತಕಾಲದ ಪ್ರಯೋಗವಿದು. ಶೀಘ್ರತೆಯನ್ನು ತೋರಿಸುವುದ-ಕ್ಕಾಗಿ ಇಲ್ಲಿ ಭೂತಕಾಲದ ಅಧ್ಯಾರೋಪ ಬಂದಿದೆ. ನೀನು ಯಾವಾಗ ಬಂದೆ? ಎಂದು ಕೇಳಿದಾಗ 'ಈಗಷ್ಟೇ ಬರುತ್ತಿದ್ದೇನೆ' ಎಂದು ಉತ್ತರ ಹೇಳುತ್ತಾನೆ. ಭೂತಕಾಲದಲ್ಲಿ ವರ್ತಮಾನಕಾಲದ ಆರೋಪ ಇಲ್ಲಿ ಬಂದಿದೆ.

ಈಗ ವರ್ತಮಾನ ಸಾಮೀಪ್ಯದ ವಿಚಾರ –

**ಅಧ್ವನೋ ವರ್ತಮಾನಸ್ಯ ಯಃ ಶೇಷೋ ಯ ಉಪಕ್ರಮಃ ।**
**ತದ್ವರ್ತಮಾನಸಾಮೀಪ್ಯಂ ಶಾಸ್ತ್ರೇ ಭೇದೇನ ದರ್ಶಿತಮ್ ॥ ೧೦೨ ॥**

ಆರಬ್ಧವಾದ ಕ್ರಿಯೆಯು ಸಮಾಪ್ತವಾಗದೆ ನಡೆಯುತ್ತಿರುವಾಗ ಆ ಕಾಲವು ವರ್ತಮಾನ ಕಾಲವಷ್ಟೆ. ಫಲಸಮಾಪ್ತಿಯಾಗಿ ಕ್ರಿಯೆಯು ವಿಶ್ರಾಂತ-ವಾದರೂ ಅದರ ಒಂದು ಸಂಸ್ಕಾರವು ಇನ್ನೂ ಉಳಿದಿದ್ದರೆ ಅದು ವರ್ತ-ಮಾನ ಸಮೀಪದ ಭೂತಕಾಲವಾಗುತ್ತದೆ. ಮಾನಸ ಸಂಕಲ್ಪರೂಪವಾದ ಉಪಕ್ರಮವು ವರ್ತಮಾನಸಮೀಪದ ಭವಿಷ್ಯತ್ತು ಆಗುತ್ತದೆ. ಹೀಗೆ ವರ್ತಮಾನಸಾಮೀಪ್ಯವು ಭೂತ, ಭವಿಷ್ಯತ್ ಎಂದು ಎರಡು ವಿಧವಾಗಿ ಶಾಸ್ತ್ರದಲ್ಲಿ ನಿರೂಪಿತವಾಗಿದೆ.

**ವಿವರಣೆ** : 'ವರ್ತಮಾನ ಸಾಮೀಪ್ಯೇ ವರ್ತಮಾನವದ್ವಾ' (೩–೩–೧೩೧) ಎಂಬ ಸೂತ್ರದಿಂದ ವರ್ತಮಾನಕಾಲದ ಲಟ್ ಪ್ರತ್ಯಯವು ವಿಹಿತವಾಗಿದೆ. ಹತ್ತಿರದ ಭೂತಕಾಲವೂ ಸಮೀಪದಲ್ಲಿರತಕ್ಕದ್ದು. ಹತ್ತಿರದ ಭವಿಷ್ಯತ್ಕಾಲವೂ ಸಮೀಪದಲ್ಲಿರ-ತಕ್ಕದ್ದು. ಇದು ವಿಕಲ್ಪವಾದ್ದರಿಂದ ಭೂತಕಾಲದ ಪ್ರತ್ಯಯವೂ ಭವಿಷ್ಯತ್ಕಾಲದ ಪ್ರತ್ಯಯವೂ ಆಯಾ ಕಾಲಗಳಲ್ಲಿ ಬರಬಹುದು. ವರ್ತಮಾನ ಸಮೀಪದ ಭೂತಭವಿಷ್ಯತ್ಕಾಲಗಳಲ್ಲಿ ವರ್ತಮಾನತ್ವವನ್ನು ಆರೋಪಿಸುವುದರಿಂದ ವರ್ತಮಾನ ಕಾಲದ ಪ್ರತ್ಯಯವು ಬರುತ್ತದೆ.

**ಆಶಂಸಾ ವರ್ತಮಾನಾಪಿ ವಿಷಯೇಣ ಭವಿಷ್ಯತಾ ।**
**ಭಾಷ್ಯೇ ಭವಿಷ್ಯತ್ಕಾಲೇತಿ ಕಾರ್ಯಾರ್ಥಂ ವ್ಯಪದಿಶ್ಯತೇ ॥ ೧೦೩ ॥**

ಆಶಂಸೆಯು ಸಂಭಾವನಾರೂಪವಾದ ಜ್ಞಾನ. ಅದು ವರ್ತಮಾನ ಕಾಲದ್ದೇ ಆದರೂ ಅದಕ್ಕೆ ಗೋಚರವಾದ ವಿಷಯವು ಭವಿಷ್ಯತ್ಕಾಲಕ್ಕೆ ಸೇರಿದ್ದರಿಂದ ಆಶಂಸೆಯು ಭವಿಷ್ಯತ್ಕಾಲಕ್ಕೆ ಸೇರಿದ್ದೆಂದು ಭಾಷ್ಯದಲ್ಲಿ ಉಕ್ತ–ವಾಗಿದೆ. ಹಾಗೆ ಹೇಳಿರುವುದು ಭವಿಷ್ಯತ್ಕಾಲದ ಕಾರ್ಯವು ಬರಲಿ–ಯೆಂಬುದಕ್ಕಾಗಿ.

**ವಿವರಣೆ** : 'ಆಶಂಸಾಯಾಂ ಭೂತವಚ್ಚ' (೩–೩–೧೩೨) ಎಂದು ಸೂತ್ರವಿದೆ. ಆಶಂಸೆಯು ತೋರುವಾಗ ಭವಿಷ್ಯದರ್ಥದಲ್ಲಿ ಭೂತವರ್ತಮಾನ–ಗಳಂತೆ ವಿಕಲ್ಪವಾಗಿ ಪ್ರತ್ಯಯಗಳು ಬರುತ್ತವೆ–ಎಂದರ್ಥ. ಭೂತಕಾಲ ವರ್ತ–ಮಾನಕಾಲದ ಪ್ರತ್ಯಯಗಳು ಬರದಾಗ ಭವಿಷ್ಯತ್ ಪ್ರತ್ಯಯವಿದ್ದೇ ಇರುತ್ತದೆ. ಉದಾ:

೧. ದೇವಶ್ಚೇದವರ್ಷೀತ್, ಧಾನ್ಯಮವಾಪ್ಸ್ಮ.

೨. ದೇವಶ್ಚೇದ್ ವರ್ಷತಿ, ಧಾನ್ಯಂ ವಪಾಮಃ.

೩. ದೇವಶ್ಚೇದ್ ವರ್ಷಿಷ್ಯತಿ, ಧಾನ್ಯಂ ವಪ್ಸ್ಯಾಮಃ.

ಈ ಮೂರು ವಾಕ್ಯಗಳಿಗೂ ಇಂದ್ರನು ಮಳೆ ಸುರಿಸಿದರೆ, ಧಾನ್ಯವನ್ನು ಬಿತ್ತುತ್ತೇವೆ – ಎಂದರ್ಥ. ಮಳೆ ಬಂದೀತೆಂಬ ಸಂಭಾವನೆಯೇ ಆಶಂಸೆ. ಇದಕ್ಕೆ ವಿಷಯವಾದ ಮಳೆ ಬರುವುದು ಭವಿಷ್ಯತ್ಕಾಲಕ್ಕೆ ಸೇರುತ್ತದೆ.

**ಇಚ್ಛಾ ಚಿಕೀರ್ಷತೀತ್ಯತ್ರ ಸ್ವಕಾಲಮನುರುಧ್ಯತೇ ।**
**ಭವಿಷ್ಯತಿ ಪ್ರಕೃತ್ಯರ್ಥೇ ತತ್ಕಾಲಂ ನಾನುರುಧ್ಯತೇ ॥ ೧೦೪ ॥**

ಚಿಕೀರ್ಷತಿ ಎಂಬಲ್ಲಿ ಇಚ್ಛೆಯು (ಪ್ರಧಾನವಾದ್ದರಿಂದ) ತನ್ನ ವರ್ತ–ಮಾನಕಾಲವನ್ನು ಅನುಸರಿಸುತ್ತದೆ. ಪ್ರಕೃತ್ಯರ್ಥವಾದ ಕೃಧಾತ್ವರ್ಥಕೃತಿಯು ಭವಿಷ್ಯತ್ತಿನದಾದರೂ ಅದರ ಕಾಲವನ್ನು ಅದು (ಅಪ್ರಧಾನವಾದ್ದರಿಂದ) ಅನುಸರಿಸುವುದಿಲ್ಲ.

**ವಿವರಣೆ** : ಚಿಕೀರ್ಷತಿ – ಎಂಬಲ್ಲಿ **'ಸನ್'** ಪ್ರತ್ಯಯದ ಅರ್ಥ ಇಚ್ಛೆ. ಕರ್ತುಮಿಚ್ಛತಿ ಚಿಕೀರ್ಷತಿ ಎಂದು ವಿಗ್ರಹವಾಕ್ಯ. 'ಪ್ರಕೃತಿ ಪ್ರತ್ಯಯೌ ಸಹಾರ್ಥಂ ಬ್ರೂತಃ, ತಯೋಃ ಪ್ರತ್ಯಯಾರ್ಥಃ ಪ್ರಧಾನಮ್' ಎಂದು ನ್ಯಾಯ ಉಂಟು. ಪ್ರಧಾನವು ಅಪ್ರಧಾನವನ್ನು ಅನುಸರಿಸುವುದಿಲ್ಲ. ಉದಾ – ಸ್ನಾನಂ ಚಿಕೀರ್ಷತಿ =

ಸ್ನಾನವನ್ನು ಮಾಡಲು ಇಚ್ಛಿಸುತ್ತಾನೆ. ಕೃತಿ ವಿಷಯವಾದ ಸ್ನಾನವು ಭವಿಷ್ಯತ್ತಿನ-ದಾದರೂ ಇಲ್ಲಿ ಭವಿಷ್ಯತ್ಕಾಲದ ಪ್ರತ್ಯಯ ಬಂದಿಲ್ಲ. ಇಚ್ಛೆಯು ವರ್ತಮಾನಕಾಲ-ದ್ದಾದ್ದರಿಂದ ವರ್ತಮಾನ ಕಾಲದ ಲಟ್ ಪ್ರತ್ಯಯವೇ ಬಂದಿದೆ. ಪ್ರತ್ಯಯಾರ್ಥ-ವಾದ ಇಚ್ಛೆ ಇಲ್ಲಿ ಪ್ರಧಾನ.

ಇಲ್ಲೊಂದು ಶಂಕೆ ಇದೆ. ಹಿಂದಿನ ಕಾರಿಕೆಯಲ್ಲಿ ಆಶಂಸಾ ವಿಷಯವಾದ ವೃಷ್ಟಿ, ಬೀಜಾವಾಪ – ಇವು ಭವಿಷ್ಯತ್ಕಾಲದವಾದ್ದರಿಂದ ಭವಿಷ್ಯತ್ಕಾಲದ ಪ್ರತ್ಯಯವು ಬರುತ್ತದೆ ಎಂದು ಹೇಳಿದ್ದೀರಿ. ಇಲ್ಲಿಯೂ ಇಚ್ಛಾವಿಷಯವಾದ ಸ್ನಾನವೆಂಬ ಕಾರ್ಯವು ಭವಿಷ್ಯತ್ತಿನದಾದ್ದರಿಂದ ಇಲ್ಲೇಕೆ ಭವಿಷ್ಯತ್ಕಾಲದ ಪ್ರತ್ಯಯ ಬರುವುದಿಲ್ಲ? ಇದಕ್ಕೆ ಉತ್ತರ –

**ಆಶಂಸ್ಯಮಾನತಂತ್ರತ್ವಾತ್ ಆಶಂಸಾಯಾಂ ವಿಪರ್ಯಯಃ ।**
**ಪ್ರಯೋಕ್ತೃಧರ್ಮಃ ಶಬ್ದಾರ್ಥೇ ಶಬ್ದೈರೇವಾನುಷಜ್ಯತೇ ॥ ೧೦೫ ॥**

(ಅಶಂಸೆ ಎಂದರೆ ಅಪ್ರಾಪ್ತವಾದದ್ದು ಪ್ರಾಪ್ತವಾಗಲಿ ಎಂಬ ಇಚ್ಛೆ. ಶುಭ ಹಾರೈಕೆ. ಇದು ವಾಕ್ಯಪ್ರಯೋಗ ಮಾಡತಕ್ಕವನಲ್ಲಿ ಇರುತ್ತದೆ.)

ಆಶಂಸೆಯಲ್ಲಿ ವೃಷ್ಟಿ, ಬೀಜವಾಪ – ಇವೆರಡೂ ಪ್ರಯೋಕ್ತೃವಿನ (ಧರ್ಮಕ್ಕೆ) ಇಚ್ಛೆಗೆ ಒಳಪಟ್ಟು ತೋರುತ್ತವೆಯೇ ಹೊರತು ಪ್ರತ್ಯಯದ ಅರ್ಥವಾಗಿ ತೋರುವುದಿಲ್ಲ. ಆದ್ದರಿಂದ ಆಶಂಸಾಸ್ಥಳದಲ್ಲಿ ಹಿಂದೆ ಹೇಳಿದ್ದಕ್ಕೆ ವಿಪರೀತವಾಗಿ ಭವಿಷ್ಯತ್ಕಾಲದ ಪ್ರತ್ಯಯವು ಬರುವುದಿಲ್ಲ. ಈ ಪ್ರಯೋಕ್ತೃ ಧರ್ಮವು ಆ ವಾಕ್ಯಾರ್ಥದಲ್ಲಿ ಆ ಶಬ್ದಗಳಿಂದಲೇ ತೋರಿಬಿಡುತ್ತದೆ.

**ವಿವರಣೆ** : ಸ್ನಾನಂ ಚಿಕೀರ್ಷತಿ – ಎಂಬಲ್ಲಿ ಸನ್ ಪ್ರತ್ಯಯವೇ ಇಚ್ಛೆಯನ್ನು ಬೋಧಿಸುತ್ತದೆ. ಸನ್ ಪ್ರತ್ಯಯದ ಅರ್ಥವೇ ಇಚ್ಛೆ. ಆದ್ದರಿಂದ 'ಚಿಕೀರ್ಷ' ಎಂಬ ಧಾತುವಿನಲ್ಲಿ ಇಚ್ಛೆಯ ಕಾಲವು ವರ್ತಮಾನವಾದ್ದರಿಂದ ವರ್ತಮಾನಕಾಲವೇ ಬರುತ್ತದೆ. ದೇವಶ್ಚೇದವರ್ಷೀತ್, ದೇವಶ್ಚೇದ್ ವರ್ಷತಿ, ದೇವಶ್ಚೇದ್ ವರ್ಷಿಷ್ಯತಿ – ಎಂಬಲ್ಲಿ ಆಶಂಸೆಯನ್ನು ಬೋಧಿಸುವ ಯಾವ ಪ್ರತ್ಯಯವೂ ಇಲ್ಲ. ಆಶಂಸೆಯು ಮಾತ್ರ ತೋರಬೇಕಾಗಿದೆ. ಆದ್ದರಿಂದ ಆಶಂಸೆಯು ಶಬ್ದಸಂಸ್ಕಾರಕ್ಕೆ ನಿಮಿತ್ತವಾಗು-ತ್ತದೆ. ಆಶಂಸೆಗೆ ವಿಷಯವಾದ ವೃಷ್ಟಿ, ಬೀಜಾವಾಪಗಳು ಭವಿಷ್ಯತ್ಕಾಲವಾದ್ದರಿಂದ ಭವಿಷ್ಯತ್ಕಾಲವು ಬರುವುದು ಸಹಜವಾಗಿದೆ. ಲೋಕದಲ್ಲಿ ಲಟ್, ಲಙ್‌ಗಳ ಪ್ರಯೋಗವೂ ಕಂಡು ಬರುವುದರಿಂದ 'ಆಶಂಸಾಯಾಂ ಭೂತವಚ್ಚ' ಎಂಬ ಸೂತ್ರದಿಂದ ಅವೆರಡನ್ನೂ ವಿಶೇಷವಾಗಿ ವಿಧಿಸಬೇಕಾಯಿತು. ಈ ಕ್ರಿಯಾಪದಗಳಿಗೆ

ಆಶಂಸಾಬೋಧಕತ್ತ್ವ ಶಕ್ತಿಯು ಅಧ್ಯಾರೋಪಿತವಾಗುತ್ತದೆ ಎಂದು ತಾತ್ಪರ್ಯ. ಅಧ್ಯಾರೋಪವು ಆಯಾ ಶಬ್ದಗಳಿಂದಲೇ ಆಗುತ್ತದೆ. ಹೇಗೆಂದರೆ ಈ ರೀತಿಯ ಶಬ್ದಗಳನ್ನು ಪ್ರಯೋಗಿಸಿದ ಮೇಲೆ ಪ್ರಯೋಕ್ತೃವಿನಲ್ಲಿ ಆಶಂಸೆ ಇದೆಯೆಂದು ತಿಳಿಯುತ್ತದೆ.

ಕಾಲಾತಿದೇಶದ ವಿಚಾರ ಇಲ್ಲಿಗೆ ಮುಗಿಯಿತು. ಅತಿದೇಶವಿಲ್ಲದಿದ್ದರೂ ಕಾಲಾಂತರ ಬೋಧಕ ಶಬ್ದಗಳನ್ನು ಲೋಕದಲ್ಲಿ ಪ್ರಯೋಗಿಸುವುದುಂಟು. ಅವುಗಳಿಗೆ ಉಪಪತ್ತಿಯನ್ನೀಗ ವಿಮರ್ಶಿಸಲಾಗುವುದು.

**ಅಪ್‌ಶಾಲಿಬೀಜಸಂಯೋಗೇ ವರ್ತತೇ ನಿಷ್ಪದಿರ್ಯದಾ ।**
**ತತ್ರಾವಯವವೃತ್ತಿತ್ವಾದ್ ಭವಿಷ್ಯತ್ಪ್ರತಿಷೇಧನಮ್ ॥ ೧೦೬ ॥**

'ನಿಷ್ಪದಿ' ಎಂದರೆ ನಿಸ್ ಪೂರ್ವಕವಾದ ಪದ್ ಧಾತ್ವರ್ಥವಾದ ನಿಷ್ಪತ್ತಿಯು, ಯದಾ = ಯಾವಾಗ, ಜಲ ಮತ್ತು ಬತ್ತದ ಬೀಜ ಇವುಗಳ ಸಂಯೋಗದಲ್ಲಿ ಮಾತ್ರ ಇರುವುದೋ (ತದಾ = ಆಗ) ತತ್ರ = ಆ ಪ್ರಯೋಗದಲ್ಲಿ, ಫಲಪ್ರಾಪ್ತಿಯ ಒಂದಂಶವನ್ನು ಮಾತ್ರ ಬೋಧಿಸತಕ್ಕದ್ದಾದ್ದ-ರಿಂದ, ಭವಿಷ್ಯತ್ಕಾಲದ ಪ್ರತ್ಯಯಕ್ಕೆ ನಿಷೇಧವು ಯುಕ್ತವಾಗಿದೆ.

**ವಿವರಣೆ** : 'ದೇವಶ್ಚೇದ್ ವೃಷ್ಟಃ ಸಂಪನ್ನಾಃ ಶಾಲಯಃ = ಇಂದ್ರನು ಮಳೆ ಸುರಿಸಿದರೆ, ಬತ್ತದ ಬೆಳೆಗಳು ಸಿಕ್ಕಿದವು' ಎಂದು ಲೋಕದಲ್ಲಿ ಪ್ರಯೋಗವಿದೆ. ಸಂಪನ್ನಾಃ ಶಾಲಯಃ (ಬತ್ತದ ಬೆಳೆಗಳು ಸಿಕ್ಕಿದವು) ಎಂಬ ಭೂತಕಾಲದ ಪ್ರಯೋಗ ಹೇಗೆ? ಸಂಪತ್ಸ್ಯಂತೇ = ಮುಂದೆ ಸಿಗುವುವು ಎಂದು ಭವಿಷ್ಯತ್ಕಾಲದ ಪ್ರಯೋಗ ಇರಬೇಕಲ್ಲವೆ? ಎಂಬ ಶಂಕೆಗೆ ಈ ಕಾರಿಕೆಯಲ್ಲಿ ಉತ್ತರವಿದೆ. ಕಾರಿಕೆಯಲ್ಲಿ ನಿಷ್ಪದಿ ಎಂದು ಹೇಳಿರುವುದು ಈ ಅರ್ಥದ ಎಲ್ಲ ಧಾತುಗಳಿಗೂ ಉಪಲಕ್ಷಣ. ಆದ್ದರಿಂದ ಉದಾಹರಣೆಯಲ್ಲಿ 'ಸಂಪನ್ನಾಃ' ಎಂದು 'ಸಂಪದಿ'ಯನ್ನು ಪ್ರಯೋಗಿಸಿದೆ. ಧಾತ್ವರ್ಥವು ಫಲಪರ್ಯಂತವಾಗಿರಬೇಕು. ಆದ್ದರಿಂದ 'ಸಂಪನ್ನಾಃ' ಎಂದರೆ ಬೆಳೆಗಳು ಕೈಗೆ ಸಿಕ್ಕಿದವೆಂದು ಅರ್ಥವಾಗುತ್ತದೆ. ಆದರೆ ಕ್ರಿಯೆಯಲ್ಲಿ ಅನೇಕ ಹಂತಗಳಿರುತ್ತವೆ. ಮೊದಲು ಗದ್ದೆಯನ್ನು ಹೂಡುವುದು, ಗೊಬ್ಬರ ಹಾಕುವುದು, ಪಾತಿಯನ್ನು ಮಾಡಿ ಬೀಜವನ್ನು ಬಿತ್ತುವುದು – ಮುಂತಾದ ಅನೇಕ ಹಂತಗಳಾದ ಮೇಲೆ ಮಳೆಯಿಂದ ನೀರು ಒದಗಿದರೆ ಫಸಲು ದೊರೆಯುತ್ತದೆ. ಈಗ ನೀರನ್ನು ಹಾಕುವುದು ಮಾತ್ರ ಉಳಿದಿದೆ. ಇದೊಂದು ಆದರೆ ಪೈರು ಸಿಗುವುದು ನಿಶ್ಚಯ. ಇಂತಹ ಪ್ರಯೋಗದಲ್ಲಿ ನಿಷ್ಪತ್ತಿ, ಸಂಪತ್ತಿ,

ಬೆಳೆಸಿಗುವುದು – ಎಂಬಲ್ಲಿ ಧಾತ್ವರ್ಥವು ನೀರು ಸಿಗುವಷ್ಟರವರೆಗೆ ಇರುತ್ತದೆ. ಫಲಪರ್ಯಂತವಾಗಿ ಧಾತ್ವರ್ಥವಿರುವುದಿಲ್ಲ. ನೀರು ಸಿಗುವಷ್ಟರವರೆಗೆ ಕ್ರಿಯೆ ನಡೆದು ಭೂತಕಾಲಕ್ಕೆ ಸೇರಿಹೋಗಿರುವುದರಿಂದ ಭೂತಕಾಲವನ್ನು ಬಳಸುವುದು ಯುಕ್ತವೇ ಆಗಿದೆ. ಲೋಕದಲ್ಲಿಯೂ 'ಮಳೆ ಬಂದರೆ ಮುಂದೆ ಬೆಳೆ ಸಿಗುವುದು' ಎಂದೇಕೆ ಹೇಳುವೆಯೋ? ಸಿಕ್ಕಿತು ಎನ್ನು' ಎಂದು ಭವಿಷ್ಯತ್ತನ್ನು ನಿಷೇಧಿಸುವುದು ಕಂಡು ಬರುತ್ತದೆ – ಎಂದು ಅಭಿಪ್ರಾಯ.

ಹೀಗೆಯೇ ಕನ್ನಡದಲ್ಲಿಯೂ ಛತ್ರ ಸಿಕ್ಕಿದರೆ ಮಗಳಿಗೆ ಮದುವೆಯಾಯಿತೆಂದು ತಿಳಿ, ಹಣ ಕೈಗೆ ಬಂದೊಡನೆ ಮನೆ ಕಟ್ಟಿದ್ದಾಯಿತೆಂದು ಭಾವಿಸಬಹುದು, ಅವನು ಒಪ್ಪಿದರೆ ನಮ್ಮ ಕೆಲಸ ಆಯಿತು – ಇತ್ಯಾದಿ ಪ್ರಯೋಗಗಳು ದೊರೆಯುತ್ತವೆ. ಅಲ್ಲಿಯೂ ಸಹ ಧಾತ್ವರ್ಥಕ್ಕೆ ಸೇರಿದ ಕೆಲವು ಹಂತದ ಕ್ರಿಯೆಗಳು ನಡೆದು ಹೋಗಿ–ದ್ದರೆ ಭೂತಕಾಲವನ್ನು ಪ್ರಯೋಗಿಸಬಹುದು. ಆದರೆ ಪ್ರಧಾನಫಲಪರ್ಯಂತವಾಗಿ ಸಂಪೂರ್ಣ ವ್ಯಾಪಾರವು ನಡೆದಿರುವುದಿಲ್ಲವಾದ್ದರಿಂದ, ಅಪೂರ್ಣ ಕ್ರಿಯೆಯಲ್ಲಿ ಫಲದ ಅಧ್ಯಾರೋಪವನ್ನು ಮಾಡಬೇಕಾಗುತ್ತದೆ. ಇದನ್ನೇ ಮುಂದಿನ ಕಾರಿಕೆಯಲ್ಲಿ ಹೇಳಲಾಗಿದೆ.

**ಫಲಪ್ರಸವರೂಪೇ ತು ನಿಷ್ಪದೌ ಭೂತಕಾಲತಾ ।**
**ಧರ್ಮಾಂತರೇಷು ತದ್ರೂಪಮಧ್ಯಸ್ಯ ಪರಿಕಲ್ಪ್ಯತೇ ॥ ೧೦೭ ॥**

ನಿಷ್ಪದೌ = ನಿಷ್ಪತ್ತಿ ಪದಾರ್ಥವು, ಫಲಪ್ರಸವರೂಪೇ ತು = ಪ್ರಧಾನ ಫಲೋತ್ಪತ್ತಿಪರ್ಯಂತವಾಗಿದ್ದರೆ, ಧರ್ಮಾಂತರೇಷು = ಬೀಜಕ್ಕೆ ಜಲದ ಸಂಯೋಗಾದಿಗಳಿಂದಾಗುವ ಇತರ ಯಾವುದಾದರೂ ಧರ್ಮಗಳಲ್ಲಿ, ತದ್ರೂಪಂ = ಪ್ರಧಾನ ಫಲವನ್ನು, ಅಧ್ಯಸ್ಯ = ಅಧ್ಯಾರೋಪ ಮಾಡಿ, ಪರಿಕಲ್ಪ್ಯತೇ = ಭೂತತ್ವವು ಕಲ್ಪಿಸಲ್ಪಡುವುದು.

**ವಿವರಣೆ** : ಹಿಂದಿನ ಕಾರಿಕೆಯಲ್ಲಿ ಧಾತ್ವರ್ಥವನ್ನೇ ಸಂಕೋಚಗೊಳಿಸಿ ಭೂತಕಾಲವನ್ನು ಉಪಪಾದಿಸಲಾಗಿದೆ. ಈಗ ಧಾತ್ವರ್ಥವನ್ನು ಸಂಕೋಚಗೊಳಿಸ–ದಿದ್ದರೂ ಪ್ರಧಾನ ಫಲವನ್ನು ನಡೆದುಹೋದ ಕ್ರಿಯೆಗಳ ಹಂತದಲ್ಲೊಂದರಲ್ಲಿ ಆರೋಪಿಸಿ ಭೂತಕಾಲವನ್ನು ಹೇಳಲಾಗಿದೆ. ಅಥವಾ ಮಧ್ಯದ ಕ್ರಿಯೆಯೊಂದರಿಂದ ಆಗುವ ಒಂದು ಫಲವಿಶೇಷದಲ್ಲಿ ಪ್ರಧಾನ ಫಲವನ್ನು ಆರೋಪಿಸಬಹುದು.

**ಉಪಯುಕ್ತೇ ನಿಮಿತ್ತಾನಾಂ ವ್ಯಾಪಾರೇ ಫಲಸಿದ್ಧಯೇ ।**
**ತತ್ರ ರೂಪಂ ಯದಧ್ಯಸ್ತಂ ತತ್ಕಾಲಂ ತತ್ ಪ್ರತೀಯತೇ ॥ ೧೦೮ ॥**

ಫಲಸಿದ್ಧಿಗೋಸ್ಕರ ಕಾರಣಗಳ ವ್ಯಾಪಾರವು ಉಪಯುಕ್ತವಾದ ಮೇಲೆ ಆ ವ್ಯಾಪಾರವೆಂಬ ಉಪಕಾರದಲ್ಲಿ ಪ್ರಧಾನ ಫಲರೂಪವನ್ನು ಆರೋಪಿಸ–ಲಾಗುತ್ತದೆ. ಉಪಕಾರವು ನಡೆದು ಹೋದದ್ದರಿಂದ ಅದರ ಭೂತಕಾಲವು ಧಾತ್ವರ್ಥದಲ್ಲಿ ಪ್ರತೀತವಾಗುತ್ತದೆ.

**ವಿವರಣೆ:** ಮುಖ್ಯಫಲವು ನಡೆಯುವುದಕ್ಕೆ ಕೆಲವು ಕಾರಣಗಳು ಉಪಕರಿಸಬೇಕಾಗುತ್ತದೆ. ಮಣ್ಣು, ಬೀಜ, ಗೊಬ್ಬರ ಮೊದಲಾದವು ಭತ್ತದ ಫಸಲಿಗೆ ಉಪಕಾರ ಮಾಡುತ್ತವೆ. ಅವುಗಳ ಉಪಕಾರವನ್ನೇ ಮುಖ್ಯಫಲವೆಂದು ಆರೋಪಿಸಿಕೊಂಡಾಗ, ಉಪಕಾರದ ಕಾಲವೇ ಧಾತ್ವರ್ಥದಲ್ಲಿಯೂ ತೋರುತ್ತದೆ. ಆ ಉಪಕಾರವು ಭೂತಕಾಲಕ್ಕೆ ಸೇರಿದುದು.

ಧಾತ್ವರ್ಥಸಂಕೋಚ, ಕಾರಣದಲ್ಲಿ ಫಲತ್ವಾರೋಪ, ಕಾರಣಧರ್ಮದಲ್ಲಿ ಫಲತ್ವಾರೋಪ–ಹೀಗೆ ಮೂರು ವಿಧದಲ್ಲಿ ಪೂರ್ವೋಕ್ತ ಉದಾಹರಣೆಗಳ ಭೂತಕಾಲವನ್ನು ಉಪಪಾದಿಸಬಹುದು.

**ನಿಷ್ಪತ್ತಾವವಧಿಃ ಕಶ್ಚಿತ್ ಕಶ್ಚಿತ್ ಪ್ರತಿವಿವಕ್ಷಿತಃ ।**
**ಹೇತುಜನ್ಮವ್ಯಪೇಕ್ಷಾತಃ ಫಲಜನ್ಮೇತಿ ಚೋಚ್ಯತೇ ॥ ೧೦೯ ॥**

ಫಲನಿಷ್ಪತ್ತಿಗೆ ಪೂರ್ವದಲ್ಲಿರಬೇಕಾದ ಹೇತುವಿನ ಅವಧಿ ಕೆಲವರ ಮತದಲ್ಲೊಂದು, ಅದಕ್ಕೆ ಪ್ರತಿಯಾಗಿ ಕೆಲವರ ಮತದಲ್ಲಿ ಇನ್ನೊಂದು ಹೀಗೆ ಹೇತು ನಡೆದ ಕಾಲಾಪೇಕ್ಷೆಯಿಂದ ಫಲನಿಷ್ಪತ್ತಿಯೂ (ಎರಡು ವಿಧವೆಂದು) ಉಕ್ತವಾಗಿದೆ.

**ವಿವರಣೆ** : ಬಿತ್ತಿದ ಬೀಜಕ್ಕೆ ನೀರು ಸೇರಿದರೆ ಸಾಕು ಫಸಲು ಬಂದಂತೆ ಎಂದು ಭಾವಿಸಿದಾಗ ಫಸಲು ಬರುವುದಕ್ಕೆ ಮೊದಲೇ ಭೂತಕಾಲವನ್ನು ಬಳಸಬಹುದು. ಫಸಲಿಗೆ ಕಾರಣವಾದದ್ದು ಬೀಜಜಲಸಂಯೋಗ ಅಥವಾ ಸಂಯೋಗದಿಂದ ಬೀಜದಲ್ಲಾಗುವ ಮೃದುತ್ವಾದಿ ಫಲವಿಶೇಷ ಎಂದು ಎರಡು ಪಕ್ಷಗಳುಂಟು. ಈ ಎರಡು ಪಕ್ಷಗಳಲ್ಲಿಯೂ ಧಾತ್ವರ್ಥವನ್ನೇ ಸಂಕೋಚಗೊಳಿಸುವ ಪಕ್ಷದಲ್ಲಿಯೂ ಮುಖ್ಯಫಲವಾದ ಫಸಲು ದೊರಕಿರುವುದಿಲ್ಲ. ಆದ್ದರಿಂದ ಅಧ್ಯಾ–ರೋಪವು ತಪ್ಪಿದ್ದಲ್ಲ. ಮುಖ್ಯಫಲವಾದ ಫಸಲು ದೊರಕಿದಾಗ ಭೂತಕಾಲವನ್ನು ಬಳಸುವುದು ಮುಖ್ಯವಾದದ್ದು. ಅಲ್ಲಿ ಆರೋಪವು ಬೇಕಾಗುವುದಿಲ್ಲ.

**ಅಬಹಿಃ ಸಾಧನಾಧೀನಾ ಸಿದ್ಧಿರ್ಯತ್ರ ವಿವಕ್ಷಿತಾ ।**
**ತತ್ ಸಾಧನಾಂತರಾಭಾವಾತ್ ಸಿದ್ಧಮಿತ್ಯುಪದಿಶ್ಯತೇ॥ ೧೧೦ ॥**

ಕಾರ್ಯಸಿದ್ಧಿಗೆ ಬೇಕಾದ ಅಂತರಂಗ ಸಾಧನಗಳೆಲ್ಲವೂ ದೊರಕಿದಾಗ ಒಂದು ಬಾಹ್ಯ ಸಾಧನವಿಲ್ಲದಿದ್ದರೂ ಕಾರ್ಯಸಿದ್ಧಿಯಾಗುವುದೆಂದು ವಿವಕ್ಷಿತವಾಗಬಹುದು. ಆಗ ಸಾಧನಾಂತರವು ದೊರಕದಿದ್ದಾಗಲೂ ಕಾರ್ಯವು ಸಿದ್ಧವಾಯಿತು, ನಡೆಯಿತು ಎಂದು ಪ್ರಯೋಗವು ಬರುತ್ತದೆ.

**ವಿವರಣೆ** : ಶಾಸ್ತ್ರವು ಲೋಕಪ್ರಸಿದ್ಧವಾದ ಶಬ್ದಾರ್ಥ ವ್ಯವಹಾರವನ್ನು ಅನುಮೋದಿಸುತ್ತದೆಯೇ ಹೊರತು, ಲೋಕದಲ್ಲಿಲ್ಲದ ಹೊಸಶಬ್ದವನ್ನಾಗಲಿ, ಹೊಸಪ್ರಯೋಗವನ್ನಾಗಲಿ ಬೋಧಿಸುವುದಿಲ್ಲ. ಪ್ರಸಿದ್ಧವ್ಯವಹಾರಕ್ಕೆ ಉಪಪತ್ತಿಯನ್ನು ಶಾಸ್ತ್ರವು ತೋರಿಸಿಕೊಡುತ್ತದೆ. ಆದ್ದರಿಂದ ಮಳೆಗಾಲ ಕಳೆದಮೇಲೆ ಮುಂದೆ ಬೆಳೆಯು ದೊರೆಯುವ ಸಂದರ್ಭದಲ್ಲಿಯೂ 'ಮಳೆಯು ಬಂದಿದ್ದರೆ, ಈಗ ಬಂದರೆ, ಮುಂದೆ ಬರುವುದಾದರೆ ಬೆಳೆ ಬಂದಹಾಗೆಯೇ, ಬೆಳೆ ಆಗುತ್ತದೆ, ಬೆಳೆ ಮುಂದೆ ಆಗುವುದು, ಎಂದು ಮೂರು ಕಾಲಗಳ ಪ್ರಯೋಗವೂ ವಿವಕ್ಷಾನುಸಾರವಾಗಿ ಬರಬಹುದು.

**ತಸ್ಮಾದವಧಿಭೇದೇನ ಸಿದ್ಧಾ ಮುಖ್ಯೈವ ಭೂತತಾ ।**
**ಅನಾಗತತ್ವಮಸ್ತಿತ್ವಂ ಹೇತುಧರ್ಮವ್ಯಪೇಕ್ಷಣೇ ॥ ೧೧೧ ॥**

ಹೀಗೆ ಹೇತುವಾದ ಅವಧಿಯ ಭೇದದಿಂದ ಸಿದ್ಧವಾಗುವ ಭೂತ-ಕಾಲವು ಮುಖ್ಯವಾದದ್ದೆಂದೇ ತಿಳಿಯಬೇಕು. ಏಕೆಂದರೆ ಹೇತುವಾದ ಸಾಧನದ ವ್ಯಾಪಾರವು ಯಾವ ಕಾಲಧರ್ಮವನ್ನನುಸರಿಸಿದೆಯೋ ಅದರ ಧರ್ಮವನ್ನನುಸರಿಸಿ ಸಾಧ್ಯವಾದ ಭೂತಕಾಲವು ಮುಖ್ಯವೇ ಆಗಿರುತ್ತದೆ.

**ವಿವರಣೆ** : ಇಷ್ಟೆಲ್ಲ ವಿಚಾರಗಳಾದಮೇಲೆ 'ಮಳೆ ಬಂದರೆ ಫಸಲು ಕೈಗೆ ಬಂದಿತು' ಇತ್ಯಾದಿ ಪ್ರಯೋಗಗಳಲ್ಲಿ ಭೂತಕಾಲವು ಆರೋಪಿತವಾದದ್ದೆಂದೂ ಗೌಣವೆಂದೂ ಯಾರಾದರೂ ಭಾವಿಸಬಹುದು. ಭೂತಕಾಲವು ಆರೋಪಿತವೂ ಅಲ್ಲ, ಗೌಣವೂ ಅಲ್ಲ, ಮುಖ್ಯವಾದ ಭೂತಕಾಲವೇ ಇಲ್ಲಿ ಬಂದಿದೆ. ಆರೋಪಿತವಾದದ್ದು ಹೇತುವಿನಲ್ಲಿ ಫಲನಿಷ್ಪತ್ತಿ. ಅದಕ್ಕೆ ತಕ್ಕಂತೆ ಫಲವು ನಿಷ್ಪನ್ನವಿದೆಯೆಂದು ಭೂತಕಾಲವು ವಿಧಿವತ್ತಾಗಿಯೇ ಬಂದಿದೆ. ಭೂತಕಾಲವು ಆರೋಪಿತವಾದದ್ದಲ್ಲ-ಎಂದು ಅಭಿಪ್ರಾಯ. ಭೂತಕಾಲವು ಆರೋಪಿತವಲ್ಲ, ಫಲನಿಷ್ಪತ್ತಿಯು ಆರೋಪಿತವೆಂದು ತಾತ್ಪರ್ಯ.

ಈ ಪ್ರಕರಣದಲ್ಲಿ ವಾರ್ತಿಕಕಾರರು ಇನ್ನೊಂದು ವಾರ್ತಿಕವನ್ನು ಪಠಿಸಿದ್ದಾರೆ –

'ಅಸ್ತ್ಯರ್ಥಾನಾಂ ಭವಂತ್ಯರ್ಥೇ ಸರ್ವಾ ವಿಭಕ್ತಯಃ, ಕರ್ತುರ್ವಿದ್ಯಮಾನತ್ವಾತ್' ॥

ಅಸ್ತ್ಯರ್ಥಕ ಧಾತುಗಳ ಪ್ರಯೋಗವಿದ್ದಾಗ, ವರ್ತಮಾನಕಾಲದ ಲಟ್ ಪ್ರತ್ಯಯದ ಅರ್ಥದಲ್ಲಿ ಎಲ್ಲ ಕಾಲದ ತಿಙ್ ವಿಭಕ್ತಿಗಳನ್ನು ವಿಧಿಸಬೇಕು. ಏಕೆಂದರೆ ಕರ್ತೃವು ವಿದ್ಯಮಾನವಾಗಿರುವುದರಿಂದ–ಎಂದರ್ಥ. ಅಸ್ತ್ಯರ್ಥ = ಅಸ್‌ಧಾತುವಿನ ಅರ್ಥವಿರುವ ಧಾತು. ಅಸ್ತಿ, ಭವತಿ, ವಿದ್ಯತೇ, ವರ್ತತೇ ಮೊದಲಾದವು. ಭವಂತೀ = ಲಟ್ ಪ್ರತ್ಯಯಕ್ಕೆ ಭವಂತೀ ಎಂದು ಪ್ರಾಚೀನರ ಸಂಜ್ಞೆ. ತಿಙ್ ಪ್ರತ್ಯಯಗಳಿಗೂ ವಿಭಕ್ತಿಸಂಜ್ಞೆ ಇದೆ.

ವಾರ್ತಿಕದ ಅಭಿಪ್ರಾಯ : ಅಸ್ತ್ಯರ್ಥಕಧಾತುವನ್ನು ಪ್ರಯೋಗಿಸುವ ಕಾಲದಲ್ಲಿಯೂ ಅದರ ಕರ್ತೃವು ಇರುವ ಪಕ್ಷದಲ್ಲಿ ಸರ್ವಕಾಲದ ವಿಭಕ್ತಿಗಳೂ (ಆಖ್ಯಾತಪ್ರತ್ಯಯಗಳೂ) ಯಥೋಚಿತವಾಗಿ ಬರುತ್ತವೆ. ಉದಾ: ಭವಿಷ್ಯತ್ಕಾಲಕ್ಕೆ – ಈ ದಾರಿಯಲ್ಲಿ ಆ ಹಳ್ಳಿಗೆ ಹೋಗುವಾಗ ದಾರಿಯಲ್ಲೊಂದು ಕೆರೆ ಇರುವುದು. ವರ್ತಮಾನ ಕಾಲಕ್ಕೆ – (ಕೆರೆಯ ಹತ್ತಿರ ಹೋದಾಗ) ಇಲ್ಲೊಂದು ಕೆರೆ ಇದೆ. ಭೂತಕಾಲಕ್ಕೆ – (ಹಳ್ಳಿಯನ್ನು ಸೇರಿದ ಮೇಲೆ) ದಾರಿಯಲ್ಲೊಂದು ಕೆರೆ ಇತ್ತು. ಒಂದೇ ಕೆರೆಯ ವಿಷಯವಾಗಿ ಮೂರು ಕಾಲಗಳು ಬಂದಿವೆ. ಈ ವಾಕ್ಯಗಳನ್ನು ಪ್ರಯೋಗಿಸುವ ಕಾಲದಲ್ಲಿ ಕರ್ತೃವಾದ ಕೆರೆ ಇರುತ್ತದೆ. ಸಂಸ್ಕೃತದಲ್ಲಿ ಭವಿಷ್ಯತಿ, ಅಸ್ತಿ, ಆಸೀತ್, ಎಂಬ ಮೂರು ಕಾಲದ ರೂಪಗಳು ಬರುತ್ತವೆ. ಕನ್ನಡಲ್ಲಿಯೂ ಬರುತ್ತವೆ. ಈ ವಾರ್ತಿಕದ ಪ್ರತ್ಯಾಖ್ಯಾನ – 'ಸಿದ್ಧಂ ತು ಯಥಾಸ್ವಕಾಲಂ ಸಮುಚ್ಚಾರಣಾತ್'. ಇದರ ಅರ್ಥ – ವಿಹಿತವಾದ ತಮ್ಮ ತಮ್ಮ ಭವಿಷ್ಯದಾದಿ ಕಾಲಗಳಲ್ಲಿಯೇ ಈ ಅಖ್ಯಾತ ಪ್ರತ್ಯಯಗಳು ಬಂದಿವೆಯಾದ್ದರಿಂದ ಇಷ್ಟ ಸಿದ್ಧಿಯಾಗುತ್ತದೆ. ಹೊಸದಾಗಿ ವಾರ್ತಿಕದಿಂದ ಇವನ್ನು ವಿಧಿಸಬೇಕಾಗಿಲ್ಲ. ವಾರ್ತಿಕವು ಬೇಡ – ಎಂದು ಅಭಿಪ್ರಾಯ. ಇದರ ಆಶಯ ಹೀಗೆ – ದಾರಿಯಲ್ಲಿ ಹೋಗುವಾಗ ಮುಂದೆ ಕಾಲಾಂತರದಲ್ಲಿ ಕೆರೆ ಉಪಲಬ್ಧವಾಗುವುದರಿಂದ ಸಹಜವಾಗಿ 'ಕೆರೆ ಇರುವುದು', 'ಕೆರೆ ಇದೆ' ವರ್ತಮಾನಕಾಲವೂ ಸಮುಚಿತವೇ. ಹಳ್ಳಿಗೆ ಹೋದಮೇಲೆ ಕೆರೆಯ ಉಪಲಬ್ಧಿಯು ಗತಿಸಿ ಹೋಗಿರುವುದರಿಂದ ಭೂತಕಾಲವೂ ಯುಕ್ತವೇ ಆಗಿದೆ. ಇದೆಲ್ಲವನ್ನೂ ಉಪಪಾದಿಸುವ ಕಾರಿಕೆ ಇದು –

**ಸತಾಮಿಂದ್ರಿಯಸಂಬಂಧಾತ್ ಸೈವ ಸತ್ತಾ ವಿಶಿಷ್ಯತೇ ।**
**ಭೇದೇನ ವ್ಯವಹಾರೋ ಹಿ ವಸ್ತ್ವಂತರನಿಬಂಧನಃ ॥ ೧೧೨ ॥**

ವಿದ್ಯಮಾನವಾದ ಘಟಾದಿ ಪದಾರ್ಥಗಳಿಗೆ ಯಾವ ಸತ್ತೆಯುಂಟೋ ಅದೇ ಇಂದ್ರಿಯಗಳ ಸಂಬಂಧದಿಂದ, ವಿಶಿಷ್ಯತೇ = ಭೂತಾದಿ

ಕಾಲಭೇದವನ್ನು ಹೊಂದಿ ಭಿನ್ನವಾಗಿ ಬಿಡುತ್ತದೆ. ಏಕೆಂದರೆ ಎಲ್ಲ ಬಗೆಯ ಭೇದವ್ಯವಹಾರವೂ ವಸ್ತ್ವಂತರದ ಉಪಾಧಿಗೆ ಒಳಗಾಗಿಯೇ ಇರುತ್ತದೆ.

**ವಿವರಣೆ** : ಪದಾರ್ಥಗಳ ಸಮಸ್ತ ವ್ಯವಹಾರವು ಇನ್ನೊಂದು ವಸ್ತುವಿನ ಉಪಾಧಿಗೆ ಒಳಪಟ್ಟಿರುತ್ತದೆ. ಪ್ರತಿಯೊಂದು ವಸ್ತು ಮೃದು, ಕಠಿಣ, ದೊಡ್ಡದು ಚಿಕ್ಕದು, ಇತ್ಯಾದಿ ವ್ಯವಹಾರವು ಇನ್ನೊಂದರೊಡನೆ ಸಾಪೇಕ್ಷವಾಗಿಯೇ ಇರುತ್ತದೆ. ಅಂತೆಯೇ ಸತ್ತಾಧರ್ಮವು ನಿಶ್ಚಲವಾಗಿದ್ದರೂ ಕಣ್ಣಿಂದ ನೋಡುವುದು, ಕಿವಿಯಿಂದ ಕೇಳುವುದು–ಮುಂತಾದವು ನಡೆದು ಇಂದ್ರಿಯ ಸಂಬಂಧ ಉಂಟಾದಾಗ, ಆ ಇಂದ್ರಿಯ ಸಂಬಂಧವೇ ಉಪಾಧಿಯಾಗುತ್ತದೆ. ಆ ಸಂಬಂಧದ ಕಾಲವನ್ನಪೇಕ್ಷಿಸಿ ವಸ್ತುವಿನ ಸತ್ತಾಕಾಲವು ಭಿನ್ನವಾಗುತ್ತದೆ. ಹಿಂದಿನ ಉದಾಹರಣೆಯಲ್ಲಿ ಕೆರೆಯು ತನ್ನ ಪಾಡಿಗೆ ಇರುತ್ತದೆ. ಅದನ್ನು ಕಣ್ಣಿಂದ ಮುಂದೆ ನೋಡುವ ಸಂದರ್ಭ ಒದಗಿದಾಗ, ದಾರಿಯಲ್ಲಿ ಕೆರೆ ಇರುವುದು ಎಂಬ ಪ್ರಯೋಗ ಬರುತ್ತದೆ. ಕೆರೆಯನ್ನು ಪ್ರತ್ಯಕ್ಷ ನೋಡುತ್ತಿರುವಾಗ ವರ್ತಮಾನ ಕಾಲವಾದ್ದರಿಂದ 'ಕೆರೆ ಇದೆ' ಎಂದೂ ನೋಡಿಹೋದಮೇಲೆ ಕೆರೆ ಇತ್ತು ಎಂಬ ಪ್ರಯೋಗವೂ ಯುಕ್ತವೇ ಆಗುತ್ತದೆ. ಆದ್ದರಿಂದ ವಾರ್ತಿಕದಲ್ಲಿ ಮೊದಲು ಹೇಳಿದಂತೆ ಈ ಎಲ್ಲ ಕಾಲಗಳೂ ಸಹಜವಾಗಿ ಬರುವುದರಿಂದ ಹೊಸದಾಗಿ ವಿಧಿಸಬೇಕಾದ್ದೇನೂ ಇಲ್ಲ.

**ಅಸ್ತಿತ್ವಂ ವಸ್ತುಮಾತ್ರಸ್ಯ ಬುದ್ಧ್ಯಾ ತು ಪರಿಗೃಹ್ಯತೇ ।**
**ಯಃ ಸಮಾಸಾದನಾದ್ ಭೇದಃ ಸ ತತ್ರ ನ ವಿವಕ್ಷಿತಃ ॥೧೧೩॥**

ಕೇವಲ ವಸ್ತುವಿನ ಸತ್ತೆಯು ಮಾತ್ರ ಬುದ್ಧಿಯಿಂದ ಗೃಹೀತವಾಗುತ್ತದೆ. ಇಂದ್ರಿಯ ಸಂಬಂಧದಿಂದ ಆ ವಸ್ತುವಿನ ಸತ್ತೆಯಲ್ಲಿರುವ ಭೇದವು ಆ ಸ್ಥಳದಲ್ಲಿ ವಿವಕ್ಷಿತವಲ್ಲ.

**ವಿವರಣೆ** : ಚಕ್ಷುರಿಂದ್ರಿಯದಿಂದ ಕೆರೆಯನ್ನು ನೋಡಿದಾಗ ಅದರ ಸತ್ತೆಯೂ ವರ್ತಮಾನವಾಗುವ ಪ್ರಯುಕ್ತ 'ಕೆರೆ ಇದೆ' ಎಂಬ ಪ್ರಯೋಗವು ಬರುತ್ತದೆಯಷ್ಟೆ? ಇಂದ್ರಿಯಸಂಬಂಧವು ಭೂತವೋ ಭವಿಷ್ಯವೋ ಆದರೂ ಸಹ 'ಅಲ್ಲಿ ಒಂದು ಕೆರೆ ಇದೆ' ಎಂದು ವರ್ತಮಾನಕಾಲವು ಬರುವುದು ಹೇಗೆ? ಅಂತಹ ಪ್ರಯೋಗ ಲೋಕದಲ್ಲುಂಟು–ಎಂಬ ಶಂಕೆಗೆ ಇದು ಉತ್ತರ. ಮನಸ್ಸಿನಿಂದ ಬುದ್ಧಿಯ ಸಂಬಂಧವು ವರ್ತಮಾನ ಕಾಲದಲ್ಲಿಯೇ ಆಗುವುದರಿಂದ 'ಅಸ್ತಿ' ಎಂಬ ಪ್ರಯೋಗ ಬರಬಹುದು. ಆಗ ಕೆರೆಯ ಅಸ್ತಿತ್ವ ಮಾತ್ರ ತಿಳಿಯುತ್ತದೆ. ಅದರ ಭೂತತ್ವ ಭವಿಷ್ಯತ್ವಗಳು ಮಾತ್ರ ತೋರುವುದಿಲ್ಲ.

**ಯೋಗಾದ್ವಾ ಸ್ತ್ರೀತ್ವಪುಂಸ್ತ್ವಾಭ್ಯಾಂ ನ ಕಿಂಚಿದವತಿಷ್ಠತೇ ।**
**ಸ್ವಸ್ಮಿನ್ನಾತ್ಮನಿ ತತ್ರಾನ್ಯದ್ ಭೂತಂ ಭಾವಿ ಚ ಕಥ್ಯತೇ ॥ ೧೧೪ ॥**

ಅಥವಾ ಕ್ರಮವಾಗಿ ಅಪಚಯೋಪಚಯ ರೂಪಗಳಾದ ಸ್ತ್ರೀತ್ವ–ಪುಂಸ್ತ್ವಗಳ ಯೋಗವಾಗುವುದರಿಂದ ಯಾವುದೇ ಒಂದು ಪದಾರ್ಥವೂ ಸ್ವಸ್ವರೂಪದಲ್ಲಿಯೇ ಒಂದು ಕ್ಷಣವೂ ಇರುವುದಿಲ್ಲ. ಈ ಪರಿಸ್ಥಿತಿಯಿರಲಾಗಿ ಆ ವಸ್ತುವು ಭೂತ, ಭವಿಷ್ಯತ್ ಅಥವಾ ವರ್ತಮಾನವೆಂಬ ತಾತ್ತ್ವಿಕವಾದ ಭೇದವೇ ಉಕ್ತವಾಗುತ್ತದೆ.

**ವಿವರಣೆ** : 'ನ ಹೀಹ ಕಶ್ಚಿದಪಿ ಸ್ವಸ್ಮಿನ್ ಆತ್ಮನಿ ಮುಹೂರ್ತಮಪ್ಯವತಿಷ್ಠತೇ, ವರ್ತತೇ ಚ ಯಾವದನೇನ ವರ್ಧಿತವ್ಯಮ್, ಅಪಾಯೇನ ವಾ ಯುಜ್ಯತೇ' ಎಂದು ಮಹಾಭಾಷ್ಯಕಾರರು ಹೇಳಿದ್ದಾರೆ (೪–೧–೬) ಯಾವುದೇ ಒಂದು ವಸ್ತುವೂ ವೃದ್ಧಿಕ್ಷಯಗಳಿಲ್ಲದೆ ಒಂದು ಕ್ಷಣವೂ ಸ್ವಸ್ವರೂಪದಲ್ಲಿರುವುದಿಲ್ಲ. ಅತಿ–ಸೂಕ್ಷ್ಮವಾಗಿ ವರ್ಧಿಸುತ್ತದೆ ಅಥವಾ ಕ್ಷಯಿಸುತ್ತದೆ. ಕ್ಷೀಣವಾಗುವುದು ಅಪಚಯ. ವರ್ಧಿಸುವುದು ಉಪಚಯ. ಸತ್ತ್ವರಜಸ್ತಮೋಗುಣಗಳ ಉಪಚಯಾಪಚಯ–ಗಳಿಂದ ಸಂಸ್ಕೃತಶಬ್ದಗಳಿಗೆ ಸ್ತ್ರೀತ್ವಾದಿ ಕಾರ್ಯಗಳು ಬರುತ್ತವೆ. ಈ ಗುಣಗಳ ಉಪಚಯವಾದರೆ ಪುಲ್ಲಿಂಗ, ಅಪಚಯವಾದರೆ ಸ್ತ್ರೀಲಿಂಗ, ಸಮಸ್ಥಿತಿಯಲ್ಲಿ ನಪುಂಸಕ ಎಂದು ವ್ಯವಸ್ಥೆ ಇದೆ. ಆದ್ದರಿಂದ ಸ್ತ್ರೀತ್ವಪುಂಸ್ತ್ವಗಳಿಂದ ಎಂದರೆ ಅಪಚಯೋಪಚಯಗಳಿಂದ ಎಂದರ್ಥ. ಏವಂಚ ಪ್ರತಿಯೊಂದು ಪದಾರ್ಥವೂ ಪ್ರತಿಕ್ಷಣದಲ್ಲಿ ಬೇರೆಬೇರೆ ಅವಸ್ಥೆಗಳನ್ನು ಪಡೆಯುತ್ತಿರುವುದರಿಂದ ವರ್ತಮಾನ ಭೂತಭವಿಷ್ಯತ್ತುಗಳೆಂಬ ಕಾಲತ್ರಯಯೋಗವು ಬಂದು ವಸ್ತುಭೇದವನ್ನುಂಟು–ಮಾಡುತ್ತದೆ. ಆದ್ದರಿಂದ ಇಂದ್ರಿಯ ಸಂಬಂಧವೆಂಬ ಉಪಾಧಿಯನ್ನೂ ಆಶ್ರಯಿಸಬೇಕಾಗಿಲ್ಲ. ಹಿಂದೆ ಹೇಳಿದಂತೆ ಅಸ್ತ್ಯರ್ಥಕ ಧಾತುಗಳಿಗೆ ವಿವಕ್ಷಾನುಸಾರ–ವಾಗಿ ಕಾಲತ್ರಯವನ್ನೂ ಹೇಳಬಹುದು.

**ಇಲ್ಲಿಗೆ ಮಹಾವೈಯಾಕರಣ ಶ್ರೀಭರ್ತೃಹರಿ ವಿರಚಿತವಾದ**
**ವಾಕ್ಯಪದೀಯ ಗ್ರಂಥದಲ್ಲಿ ಕಾಲಸಮುದ್ದೇಶವು ಸಮಾಪ್ತವಾಯಿತು.**

**– ಶ್ರೀರಸ್ತು –**

# ೩. ಕ್ರಿಯಾಸಮುದ್ದೇಶ

ಹಿಂದಿನ ಸಾಧನಸಮುದ್ದೇಶದಲ್ಲಿ ಸಾಧನಗಳ ಸ್ವರೂಪವನ್ನು ವಿಚಾರಮಾಡ-ಲಾಗಿದೆ. ಸಾಧನವೆಂದರೆ ಕಾರಕ. ಕ್ರಿಯೆಯನ್ನು ನೆರವೇರಿಸತಕ್ಕದ್ದು ಕಾರಕವೆನಿಸು-ತ್ತದೆ. 'ಕ್ರಿಯಾನಿರ್ವರ್ತಕತ್ವಂ ಕಾರಕತ್ವಮ್' ಸಾಧನದಿಂದ ಸಾಧ್ಯವಾದದ್ದು ಕ್ರಿಯೆ ಎಂದಾಯಿತು. ಕ್ರಿಯೆಯ ಶಾಸ್ತ್ರೀಯ ಸ್ವರೂಪವೇನು – ಇತ್ಯಾದಿ ವಿಚಾರವೀಗ ಪ್ರಾರಂಭವಾಗುತ್ತದೆ.

**ಯಾವತ್ ಸಿದ್ಧಮಸಿದ್ಧಂ ವಾ ಸಾಧ್ಯತ್ವೇನಾಭಿಧೀಯತೇ ।**
**ಆಶ್ರಿತಕ್ರಮರೂಪತ್ವಾತ್ ಸಾ ಕ್ರಿಯೇತ್ಯಭಿಧೀಯತೇ ॥ ೧ ॥**

ಯಾವುದು ಪೂರ್ಣವಾಗಿ ನಿಷ್ಪನ್ನವಾಗಲಿ ಅಥವಾ ಅನಿಷ್ಪನ್ನವಾಗಲಿ ಸಾಧ್ಯಸ್ವರೂಪವುಳ್ಳದ್ದಾಗಿ ಧಾತುವಿನಿಂದ ಅಭಿಹಿತವಾಗುವುದೋ, ಅದು ಕ್ರಮವನ್ನಾಶ್ರಯಿಸಿ ನಿಷ್ಪನ್ನವಾಗುವುದರಿಂದ ಕ್ರಿಯೆಯೆಂದು ಹೇಳಲ್ಪಡುವುದು. ಸಿದ್ಧ = ನಿಷ್ಪನ್ನವಾದದ್ದು, ಭೂತಕಾಲಕ್ಕೆ ಸೇರಿದ್ದು. ಅಸಿದ್ಧ = ಭವಿಷ್ಯತ್ ಮತ್ತು ವರ್ತಮಾನ. ವರ್ತಮಾನ ಕ್ರಿಯೆಯು ಪೂರ್ಣವಾಗಿ ನಡೆದಿರುವು-ದಿಲ್ಲ. ಅಡುಗೆ ಮಾಡುತ್ತಾನೆ ಎಂದರೆ ಅಡುಗೆ ಕ್ರಿಯೆಯು ಪೂರ್ಣವಾಗಿಲ್ಲ-ವೆಂದರ್ಥ. ಶಾಲೆಗೆ ಹೋಗುತ್ತಿದ್ದಾನೆ ಎಂದರೆ ಹೋಗುವ ಕ್ರಿಯೆ ಪೂರ್ಣವಾಗಿ ನಡೆದಿಲ್ಲವೆಂದರ್ಥ. ಆದ್ದರಿಂದ ವರ್ತಮಾನವೂ ಅಸಿದ್ಧವೇ. ಪ್ರಾರಬ್ಧಾಪರಿಸಮಾಪ್ತತ್ವಂ ವರ್ತಮಾನತ್ವಮ್ = ಕ್ರಿಯೆಯು ಆರಂಭವಾಗಿರ-ಬೇಕು, ಮುಗಿದಿರಬಾರದು. ಅದು ವರ್ತಮಾನಕಾಲದ ಕ್ರಿಯೆ.

**ವಿವರಣೆ :** ಪ್ರತಿಯೊಂದು ಕ್ರಿಯೆಯೂ ಕ್ರಮಪೂರ್ವಕವಾಗಿ ನಡೆದಿರುತ್ತದೆ. ಏಕೆಂದರೆ ಪ್ರತಿಯೊಂದು ಕ್ರಿಯೆಯೂ ಚಿಕ್ಕಕ್ರಿಯೆಗಳ ಸಮುದಾಯವಾಗಿಯೇ ಪ್ರಸಿದ್ಧವಾದದ್ದು. ಆರೋಹಣ, ಅವರೋಹಣ, ಹೋಗುವುದು, ಬರುವುದು, ಬರೆಯುವುದು – ಇತ್ಯಾದಿ ಸಮಸ್ತ ಕ್ರಿಯೆಗಳಲ್ಲೂ ಈ ಸಮುದಾಯವನ್ನು ಕಾಣಬಹುದು. ಒಂದು ಮಹಡಿಗೆ ಹತ್ತು ಮೆಟ್ಟಿಲುಗಳಿದ್ದರೆ, ಮಹಡಿಯ

ಆರೋಹಣವು ಹತ್ತು ಮೆಟ್ಟಿಲುಗಳ ಮೇಲೆ ಹೆಜ್ಜೆ ಇಡುವ ಹತ್ತು ಚಿಕ್ಕ ಕ್ರಿಯೆಗಳ ಸಮುದಾಯವಾಗಿರುತ್ತದೆ. ಒಂದು ಮೆಟ್ಟಿಲಿನ ಮೇಲೆ ಹೆಜ್ಜೆ ಇಡುವ ಚಿಕ್ಕ ಕ್ರಿಯೆಯೂ ಸಹ ಕಾಲೆತ್ತುವುದೇ ಮೊದಲಾದ ಇನ್ನೂ ಚಿಕ್ಕಕ್ರಿಯೆಗಳ ಸಮುದಾಯ. 'ಪತ್ರವನ್ನು ಬರೆಯುತ್ತಾನೆ'. ಇಲ್ಲಿ ಬರೆಯುವ ಕ್ರಿಯೆಯೂ ಕ್ರಿಯಾ ಸಮು–ದಾಯವೇ. ಪತ್ರವನ್ನು ತೆಗೆದು ಮೇಜಿನ ಮೇಲಿರುಸುವುದು, ಲೇಖನಿಯನ್ನು ಕೈಯಲ್ಲಿ ಹಿಡಿಯುವುದು, ಒಂದೊಂದೇ ಅಕ್ಷರವನ್ನು ಬರೆಯುತ್ತ ಹೋಗುವುದು – ಇಂತಹ ಚಿಕ್ಕಕ್ರಿಯೆಗಳು ಬರೆಯುವ ಕ್ರಿಯೆಯಲ್ಲಿರುತ್ತವೆ. ಹೀಗೆ ಇತರ ಕ್ರಿಯೆಗಳ–ಲ್ಲಿಯೂ ಊಹಿಸಿಕೊಳ್ಳಬೇಕು. ಈ ಪ್ರಕಾರದಲ್ಲಿ ಕ್ರಮವಾಗಿ ಕ್ರಿಯಮಾಣವಾದ್ದರಿಂದ 'ಕ್ರಿಯೆ' ಎಂದು ಈ ವ್ಯಾಪಾರಗಳಿಗೆ ಹೆಸರು ಬಂದಿದೆ.

ಆದ್ದರಿಂದಲೇ ಕ್ರಿಯೆಯು ಸಾಧ್ಯಸ್ವರೂಪದಲ್ಲಿ ಪ್ರತೀತವಾಗುತ್ತದೆ. ಘಟ, ಪಟಾದಿ ದ್ರವ್ಯಗಳಂತೆ ಅದು ಸಿದ್ಧವಾದ ಪದಾರ್ಥವಾಗಿ ತೋರುವುದಿಲ್ಲ. 'ಪಚತಿ' ಎಂಬ ವರ್ತಮಾನ ಕಾಲದ ಕ್ರಿಯೆಯಲ್ಲಿಯೂ, 'ಪಕ್ಷ್ಯತಿ' ಎಂಬ ಭವಿಷ್ಯತ್ಕಾಲದ ಕ್ರಿಯೆಯಲ್ಲಿಯೂ ಈ ಪಾಕಕ್ರಿಯೆಯು ಹಲವು ಚಿಕ್ಕಕ್ರಿಯೆಗಳ ಸಮುದಾಯ ರೂಪವಾದ್ದರಿಂದ ಕ್ರಮವಾಗಿ ಸಾಧ್ಯವಾಗುವ ರೀತಿಯಲ್ಲಿ ಪ್ರತೀತವಾಗುವುದು. 'ಅಪಚತ್' ಎಂಬ ಭೂತಕಾಲದ ಕ್ರಿಯೆಯೂ ಸಹ ಕ್ರಮಪೂರ್ವಕವಾಗಿ ಸಾಧ್ಯವಾಯಿತೆಂದೇ ಪ್ರತೀತವಾಗುತ್ತದೆ. ಸೂಕ್ಷ್ಮಗ್ರಾಹಿಗಳಿಗೆ ಇದು ವಾಸ್ತವವೆಂಬುದು ಹೊಳೆಯುತ್ತದೆ. ಆದ್ದರಿಂದ 'ಸಾಧ್ಯತ್ವೇನ ಪ್ರತೀಯಮಾನತ್ವಂ ಕ್ರಿಯಾತ್ವಂ' ಎಂಬ ಕ್ರಿಯಾಲಕ್ಷಣವು ಹೊರಟಿದೆ.

ಶಾಸ್ತ್ರಕಾರರು ಈ ಸಾಧ್ಯತ್ವವನ್ನೇ ತಕರಾರಿಗೆ ಅವಕಾಶವಾಗದಂತೆ ಇನ್ನೊಂದು ರೀತಿಯಲ್ಲಿ ಪರಿಷ್ಕರಿಸಿದ್ದಾರೆ. 'ಕ್ರಿಯಾಂತರಾಕಾಂಕ್ಷಾನುತ್ಥಾಪಕತಾವಚ್ಛೇದಕತ್ವಂ ಸಾಧ್ಯತ್ವಮ್' ಮತ್ತೊಂದು ಕ್ರಿಯೆಯ ಆಕಾಂಕ್ಷೆಯನ್ನುಂಟು ಮಾಡದಂತೆ ಪ್ರತೀತ–ವಾಗುವುದು ಸಾಧ್ಯತ್ವ. ರಾಮನು, ರಾಮನನ್ನು, ರಾಮನಿಂದ – ಈ ರೀತಿ ಯಾವ ನಾಮಪದವನ್ನು ಹೇಳಿದರೂ ಅದು ಇನ್ನೊಂದು ಕ್ರಿಯೆಯನ್ನು ಆಕಾಂಕ್ಷಿಸುತ್ತದೆ. 'ಹೋದನು' ಎಂದು ಗಮನಕ್ರಿಯೆಯನ್ನು ಹೇಳಿದಾಗ ಯಾವ ಕ್ರಿಯೆಯ ಆಕಾಂಕ್ಷೆಯೂ ಹುಟ್ಟುವುದಿಲ್ಲ. 'ರಾಮನು' ಇತ್ಯಾದಿ ಕಾರಕದ ಆಕಾಂಕ್ಷೆ ಹುಟ್ಟ–ಬಹುದು, ಕ್ರಿಯೆಯ ಆಕಾಂಕ್ಷೆ ಬರುವುದಿಲ್ಲ. ಇದೇ ತಿಙಂತ ಕ್ರಿಯೆಯಲ್ಲಿರುವ ವಿಶೇಷ. ಈ ಕ್ರಿಯೆಯನ್ನು 'ಅಸತ್ತ್ವಭೂತಕ್ರಿಯೆ' ಎನ್ನುತ್ತಾರೆ.

ತಿಙಂತ ಕ್ರಿಯೆಯೆಂದು ವಿಶೇಷವಾಗಿ ಹೇಳಿದುದೇಕೆಂದರೆ, ಕೃದಂತಕ್ರಿಯೆಯು ಕ್ರಿಯಾಂತರವನ್ನು ಅಪೇಕ್ಷಿಸುತ್ತದೆ. ಅದು ಕಾರಕವಾಗಿ ವಿಭಕ್ತಿಯನ್ನು ಪಡೆಯುತ್ತದೆ.

ಉದಾ: ಪಾಕ, ಆರೋಹಣ, ಪಾಕವನ್ನು, ಪಾಕದಿಂದ – ಇಲ್ಲಿ ಕ್ರಿಯೆಯ ಆಕಾಂಕ್ಷೆ ಇದೆ. ಕ್ರಿಯಾಪದವಿಲ್ಲದೆ ವಾಕ್ಯವು ಮುಗಿಯುವುದಿಲ್ಲ. ಹಾಗೆಯೇ ಆರೋಹಣ–ದಿಂದ, ಆರೋಹಣದಲ್ಲಿ – ಮುಂತಾದ ಎಲ್ಲ ಕೃದಂತಗಳ ಪರಿಸ್ಥಿತಿ ಇದೆ. ತುಮುನ್ ಮುಂತಾದ ಕೃತ್ ಪ್ರತ್ಯಯಗಳು ಬಂದರೂ ಹೀಗೆಯೇ ಕ್ರಿಯಾಪೇಕ್ಷೆ ಇರುತ್ತದೆ. ಪಕ್ತುಂ, ಗತ್ವಾ, ಪರೀಕ್ಷ್ಯ, ಜೇತುಂ – ಇತ್ಯಾದಿ ಸ್ಥಳಗಳಲ್ಲಿ ಆಕಾಂಕ್ಷಾ–ಪೂರ್ತಿಗೆ ಇನ್ನೊಂದು ಕ್ರಿಯಾಪದ ಆವಶ್ಯಕ. ಆದ್ದರಿಂದ 'ಕೃದಭಿಹಿತೋ ಭಾವಃ ದ್ರವ್ಯವತ್ ಪ್ರಕಾಶತೇ' ಎಂದು ವೈಯಾಕರಣಸಿದ್ಧಾಂತ. ಕೃದಂತದಿಂದ ಉಕ್ತವಾದ ಕ್ರಿಯೆಯು ಘಟ, ಪಟಾದಿ ದ್ರವ್ಯದಂತೆ ವರ್ತಿಸುತ್ತದೆ ಎಂದರ್ಥ. ಕೃದಭಿಹಿತ–ಕ್ರಿಯೆಯು ಸತ್ತ್ವ ಭೂತಕ್ರಿಯೆ. ಸತ್ತ್ವ = ದ್ರವ್ಯ. ದ್ರವ್ಯದಂತೆ ಕಾರಕಧರ್ಮವನ್ನು ಪಡೆಯುತ್ತವೆ. ಆದರೆ ದ್ರವ್ಯವಲ್ಲ.

ಕ್ರಿಯೆಯು ಪರಿಸ್ಪಂದ ಸ್ವಭಾವವುಳ್ಳದ್ದು. ಚಲನಾತ್ಮಕವಾದದ್ದು. ಕ್ರಿಯಾ–ವಾಚಿಯು ಧಾತುವೆಂದಾದರೆ ಅಸ್ತಿ, ಭವತಿ, ವಿದ್ಯತೇ (ಇದ್ದಾನೆ, ಇದೆ) ಇವುಗಳು ಕ್ರಿಯಾಪದಗಳಾಗುವುದು ಹೇಗೆ? ಅಸ್, ಭೂ, ವಿದ್ – ಇತ್ಯಾದಿಗಳಿಗೆ ಧಾತುಸಂಜ್ಞೆ ಇಲ್ಲದೆ ಹೋಗುತ್ತದೆ. ಇವುಗಳ ಅರ್ಥದಲ್ಲಿ ಪರಿಸ್ಪಂದನವೂ ಇಲ್ಲ. ಗಚ್ಛತಿ ಮೊದಲಾದ ಸ್ಥಳದಲ್ಲಿರುವಂತೆ ಅನೇಕ ವ್ಯಾಪಾರಗಳ ಸಮುದಾಯವೂ ಇಲ್ಲ. 'ಆಶ್ರಿತಕ್ರಮರೂಪತ್ವ' ಇದರಲ್ಲಿಲ್ಲ ಎಂಬ ಶಂಕೆ ಹುಟ್ಟುತ್ತದೆ. ಇದಕ್ಕೆ ಸಮಾಧಾನವೇನು?

ಕ್ರಿಯೆಯು ಪರಿಸ್ಪಂದ (ಚಲನ) ರೂಪವೆಂದು ಲೋಕಪ್ರಸಿದ್ಧಿಯೇ ಆದರೂ ವ್ಯಾಕರಣಶಾಸ್ತ್ರವು ಕ್ರಿಯೆಯ ಸ್ವರೂಪವನ್ನು ಬೇರೆಯಾಗಿ ಹೇಳುತ್ತದೆ. ಮಹಾ–ಭಾಷ್ಯಕಾರರು 'ಕಾರಕಾಣಾಂ ಪ್ರವೃತ್ತಿವಿಶೇಷಃ ಕ್ರಿಯಾ' ಎಂದು ಹೇಳಿದ್ದಾರೆ. ಈ ಪ್ರವೃತ್ತಿ ವಿಶೇಷವೆಂಬ ಕ್ರಿಯೆಯು ಸರ್ವಧಾತ್ವರ್ಥಗಳಲ್ಲಿಯೂ ಉಂಟು. ಹೇಗೆಂದರೆ ಪರ್ವತಃ ಅಸ್ತಿ (ಪರ್ವತವು ಇದೆ) ಇಲ್ಲಿ ಅಸ್ ಧಾತುವಿಗೆ ಆತ್ಮೋಪಗ್ರಹಣವೆಂಬ ಪ್ರವೃತ್ತಿವಿಶೇಷವು ಅರ್ಥ. ಆತ್ಮೋಪಗ್ರಹಣವೆಂದರೆ ಆತ್ಮಧಾರಣೆ–ದೇಹಧಾರಣೆ. ಪರ್ವತದ ಆಕಾರವಿಶೇಷವೇ ಅದರ ದೇಹ. ಆ ದೇಹವು ಒಡೆದು ಚೂರಾಗದಂತೆ ಅದು ತನ್ನ ಸ್ವರೂಪವನ್ನು ಧರಿಸಿಕೊಂಡಿದೆ ಎಂದು ತಾತ್ಪರ್ಯ. ಹೀಗೆಯೇ ಭವತಿ, ವಿದ್ಯತೇ – ಮುಂತಾದ ಧಾತುಗಳಲ್ಲಿಯೂ ಪ್ರವೃತ್ತಿವಿಶೇಷವೇ ಅರ್ಥ. ದೇವದತ್ತಃ ಭವತಿ, ವಿದ್ಯತೇ – ಎಂದಾಗ ದೇಹವನ್ನು ಧರಿಸಿಕೊಂಡಿದ್ದಾನೆ ಎಂದರ್ಥ. ದಶರಥೋ ಬಭೂವ = ದಶರಥನು ತನ್ನ ಶರೀರವನ್ನು ಧರಿಸಿಕೊಂಡಿದ್ದನು ಎಂದರ್ಥ. ದೇವದತ್ತಃ ಮ್ರಿಯತೇ ಎಂದಾಗ ಆತ್ಮಪರಿತ್ಯಾಗವೆಂಬ ಪ್ರವೃತ್ತಿವಿಶೇಷವು

'ಮೃ' ಧಾತುವಿನ ಅರ್ಥ. ಆತ್ಮ ಎಂದರೆ ಇಲ್ಲಿ ದೇಹ. ಹೀಗೆ ಪ್ರವೃತ್ತಿಗಳು ಭಿನ್ನರೂಪವಾಗಿರುವುದರಿಂದ 'ಪ್ರವೃತ್ತಿವಿಶೇಷ' ಎಂದು ಭವಿಷ್ಯದಲ್ಲಿ ಹೇಳಲಾಗಿದೆ. ಹೋಗುತ್ತಿರುವ ಹುಡುಗನು ನಿಂತುಕೊಂಡಾಗ 'ಬಾಲಃ ತಿಷ್ಠತಿ' ಎಂದು ಹೇಳುತ್ತೇವೆ. ಇಲ್ಲಿ ಗಮನ ನಿರೋಧವು ಪ್ರವೃತ್ತಿವಿಶೇಷ. ಈ ಕಂಬವು ಏನು ಮಾಡುತ್ತದೆ? ಎಂಬ ಪ್ರಶ್ನೆಗೆ ಕಂಭವು ತೊಲೆಯ ಭಾರವನ್ನು ಹೊರುತ್ತದೆ ಎಂದು ಉತ್ತರ ಬರುತ್ತದೆ. ಕಂಭದಲ್ಲಿ ಯಾವ ಪರಿಸ್ಪಂದವೂ ಇರುವುದಿಲ್ಲ. ಕಂಭವು ತೊಲೆಯ ಪತನವನ್ನು ನಿರೋಧಿಸುತ್ತದೆ. ಪತನ ನಿರೋಧವೆಂಬ ಪ್ರವೃತ್ತಿವಿಶೇಷವು ಇಲ್ಲಿ ಕ್ರಿಯೆ ಎನ್ನಬೇಕಾಗುವುದು. ಆದ್ದರಿಂದ ಕ್ರಿಯೆಯು ಪರಿಸ್ಪಂದ ರೂಪವೆಂಬ ನಿಯಮವೇನೂ ವ್ಯಾಕರಣಶಾಸ್ತ್ರದಲ್ಲಿಲ್ಲ.

ಅವನು ಏನು ಮಾಡುತ್ತಾನೆ ? ಎಂಬ ಪ್ರಶ್ನೆಗೆ 'ಅಸ್ತಿ' ಎಂದು ಉತ್ತರ ಬರಬಹುದು. 'ಅವನು ಇದ್ದಾನೆ, ವಿಶೇಷವಾದ ಪಾಕಾದಿ ಕ್ರಿಯೆಯನ್ನೇನೂ ಮಾಡುವುದಿಲ್ಲ' ಎಂದು ಹೇಳಬಹುದು. ಅವನಲ್ಲಿ ಕ್ರಿಯಾವಿಶೇಷವಿಲ್ಲ, ಕ್ರಿಯಾಸಾಮಾನ್ಯವಿದೆ ಎಂದಾಯಿತು. ಆದ್ದರಿಂದ ಅಸ್‌ಧಾತ್ವರ್ಥವಾದ 'ಸತ್ತಾ' (ಇರುವಿಕೆ) ಎನ್ನುವುದೂ ಒಂದು ಕ್ರಿಯೆಯೆಂದು ಇದರಿಂದ ಗೊತ್ತಾಗುತ್ತದೆ. ಸತ್ತೆಯು ಘಟಾದಿಗಳಂತೆ ಸಿದ್ಧಸ್ವರೂಪವಾಗಿದ್ದರೂ ತಿಙ್ ಪ್ರತ್ಯಯವು ಸೇರಿದಾಗ ಸಾಧ್ಯಸ್ವರೂಪದಲ್ಲಿಯೇ ಪ್ರತೀತವಾಗುತ್ತದೆ. ಪರ್ವತಃ ಅಸ್ತಿ – ಎಂಬಲ್ಲಿ ಆತ್ಮ–ಧಾರಣವು ಕ್ರಮವಾಗಿ ನಡೆಯುತ್ತಲೇ ಇದೆಯೆಂದು ಪ್ರವೃತ್ತಿವಿಶೇಷವು ತೋರುತ್ತದೆ. ಕಂಭವು ತೊಲೆಯನ್ನು ಹೊರುತ್ತದೆಯೆಂಬಲ್ಲಿಯೂ ಪತನನಿರೋಧವು ಕ್ರಮವಾಗಿ ಸಾಗುತ್ತಿದೆ ಎಂದು ಪ್ರತೀತವಾಗುತ್ತದೆ. 'ಚೈತ್ರೇಣ ಗೃಹೇ ಸ್ಥೀಯತೇ' ಎಂಬಲ್ಲಿ ಕರ್ತೃಕಾರಕ ಮತ್ತು ಅಧಿಕರಣಕಾರಕಗಳ ಯೋಗವೂ ಇದೆ. ಅತಿಶಯಾರ್ಥದಲ್ಲಿ 'ಅಸ್ತಿತರಾಂ' ಎಂದೂ ತರಪ್ ಪ್ರತ್ಯಯಬರಬಹುದು. ಭೂತಭವಿಷ್ಯತ್ ವರ್ತಮಾನ ಎಂಬ ಕಾಲತ್ರಯಯೋಗವೂ ಇದೆ. ಹೀಗೆ ಸರ್ವವಿಧದಲ್ಲಿಯೂ ಸತ್ತೆಯು ಕ್ರಿಯಾಸಾಮಾನ್ಯವೆನಿಸಲು ಅಡ್ಡಿ ಇಲ್ಲ.

**ಕಾರ್ಯಕಾರಣಭಾವೇನ ಧ್ವನತೀತ್ಯಾಶ್ರಿತಕ್ರಮಃ ।**
**ಧ್ವನಿಃ ಕ್ರಮನಿವೃತ್ತೌ ತು ಧ್ವನಿರಿತ್ಯೇವ ಕಥ್ಯತೇ ॥ ೨ ॥**

ಕಾರ್ಯಕಾರಣಭಾವ ಸಂಬಂಧದಿಂದ ಹುಟ್ಟುವ ಧ್ವನಿಯು ಪೌರ್ವಾ–ಪರ್ಯ ಕ್ರಮವಿಶಿಷ್ಟವಾದ ಕ್ರಿಯಾಸ್ವರೂಪವುಳ್ಳದ್ದಾಗಿ 'ಧ್ವನತಿ' ಎಂಬ ತಿಙಂತ ಶಬ್ದದಿಂದ ಉಕ್ತವಾಗುತ್ತದೆ. ಪೌರ್ವಾಪರ್ಯಕ್ರಮವಿಲ್ಲದೆ ಸಿದ್ಧಸ್ವರೂಪವಾಗಿ

ತೋರುವಾಗ 'ಧ್ವನಿ' ಎಂಬ ಶಬ್ದದಿಂದಲೇ ಉಕ್ತವಾಗುತ್ತದೆ. ಆಗ ಧ್ವನತಿ ಎಂಬ ತಿಙಂತವಿರುವುದಿಲ್ಲ.

**ವಿವರಣೆ :** ಘಂಟಾ ಧ್ವನತಿ – ಘಂಟೆಯು ಧ್ವನಿಸುತ್ತದೆ – ಎಂಬಲ್ಲಿ ಘಂಟೆಯು ಧ್ವನಿಗೆ ಕಾರಣ, ಧ್ವನಿಯು ಕಾರ್ಯ. ಈ ಕಾರ್ಯಕಾರಣಭಾವ ಸಂಬಂಧದಿಂದ ಘಂಟೆಯು ತನ್ನ ಕಾರ್ಯದಲ್ಲಿ ಉದ್ಯುಕ್ತವಾದಾಗ ಘಂಟಾ ಧ್ವನತಿ ಎಂಬ ಪ್ರಯೋಗ ಬರುತ್ತದೆ. ಇಲ್ಲಿ ಘಂಟೆಯು ಧ್ವನಿಯ ಪ್ರಥಮವ್ಯಾಪಾರಕ್ಕೆ ಕಾರಣ. ವೀಚೀತರಂಗನ್ಯಾಯದಿಂದ ಹರಡುತ್ತ ಹೋಗುವಾಗ ಪ್ರಥಮಧ್ವನಿಯು ದ್ವಿತೀಯಕ್ಕೆ, ದ್ವಿತೀಯಧ್ವನಿಯು ತೃತೀಯಕ್ಕೆ – ಈ ಪ್ರಕಾರವಾಗಿ ಕಾರಣ–ಸಂತಾನವಿರುತ್ತದೆ. ಇಲ್ಲಿ ಪೌರ್ವಾಪರ್ಯಕ್ರಮವೂ ಸಾಧ್ಯಸ್ವರೂಪವೂ ವ್ಯಾಪಾರ ಸಮೂಹತೆಯೂ ತೋರುವುದರಿಂದ ಧ್ವನಿಯು ಕ್ರಿಯಾರೂಪವಾಗಿದೆ. ಘಂಟಾಯಾಃ ಧ್ವನಿಃ ಘಂಟೆಯ ಧ್ವನಿ – ಇಲ್ಲಿ ಮಾತ್ರ ಈ ಕ್ರಿಯಾಲಕ್ಷಣವಾವುದೂ ಇರದೆ ಸಿದ್ಧರೂಪವಾಗಿ ದ್ರವ್ಯದಂತೆ ಧ್ವನಿಪದಾರ್ಥವಿರುತ್ತದೆ. ಆದ್ದರಿಂದ ಧ್ವನಿಯನ್ನು ಕೇಳುತ್ತಾನೆ, ಧ್ವನಿಯಿಂದ ಎಚ್ಚರಿಸಿದನು – ಈ ಪ್ರಕಾರವಾಗಿ ಕಾರಕಧರ್ಮವು ಧ್ವನಿಗೆ ಬರುತ್ತದೆ. ಧ್ವನಿಂ ಕರೋತಿ – ಎಂಬಲ್ಲಿ ಮಾತ್ರ ಧ್ವನಿಯು ಸಾಧ್ಯಸ್ವರೂಪವಾಗಿ ತೋರುತ್ತದೆ. ಇದು 'ಕರೋತಿ' ಶಬ್ದದ ಮಹಿಮೆ. ಸಾಧ್ಯಸ್ವರೂಪವು ಒಟ್ಟು ವಾಕ್ಯಾರ್ಥವಾಗುತ್ತದೆ. ಇದು ಪದಾರ್ಥವಲ್ಲ. ವ್ಯಾಕರಣಶಾಸ್ತ್ರವು ಬಿಡಿಯಾದ ಒಂದು ಪದದ ಅರ್ಥವೇನೆಂಬುದನ್ನು ಮಾತ್ರ ತಿಳಿಸುತ್ತದೆ. ಬೇರೆ ಬೇರೆ ವಾಕ್ಯದಲ್ಲಿ ಅದರ ವಾಸ್ತವಾರ್ಥವೇನೆಂಬುದನ್ನು ಅದು ತಿಳಿಸುವುದಿಲ್ಲ. ಪದಾರ್ಥ ಬೇರೆ, ವಾಕ್ಯಾರ್ಥ ಬೇರೆ.

**ಶ್ವೇತತೇ ಶ್ವೇತ ಇತ್ಯೇತಚ್ಛ್ವೇತತ್ವೇನ ಪ್ರಕಾಶತೇ ।**
**ಆಶ್ರಿತಕ್ರಮರೂಪತ್ವಾದಭಿಧಾನಂ ಪ್ರವರ್ತತೇ ॥ ೩ ॥**

'ಶ್ವೇತಃ ಶ್ವೇತತೇ' ಎಂಬ ಪ್ರಯೋಗ ಉಂಟು. ಇಲ್ಲಿ ಶ್ವೇತಗುಣವು ಪೌರ್ವಾಪರ್ಯ ಕ್ರಮವುಳ್ಳದ್ದಾಗಿ, ಬಿಳಿಯ ವಸ್ತು ಬಿಳಿಯ ಗುಣಸಹಿತವಾಗಿ ಶೋಭಿಸುತ್ತದೆ ಎಂದು ಈ ವಾಕ್ಯದ ಅರ್ಥ.

**ವಿವರಣೆ :** ಶ್ವೇತತೇ ಎಂಬುದು ತಿಙಂತಕ್ರಿಯಾಪದ, ಶ್ವೇತಃ = ಬಿಳುಪು ಗುಣವುಳ್ಳ ವಸ್ತು. ಬಿಳಿಯ ಸೀರೆ ಬಿಳುಪು ಬಣ್ಣದಿಂದ ಶೋಭಿಸುತ್ತದೆ ಎಂದಂತೆ ಈ ವಾಕ್ಯದ ಅಭಿಪ್ರಾಯ. ಶ್ವೇತಃ ಎಂಬ ಶಬ್ದದಲ್ಲಿ ಬಿಳಿಯ ಗುಣವು ಸಾಧ್ಯಾ–

ವಸ್ಥೆಯನ್ನು ಹೊಂದಿ ಪೌರ್ವಾಪರ್ಯಕ್ರಮವಿರುವ ಕ್ರಿಯೆಯಾಗಿ ತೋರುತ್ತದೆ. ನಾಮಪದ ಕ್ರಿಯಾಪದಗಳ ಅರ್ಥಗಳಲ್ಲಿ ಈ ರೀತಿಯಾದ ಭೇದವಿದೆ. ಶಬ್ದಶಕ್ತಿಸ್ವಭಾವ ಈ ಬಗೆಯದು ಎಂದು ತಾತ್ಪರ್ಯ.

**ಗುಣಭೂತೈರವಯವೈಃ ಸಮೂಹಃ ಕ್ರಮಜನ್ಮನಾಮ್ ।**
**ಬುದ್ಧ್ಯಾ ಪ್ರಕಲ್ಪಿತಾಭೇದಃ ಕ್ರಿಯೇತಿ ವ್ಯಪದಿಶ್ಯತೇ ॥ ೪ ॥**

ಕ್ರಮವಾಗಿ ಹುಟ್ಟುವ ವ್ಯಾಪಾರಗಳ ಸಮೂಹವು ಸಂಕಲನಾತ್ಮಕವಾದ ಅಭೇದ ಬುದ್ಧಿಯಿಂದ 'ಇದೆಲ್ಲವೂ ಒಂದು' ಎಂದು ಗೃಹೀತವಾಗಿ ಕ್ರಿಯೆ–ಯೆಂಬ ವ್ಯಪದೇಶವನ್ನು (ಹೆಸರನ್ನು) ಪಡೆಯುತ್ತದೆ. ಈ ಸಮೂಹವು ತನ್ನಲ್ಲಿರುವ ವ್ಯಾಪಾರಗಳೆಂಬ ಅಪ್ರಧಾನವಾದ ಅವಯವಗಳಿಂದ ಕೂಡಿರುತ್ತದೆ.

**ವಿವರಣೆ :** ಧಾತ್ವರ್ಥವಾದ ಕ್ರಿಯೆಯು ಅವಯವಭೂತಗಳಾದ ಅನೇಕ–ವ್ಯಾಪಾರಗಳ ಸಮುದಾಯವಾಗಿರುತ್ತದೆ. ಅವಯವವ್ಯಾಪಾರಗಳು ಒಂದಾದ–ಮೇಲೆ ಒಂದರಂತೆ ಕ್ರಮವಾಗಿ ನಡೆಯತಕ್ಕವು. ಒಂದೇ ಫಲದ ಉದ್ದೇಶದಿಂದ ಪ್ರವೃತ್ತವಾದ ಈ ವ್ಯಾಪಾರಗಳ ಸಮೂಹವು ಫಲಜನಕವಾದ್ದರಿಂದ ಯಾವ ಒಂದು ವ್ಯಾಪಾರವೂ ಸ್ವತಂತ್ರವಾಗಿ ಫಲವನ್ನು ನೀಡಲಾರದು. ಆದ್ದರಿಂದ ಅವೆಲ್ಲವೂ ಸಮುದಾಯಕ್ಕೆ ವಿಶೇಷಣದಂತೆ ಅಪ್ರಧಾನವಾಗಿರುತ್ತವೆ. ಈ ವ್ಯಾಪಾರಗಳ ಸಮೂಹವೇ ಫಲಜನಕವಾಗಿ ಕ್ರಿಯೆಯೆನಿಸಿಕೊಳ್ಳುತ್ತದೆ. ಉದಾಹರಣೆಗೆ ಪಚ್ ಧಾತುವನ್ನು ಪರೀಕ್ಷಿಸಬಹುದು. ವಿಕ್ಲಿತ್ತಿಯನ್ನುಂಟುಮಾಡುವ ವ್ಯಾಪಾರವು ಧಾತ್ವರ್ಥ. ವಿಕ್ಲಿತ್ತಿಯೆಂದರೆ ಬೇಯಿಸುವುದರಿಂದಾಗುವ ಮೃದುತ್ವ. ತಂಡುಲಂ ಪಚತಿ = ಅಕ್ಕಿಯನ್ನು ಬೇಯಿಸುತ್ತಾನೆ. ಬೇಯಿಸುವ ಕ್ರಿಯೆ ಯಾವುದು? ಒಲೆಯ ಮೇಲೆ ಪಾತ್ರೆಯನ್ನಿಟ್ಟು ಅದರಲ್ಲಿ ಅಕ್ಕಿಯನ್ನೂ ನೀರನ್ನೂ ಹಾಕಿ ಬೇಯಿಸುವುದು, ಸೌಟಿನಿಂದ ತೊಳಸುವುದು – ಇತ್ಯಾದಿ ಹಲವಾರು ವ್ಯಾಪಾರಗಳನ್ನು ಮಾಡಿ ಪಾತ್ರೆಯನ್ನು ಕೆಳಗಿಳಿಸಿದಾಗ ಬೇಯಿಸಿದ್ದಾಯಿತು ಎನ್ನಬಹುದು. ಇದನ್ನೇ ಶಾಸ್ತ್ರದಲ್ಲಿ 'ಅಧಿಶ್ರಯಣಾದ್ಯಧಃಶ್ರಯಣಪರ್ಯಂತೋ ವ್ಯಾಪಾರಃ' ಎನ್ನುತ್ತಾರೆ. ಇದು ಪಚ್ ಧಾತ್ವರ್ಥ. ಅಧಿಶ್ರಯಣ = ಒಲೆಯಮೇಲೆ ಪಾತ್ರೆಯನ್ನಿಡುವುದು. ಅಧಃಶ್ರಯಣ = ಪಾತ್ರೆಯನ್ನು ಕೆಳಗಿಳಿಸುವುದು. ಈ ಪಾಕಕ್ರಿಯೆ ಯಾವ ಒಂದು ವ್ಯಾಪಾರದಿಂದ ಪೂರ್ಣವಾದದ್ದಲ್ಲ. ಹಲವಾರು ವ್ಯಾಪಾರಗಳು ಇದರಲ್ಲಿ ಸೇರಿವೆ. ಈ ಎಲ್ಲ ವ್ಯಾಪಾರಗಳ ಉದ್ದೇಶ ಫಲ. ಫಲವೇ ಪ್ರಕೃತದಲ್ಲಿ ವಿಕ್ಲಿತ್ತಿ. ಈ ವ್ಯಾಪಾರಗಳ

ಸಮೂಹವನ್ನು ನಾವು ಪಾಕಕ್ರಿಯೆ ಎಂದು ಹೇಳುತ್ತೇವೆ. ಅವಯವ ವ್ಯಾಪಾರಗಳೆಲ್ಲವನ್ನೂ ಸಂಕಲಿಸಿ ಸಮೂಹದಲ್ಲಿ ಏಕತ್ವವನ್ನು ಆರೋಪಿಸಿದ್ದೇವೆ. ಕ್ರಿಯೆಯು ಸಾಧ್ಯತ್ವೇನ ತೋರುತ್ತದೆ ಎನ್ನುವುದು ಈ ಕಾರಣದಿಂದ.

ಇತರ ವ್ಯವಹಾರಗಳೂ ಹೀಗೆಯೇ ಇರುತ್ತವೆ. ಮರವನ್ನು ನೋಡಿ ಇದು ಒಂದು ಮರ ಎನ್ನತ್ತೇವೆ. ವಿಚಾರ ಮಾಡಿದರೆ ಅದು ಅವಯವಗಳ ಸಮುದಾಯ. ಕಾಂಡ, ಕೊಂಬೆ, ರೆಂಬೆ, ಎಲೆ – ಮುಂತಾದ ಅವಯವಗಳ ಸಮುದಾಯವೇ ಒಂದು ಮರ ಎನಿಸುತ್ತದೆ.

**ಸಮೂಹಃ ಸ ತಥಾಭೂತಃ ಪ್ರತಿಭೇದಂ ಸಮೂಹಿಷು ।**
**ಸಮಾಪ್ಯತೇ ತತೋ ಭೇದೇ ಕಾಲಭೇದಸ್ಯ ಸಂಭವಃ ॥ ೫ ॥**

ಅವಯವವ್ಯಾಪಾರಗಳ ಸಮೂಹರೂಪವಾದ ಆ ಕ್ರಿಯೆಯು ತನ್ನ ಅವಯವಗಳ ಪ್ರತಿಯೊಂದು ಅವಯವದಲ್ಲಿಯೂ ಆರೋಪಿತವಾಗುತ್ತದೆ. ಆದ್ದರಿಂದ ಭಿನ್ನವಾದ ಒಂದೊಂದು ವ್ಯಾಪಾರದಲ್ಲಿಯೂ ಭೂತವರ್ತ-ಮಾನಾದಿ ಕಾಲಭೇದವ್ಯವಹಾರವು ಸಂಭವಿಸುತ್ತದೆ.

**ವಿವರಣೆ :** ಸಮೂಹಿ ಎಂದರೆ ಅವಯವ, ಅವಯವ ವ್ಯಾಪಾರಗಳ ಸಮುದಾಯವೇ ಕ್ರಿಯೆಯಾಗುತ್ತದೆ. ಒಂದೊಂದು ವ್ಯಾಪಾರವು ಕ್ರಿಯೆಯಲ್ಲ – ಎಂದಾಯಿತು. ಆಗ ಕೆಲವು ದೋಷಗಳು ಸಂಭವಿಸುತ್ತವೆ. ಒಬ್ಬನು ಅಡುಗೆ ಮಾಡುತ್ತಿರುವಾಗ ಪಚತಿ – ಎಂಬ ವರ್ತಮಾನ ಕಾಲದ ಪ್ರಯೋಗವು ಲೋಕ-ಪ್ರಸಿದ್ಧ. ಪ್ರಯೋಗ ಸಮಯದಲ್ಲಿ ಪಚಿಕ್ರಿಯೆಯ ಯಾವುದೋ ಒಂದೊಂದು ವ್ಯಾಪಾರವು ಮಾತ್ರ ನಡೆಯುತ್ತಿರುವುದು. ಅದು ನೀವು ಹೇಳಿದಂತೆ ಪಚಿ ಕ್ರಿಯೆಯಲ್ಲ. ಹಾಗೆಯೇ ಚೈತ್ರನು ಹೋಗುತ್ತಿರುವಾಗ 'ಚೈತ್ರಃ ಗಚ್ಛತಿ' ಎಂಬ ಪ್ರಯೋಗವೂ ತಪ್ಪಾದೀತು. ಏಕೆಂದರೆ ಗಮನಕ್ರಿಯೆಯ ಒಂದೊಂದು ವ್ಯಾಪಾರವು ಗಮಿಕ್ರಿಯೆಯಾಗುವುದಿಲ್ಲ. ಒಬ್ಬ ಹುಡುಗನು ಶಾಲೆಗೆ ಹೋಗಲು ಮನೆಬಿಟ್ಟು ಸ್ವಲ್ಪ ದೂರ ಹೋದಾಗ 'ಹುಡುಗನು ಶಾಲೆಗೆ ಹೋದನು' ಎಂಬ ಭೂತಕಾಲದ ಪ್ರಯೋಗವೂ ಬರದೇ ಹೋದೀತು. ಅಂತೆಯೇ ಇನ್ನು ಹತ್ತು ನಿಮಿಷಗಳಲ್ಲಿ ಶಾಲೆಗೆ ಹೋಗಿ ಸೇರುವನು – ಎಂಬ ವ್ಯಾಪಾರವು ಕ್ರಿಯೆಯಲ್ಲವಾದ್ದರಿಂದ ಭವಿಷ್ಯತ್ಕಾಲ ಬರುವುದು ಹೇಗೆ? ಹೀಗೆ ಎಲ್ಲ ಧಾತುಗಳ ಪರಿಸ್ಥಿತಿ ಇರುವುದರಿಂದ ಈ ದೋಷಗಳಿಗೆ ಸಮಾಧಾನವೇನು? ಎಂಬ ಪ್ರಶ್ನೆಗೆ ಈ ಶ್ಲೋಕದಲ್ಲಿ ಉತ್ತರವಿದೆ.

ಕ್ರಿಯೆಯಲ್ಲಿರುವ ಪ್ರತಿಯೊಂದು ಅವಯವವ್ಯಾಪಾರವೂ ಫಲಾಭಿಸಂಧಿ-

ಯಿಂದ ಪ್ರವೃತ್ತವಾಗಿರುತ್ತದೆ. ಒಲೆಯ ಮೇಲೆ ಪಾತ್ರೆಯ ಅಧಿಶ್ರಯಣವೆಂಬ ಪ್ರಥಮವ್ಯಾಪಾರವೂ ವಿಕ್ಲಿತ್ತಿ ಎಂಬ ಫಲದ ಉದ್ದೇಶದಿಂದಲೇ ಹೊರಟಿದೆ. ಆದ್ದರಿಂದ ವ್ಯಾಪಾರಸಮೂಹದ ಎಲ್ಲ ಕ್ರಿಯಾಕಲಾಪವನ್ನು ಅಧಿಶ್ರಯಣಾದಿ–ವ್ಯಾಪಾರಗಳಲ್ಲಿ ಅಧ್ಯಾರೋಪಮಾಡುತ್ತೇವೆ. ವ್ಯವಹಾರದಲ್ಲಿ ಎಲ್ಲ ವ್ಯಾಪಾರಗಳಿಗೂ ಕ್ರಿಯಾತ್ವವನ್ನು ಹೊರಿಸಲಾಗುತ್ತದೆ. ವಸ್ತುತಃ ಆ ಕ್ರಿಯಾಧರ್ಮವಿಲ್ಲದಿದ್ದರೂ ಅಧ್ಯಾಸದಿಂದ ಆ ಧರ್ಮವನ್ನು ಆರೋಪಿಸಿ ವ್ಯವಹಾರವು ನಡೆಯುತ್ತದೆ. ಆದ್ದರಿಂದ ಕ್ರಿಯೆಯ ಯಾವ ವ್ಯಾಪಾರವು ನಡೆಯುವಾಗಲೂ 'ಪಚತಿ' ಎಂಬ ವರ್ತಮಾನಕಾಲ ಬರಬಹುದು. ಕ್ರಿಯೆ ನಡೆಯುತ್ತಿರುವಾಗಲೇ ಗತಿಸಿದ ಒಂದೆರಡು ವ್ಯಾಪಾರಗಳನ್ನು ಗಮನಿಸಿ 'ಅಪಾಕ್ಷೀತ್ ಆಗಚ್ಛತ್' ಇತ್ಯಾದಿ ಭೂತಕಾಲದ ಪ್ರಯೋಗವೂ ಬರಬಹುದು. ಇನ್ನೂ ಮುಂದೆ ನಡೆಯಬೇಕಾದ ವ್ಯಾಪಾರಗಳ ದೃಷ್ಟಿಯಿಂದ 'ಪಕ್ಷ್ಯತಿ, ಗಮಿಷ್ಯತಿ' ಎಂದು ಭವಿಷ್ಯತ್ಕಾಲದ ಪ್ರಯೋಗವೂ ಬರಬಹುದು. ಪ್ರಾಯೇಣ ನಮ್ಮ ವ್ಯವಹಾರವೆಲ್ಲವೂ ಅಧ್ಯಾರೋಪದಿಂದ ನಡೆಯುತ್ತದೆ. ಶಾಸ್ತ್ರವು ವಸ್ತುಸ್ಥಿತಿಯನ್ನು ತಿಳಿಸಿಕೊಡುತ್ತದೆ. ಆದ್ದರಿಂದ ಯಾವ ಆಪಾದನೆಗೂ ಅವಕಾಶವಿಲ್ಲ.

ಇನ್ನೊಂದು ಪ್ರಶ್ನೆ, ಕ್ರಿಯೆಯು ಕ್ರಮವಿಶಿಷ್ಟವಾಗಿರುವುದೆಂದೂ ಆದ್ದರಿಂದ ಸಾಧ್ಯತ್ವೇನ ತೋರುತ್ತದೆಯೆಂದೂ ಹೇಳಿದ್ದೀರಿ. ಈಗ ಒಂದೊಂದು ವ್ಯಾಪಾರ–ವನ್ನೂ ಕ್ರಿಯೆಯೆನ್ನುವುದು ಹೇಗೆ? ಅದರಲ್ಲಿ ಕ್ರಮ ಇರುವುದಿಲ್ಲವಷ್ಟೆ? ಹಾಗಲ್ಲ. ಸಮುದಾಯಗತವಾದ ಕ್ರಮವಿಶಿಷ್ಟ ಸಾಧ್ಯತ್ವವು ಸಮುದಿತಕ್ರಿಯೆಯಲ್ಲಿದೆ. ಕ್ರಮವಿಶಿಷ್ಟವಾಗಿಯೇ ಆ ಕ್ರಿಯೆಯನ್ನು ವ್ಯಾಪಾರದಲ್ಲಿ ಆರೋಪಿಸುವುದರಿಂದ ಒಂದೊಂದು ವ್ಯಾಪಾರವು ಕ್ರಮವಿಶಿಷ್ಟವಾಗಿದೆ ಎಂದು ತಿಳಿಯಬೇಕು.

**ಕ್ರಮಾತ್ ಸದಸತಾಂ ತೇಷಾಮಾತ್ಮಾನೋ ನ ಸಮೂಹಿನಾಮ್ ।**
**ಸದ್ವಸ್ತುವಿಷಯೈರ್ಯಾಂತಿ ಸಂಬಂಧಂ ಚಕ್ಷುರಾದಿಭಿಃ ॥ ೬ ॥**

ಕ್ರಮವಾಗಿ ಹುಟ್ಟಿ ನಾಶವಾಗುವುದರಿಂದ ಸದಸದ್ರೂಪಗಳಾದ ಈ ಕ್ರಿಯಾವಯವಗಳ ಸ್ವರೂಪಗಳು, ವರ್ತಮಾನವಾದ ವಸ್ತುವನ್ನು ಮಾತ್ರ ಗ್ರಹಿಸತಕ್ಕ ನೇತ್ರಾದಿ ಇಂದ್ರಿಯಗಳೊಡನೆ ಸಂಬಂಧವನ್ನು ಹೊಂದುವುದಿಲ್ಲ.

**ವಿವರಣೆ :** ಈ ವ್ಯಾಪಾರವು ಪ್ರಥಮಕ್ಷಣದಲ್ಲಿ ಹುಟ್ಟಿ ಸತ್ ಎನಿಸುವಷ್ಟರಲ್ಲಿ ದ್ವಿತೀಯಕ್ಷಣವು ಬಂದು ನಾಶವಾಗಿಬಿಡುತ್ತದೆ. ಆದ್ದರಿಂದ ಈ ವ್ಯಾಪಾರವು ಸದಸದ್ರೂಪವಾಗಿದ್ದು ಕ್ಷಣಿಕವಾಗಿರುತ್ತದೆ. ಕಣ್ಣು ಮುಂತಾದ ಇಂದ್ರಿಯಗಳು

ವರ್ತಮಾನಕಾಲದಲ್ಲಿರುವ ಸದ್ವಸ್ತುವನ್ನು ಮಾತ್ರ ಗ್ರಹಿಸುತ್ತವೆ. ಸಮೂಹರೂಪ–ಕ್ರಿಯೆಯು ಕಾಣಿಸುವುದಿಲ್ಲ. ಸಮೂಹದ ಅವಯವವ್ಯಾಪಾರವು ಕ್ಷಣಿಕವಾಗಿ ನಾಶವಾಗಿಬಿಡುವುದರಿಂದ ಸಮೂಹವು ಎದುರಿಗಿರುವುದಿಲ್ಲ. ಹುಲ್ಲಿನ ಹೊರೆ–ಯನ್ನು ನೋಡಬಹುದು. ಹೊರೆಯ ಅವಯವಗಳಾದ ಹುಲ್ಲುಕಡ್ಡಿಗಳು ಪಿಂಡೀ–ಭೂತವಾಗಿ ಎದುರಿಗೆ ಕಾಣಿಸುತ್ತವೆ. ಆದ್ದರಿಂದ ಹುಲ್ಲಿನ ಹೊರೆ ಸತ್, ವ್ಯಾಪಾರವು ಸದಸತ್, ವ್ಯಾಪಾರಸಮುದಾಯವು ಅಸತ್. ಹೋಗುತ್ತಾನೆ, ಬರುತ್ತಾನೆ – ಮುಂತಾದ ಸ್ಥಳದಲ್ಲಿ ಆ ಕ್ರಿಯೆಯು ಅನುಮಾನಗಮ್ಯವೆಂದೂ ಪ್ರತ್ಯಕ್ಷವಲ್ಲವೆಂದೂ ಭಾಷ್ಯಕಾರರು ಹೇಳಿದ್ದಾರೆ. ನಮಗೆ ಕಾಣುವುದು ಕ್ರಿಯಾಶ್ರಿತವಾದ ದ್ರವ್ಯ, ಕ್ರಿಯೆಯಲ್ಲ. ಹೋಗತಕ್ಕವನು ಮುಂದುಮುಂದಿನ ಸ್ಥಳದಲ್ಲಿರುವುದನ್ನು ಕಂಡು ಅವನಲ್ಲಿ ಹೋಗುವ ಕ್ರಿಯೆ ಇದೆಯೆಂದು ಊಹಿಸುತ್ತೇವೆ. ಈ ಅಭಿಪ್ರಾಯದಿಂದ ಭಾಷ್ಯದಲ್ಲಿ 'ಕ್ರಿಯಾ ನಾಮೇಯಮತ್ಯಂತಾಪರಿದೃಷ್ಟಾ ನ ಶಕ್ಯಾ ಪಿಂಡೀಭೂತಾ ನಿದರ್ಶಯಿತುಂ' ಎಂದು ಹೇಳಿದೆ. ಏವಂಚ ಕ್ರಿಯೆಯ ಅವಯವವಾದ ವ್ಯಾಪಾರವೂ ಕ್ರಿಯೆಯಂತೆಯೇ ದೃಶ್ಯವಾಗುವುದಿಲ್ಲ.

ಇದಕ್ಕೆ ದೃಷ್ಟಾಂತ –

**ಯಥಾ ಗೌರಿತಿ ಸಂಘಾತಃ ಸರ್ವೋ ನೇಂದ್ರಿಯಗೋಚರಃ ।**
**ಭಾಗಶಸ್ತೂಪಲಬ್ಧಸ್ಯ ಬುದ್ಧೌ ರೂಪಂ ನಿರೂಪ್ಯತೇ ॥ ೭ ॥**

ಗೌಃ ಎಂಬ ಶಬ್ದದಲ್ಲಿರುವ ಗ್ ಔ ವಿಸರ್ಗ (ಃ) ಎಂಬ ವರ್ಣಗಳ ಸಂಘಾತವು ಒಟ್ಟಿಗೆ ಏಕಕಾಲದಲ್ಲಿ ಶ್ರವಣೇಂದ್ರಿಯಕ್ಕೆ ಗೋಚರವಾಗುವುದಿಲ್ಲ. ವರ್ಣಗಳು ಕ್ರಮವಾಗಿ ಉಪಲಬ್ಧವಾಗುತ್ತವೆ – ಕೇಳಿಸುತ್ತವೆ. ಕಡೆಯ ವಿಸರ್ಗದ ಶ್ರವಣವಾದ ಮೇಲೆ ಸಂಸ್ಕಾರವಶದಿಂದ ಎಲ್ಲ ವರ್ಣಗಳೂ ಗೌಃ ಎಂಬ ಸಮುದಾಯರೂಪವಾಗಿ ಒಟ್ಟಿಗೆ ಸ್ಮರಣೆಗೆ ಬಂದು ಬುದ್ಧಿಗೆ ಗೋಚರವಾಗುತ್ತವೆ.

**ವಿವರಣೆ :** ಒಟ್ಟಿಗೆ ವರ್ಣಸಂಘಾತವು ಕೇಳದಿದ್ದರೂ ಒಂದೊಂದು ವರ್ಣ–ವನ್ನು ಕೇಳಿದ್ದರೂ ಪೂರ್ಣಶಬ್ದವು ಕೇಳಿಸಿತು ಎನ್ನುತ್ತೇವೆ. ಈ ವರ್ಣಧರ್ಮ–ಗಳನ್ನು ಸಮುದಾಯದಲ್ಲಿ ಆರೋಪಿಸಿ ಶಬ್ದವು ಕೇಳಿಸಿತು ಎಂಬ ನಂಬಿಕೆ ಬರುತ್ತದೆ. ಆದರೆ ವರ್ಣಸಮುದಾಯ ರೂಪವಾದ ಶಬ್ದವು ಸ್ಮೃತವಾಗುತ್ತದೆಯೇ ಹೊರತು ಕೇಳಿಸಿರುವುದಿಲ್ಲ. ಹಾಗೆಯೇ ಕ್ರಿಯೆಯ ಸೂಕ್ಷ್ಮವ್ಯಾಪಾರಗಳು ಹುಟ್ಟಿದೊಡನೆ ಪ್ರತ್ಯಕ್ಷವಾಗಬಹುದು. ಆದರೆ ಆ ವ್ಯಾಪಾರಗಳ ಸಮುದಾಯವು

ಪ್ರತ್ಯಕ್ಷವಾಗಿರುವುದಿಲ್ಲ. ಕ್ಷಣಿಕ ವ್ಯಾಪಾರಗಳು ಪ್ರತ್ಯಕ್ಷವಾಗಿ ಕಾಣಿಸಿದ್ದರಿಂದ ಆ ಧರ್ಮವನ್ನು ಸಮುದಾಯದಲ್ಲಿ ಆರೋಪಿಸಿ ಕ್ರಿಯೆಯು ಕಾಣಿಸುತ್ತದೆ ಎಂದು ಜನರು ಹೇಳುತ್ತಾರೆ. ವಸ್ತುತಃ ಕ್ರಿಯೆಯು ಅನುಮಾನಗಮ್ಯವಾಗುತ್ತದೆ.

ಈ ದೃಷ್ಟಾಂತವು ತಾರ್ಕಿಕರ ಮತದಂತೆ ಹೊಂದುತ್ತದೆ. ಆದರೆ ವೈಯಾ-ಕರಣರ ಸಿದ್ಧಾಂತದಲ್ಲಿ ಇದು ದೃಷ್ಟಾಂತವಲ್ಲ. ವೈಯಾಕರಣರ ಸಿದ್ಧಾಂತದಲ್ಲಿ ವರ್ಣಗಳಿಂದ ಅಖಂಡವಾದ ಸ್ಫೋಟವು ಅಭಿವ್ಯಕ್ತವಾಗಿ ಅದರಿಂದ ಶಬ್ದಾರ್ಥವು ತಿಳಿಯುತ್ತದೆ. ಸ್ಫೋಟವು ವರ್ಣಸಮೂಹವಲ್ಲ. ಅದು ಅಖಂಡವಾದ ನಿತ್ಯಶಬ್ದ. ಅದು ಮಾನಸಪ್ರತ್ಯಕ್ಷ ವಿಷಯ. ಅದರಲ್ಲಿ ಯಾವ ಅವಯವ ವರ್ಣಗಳೂ ಇರುವುದಿಲ್ಲ. ಆದ್ದರಿಂದ ವೈಯಾಕರಣ ಸಿದ್ಧಾಂತಕ್ಕೆ ವಿರುದ್ಧವಲ್ಲದ ಇನ್ನೊಂದು ದೃಷ್ಟಾಂತವನ್ನು ಕೊಡುತ್ತಾರೆ –

**ಇಂದ್ರಿಯೈರನ್ಯಥಾಪ್ರಾಪ್ತೌ ಭೇದಾಂಶೋಪನಿಪಾತಿಭಿಃ ।**
**ಅಲಾತಚಕ್ರವದ್ ರೂಪಂ ಕ್ರಿಯಾಣಾಂ ಪರಿಕಲ್ಪ್ಯತೇ ॥ ೮ ॥**

ವ್ಯಾಪಾರಗಳ ಸಮೂಹವಾದ ಕ್ರಿಯೆಯಲ್ಲಿ ಭೇದಾಂಶಗಳಾದ ಒಂದೊಂದು ವ್ಯಾಪಾರಗಳೊಡನೆ ಸಂಬಂಧವನ್ನು ಪಡೆದ ಇಂದ್ರಿಯಗಳಿಂದ, ಅಲಾತದಲ್ಲಿ (ವೇಗದಿಂದ ತಿರುಗಿಸುತ್ತಿರುವ ದೊಂದಿಗಳಲ್ಲಿ) ಚಕ್ರಾಕಾರವು ಭ್ರಾಂತಿಯಿಂದ ಅನ್ಯಥಾ ಕಲ್ಪಿತವಾಗುವಂತೆ, ಅವಯವ ವ್ಯಾಪಾರಗಳಲ್ಲಿ ಕ್ರಿಯೆಗಳ ಸಮುದಿತ ಸ್ವರೂಪವು ಕಲ್ಪಿತವಾಗುತ್ತದೆ.

**ವಿವರಣೆ :** ಕ್ರಿಯೆಯ ಅವಯವ ವ್ಯಾಪಾರಗಳಲ್ಲಿ ಕ್ರಿಯಾ ಸ್ವರೂಪವು ಕಲ್ಪಿತವಾಗುವುದರಿಂದ ಕ್ರಿಯೆಯು ಪ್ರತ್ಯಕ್ಷವೆಂದೂ ವರ್ತಮಾನಾದಿ ಕಾಲ ಸ್ವರೂಪವೂ ಘಟಿಸುವುದೆಂದೂ ಹೇಳಿದ್ದಾಗಿದೆ. ಅದಕ್ಕೆ ಇದು ದೃಷ್ಟಾಂತ. ಅಲಾತವನ್ನು ಗರ್‍ರನೆ ತಿರುಗಿಸುತ್ತಿರುವಾಗ ಬೆಂಕಿಯ ಚಕ್ರವಿದ್ದಂತೆ ನೋಡತಕ್ಕವರಿಗೆ ಭಾಸವಾಗುತ್ತದೆ. ಚಕ್ರಾಕಾರದ ಜ್ಞಾನವು ಭ್ರಮೆಯೇ ಸರಿ. ಹಾಗೆ ಕ್ರಿಯಾವ್ಯಾಪಾರ-ಗಳು ನಿರಂತರವಾಗಿ ನಡೆಯುತ್ತಿರುವಾಗ ಒಂದೇ ಕ್ರಿಯೆ ನಡೆಯುತ್ತದೆ ಎಂದು ತೋರುತ್ತದೆ. ಭೇದಾಂಶಗಳಾದ ವ್ಯಾಪಾರಗಳಲ್ಲಿ ಕ್ರಿಯಾಸ್ವರೂಪವನ್ನು ಆರೋಪಿಸಿ-ಕೊಂಡದ್ದರಿಂದ ಹಾಗೆ ತೋರುತ್ತದೆ ಎಂದು ತಾತ್ಪರ್ಯ. ಅಲಾತಚಕ್ರವು ಇದಕ್ಕೆ ದೃಷ್ಟಾಂತ. ಬೆಂಕಿಯ ಒಂದು ಖಂಡದಲ್ಲಿ ಚಕ್ರಾಕಾರವನ್ನು ಆರೋಪಿಸಿಕೊಂಡದ್ದ-ರಿಂದ ಒಂದು ಖಂಡವೇ ಚಕ್ರವಾಗಿಬಿಡುತ್ತದೆ.

**ಯಥಾ ಚ ಭಾಗಾಃ ಪಚತೇರುದಕಾಸೇಚನಾದಯಃ ।**
**ಉದಕಾಸೇಚನಾದೀನಾಂ ಜ್ಞೇಯಾ ಭಾಗಾಸ್ತಥಾಪರೇ ॥ ೯ ॥**

ಪಚಧಾತ್ವರ್ಥವಾದ ಪಚಿಕ್ರಿಯೆಗೆ ನೀರು ಹಾಕುವುದು, ಸೌಟಿನಿಂದ ತೊಳಸುವುದು, ಬೆಂಕಿಯನ್ನೂದುವುದು ಮೊದಲಾದವು ಹೇಗೆ ಅವಯವ–ಗಳೋ ಹಾಗೆ ನೀರು ಹಾಕುವುದು, ಸೌಟಿನಿಂದ ತೊಳಸುವುದು ಮೊದಲಾ–ದವುಗಳಿಗೂ ಅವಾಂತರ ವ್ಯಾಪಾರಗಳಿರುತ್ತವೆಯೆಂದು ತಿಳಿಯಬೇಕು.

**ವಿವರಣೆ :** ನೀರು ಹಾಕುವುದು – ಎಂಬ ವ್ಯಾಪಾರದಲ್ಲಿ ಅನೇಕ ವ್ಯಾಪಾರಗಳಿರುತ್ತವೆ. ಕೈಯಿಂದ ತಂಬಿಗೆಯನ್ನು ತೆಗೆದುಕೊಳ್ಳುವುದು, ಅದರಲ್ಲಿ ನೀರನ್ನು ತುಂಬಿಕೊಳ್ಳುವುದು, ಕೈಯೆತ್ತುವುದು, ನೀರಿನ ತಂಬಿಗೆಯಿಂದ ನೀರು ಸುರಿಯುವುದು ಮೊದಲಾದವು ಆ ವ್ಯಾಪಾರಗಳ ಅವಾಂತರ ವ್ಯಾಪಾರಗಳು.

ಪಚಿಕ್ರಿಯೆಯು ಪ್ರತ್ಯಕ್ಷವಲ್ಲ, ಫಲಾನುಮೇಯ – ಎಂಬುದನ್ನು ಅಂಗೀಕರಿ–ಸೋಣ. ಅವಾಂತರ ವ್ಯಾಪಾರಗಳಾದ ಉದಕಾಸೇಚನ, ಅಧಿಶ್ರಯಣಾದಿಗಳು ಪ್ರತ್ಯಕ್ಷವೆನ್ನುವುದು ಯುಕ್ತವೆಂಬ ಶಂಕೆಗೆ ಉತ್ತರವಿದು. ಉದಕಾಸೇಚನಾದಿಗಳೂ ಪಚಿಕ್ರಿಯೆಯಂತೆ ವ್ಯಾಪಾರ ಸಮೂಹಗಳೇ ಆಗಿವೆ. ಹಿಂದೆ ಹೇಳಿದ ಕ್ರಮದಲ್ಲಿ ಈ ವ್ಯಾಪಾರಗಳೂ ಸಹ ಪ್ರತ್ಯಕ್ಷಗಳಲ್ಲ.

ಹೀಗೆ ವಿಭಜಿಸುತ್ತ ಹೋದಾಗ ಪರಮಾಣು ಸದೃಶವಾದ ನಿರಂಶ ವ್ಯಾಪಾ–ರವು ಇರಲೇಬೇಕು. ಅದು ಪ್ರತ್ಯಕ್ಷವಾಗಬಹುದಲ್ಲವೆ? ಎಂಬ ಶಂಕೆಗೆ ಸಮಾಧಾನ–

**ಯಶ್ಚಾಪಕರ್ಷಪರ್ಯಂತಮನುಪ್ರಾಪ್ತಃ ಪ್ರತೀಯತೇ ।**
**ತತ್ರೈಕಸ್ಮಿನ್ ಕ್ರಿಯಾಶಬ್ದಃ ಕೇವಲೇ ನ ಪ್ರಯುಜ್ಯತೇ ॥ ೧೦ ॥**

ಹೀಗೆ ಬುದ್ಧಿಯಿಂದ ಅಂಶದ ಅಂಶವೆಂದು ಅಪಕರ್ಷಮಾಡುತ್ತಾ ಹೋದಾಗ ನಿರಂಶವಾದ ಒಂದು ಅವಯವವು ಪ್ರತೀತವಾಗುವುದಷ್ಟೆ, ಅಂತಹ ನಿರಂಶವಾದ ಭಾಗದಲ್ಲಿ ಕ್ರಿಯೆಯೆಂಬ ಪ್ರಯೋಗವಿಲ್ಲ.

**ವಿವರಣೆ :** ನಿರಂಶವಾದ ಭಾಗವು ಕ್ರಮವತ್ತಾಗಿ ಪ್ರತೀತವಾಗುವುದಿಲ್ಲವಾದ್ದ–ರಿಂದ ಅದನ್ನು ಕ್ರಿಯೆಯೆನ್ನಲಾಗುವುದಿಲ್ಲ. ಸಾಧ್ಯತ್ವೇನ ಪ್ರತೀಯಮಾನವಾದ ಧಾತ್ವರ್ಥವು ಕ್ರಿಯೆ. ಪರಮಾಣು ಸದೃಶವಾದ ನಿರಂಶವು ಧಾತುವಾಚ್ಯವೂ ಅಲ್ಲ. ಸಾಧ್ಯತ್ವೇನ ಪ್ರತೀಯಮಾನವೂ ಅಲ್ಲ. ಆದ್ದರಿಂದ ಬುದ್ಧಿಕಲ್ಪಿತವಾದ ಆ ವಸ್ತು ಕ್ರಿಯೆಯಲ್ಲ.

ಪಚಿಕ್ರಿಯೆಯ ಅವಯವಗಳಾದ ಉದಕಾಸೇಚನ, ಅಧಿಶ್ರಯಣ ಮೊದಲಾದವು ಪ್ರತ್ಯೇಕ ಧಾತುಗಳಿಂದ ಉಕ್ತವಾದಾಗ ಕ್ರಿಯೆಯಾಗುತ್ತವೆ. ಆಗ ಸ್ವತಂತ್ರವಾಗಿ ಬೇರೆ ಬೇರೆ ಧಾತುಗಳನ್ನು ಪ್ರಯೋಗಿಸಿರಬೇಕು. ಜಲಮಾಸೇಚಯತಿ, ಧಮತಿ, ತಂಡುಲಂ ಕ್ಷಾಲಯತಿ – ಇತ್ಯಾದಿ. ಅವು ಅನ್ಯಕ್ರಿಯಾವಯವಗಳಾಗದೆ ಸ್ವತಂತ್ರ ಕ್ರಿಯೆಗಳೆನಿಸುತ್ತವೆ. ಅವೂ ಕ್ರಿಯಾಸಮೂಹರೂಪಗಳಾಗಿರುತ್ತವೆ. ಏವಂಚ ಕ್ರಿಯೆಯು ಭಾಷ್ಯಕಾರರು ಹೇಳುವಂತೆ ಪಿಂಡೀ ಭೂತವಾಗಿ ಕಣ್ಣಿಗೆ ಕಾಣಿಸತಕ್ಕದ್ದಲ್ಲ.

**ಪೂರ್ವೋತ್ತರೈಸ್ತದಾ ಭಾಗೈಃ ಸಮವಸ್ಥಾಪಿತಕ್ರಮಃ ।**
**ಏಕಃ ಸೋಽಪ್ಯಸದಧ್ಯಾಸಾದಾಖ್ಯಾತೈರಭಿಧೀಯತೇ ॥ ೧೧ ॥**

ಅವಯವಪರಂಪರೆಯಿಂದ ಅತ್ಯಂತ ಚಿಕ್ಕದಾದ ಪರಮಾಣು ಸ್ವರೂಪವಾದ ವ್ಯಾಪಾರಾಂಶದಲ್ಲಿ ಪೂರ್ವೋತ್ತರದಲ್ಲಿರುವ ಭಾಗಗಳನ್ನು ಆರೋಪಿಸಿದಾಗ ಆ ಚಿಕ್ಕ ಅಂಶವೂ ಕ್ರಮವಿಶಿಷ್ಟವಾಗುತ್ತದೆ. ಅದರಲ್ಲಿಲ್ಲದೆ ಅಸತ್ ಆದದ್ದನ್ನು ಆರೋಪಿಸಿದಾಗ ಅದೂ ಕ್ರಿಯೆಯೆನಿಸುವುದರಿಂದ ತಿಙಂತಪದಗಳಿಂದ ಅಭಿಹಿತವಾಗುತ್ತದೆ.

**ವಿವರಣೆ :** ಅತ್ಯಂತ ಅಪಕೃಷ್ಟವಾದ ವ್ಯಾಪಾರಾಂಶವು ಕ್ರಮರಹಿತವಾದ್ದರಿಂದ ಕ್ರಿಯೆಯಲ್ಲವೆಂದು ಹಿಂದೆ ಹೇಳಲಾಗಿದೆ. ಅದರಲ್ಲಿಯೂ ಒಂದು ವೇಳೆ ಪೂರ್ವೋತ್ತರ ವ್ಯಾಪಾರಗಳನ್ನು ಅಧ್ಯಾರೋಪಮಾಡಲು ಸಾಧ್ಯವಿದೆ. ಆದರೆ ಸ್ವತಃ ಅದರಲ್ಲಿ ಪೂರ್ವೋತ್ತರ ಭಾಗಗಳಿಲ್ಲ. ಆರೋಪಿತ ಕ್ರಮವಿರುವುದರಿಂದ ಕ್ರಿಯೆಯೆನಿಸಬಹುದೇ ಹೊರತು ಕ್ರಿಯಾವಸ್ಥೆಯಲ್ಲಿ ಪೌರ್ವಾಪರ್ಯಕ್ರಮವು ಮಾತ್ರ ಕಣ್ಣಿಗೆ ಕಾಣಿಸುವುದಿಲ್ಲ. ಆದ್ದರಿಂದ ಅತ್ಯಂತಾಪರಿದೃಷ್ಟಾ ಕ್ರಿಯಾ ಪಿಂಡೀಭೂತಾ – ಎಂದು ಹೇಳಿದುದಕ್ಕೆ ಯಾವ ಚ್ಯುತಿಯೂ ಇಲ್ಲ. ನಿರುಕ್ತಕಾರರೂ ಸಹ 'ಪೂರ್ವಾಪರೀಭೂತಂ ಭಾವಮಾಖ್ಯಾತೇನಾಭಿಚಷ್ಟೇ ವ್ರಜತಿಪಚತೀತ್ಯುಪಕ್ರಮ–ಪ್ರಭೃತ್ಯಪವರ್ಗಪರ್ಯಂತಮ್' (ನಿರುಕ್ತ ೧–೧–೧೧) ಎಂದು ಹೇಳಿದ್ದಾರೆ. ಆದಿ–ಯಿಂದ ಅಂತ್ಯದವರೆಗೆ ಪೂರ್ವಾಪರೀಭೂತವಾಗಿ ಕ್ರಮವಿಶಿಷ್ಟವಾದ ಕ್ರಿಯೆಯನ್ನು ಪಚತಿ, ವ್ರಜತಿ ಮುಂತಾದವುಗಳಲ್ಲಿ ಆಖ್ಯಾತದಿಂದ ಶಬ್ದವು ತಿಳಿಸುತ್ತದೆ ಎಂದು ತಾತ್ಪರ್ಯ.

ಒಳ್ಳೆಯದು. ಸಾಧ್ಯಸ್ವಭಾವವುಳ್ಳದ್ದೂ ಕ್ರಮವಿಶಿಷ್ಟವೂ ಆದದ್ದು ಕ್ರಿಯೆಯೆಂ–ದಾದರೆ, 'ಅಸ್ತಿ' ಎಂಬಲ್ಲಿ ತಿಙಂತವಾಚ್ಯವಾದ ಸತ್ತೆಯು ಹೇಗೆ ಕ್ರಿಯೆಯಾಗುತ್ತದೆ? ಸತ್ತೆಯು ನಿತ್ಯವಾದ್ದರಿಂದ ಸಾಧ್ಯಸ್ವಭಾವವುಳ್ಳದ್ದೂ ಅಲ್ಲ, ಕ್ರಮವಿಶಿಷ್ಟವೂ ಅಲ್ಲ – ಎಂಬ ಶಂಕೆಗೆ ಸಮಾಧಾನವಿದು –

**ಕಾಲಾನುಪಾತಿ ಯದ್ರೂಪಂ ತದಸ್ತೀತಿ ಪ್ರತೀಯತೇ ।**
**ಪರಿತಸ್ತು ಪರಿಚ್ಛಿನ್ನಂ ಭಾವ ಇತ್ಯೇವ ಕಥ್ಯತೇ ॥ ೧೨ ॥**

ಸತ್ತೆಯು ನಿತ್ಯವಾದರೂ ವರ್ತಮಾನಾದಿಕಾಲದಿಂದ ಪರಿಚ್ಛಿನ್ನವಾದ ಸತ್ತಾಸ್ವರೂಪವು ತಿಙಂತದಿಂದ ಸಾಧ್ಯತ್ವರೂಪದಲ್ಲಿಯೇ ಪ್ರತೀತವಾಗುತ್ತದೆ. ಕಾಲಾತಿರಿಕ್ತವಾಗಿ ಬೇರೊಂದು ವಿಶೇಷಣದಿಂದ ಪರಿಚ್ಛಿನ್ನವಾದಾಗ (ದ್ರವ್ಯದಂತೆ) ಭಾವ ಎನ್ನಿಸಿಕೊಳ್ಳುತ್ತದೆ, ಆಗ ಕ್ರಿಯೆ ಎನ್ನಿಸಿಕೊಳ್ಳುವುದಿಲ್ಲ.

**ವಿವರಣೆ :** ಸತ್ತಾ ಎಂಬ ಶಬ್ದವು ಸತೋ ಭಾವಃ ಸತ್ತಾ ಎಂದು ತಲ್ ಪ್ರತ್ಯಯದಿಂದ ನಿಷ್ಪನ್ನವಾಗಿದೆ. ಆದ್ದರಿಂದ ಇದು ಭಾವಾರ್ಥಕವಾದ ಪ್ರಾತಿಪದಿಕ. ಸತ್ ಶಬ್ದವು ಅಸ್ ಧಾತುವಿನಿಂದಲೇ ನಿಷ್ಪನ್ನವಾದದ್ದು. ಅಸ್ತೀತಿ ಸತ್. ಇಲ್ಲಿ ಶತೃ ಎಂಬ ಕೃತ್ ಪ್ರತ್ಯಯ ಬಂದಿದೆ. ಸತ್ ಎಂಬುದು ಕೃದಂತ. ಸತ್ತಾ ಎಂಬುದು ತದ್ಧಿತಾಂತ. ಇದಕ್ಕೆ ನಿತ್ಯವಾದ ಸತ್ತಾ, ಪರ್ವತದ ಸತ್ತಾ ಮುಂತಾದ ವಿಶೇಷಣಗಳು ಸೇರಿದಾಗ ಸತ್ತೆಯು ಭಾವವೆನಿಸಿಕೊಳ್ಳುತ್ತದೆ. ಇದನ್ನು ಜಾತಿಯೆಂದೂ ಹೇಳುತ್ತಾರೆ. ಇದು ಕ್ರಿಯಾಸ್ವರೂಪವಲ್ಲ. ಇದು ತತ್‌ಪ್ರತ್ಯಯಾರ್ಥವಾದ ಭಾವ.

ಅಸ್ತಿ ಎಂಬಲ್ಲಿ ತೋರುವ ಸತ್ತಾ ವರ್ತಮಾನಕಾಲದಿಂದ ಪರಿಚ್ಛಿನ್ನವಾಗಿದೆ. ಆಸೀತ್, ಭವಿಷ್ಯತಿ – ಎಂದು ಭೂತ ಭವಿಷ್ಯತ್ಕಾಲಗಳಿಂದಲೂ ಇದು ಪರಿಚ್ಛಿನ್ನ–ವಾಗುತ್ತದೆ. ಆಗ ಧಾತ್ವರ್ಥವಾದ ಅಸ್ತಿತ್ವವು ಸಾಧ್ಯಸ್ವರೂಪದಲ್ಲಿ ತೋರುತ್ತದೆ–ಯಾದ್ದರಿಂದ ಕ್ರಿಯೆಯೆನ್ನಿಸಿಕೊಳ್ಳುತ್ತದೆ. ಕ್ರಿಯೆಗೆ ಭಾವ ಎಂಬ ಇನ್ನೊಂದು ಹೆಸರೂ ಇದೆ. 'ಧಾತ್ವರ್ಥಃ ಕೇವಲಃ ಶುದ್ಧೋ ಭಾವ ಇತ್ಯಭಿಧೀಯತೇ' ಎಂಬ ಉಕ್ತಿಯುಂಟು. ಹಿಂದೆ ಹೇಳಿದ ತಲ್ ಪ್ರತ್ಯಯಾಂತದ ಭಾವ ಇದಲ್ಲ. 'ಕಾಲಾತ್ ಕ್ರಿಯಾ ವಿಭಜ್ಯಂತೇ' ಎಂದು ಸಾಧನಸಮುದ್ದೇಶದಲ್ಲಿ (ವಾಕ್ಯ. ಸಾಧನ – ಶ್ಲೋಕ,.೧೫೩) ಸಮಸ್ತಕ್ರಿಯಾಗಳೂ ಕಾಲದಿಂದ ಪರಿಚ್ಛಿನ್ನವಾಗುತ್ತವೆಯೆಂದು ನಿರ್ಣಯಿಸಲಾಗಿದೆ.

ಘಟಃ ಅಸ್ತಿ – ಎಂದಾಗ ಅಸ್ತಿಕ್ರಿಯೆಯು ಘಟದಲ್ಲಿ ಕ್ರಮವಾಗಿ ಅನುವೃತ್ತ–ವಾಗುತ್ತ ಇದೆಯೆಂದು ಪ್ರತೀತಿ ಬರುತ್ತದೆ. ಘಟಃ ಆಸೀತ್ – ಎಂದಾಗ ಅನುವೃತ್ತ–ವಾಗಿ ನಡೆದಿದ್ದ ಕ್ರಿಯೆಯ ಸಮಾಪ್ತಿಯು ಸಕ್ರಮವಾಗಿಯೇ ಪ್ರತೀತವಾಗುತ್ತದೆ. ಕ್ರಿಯೆಯ ಹೊರತು ಇನ್ನಾವುದೂ ಕಾಲದಿಂದ ಪರಿಚ್ಛಿನ್ನವಾಗುವುದಿಲ್ಲ. ಭೂತ–ಕಾಲದ ಘಟ ಎಂದರೆ, ಭೂತಕಾಲದಲ್ಲಿ ಇದ್ದ ಘಟವೆಂದರ್ಥ. ಇಲ್ಲಿ 'ಇರುವಿಕೆ' ಎಂಬ ಕ್ರಿಯೆಯೊಡನೆಯೇ ಘಟಕ್ಕೆ ಅನ್ವಯ ಇದೆ. ಹೀಗೆ ಕ್ರಿಯಾಪರಿಚ್ಛಿನ್ನ–

ವಾಗುವುದರಿಂದ ಧಾತ್ವರ್ಥ ಸತ್ತೆಯು ಕ್ರಿಯಾರೂಪವೆಂದು ಸ್ಪಷ್ಟವಾಗುತ್ತದೆ. ಇಲ್ಲಿ ವಿಚಾರಿಸಬೇಕಾದ ವಿಷಯ ಬಹಳ ಇದೆ. ಪ್ರಕೃತ ಇಷ್ಟು ಸಾಕು.

**ವ್ಯವಹಾರಸ್ಯ ಸಿದ್ಧತ್ವಾನ್ನ ಚೇಯಂ ಗುಣಕಲ್ಪನಾ ।**
**ಉಪಚಾರೋ ಹಿ ಮುಖ್ಯಸ್ಯ ಸಂಭವಾದಪದಿಶ್ಯತೇ ॥ ೧೩ ॥**

ಅವಯವಗಳಲ್ಲಿ ಕ್ರಿಯೆಯೆಂಬ ವ್ಯವಹಾರವು ಲೋಕಸಿದ್ಧವಾದ್ದರಿಂದ ಈ ಕ್ರಿಯಾತ್ವಕಲ್ಪನೆ ಗೌಣಕಲ್ಪನೆಯಲ್ಲ. ಮುಖ್ಯವ್ಯವಹಾರವು ಬೇರೊಂದೆಡೆ ಸಂಭವಿಸುತ್ತಿದ್ದರೆ, ಆಗ ಈ ಕ್ರಿಯಾತ್ವ ವ್ಯವಹಾರವು ಉಪಚಾರವೆಂಬ ಗೌಣ ಕಲ್ಪನೆಯಾಗುತ್ತಿತ್ತು.

**ವಿವರಣೆ :** ಗೌಣಕಲ್ಪನೆ ಇಲ್ಲದೆ ಆರೋಪವಿಲ್ಲ. ಆರೋಪವಿಲ್ಲದೆ ಕ್ರಿಯಾವ್ಯವಹಾರವಿಲ್ಲ. ಹಿಂದೆ ಹೇಳಿದಂತೆ ವ್ಯಾಪಾರಸಮುದಾಯದಲ್ಲಿ ಮೊದಲು ಏಕತ್ವವನ್ನು ಆರೋಪಿಸಬೇಕು. ಏಕತ್ವ ಬಂದಾಗ ಕ್ರಮವೆಲ್ಲಿರುತ್ತದೆ? ಆಗ ಕ್ರಮವಿಶಿಷ್ಟತೆಯನ್ನು ಆರೋಪಿಸಬೇಕು. ಹೀಗೆಯೇ ಒಂದು ವ್ಯಾಪಾರದಲ್ಲಿ ಸಮು–ದಾಯವನ್ನು ಆರೋಪಿಸಬೇಕು. ಆಗ ಕ್ರಮವಿಶಿಷ್ಟತೆಯನ್ನೂ ಆರೋಪಿಸಬೇಕು. ಹೀಗೆ ಆರೋಪಿಸಿ ಪ್ರಯೋಗಿಸುವುದು ಲೋಕ ಸಿದ್ಧವಾದ್ದರಿಂದ ಎಲ್ಲವೂ ಮುಖ್ಯವ್ಯವಹಾರವೇ ಆಗಿರುತ್ತದೆ.

ಉಪಚಾರ ಎಂದರೆ ಲಕ್ಷಣಾ. ಗೌಣೀಲಕ್ಷಣೆಯನ್ನಿಲ್ಲಿ ಗುಣಕಲ್ಪನೆ ಎಂದು ಹೇಳಿದ್ದಾರೆ. ಅದು ಬರುವ ಸ್ಥಳಕ್ಕೆ ಉದಾಹರಣೆ – 'ಸಿಂಹೋ ಮಾಣವಕಃ' ಈ ಹುಡುಗನು ಸಿಂಹ. ಹುಡುಗನಲ್ಲಿ ಸಿಂಹದ ಅಭೇದವು ಬಾಧಿತ. ಆದ್ದರಿಂದ ಸಿಂಹದ ಧೈರ್ಯಸಾಮರ್ಥ್ಯಗಳೆಂಬ ಗುಣಗಳನ್ನು ಹುಡುಗನಲ್ಲಿ ಆರೋಪಿಸುತ್ತೇವೆ. ಈ ಪ್ರಯೋಗವು ಗೌಣೀಕಲ್ಪನೆಯಿಂದ ಆದದ್ದು. ಏಕೆಂದರೆ ಸಿಂಹ ಶಬ್ದಕ್ಕೆ ಮೃಗವಿಶೇಷದಲ್ಲಿ ಮುಖ್ಯಪ್ರಯೋಗವಿದೆ. ಅಲ್ಲಿ ಯಾವ ಆರೋಪವೂ ಇರುವುದಿಲ್ಲ. ಅದರಂತೆ ಕ್ರಿಯಾಶಬ್ದಕ್ಕೆ ಆರೋಪವಿಲ್ಲದ ಮುಖ್ಯವ್ಯವಹಾರವಿಲ್ಲ. ಆದ್ದರಿಂದ ಆರೋಪಿತವಾದ್ದನ್ನೇ ಮುಖ್ಯಕ್ರಿಯೆಯೆಂದು ತಿಳಿಯಬೇಕು.

ಒಂದೊಂದು ಕ್ರಿಯಾವಯವ ವ್ಯಾಪಾರದಲ್ಲಿಯೂ ಸಮೂಹಾತ್ಮಕವಾದ ವ್ಯಾಪಾರಗಳನ್ನಾರೋಪಿಸಿ ಕ್ರಿಯಾತ್ವವನ್ನು ಬಿಡಿ ವ್ಯಾಪಾರಕ್ಕೆ ತರುವ ಒಂದು ಮಾರ್ಗವನ್ನು ತಿಳಿಸಿದ್ದಾಯಿತು. ವ್ಯಾಪಾರವನ್ನು ಕ್ರಿಯೆಯನ್ನಾಗಿ ರೂಪಿಸಲು ಇನ್ನೊಂದು ಮಾರ್ಗವಿದೆ.

**ಆಹಿತೋತ್ತರಶಕ್ತಿತ್ವಾತ್ ಪ್ರತ್ಯೇಕಂ ವಾ ಸಮೂಹಿನಃ ।**
**ಅನೇಕರೂಪಾ ಲಕ್ಷ್ಯಂತೇ ಕ್ರಮವಂತ ಇವಾಕ್ರಮಾಃ ॥ ೧೪ ॥**

ಅಥವಾ ಪರಸ್ಪರ ವಿಲಕ್ಷಣವಾದ ಅನೇಕರೂಪಗಳುಳ್ಳ ಕ್ರಿಯಾವಯವ–ಗಳು ತಮ್ಮ ಮುಂದಿನ ವ್ಯಾಪಾರಗಳಲ್ಲಿರುವ ಕ್ರಮಭಾಸನ ಶಕ್ತಿಯನ್ನು ಪ್ರತ್ಯೇಕವಾಗಿ ಆರೋಪಿಸಲ್ಪಟ್ಟವುಗಳಾಗಿ ಸ್ವತಃ ಕ್ರಮರಹಿತವಾದರೂ ಕ್ರಮವಂತಗಳೆಂಬಂತೆ ಪ್ರತೀತವಾಗುತ್ತವೆ.

**ವಿವರಣೆ :** ಕ್ರಿಯಾವಯವಗಳಾದ ಆಧಿಶ್ರಯಣಾದಿಗಳಲ್ಲಿ ಎಲ್ಲ ವ್ಯಾಪಾರ–ಸಮೂಹಗಳನ್ನು ಆರೋಪಿಸಬೇಕಾಗಿಲ್ಲ. ಆಯಾ ವ್ಯಾಪಾರದ ಮುಂದಿನ ಕೆಲವು ವ್ಯಾಪಾರಗಳನ್ನು ಮಾತ್ರ ಆರೋಪಿಸಿದರೆ ಸಾಕು. ಆಗಲೂ ಸಾಧ್ಯಸ್ವರೂಪದಿಂದ ಕ್ರಮವಂತವಾಗಿ ಒಂದೊಂದು ವ್ಯಾಪಾರವೂ ಕ್ರಿಯೆಯೆನ್ನಿಸಿಕೊಳ್ಳಬಹುದು. ಈ ಪಕ್ಷದಲ್ಲಿಯೂ ವರ್ತಮಾನಾದಿ ಕಾಲ ಸಂಬಂಧವು ಸುಲಭವಾಗಿ ಬರುತ್ತದೆ.

ವಿಶೇಷವೇನೆಂದರೆ ಈ ವ್ಯಾಪಾರಗಳಲ್ಲಿ ಉತ್ತರಭಾಗವನ್ನು ಪೂರ್ವ–ವ್ಯಾಪಾರದಲ್ಲಿ ಆರೋಪಿಸಬೇಕು. ಪೂರ್ವದಲ್ಲಿ ಗತವಾದ ವ್ಯಾಪಾರವನ್ನು ಮುಂದಿನ ವ್ಯಾಪಾರದಲ್ಲಿ ಆರೋಪಿಸಬಾರದು. ಸಂಸ್ಕಾರವಶದಿಂದ ಪೂರ್ವ ಭಾಗದ ಜೊತೆಗೆ ಪ್ರಕೃತವ್ಯಾಪಾರವು ಜ್ಞಾತವಾಗುವುದರಿಂದ ಆರೋಪವು ಅನಾವಶ್ಯಕ.

ಇನ್ನೂ ಒಂದು ಮಾರ್ಗ ಉಂಟು –

**ಅನಂತರಂ ಫಲಂ ಯಸ್ಯಾಃ ಕಲ್ಪತೇ ತಾಂ ಕ್ರಿಯಾಂ ವಿದುಃ ।**
**ಪ್ರಧಾನಭೂತಾಂ ತಾದರ್ಥ್ಯಾದನ್ಯಾಸಾಂ ತು ತದಾಖ್ಯತಾ ॥ ೧೫ ॥**

ಅಥವಾ ಯಾವ ವ್ಯಾಪಾರವಾದೊಡನೆ ವಿಕ್ಲಿತ್ತಿ ಮುಂತಾದ ಫಲವು ಹುಟ್ಟುವುದೋ ಆ ಅಂತ್ಯವ್ಯಾಪಾರವೇ ಕ್ರಿಯೆಯೆಂದು ಕೆಲವು ವಿದ್ವಾಂಸರು ತಿಳಿದಿದ್ದಾರೆ. ಸಾಕ್ಷಾತ್ ಫಲಜನಕವಾದ್ದರಿಂದ ಅಂತ್ಯವ್ಯಾಪಾರವೇ ಕ್ರಿಯೆ–ಯೆನ್ನಿಸುತ್ತದೆ. ಉಳಿದ ಅಧಿಶ್ರಯಣಾದಿಗಳು ಈ ಪ್ರಧಾನ ವ್ಯಾಪಾರಕ್ಕಾಗಿ ನಡೆಯುವುದರಿಂದ – ತಾದರ್ಥ್ಯವಾದ್ದರಿಂದ ಅವುಗಳಿಗೂ ಕ್ರಿಯೆ ಎಂಬ ವ್ಯಪದೇಶವು ಬರುತ್ತದೆ.

**ವಿವರಣೆ :** ಪಚಿಕ್ರಿಯೆ ನಡೆದಾಗ ಅಕ್ಕಿಯಲ್ಲಿ ವಿಕ್ಲಿತ್ತಿಯನ್ನು – ಅರಳಿ ಬಂದ ಮೃದುತ್ವವನ್ನು ಉಂಟುಮಾಡುವ ಅಂತ್ಯವ್ಯಾಪಾರವನ್ನು 'ವಿಚಟನ' ಎನ್ನುತ್ತಾರೆ.

ಅಂತ್ಯವ್ಯಾಪಾರವಾದ ವಿಚಟನವೇ ಕ್ರಿಯೆ. ಈ ವಿಚಟನಕ್ಕೆ ಅಧಿಶ್ರಯಣಾದಿ ಪೂರ್ವವ್ಯಾಪಾರಗಳು ಉಪಯುಕ್ತವಾದ್ದರಿಂದ ಅವನ್ನೂ ಕ್ರಿಯೆಯೆಂದು ವ್ಯವಹರಿಸುತ್ತಾರೆ. ವಿಚಟನಕ್ಕೆ ಮೊದಲಿನ ವ್ಯಾಪಾರವು ನಡೆಯುವಾಗಲೂ 'ಪಚತಿ' ಎಂಬ ಪ್ರಯೋಗವು ಬರಬಹುದು. ಅದರಲ್ಲಿ ಪೌರ್ವಾಪರ್ಯವನ್ನೂ ವಿಚಟನತ್ವವನ್ನೂ ಆರೋಪಿಸಬೇಕು. ವಿಚಟನಮಾತ್ರವು ಕ್ರಿಯೆಯಾದರೆ, ಅದರಲ್ಲಿ ಪೌರ್ವಾಪರ್ಯವೆಲ್ಲಿದೆ? ಅದೊಂದೇ ಹೇಗೆ ಕ್ರಿಯೆಯಾಗುತ್ತದೆ ? ಎಂಬೀ ಪ್ರಶ್ನೆಗಳಿಗೆ ಪೂರ್ವವ್ಯಾಪಾರಗಳಲ್ಲಿರುವ ಪೌರ್ವಾಪರ್ಯದ ಆರೋಪವೇ ಉತ್ತರ–ವಾಗುತ್ತದೆ. ಹೀಗೆ ಸರ್ವಪಕ್ಷಗಳಲ್ಲಿಯೂ ಆರೋಪದಿಂದಲೇ ಇಷ್ಟಸಿದ್ಧಿಯೆಂದು ತಿಳಿಯಬೇಕು.

ಈ ಪ್ರಕರಣದಲ್ಲಿ ಮುಖ್ಯವಾಗಿ ತಿಳಿದಿರಬೇಕಾದ ವಿಷಯಗಳಿವು.

೧. ಕ್ರಿಯೆಯು ಅನೇಕ ವ್ಯಾಪಾರಗಳ ಸಮೂಹವಾಗಿರುತ್ತವೆ. ಈ ವ್ಯಾಪಾರಗಳು ಕ್ರಮವಿಶಿಷ್ಟವಾಗಿ ಸಾಧ್ಯತ್ವೇನ ಪ್ರತೀತವಾಗುತ್ತವೆ. ಸಾಧ್ಯತ್ವೇನ ಪ್ರತೀತವಾಗುವುದೇ ಕ್ರಿಯೆಯ ಮುಖ್ಯ ಸ್ವಭಾವ.

೨. ಲೋಕವ್ಯವಹಾರ ಸಿದ್ಧಿಗಾಗಿ ಮೂರು ಮಾರ್ಗಗಳನ್ನು ಅನುಸರಿಸ–ಬಹುದೆಂದು ಶಾಸ್ತ್ರಕಾರರ ಅಭಿಪ್ರಾಯ –

ಅ. ಸಮುದಾಯದ ನಡುವೆ ಇರುವ ವ್ಯಾಪಾರದಲ್ಲಿ ಸಮೂಹತ್ವವನ್ನು ಆರೋಪಿಸಿ ಆ ವ್ಯಾಪಾರವನ್ನು ಕ್ರಿಯೆಯೆಂದು ವ್ಯವಹರಿಸಬಹುದು.

ಆ. ಆ ನಡುವಿನ ವ್ಯಾಪಾರದಲ್ಲಿ ಅದರ ಮುಂದಿನ ಎಲ್ಲಾ ವ್ಯಾಪಾರ ಸಮುದಾಯವನ್ನು ಆರೋಪಿಸಿ ಕ್ರಿಯೆಯೆನ್ನಬಹುದು.

ಇ. ಅಂತ್ಯವ್ಯಾಪಾರವನ್ನು ಮಾತ್ರ ಕ್ರಿಯೆಯೆಂದು ತಿಳಿಯಬೇಕು. ಅದರಲ್ಲಿ ಪೂರ್ವವ್ಯಾಪಾರಗಳ ಪೌರ್ವಾಪರ್ಯವನ್ನು ಆರೋಪಿಸಬಹುದು.

ಕ್ರಿಯಾಲಕ್ಷಣದಲ್ಲಿ ಯಾವ ಭೇದವೂ ಇಲ್ಲ. ಲೋಕವ್ಯವಹಾರವನ್ನು ಅನುಸರಿಸಿ ಸಮೂಹ ಘಟಕ ವ್ಯಾಪಾರಗಳಲ್ಲಿ ಕ್ರಿಯಾಧರ್ಮವನ್ನು ಆರೋಪಿಸಿಕೊಳ್ಳಬೇಕು.

೩. ತಿಙಂತದಲ್ಲಿ ಮಾತ್ರ ಕ್ರಿಯೆಯು ಪೂರ್ವಾಪರೀಭಾವದಿಂದ ತೋರುತ್ತದೆ. ಕೃದಂತದಲ್ಲಿ ದ್ರವ್ಯದಂತೆ ಸಿದ್ಧಸ್ವರೂಪವಾಗಿ ತೋರುತ್ತದೆ.

೪. ಸರ್ವವ್ಯಾಪಾರಗಳೂ ಫಲಾರ್ಥವಾದ್ದರಿಂದ ವಿಕ್ಲಿತ್ತಿ ಮುಂತಾದ

ಫಲವೂ ಧಾತ್ವರ್ಥವೆಂದು ವೈಯಾಕರಣಸಿದ್ಧಾಂತ. ಪಚ್ ಧಾತುವಿಗೆ ವಿಕ್ಲಿತ್ಯನುಕೂಲ ವ್ಯಾಪಾರವು ಅರ್ಥ. ವಿಕ್ಲಿತ್ತ್ಯನುಕೂಲವೆಂದರೆ ವಿಕ್ಲಿತ್ತಿ–ಜನಕ ಎಂದರ್ಥ. ಇಲ್ಲಿ ವ್ಯಾಪಾರವೆಂದರೆ ಕ್ರಿಯೆ. ಗಮ್ ಧಾತುವಿಗೆ ಉತ್ತರದೇಶ ಸಂಯೋಗಾನುಕೂಲ ವ್ಯಾಪಾರವೆಂದರ್ಥ. ಉತ್ತರದೇಶ ಸಂಯೋಗವು ಇಲ್ಲಿ ಫಲ. ಅಕರ್ಮಕಧಾತುವಿಗೂ ಫಲವಿದೆ. ಈ ಫಲವು ಕರ್ತೃವಿನಲ್ಲಿ ಇದ್ದರೆ ಆಕರ್ಮಕವೆಂದೂ ಕರ್ಮದಲ್ಲಿದ್ದರೆ ಸಕರ್ಮಕವೆಂದೂ ತಿಳಿಯಬೇಕು. ಅಸ್ತಿ ಎಂಬಲ್ಲಿ ಆತ್ಮಧಾರಣಾನು–ಕೂಲ ವ್ಯಾಪಾರವೆಂದು ಅಸ್‌ಧಾತ್ವರ್ಥ. ಆತ್ಮಧಾರಣವು ಫಲ. ಅದು ಕರ್ತೃವಿನಲ್ಲಿ ಇರುವುದರಿಂದ ಅಸ್ ಧಾತು ಅಕರ್ಮಕ.

ಅಸ್‌ಧಾತ್ವರ್ಥವಾದ ಸತ್ತೆಯೂ ಸಾಧ್ಯಸ್ವರೂಪವಾಗುವುದು ಹೇಗೆ –

**ಸತ್ಸು ಪ್ರತ್ಯಯರೂಪೋಽಸೌ ಭಾವೋ ಯಾವನ್ನ ಜಾಯತೇ ।**
**ತಾವತ್ ಪರೇಷಾಂ ರೂಪೇಣ ಸಾಧ್ಯಃ ಸನ್ನಭಿಧೀಯತೇ ॥ ೧೬ ॥**

ಸತ್ಸು = ತನ್ನ ಹೇತುಗಳಲ್ಲಿ, ಪ್ರತ್ಯಯರೂಪಃ = ಬೌದ್ಧವಾಗಿ ಕಾರಣ–ರೂಪದಲ್ಲಿರುವ, ಅಸೌ ಭಾವಃ = ಮುಂದೆ ಕಾರ್ಯರೂಪವನ್ನು ಪಡೆಯುವ ಪದಾರ್ಥವು, ಯಾವನ್ನ ಜಾಯತೇ = ಎಲ್ಲಿಯವರೆಗೆ ಕಾರ್ಯರೂಪದಿಂದ ಅಸ್ತಿತ್ವವನ್ನು ಪಡೆಯುವುದಿಲ್ಲವೋ, ತಾವತ್ = ಅಲ್ಲಿಯವರೆಗೆ ಮಧ್ಯಕಾಲ–ದಲ್ಲಿ, ಪರೇಷಾಂ ರೂಪೇಣ = ತನಗೆ ಅನ್ಯವಾದ ಹೇತುಗಳ ರೂಪದಿಂದ ಕೂಡಿ, ಸಾಧ್ಯಃ ಸನ್ = ಕಾರ್ಯದಲ್ಲಿ ಸಾಧ್ಯವಾಗುತ್ತ, ಅಭಿಧೀಯತೇ = ಸಾಧ್ಯಮಾನ ಸ್ವರೂಪದಲ್ಲಿ ಉಕ್ತವಾಗುತ್ತದೆ.

**ವಿವರಣೆ :** ಸತ್ಕಾರ್ಯವಾದದಂತೆ ಕಾರ್ಯವು ಕಾರಣರೂಪದಲ್ಲಿ ಮೊದಲು ಇರುತ್ತದೆ. ಅದೇ ಕಾರ್ಯರೂಪವನ್ನು ಪಡೆದಾಗ ಹುಟ್ಟಿತು ಎನಿಸಿಕೊಳ್ಳುತ್ತದೆ. ಮಣ್ಣಿನಲ್ಲಿ ಗಡಿಗೆ ಕಾರಣರೂಪದಲ್ಲಿರುತ್ತದೆ. ಕುಂಬಾರನ ಉಪಕರಣ ಸಾಮಗ್ರಿ ದೊರಕಿದಾಗ ಅದು ಗಡಿಗೆಯಾಗಿ ಪರಿಣಮಿಸುತ್ತದೆ. ಹಾಗೆಯೇ ಈ ಶ್ಲೋಕದ ಅರ್ಥವಿದೆ. ಪ್ರಕೃತದಲ್ಲಿ ವಿಚಾರ್ಯವಾದದ್ದು ಘಟಾದಿಗಳ ಸತ್ತಾ. ಸತ್ತೆಯನ್ನು ಪಡೆಯುವುದಕ್ಕೆ ಅಭಿಮುಖವಾಗುವುದು, ಹುಟ್ಟುವುದು ಎನಿಸುತ್ತದೆ. 'ಸತ್ತಾಪ್ರತಿ ಲಂಭಾಭಿಮುಖ್ಯಂ ಹಿ ಜನ್ಮ'. ಈ ಜನ್ಮವನ್ನು ಪಡೆಯುವ ಘಟವು ಮೊದಲು ಹೇತುಸಾಮಗ್ರಿಗಳಲ್ಲಿ ಕಾರಣರೂಪದಿಂದ ಇರುತ್ತದೆ. ಅದು ಕೇವಲ ಬುದ್ಧಿಗೋಚರ. ಹೇತುವಾದ ಮಣ್ಣು ಸಿದ್ಧಸ್ವರೂಪವಾದ್ದರಿಂದ ಜನನ ಕ್ರಿಯೆಗೆ ಕರ್ತೃವಾಗಬಹುದು.

ಆದ್ದರಿಂದ ಘಟವು ಹುಟ್ಟುತ್ತದೆ ಎಂಬ ಪ್ರಯೋಗವು ಬರುತ್ತದೆ. ಇಲ್ಲಿ ಘಟವು ಹೇತುವಾದ ಮಣ್ಣಿನ ಸ್ವರೂಪದಲ್ಲಿದೆ. ಅದು ಕ್ರಮವಾಗಿ ಸಾಧ್ಯಸ್ವರೂದಿಂದ ಪರಿಣಮಿಸುತ್ತ ಕಾರ್ಯವಾದ ಘಟವಾಗಿ ಹುಟ್ಟಿ 'ಅಸ್ತಿ' ಎಂಬ ಸತ್ತಾಸ್ವರೂಪವನ್ನು ಪಡೆಯುತ್ತದೆ. ಸಾಧ್ಯಸ್ವರೂಪವು ತಿಙಂತದಿಂದ ಅಭಿಹಿತವಾಗಿದೆ.

ಏನಾಯಿತೆಂದರೆ ಸತ್ತಾಸ್ವರೂಪವು ಸಿದ್ಧ, ಸಾಧ್ಯ ಎಂಬ ಎರಡು ಸ್ವರೂಪಗಳನ್ನು ಪಡೆದಿದೆ. ಅದು ಕಾರ್ಯಕಾರಣಗಳೆರಡರ ಸ್ಥಿತಿಗೆ ಅನ್ವಯಿಸುವ ಸ್ವರೂಪದ್ವಯವನ್ನು ಹೊಂದಿದೆ. ಕಾರಣಕ್ಕೆ ಅನ್ವಯಿಸಿದಾಗ ಸಿದ್ಧ, ಕಾರ್ಯಕ್ಕೆ ಅನ್ವಯಿಸಿದಾಗ ಸಾಧ್ಯ. ಅಸ್ತಿ ಎಂಬ ವ್ಯವಹಾರಕ್ಕೆ ಪೂರ್ವಭಾವಿಯಾದದ್ದು ಜನ್ಮ. ಮೊದಲು ಘಟೋ ಜಾಯತೇ, ಅನಂತರ ಘಟಃ ಅಸ್ತಿ, ಇವೆರಡು ಅವಸ್ಥೆಗಳೂ ಭಾವವಿಕಾರಗಳಾದವು. ಆದ್ದರಿಂದ ಅಸ್ತಿ ಎಂಬಲ್ಲಿ ತೋರುವ ಸತ್ತೆಯು ಕ್ರಮವಿಶಿಷ್ಟವಾಗಿ ಸಾಧ್ಯಸ್ವರೂಪವನ್ನು ತಾಳುವುದರಿಂದ ಕ್ರಿಯೆ ಎನ್ನಿಸುತ್ತದೆ. ಮೊದಲು ಜಾಯತೇ, ಅನಂತರ ಅಸ್ತಿ.

**ಸಿದ್ಧೇ ತು ಸಾಧನಾಕಾಂಕ್ಷಾ ಕೃತಾರ್ಥತ್ವಾನ್ನಿವರ್ತತೇ ।**
**ನ ಕ್ರಿಯಾವಾಚಿನಾಂ ತಸ್ಮಾತ್ ಪ್ರಯೋಗಸ್ತತ್ರ ವಿದ್ಯತೇ ॥೧೭॥**

ಹೀಗೆ ಕ್ರಿಯೆಯು ಸಿದ್ಧಸ್ವರೂಪವನ್ನು ಪಡೆದ ಮೇಲೆ ಸಾಧ್ಯವಾದದ್ದು ಇಲ್ಲದ್ದರಿಂದ ಸಾಧನಾಕಾಂಕ್ಷೆ ಇರುವುದಿಲ್ಲ. ಆದ್ದರಿಂದ ಮತ್ತೆ ಕ್ರಿಯಾವಾಚಿ-ಯಾದ ತಿಙಂತದ ಪ್ರಯೋಗವು ಅಲ್ಲಿ ಬರುವುದಿಲ್ಲ.

**ವಿವರಣೆ :** ಸಿದ್ಧವಾದ ಕ್ರಿಯೆಯು ಭಾವವೆನಿಸುತ್ತದೆ. ಉತ್ಪತ್ತಿ, ಪಾಕ, ಸ್ನಾನ – ಇವೆಲ್ಲವೂ ಭಾವಗಳು. ಈ ಕ್ರಿಯೆಗಳು ನಿಷ್ಪನ್ನವಾದ ಮೇಲೆ ಪುನಃ ಅಂಕುರಃ ಉತ್ಪದ್ಯತೇ, ಪಚತಿ, ಸ್ನಾತಿ – ಮುಂತಾದ ಕ್ರಿಯಾವಾಚಿಗಳನ್ನು ಪ್ರಯೋಗಿಸುವುದಿಲ್ಲ.

**ಸ ಚಾಪೂರ್ವಾಪರೀಭೂತ ಏಕತ್ವಾದಕ್ರಮಾತ್ಮಕಃ ।**
**ಪೂರ್ವಾಪರಾಣಾಂ ಧರ್ಮೇಣ ತದರ್ಥೇನಾನುಗಮ್ಯತೇ ॥ ೧೮ ॥**

ಹಿಂದೆ ಫಲಜನಕವಾದ ಅಂತ್ಯವ್ಯಾಪಾರವನ್ನು ಕ್ರಿಯೆಯೆನ್ನಬಹುದೆಂದು ಮೂರನೆಯ ಒಂದು ಪಕ್ಷವನ್ನು ಹೇಳಿದೆಯಷ್ಟೆ. ಫಲನಿಷ್ಪತ್ತಿಗೆ ಅವ್ಯವಹಿತ ಪೂರ್ವದಲ್ಲಿರುವ ಕಡೆಯ ವ್ಯಾಪಾರವನ್ನು ಈ ಶ್ಲೋಕದಲ್ಲಿರುವ 'ಸಃ' ಎಂಬ ಪದದಿಂದ ಗ್ರಹಿಸಬೇಕು. ಆ ಕಡೆಯ ಒಂದು ವ್ಯಾಪಾರದಲ್ಲಿ ಕ್ರಮವಿಶಿಷ್ಟತೆ

ಇಲ್ಲ. ಪೂರ್ವಾಪರಭೂತ ಧರ್ಮವೂ ಇಲ್ಲ. ಹೀಗಿರುವಾಗ ಅದನ್ನು ಕ್ರಿಯೆಯೆಂದು ಹೇಗೆ ಹೇಳಲು ಸಾಧ್ಯ? ಎಂಬ ಪ್ರಶ್ನೆಗೆ ಇದು ಸಮಾಧಾನ.

**ವಿವರಣೆ :** ಇಲ್ಲಿಯೂ ಸಹ ಕಡೆಯ ವ್ಯಾಪಾರಕ್ಕೆ ಉಪಕಾರಿಗಳಾದ ಇತರ ವ್ಯಾಪಾರಗಳ ಪೌರ್ವಾಪರ್ಯವನ್ನು ಇದರಲ್ಲಿ ಆರೋಪಿಸಬೇಕು. ಆಗ ಕಡೆಯ ವ್ಯಾಪಾರವು ಸಾಧ್ಯಸ್ವರೂಪವನ್ನು ಪಡೆದು ಕ್ರಿಯೆಯಾಗುತ್ತದೆ ಎಂದು ಅಭಿಪ್ರಾಯ. ಹೀಗೆ ಸಮಸ್ತ ಕ್ರಿಯೆಗಳೂ ಸಮೂಹಾತ್ಮಕವಾಗಿ ಕ್ರಮವಿಶಿಷ್ಟವಾದ ಸಾಧ್ಯಸ್ವರೂಪವನ್ನು ಪಡೆದೇ ಇರುತ್ತದೆ. ಇದೇ ಅಸತ್ತ್ವ ಭೂತಕ್ರಿಯೆ. ತಿಙಂತವು ಈ ಬಗೆಯ ಕ್ರಿಯೆಯನ್ನೇ ಬೋಧಿಸುತ್ತದೆ ಎಂದು ತಿಳಿಯಬೇಕು.

**ಅಸನ್ನಿವರ್ತತೇ ತಸ್ಮಾತ್ ಯತ್ ಸತ್ ತದುಪಲಭ್ಯತೇ ।**
**ತಯೋಃ ಸದಸತೋಶ್ಚಾಸಾವಾತ್ಮೈಕ ಇವ ಗೃಹ್ಯತೇ ॥ ೧೯ ॥**

ಅಸತ್ ಆದ ವ್ಯಾಪಾರವು ನಷ್ಟವಾದದ್ದು. ಯಾವುದು ಉಪಲಬ್ಧ-ವಾಗುತ್ತದೆಯೋ ಅದು ಸತ್. ಈ ಸದಸತ್ತುಗಳಿಗೆ ಪೌರ್ವಾಪರ್ಯವಿಶಿಷ್ಟತೆ ಇಲ್ಲ. ಏಕೆಂದರೆ ಉಭಯವೂ ಏಕಕಾಲದಲ್ಲಿ ಉಪಲಬ್ಧವಾಗುವುದಿಲ್ಲ. ಆದರೂ ಅಧ್ಯಾಸಮೂಲಕವಾದ ಅಧ್ಯಾರೋಪದಿಂದ ಕ್ರಿಯಾ ರೂಪವು ಒಂದೇ ಎಂದು ಗೃಹೀತವಾಗುತ್ತದೆ.

**ವಿವರಣೆ :** ಹಿಂದೆ ಹೇಳಿದುದರ ಉಪಸಂಹಾರವಿದು. ಧಾತುವಾಚ್ಯ-ವ್ಯಾಪಾರಗಳು ಏಕಫಲೋದ್ದೇಶದಿಂದ ಪ್ರವೃತ್ತವಾಗಿದೆ. ಆ ವ್ಯಾಪಾರಗಳೆಲ್ಲವೂ ಕ್ಷಣಿಕಗಳು. ದ್ವಿತೀಯ ಕ್ಷಣದಲ್ಲಿ ಇರುವುದಿಲ್ಲವಾದ್ದರಿಂದ ಅವೆಲ್ಲವೂ ಅಸತ್. ಫಲನಿಷ್ಪತ್ತಿಗೆ ಪೂರ್ವದಲ್ಲಿರುವ ವ್ಯಾಪಾರವು ಆ ಕ್ಷಣದಲ್ಲಿ ಸತ್. ಭವಿಷ್ಯತ್ಕಾಲದ ವ್ಯಾಪಾರಗಳು ವರ್ತಮಾನಕಾಲದಲ್ಲಿ ಅಸತ್. ಧಾತ್ವರ್ಥವಾದ ಈ ಸದಸದ್ ವ್ಯಾಪಾರಗಳು ಸಂಕಲನಾತ್ಮಕ ಬುದ್ಧಿಯಿಂದ ಏಕ ಕಾಲದಲ್ಲಿ ಗೃಹೀತವಾಗಿ ಒಂದು ಎಂಬ ವ್ಯವಹಾರವು ಬರುತ್ತದೆ. ಸಮೂಹತ್ವದ ಆರೋಪದಿಂದ ಒಂದು ವ್ಯಾಪಾರವೂ ಕ್ರಿಯೆಯೆನಿಸಬಹುದು.

ಪದಗಳಿಗೆ ಅರ್ಥವನ್ನು ಬೋಧಿಸುವ ಶಕ್ತಿ ಇದೆಯಷ್ಟೆ. ಈ ಶಕ್ತಿ ಘಟ ಪಟಾದಿ ವ್ಯಕ್ತಿಗಳನ್ನು ಬೋಧಿಸುತ್ತದೆಯೇ ? ಅಥವಾ ಘಟತ್ವ ಪಟತ್ವಾದಿ ಜಾತಿಯನ್ನು ಬೋಧಿಸುತ್ತದೆಯೇ? ಎಂಬ ವಿಷಯದಲ್ಲಿ ಎರಡು ಪಕ್ಷಗಳಿವೆ. ಇದನ್ನು 'ಪದಾರ್ಥಾನಾಮಪೋದ್ಧಾರೇ ಜಾತಿರ್ವಾ ವ್ಯಕ್ತಿರೇವ ವಾ' ಎಂದು ವಾಕ್ಯಪದೀಯದಲ್ಲಿ ವಿಚಾರ ಮಾಡಿದ್ದಾರೆ (ವಾಕ್ಯ. ೩-ಜಾತಿ.೩)

ಕ್ರಿಯಾಶಬ್ದದ ಅರ್ಥವು ವ್ಯಾಪಾರವೆಂದು ಇದುವರೆಗೆ ಹೇಳಿರುವುದು ವ್ಯಕ್ತಿ ಶಕ್ತಿವಾದಿಗಳ ಮತ. ವ್ಯಾಪಾರಗಳು ಜಾತಿ ವಿಶಿಷ್ಟ ವ್ಯಾಪಾರಗಳು. ಈಗ ಜಾತಿ ಶಕ್ತಿವಾದಿಗಳ ಮತವನ್ನು ನಿರೂಪಿಸಲಾಗುವುದು.

**ಜಾತಿಮನ್ಯೇ ಕ್ರಿಯಾಮಾಹುರನೇಕವ್ಯಕ್ತಿವರ್ತಿನೀಮ್ ।**
**ಅಸಾಧ್ಯಾ ವ್ಯಕ್ತಿರೂಪೇಣ ಸಾ ಸಾಧ್ಯೇವೋಪಲಕ್ಷ್ಯತೇ ॥ ೨೦ ॥**

ಕೆಲವು ವಾದಿಗಳು ಅನೇಕ ವ್ಯಕ್ತಿಗಳಲ್ಲಿ ಒಂದೇ ಆಗಿರುವ ವ್ಯಾಪಾರತ್ವ-ವೆಂಬ ಜಾತಿಯು ಕ್ರಿಯೆ ಎನ್ನುತ್ತಾರೆ. ಇದು ಸಾಧ್ಯಸ್ವರೂಪವಾಗಿಲ್ಲದಿದ್ದರೂ ವ್ಯಾಪಾರ ವ್ಯಕ್ತಿನಿಷ್ಠವಾದ ಸಾಧ್ಯತ್ವವನ್ನು ಆರೋಪಿಸಿದಾಗ ಈ ಜಾತಿಯೂ ಸಾಧ್ಯಸ್ವರೂಪವುಳ್ಳದ್ದಾಗುತ್ತದೆ.

**ವಿವರಣೆ :** ಚೈತ್ರಃ ತಂಡುಲಂ ಪಚತಿ, ಮೈತ್ರಃ ಚಣಕಂ ಪಚತಿ – ಎಂದು ಹೇಳಿದಾಗ ವಿಕ್ಲಿತ್ತಿ ಮತ್ತು ವಿಕ್ಲಿತ್ತಿಜನಕ ವ್ಯಾಪಾರಗಳು ಒಂದೇ ಬಗೆಯಲ್ಲಿ ಪ್ರತೀತವಾಗುತ್ತವೆ. ಎಂದರೆ ಬೇರೆಬೇರೆ ಕರ್ತೃಗಳಲ್ಲಿಯೂ ಬೇರೆಬೇರೆ ಕರ್ಮಗಳಲ್ಲಿಯೂ ಇರುವ ಧಾತ್ವರ್ಥಕ್ರಿಯೆಯು ಏಕರೂಪವಾಗಿ ಪ್ರತೀತವಾಗುವು-ದರಿಂದ ವ್ಯಕ್ತಿಯು ಕ್ರಿಯೆಯಲ್ಲ. ವ್ಯಕ್ತಿಗಳು ಬೇರೆ ಸ್ವರೂಪದಲ್ಲಿರುತ್ತವೆ. ಆಗ ಕ್ರಿಯೆಯೂ ಬೇರೆಬೇರೆ ವಿಧದಲ್ಲಿ ತೋರಬೇಕಾಗುತ್ತದೆ. ಆದ್ದರಿಂದ ಆ ಎಲ್ಲ ವ್ಯಾಪಾರ ವ್ಯಕ್ತಿಗಳಲ್ಲಿರುವ ಜಾತಿಯೇ ಕ್ರಿಯೆ ಎನ್ನುವುದು ಸರಿ. ಚಣಕ = ಕಡಲೆ.

**ಅಂತೇ ಯಾ ವಾ ಕ್ರಿಯಾಭಾಗೇ ಜಾತಿಃ ಸೈವ ಕ್ರಿಯಾ ಸ್ಮೃತಾ ।**
**ಸಾ ವ್ಯಕ್ತೇರನುನಿಷ್ಪಾದೇ ಜಾಯಮಾನೇವ ಗಮ್ಯತೇ ॥ ೨೧ ॥**

ಅಥವಾ ಯಾವ ಕ್ರಿಯಾವ್ಯಕ್ತಿಯ ಅನಂತರದಲ್ಲಿ ಫಲವು ಹುಟ್ಟುತ್ತ-ದೆಯೋ ಆ ಅಂತ್ಯ ವ್ಯಾಪಾರದಲ್ಲಿರುವ ಜಾತಿಯೇ ಕ್ರಿಯೆಯೆಂದು ಶಾಸ್ತ್ರದಲ್ಲಿ ಸ್ಮೃತವಾಗಿದೆ. ಅದಕ್ಕೆ ಆಶ್ರಯವಾದ ವ್ಯಾಪಾರವ್ಯಕ್ತಿಯು ಕಾರಕಗಳಿಂದ ನಿಷ್ಪನ್ನವಾದಾಗ ಅದರಲ್ಲಿರುವ ಈ ಕ್ರಿಯಾಜಾತಿಯು ಹುಟ್ಟುವಂತೆ ತೋರು-ತ್ತದೆ.

**ವಿವರಣೆ :** ವ್ಯಕ್ತಿ ಶಕ್ತಿವಾದದಲ್ಲಿ ಹೇಳಿದಂತೆ ಅಂತ್ಯವ್ಯಾಪಾರವು ಫಲಜನಕವಾದ್ದರಿಂದ ಅಂತ್ಯವ್ಯಾಪಾರ ನಿಷ್ಠ ಜಾತಿಯೇ ಕ್ರಿಯೆಯೆಂದು ಜಾತಿಶಕ್ತಿವಾದಿಗಳ ಮತವೂ ಇದೆ. ಅದು ನಿತ್ಯವಾದರೂ ಆಶ್ರಿತವ್ಯಾಪಾರವು ಹುಟ್ಟುವುದರಿಂದ ಇದೂ ಹುಟ್ಟಿದಂತೆ ಪ್ರತೀತವಾಗುತ್ತದೆ. ವ್ಯಾಪಾರಸಮೂಹದಲ್ಲಿ

ಹೇಳಿದಂತೆ ಕ್ರಮವಿಶಿಷ್ಟತೆಯನ್ನೂ ಸಾಧ್ಯತ್ವವನ್ನೂ ಇದರಲ್ಲಿ ಆರೋಪಿಸಿದಾಗ ಕ್ರಿಯಾ ಲಕ್ಷಣವು ಜಾತಿಗೂ ಬರುತ್ತದೆ.

ಜಾತಿಯು ಪರಾ, ಅಪರಾ ಎಂದು ಎರಡು ವಿಧ. ಜಾತಿಗೆ ಸಾಮಾನ್ಯ ಎಂದು ಇನ್ನೊಂದು ಹೆಸರಿದೆ. ಸತ್ತಾ ಎನ್ನುವ ಜಾತಿಯು ಸರ್ವ ವ್ಯಾಪಕವಾದ್ದರಿಂದ ಪರಾ ಜಾತಿ ಅಥವಾ ಮಹಾಸಾಮಾನ್ಯ. ಮನುಷ್ಯತ್ವ, ವೃಕ್ಷತ್ವ, ಘಟತ್ವ ಮೊದಲಾದವು ಅಪರಾಜಾತಿಗಳು. ಸತ್ತೆಯಿಂದ ವ್ಯಾಪ್ಯವಾದವು. ವ್ಯಾಪಾರನಿಷ್ಠ ಜಾತಿಯು ಬರಿಯ ಸಾಮಾನ್ಯ. ಇದು ಕ್ರಿಯೆಯೆಂದು ಹೇಳಿದ್ದಾಯಿತು. ಮಹಾಸಾಮಾನ್ಯವಾದ ಸತ್ತೆಯೇ ಕ್ರಿಯೆ ಎಂಬ ಇನ್ನೊಂದು ಪಕ್ಷವನ್ನೀಗ ನಿರೂಪಿಸುತ್ತಾರೆ.

**ಸ್ವವ್ಯಾಪಾರವಿಶಿಷ್ಟಾನಾಂ ಸತ್ತಾ ವಾ ಕರ್ತೃಕರ್ಮಣಾಮ್ ।**
**ಕ್ರಿಯಾವ್ಯಾಪಾರಭೇದೇಷು ಸತ್ತಾ ವಾ ಸಮವಾಯಿನೀ॥ ೨೨ ॥**

ಅಥವಾ ಬೇರೆ ಬೇರೆ ತಮ್ಮ ವ್ಯಾಪಾರಗಳಿಂದ ಕೂಡಿದ ಕರ್ತೃಕರ್ಮಗಳ ಸತ್ತೆಯೇ ಕ್ರಿಯೆಯೆಂದಾಗಲಿ ಅಥವಾ ವಿಭಿನ್ನ ವ್ಯಾಪಾರ ವ್ಯಕ್ತಿಗಳಲ್ಲಿರುವ ಸತ್ತಾಜಾತಿಯೇ ಕ್ರಿಯೆಯಾಗಲಿ.

**ವಿವರಣೆ :** ಸತ್ತಾ ಎಂಬುದು ಮಹಾ ಸಾಮಾನ್ಯವಾಗಿದ್ದು ಎಲ್ಲ ವ್ಯಕ್ತಿಗಳಲ್ಲೂ ಇರುತ್ತದೆ. ಕರ್ಮನಿಷ್ಠವಾದ ಫಲವೂ ಧಾತ್ವರ್ಥವಾದ್ದರಿಂದ ಅದನ್ನೂ ವ್ಯಾಪಾರವೆಂದೇ ತಿಳಿಯಬೇಕು. ಈ ವ್ಯಾಪಾರವಿಶಿಷ್ಟ ಕರ್ತೃ ಕರ್ಮಗಳೆಂಬ ಉಪಾಧಿಯಿಂದ ಸಹಿತವಾದ ಮಹಾಸಾಮಾನ್ಯವನ್ನೇ ಕ್ರಿಯೆ ಎಂದು ಹೇಳಿದರೂ ದೋಷವಿಲ್ಲ. ಹಿಂದಿನ ಶ್ಲೋಕದಲ್ಲಿ ವ್ಯಾಪಾರ ನಿಷ್ಠವಾದ ಕೇವಲ ಸಾಮಾನ್ಯವನ್ನು ಕ್ರಿಯೆಯೆಂದು ಹೇಳಲಾಗಿತ್ತು. ಈಗ ವ್ಯಾಪಕವಾದ ಮಹಾಸಾಮಾನ್ಯ (ಪರಾಜಾತಿ)ವನ್ನು ಕ್ರಿಯೆಯೆಂದು ಹೇಳಿದೆ.

ಅಥವಾ ಈ (ಕರ್ತೃ ಕರ್ಮ) ವ್ಯಾಪಾರಗಳಲ್ಲಿರುವ ಮಹಾ ಸಾಮಾನ್ಯವೇ ಕ್ರಿಯೆಯಾಗಲಿ – ಎಂದು ಇದರಲ್ಲಿಯೇ ಪಕ್ಷಾಂತರವನ್ನು ಈ ಶ್ಲೋಕದಲ್ಲಿ ಹೇಳಿದೆ. ಈ ಪಕ್ಷದಲ್ಲಿ ಕರ್ತೃಕರ್ಮ ಎಂಬ ವಿಶೇಷಣವೂ ಅನಾವಶ್ಯಕ. ವ್ಯವಹಿತವಾದ ಕರ್ತೃಕರ್ಮಗಳನ್ನೂ ಉಪಾಧಿಯಾಗಿ ಸೇರಿಸುವುದು ಅನಾವಶ್ಯಕವೆಂದು ಅಭಿಪ್ರಾಯ. ಧಾತ್ವರ್ಥ ವ್ಯಾಪಾರಗಳಲ್ಲಿರುವ ಸತ್ತಾ ಜಾತಿಯು ಕ್ರಿಯೆ ಎಂದರ್ಥ.

**ಅಂತ್ಯೇ ವಾತ್ಮನಿ ಯಾ ಸತ್ತಾ ಸಾ ಕ್ರಿಯಾ ಕೈಶ್ಚಿದಿಷ್ಯತೇ ।**
**ಭಾವ ಏವ ಹಿ ಧಾತ್ವರ್ಥ ಇತ್ಯವಿಚ್ಛಿನ್ನ ಆಗಮಃ ॥ ೨೩ ॥**

ಅಥವಾ ಫಲ ಜನಕವಾದ ಅಂತ್ಯಭಾಗಾತ್ಮಕ ವ್ಯಾಪಾರದಲ್ಲಿರುವ ಯಾವ ಸತ್ತಾಜಾತಿಯುಂಟೋ ಅದೇ ಕ್ರಿಯೆಯೆಂದು ಕೆಲವರ ಅಭಿಪ್ರಾಯ ಉಂಟು. ಪೂರ್ವ ವ್ಯಾಪಾರಗಳಲ್ಲಿರುವ ಜಾತಿಗಳು ಫಲಜನನಕ್ಕೆ ಉಪಕಾರಿಗಳು. ಸತ್ತಾರೂಪವಾದ ಭಾವವೇ ಧಾತ್ವರ್ಥವೆನ್ನುವುದು ಹಿಂದಿನ ಪರಂಪರೆಯಿಂದ ಅವಿಚ್ಛಿನ್ನವಾಗಿ ಬಂದ ಸಂಪ್ರದಾಯವಾಗಿದೆ.

**ವಿವರಣೆ :** ಲೋಕಪ್ರಸಿದ್ಧವಾದ ವ್ಯಾಪಾರವು ಕ್ರಿಯೆಯೆಂಬ ಪಕ್ಷವನ್ನು ಬಿಟ್ಟು ಜಾತಿಯು ಕ್ರಿಯೆ, ಸತ್ತೆಯು ಕ್ರಿಯೆ ಎಂದು ತೊಳಲಾಡುವುದೇಕೆ? ಯಾವ ಪಕ್ಷದಲ್ಲಿಯೂ ಉಪಾಧಿಯನ್ನಾಶ್ರಯಿಸುವುದು ತಪ್ಪುವುದಿಲ್ಲ – ಎಂಬ ಶಂಕೆಗೆ ಇದು ಸಮಾಧಾನ. ಹಿಂದಿನಿಂದ ಈ ಸತ್ತಾಜಾತಿವಾದವು ಬಂದಿದೆ. ನಾವು ಹೊಸದಾಗಿ ಕಲ್ಪಿಸಿಲ್ಲ ಎಂದು ಅಭಿಪ್ರಾಯ. ಈ ವಾದದಲ್ಲಿಯೂ ಸತ್ತೆಯೇ ಕ್ರಿಯೆಯೆನ್ನುವುದೂ ಪ್ರಾಭಾಕರರ ಸಿದ್ಧಾಂತ. ಇವರು ಮೀಮಾಂಸಕರ ಒಂದು ವರ್ಗಕ್ಕೆ ಸೇರಿದವರು.

ಬೌದ್ಧರ ಮತ ಹೀಗೆ –

**ಬುದ್ಧಿಂ ತಜ್ಜಾತಿಮನ್ಯೇ ತು ಬುದ್ಧಿಸತ್ತಾಮಥಾಪರೇ ।**
**ಪ್ರತ್ಯಸ್ತರೂಪಾಂ ಭಾವೇಷು ಕ್ರಿಯೇತಿ ಪ್ರತಿಜಾನತೇ ॥ ೨೪ ॥**

ಅನ್ಯೇ ತು = ಇನ್ನು ಕೆಲವರು (ಬೌದ್ಧರು), ಬುದ್ಧಿಂ = ಬುದ್ಧಿಯಲ್ಲಿ ವ್ಯಾಪಾರಾಕಾರವಾಗಿ ತೋರುವ ವಿಕಲ್ಪವನ್ನು, ತಜ್ಜಾತಿಂ = ವ್ಯಾಪಾರದಲ್ಲಿ ವಿಕಲ್ಪವಾಗಿ ತೋರುವ ಜಾತಿಯನ್ನು, ಅಥ = ಅಥವಾ, ಅಪರೇ = ಇನ್ನು ಕೆಲವರು (ಬೌದ್ಧರು), ಬುದ್ಧಿಸತ್ತಾಂ = ಬುದ್ಧಿಯಲ್ಲಿ ವ್ಯಾಪಾರಾಕಾರ ಗತ–ವಾದ ಸತ್ತೆಯನ್ನು, ಭಾವೇಷು = ಪೂರ್ವೋಕ್ತವಾದ ದೃಶ್ಯವ್ಯಾಪಾರಗಳಲ್ಲಿ, ಜಾತಿಯಲ್ಲಿ ಅಥವಾ ವ್ಯಾಪಾರಗತವಾದ ಸತ್ತೆಯಲ್ಲಿ, ಪ್ರತ್ಯಸ್ತರೂಪಾಂ = ಅಧ್ಯಸ್ತರೂಪವಾದದ್ದನ್ನಾಗಿ, ಅದನ್ನು ಕ್ರಿಯೇತಿ = ಕ್ರಿಯೆ ಎಂದು, ಪ್ರತಿಜಾನತೇ = ನಿಶ್ಚಿತವಾದ ತಮ್ಮ ಸಿದ್ಧಾಂತವೆಂದು ತಿಳಿದಿದ್ದಾರೆ.

**ವಿವರಣೆ :** ಬೌದ್ಧರು ಬಾಹ್ಯವಾದ ಯಾವ ವಸ್ತುವೂ ಇದೆಯೆಂದು ಒಪ್ಪುವು–ದಿಲ್ಲ. ಎಲ್ಲವೂ ಬುದ್ಧಿಯಲ್ಲಿ ತೋರುವ ವಿಕಲ್ಪಗಳು – ವಿಶೇಷ ರೀತಿಯಲ್ಲಿ ಕಲ್ಪಿತ–ವಾದವು ಎನ್ನುತ್ತಾರೆ. ವ್ಯಾಪಾರ, ಜಾತಿ, ಸತ್ತಾ – ಎಂದು ಪೂರ್ವೋಕ್ತವಾದ ಕ್ರಿಯಾಸ್ವರೂಪವು ಬೌದ್ಧವಾದ ವಿಕಲ್ಪವೆಂದೂ ಅದೇ ಕ್ರಿಯೆಯೆಂದೂ ತಾತ್ಪರ್ಯ.

ಈ ಮತದಲ್ಲಿಯೂ ಕ್ರಿಯಾತ್ವವನ್ನು ಸಾಧಿಸಲು ಕ್ರಮವಿಶಿಷ್ಟಾದಿಗಳನ್ನು ಅಧ್ಯಾರೋಪಿಸಬೇಕು.

ಸತ್ತೆಯು ಕ್ರಿಯೆಯೆಂದು ಸಿದ್ಧವಾಯಿತು. ಈ ಕ್ರಿಯೆಗೆ ಭಾವ ಎಂಬ ಹೆಸರಿದೆ. 'ಷಡ್ ಭಾವವಿಕಾರಾ ಭವಂತಿ' ಎಂಬ ಉಕ್ತಿಯಂತೆ ಈ ಕ್ರಿಯೆಯು ಬೇರೆಬೇರೆ ಅವಸ್ಥಾರೂಪವಾದ ಆರು ವಿಕಾರಗಳನ್ನು ಪಡೆಯುತ್ತದೆ. ಈ ವಿಕಾರಗಳು ಎಲ್ಲ ಬಗೆಯ ಕ್ರಿಯೆಗಳಿಗೂ ಕಾರಣಗಳು –

**ಅವಿರ್ಭಾವತಿರೋಭಾವೌ ಜನ್ಮನಾಶೌ ತಥಾ ಪರೈಃ ।**
**ಷಟ್ಸು ಭಾವವಿಕಾರೇಷು ಕಲ್ಪಿತೌ ವ್ಯಾವಹಾರಿಕೌ ॥ ೨೫ ॥**

ಆರು ಭಾವವಿಕಾರಗಳಲ್ಲಿ ಆವಿರ್ಭಾವ, ತಿರೋಭಾವ – ಎಂಬ ಎರಡು ವಿಕಾರಗಳು ಲೋಕವ್ಯವಹಾರಸಿದ್ಧಿಗಾಗಿ ಕಲ್ಪಿತವಾದವು. ಕೆಲವರು ಆವಿ–ರ್ಭಾವವನ್ನು ಜನ್ಮವೆಂದೂ ತಿರೋಭಾವವನ್ನು ನಾಶವೆಂದೂ ಹೇಳುತ್ತಾರೆ.

**ವಿವರಣೆ :** ಜಾಯತೇ, ಅಸ್ತಿ, ವರ್ಧತೇ, ಪರಿಣಮತೇ, ಅಪಕ್ಷೀಯತೇ, ನಶ್ಯತಿ ಎಂಬಿವು ಆರು ವಿಕಾರಗಳು. ಜಾಯತೇ, ನಶ್ಯತಿ – ಎಂಬಿವೇ ಆವಿರ್ಭಾವ, ತಿರೋಭಾವಗಳು ಅಥವಾ ಜನ್ಮ ನಾಶಗಳು.

ಸತ್ಕಾರ್ಯವಾದಿಗಳ ಮತದಂತೆ ಯಾವ ವಸ್ತುವೂ ಹೊಸದಾಗಿ ಹುಟ್ಟುವುದಿಲ್ಲ. ನಾಶವಾಗುವುದಿಲ್ಲ. ಪರಿಣಾಮ ವಿಶೇಷವೆಂಬ ವಿಕಾರವೇ ಆವಿರ್ಭಾವ, ಇನ್ನೊಂದು ಬಗೆಯ ಪರಿಣಾಮವೇ ತಿರೋಭಾವವೆಂಬ ವಿಕಾರ. ಅಸತ್ಕಾರ್ಯವಾದಿಗಳ ಮತದಂತೆ ಜನ್ಮ ನಾಶಗಳಿವೆ.

ವಸ್ತುತಃ ಸತ್ತೆಯು ನಿತ್ಯವಾದ್ದರಿಂದ ಇದರಲ್ಲಿ ಯಾವ ಪರಿಣಾಮವೂ ಆಗುವುದಿಲ್ಲವಾದ್ದರಿಂದ ಆವಿರ್ಭಾವತಿರೋಭಾವಗಳೆರಡೂ ಕಲ್ಪಿತವಾದವು. ನಿತ್ಯವಸ್ತುವಿಗೆ ಜನ್ಮನಾಶಗಳೂ ಇಲ್ಲ. ಆದ್ದರಿಂದ ಸತ್ತಾರೂಪಕ್ರಿಯೆಗೆ ಈ ವಿಕಾರಗಳು ಸಂಭವಿಸುವುದಿಲ್ಲ. ವ್ಯವಹಾರಕ್ಕಾಗಿ ಕಲ್ಪಿತವಾದರೂ ಈ ಎರಡು ವಿಕಾರಗಳೇ ಸಾಕು. ಅಸ್ತಿ, ವರ್ಧತೇ, ಪರಿಣಮತೇ, ಅಪಕ್ಷೀಯತೇ ಎಂಬ ನಾಲ್ಕು ವಿಕಾರಗಳೂ ಆವಿರ್ಭಾವತಿರೋಭಾವಗಳಲ್ಲಿಯೇ ಅಥವಾ ಜನ್ಮನಾಶಗಳಲ್ಲಿಯೇ ಸೇರಿಹೋಗು–ತ್ತವೆ. ಇದನ್ನು ಮುಂದೆ ವಿವರಿಸಲಾಗುವುದು.

**ತಾಭ್ಯಾಂ ಸರ್ವಪ್ರವೃತ್ತೀನಾಮಭೇದೇನೋಪಸಂಗ್ರಹಃ ।**
**ಜನ್ಮೈವಾಶ್ರಿತಸಾರೂಪ್ಯಂ ಸ್ಥಿತಿರಿತ್ಯಭಿಧೀಯತೇ ॥ ೨೬ ॥**

ಈ ಎರಡು ಜನ್ಮನಾಶಗಳಿಂದ ಉಳಿದ ಎಲ್ಲ ನಾಲ್ಕು ವಿಕಾರಗಳೆಂಬ ಪ್ರವೃತ್ತಿಗಳಿಗೂ ಅಭೇದದಿಂದ ಸಂಗ್ರಹವಾಗುತ್ತದೆ. ಸಮಸ್ತ ಕ್ರಿಯಾ ಕಲಾ–ಪವೂ ಆವಿರ್ಭಾವ ತಿರೋಭಾವಗಳಿಗೆ (ಜನ್ಮನಾಶಗಳಿಗೆ) ಅಭಿನ್ನವಾದದ್ದು. ಅವೆರಡರಲ್ಲಿ ಎಲ್ಲ ಕ್ರಿಯಾ ವಿಕಾರಗಳೂ ಸೇರಿಕೊಳ್ಳುತ್ತವೆ.

**ವಿವರಣೆ :** ಹೇಗೆಂದರೆ ಮೊದಲನೆಯದಾಗಿ 'ಜಾಯತೇ' ಎಂದರೇನು? ಒಂದಾನೊಂದು ಧರ್ಮ ವಿಶೇಷಸಹಿತವಾಗಿ ಆವಿರ್ಭಾವ. ಪೂರ್ವಾವಸ್ಥೆಯನ್ನು ತ್ಯಜಿಸಿ ಉತ್ತರಾವಸ್ಥೆಯನ್ನು ಪಡೆಯುವುದಕ್ಕೆ ಮೊದಲು ನಡುವೆ ತೋರುವ ಆವಿರ್ಭಾವ. ಅನಂತರ 'ಅಸ್ತಿ' ಎಂದು ತಿಙಂತದಿಂದ ವ್ಯವಹಾರ ಬರುತ್ತದೆ. ಹುಟ್ಟಿದ ವಸ್ತು ತಾನು ಪಡೆದ ಸತ್ತೆಯನ್ನು ಮುಂದುವರಿಸುವ ಸ್ಥಿತಿ ಇದು. ಸತ್ತೆಯ ದ್ವಿತೀಯ ಭಾಗವಿದು. ತಿಙಂತವಾದ್ದರಿಂದ ತನ್ನ ಆತ್ಮಲಾಭವನ್ನು ಮುಂದುವರಿಸು–ವಂತೆ ಪ್ರತೀತವಾಗುತ್ತದೆ. ಇದು ಆವಿರ್ಭಾವದಲ್ಲಿಯೇ ಸೇರತಕ್ಕದ್ದು. ಆವಿರ್ಭಾವದ ಪ್ರಥಮ ವ್ಯಾಪಾರವು ಜನ್ಮ. ದ್ವಿತೀಯಾದಿ ವ್ಯಾಪಾರಗಳು ನಡೆಯುತ್ತಿರುವುದೇ ಅಸ್ತಿತ್ವ ಅಥವಾ ಸ್ಥಿತಿ. ವಸ್ತುವಿನಲ್ಲಿ ನೂತನ ವಸ್ತುಗಳು ಸೇರಿದಾಗ 'ವರ್ಧತೇ'ಎಂಬ ವ್ಯವಹಾರ ಬರುತ್ತದೆ. ನೂತನವಸ್ತುಗಳ ಆವಿರ್ಭಾವವೇ ವೃದ್ಧಿ. ಸ್ವಸ್ವರೂಪವನ್ನು ಬಿಟ್ಟು ರೂಪಾಂತರವನ್ನು ಪಡೆಯುವುದೇ ವಿಪರಿಣಾಮ. ಇದು ಧರ್ಮಾಂತರದ ಆವಿರ್ಭಾವ. ಹಾಲು ಮೊಸರಾಗುವುದು ವಿಪರಿಣಾಮ. ಇಲ್ಲಿ ನೂತನವಾದ ಮೊಸರಿನ ಧರ್ಮವು ಆವಿರ್ಭವಿಸಿದೆ. ಪೂರ್ವಧರ್ಮದ ತಿರೋಭಾವವೂ ಆಗಿದೆ. ಕೆಲವು ಅವಯವಗಳ ತಿರೋಭಾವವೇ ಅಪಕ್ಷಯ. ಎಲ್ಲ ಅವಯವಗಳ ಅಥವಾ ಧರ್ಮಗಳ ಅಪಕ್ಷಯವೇ ನಾಶ.

**ಜಾಯಮಾನಾನ್ನ ಜನ್ಮಾನ್ಯದ್ ವಿನಾಶೇಽಪ್ಯಪದಾರ್ಥತಾ ।**
**ಅತೋ ಭಾವವಿಕಾರೇಷು ಸತ್ತೈಕಾ ವ್ಯವತಿಷ್ಠತೇ ॥ ೨೭ ॥**

ಉತ್ಪನ್ನವಾಗುವ ಘಟಾದಿಗಿಂತ ಅದರ ಜನ್ಮ ಎಂಬುದು ಬೇರೆಯಲ್ಲ. ಸಂಪೂರ್ಣವಾದ ನಾಶ ಎಂಬುದೂ ಇಲ್ಲ. ಹೀಗೆ ಜನ್ಮನಾಶಗಳು ಇಲ್ಲವಾದ ಮೇಲೆ ಈ ಭಾವ ವಿಕಾರಗಳಲ್ಲಿ 'ಸತ್ತಾ' ಎಂಬುದೊಂದು ವ್ಯವಸ್ಥಿತವಾಗಿ (ನಿರ್ಬಾಧವಾಗಿ) ಉಳಿದುಕೊಳ್ಳುತ್ತದೆ.

**ವಿವರಣೆ :** ಯಾವುದೇ ಧರ್ಮವು ಧರ್ಮಿಯೊಡನೆ ಸೇರಿಕೊಂಡೇ ಇರುತ್ತದೆ. ಧರ್ಮಿಯನ್ನು ಬಿಟ್ಟು ಪ್ರತ್ಯೇಕವಾಗಿ ಧರ್ಮ (ಗುಣಕ್ರಿಯೆ ಮುಂತಾದದ್ದು) ಪ್ರತೀತವಾಗುವುದಿಲ್ಲ.

ಸತ್ತಾ ಎಂಬ ಧರ್ಮವು ಘಟಾದಿಗಳಲ್ಲಿ ಇದ್ದೇ ಇರುತ್ತದೆ. ನಿತ್ಯವಾದ ಸತ್ತೆಯು ಹುಟ್ಟುವುದಿಲ್ಲ. ಸತ್ಕಾರ್ಯವಾದದಂತೆ ಕಾರ್ಯವಾದ ಘಟಾದಿಗಳು ಉಪಾದಾನಕಾರಣಗಳಲ್ಲಿ ಮೊದಲೇ ರೂಪಾಂತರದಿಂದ ಇರುತ್ತವೆ. ಆದ್ದರಿಂದ ಘಟಾದಿಪದಾರ್ಥಕ್ಕೆ ವಾಸ್ತವವಾದ ವಿನಾಶವೂ ಇಲ್ಲ. ಅಸತ್ಕಾರ್ಯವಾದ-ದಂತೆಯೂ ಮಣ್ಣು ಮುಂತಾದ ಉಪಾದಾನಕಾರಣವಾಗಿ ಇದ್ದೇ ಇರುತ್ತದೆ. ಆದ್ದ-ರಿಂದ ಯಾವುದಕ್ಕೂ ಸಂಪೂರ್ಣನಾಶವು ಬರುವುದಿಲ್ಲ. ಘಟವು ನಷ್ಟವಾಯಿತು ಎಂದರೆ ಘಟದ ವಿನಾಶವು ಹುಟ್ಟಿತು ಎಂದರ್ಥ. ಹುಟ್ಟುವುದು ನಾಶಕ್ಕೆ ವಿರೋಧಿಯಾದದ್ದು. ವಿರೋಧಿಯಾದ ಜನ್ಮವಾದೊಡನೆ ಪ್ರತಿಯೋಗಿಯಾದ ವಿನಾಶವೇ ನಾಶವಾಗಬೇಕು. ಆಗ ಅದಕ್ಕೇ ಪ್ರತಿಯೋಗಿಯಾದ ಘಟವು ಕಾಣಿಸಿಕೊಳ್ಳಬೇಕಾಗುತ್ತದೆ. ಇದು ಬೌದ್ಧಶಾಸ್ತ್ರವೂ ಅಂಗೀಕರಿಸಿದ ಸಿದ್ಧಾಂತವೇ ಆಗಿದೆ. ಏವಂ ಚ ಸತ್ತಾ ಎಂಬುದೊಂದೇ ಸತ್ಯವಾದದ್ದು. ಉಳಿದ ಎಲ್ಲ ವಿಕಾರಗಳೂ ವ್ಯಾವಹಾರಿಕಸತ್ಯ.

ಈಗ ವ್ಯವಹಾರ ಪ್ರಸಿದ್ಧಿಯನ್ನನುಸರಿಸಿ ಮುಂದಿನ ವಿಚಾರವನ್ನು ಮಾಡಲಾಗುವುದು.

**ಪೂರ್ವಭಾಗಸ್ತು ಯಜ್ಜಾತಾತ್ ತಜ್ಜನ್ಮ ವ್ಯಪದಿಶ್ಯತೇ ।**
**ಆಶ್ರಿತಕ್ರಮರೂಪೇಣ ನಿಮಿತ್ತತ್ವೇ ವಿವಕ್ಷಿತೇ ॥ ೨೮ ॥**

ಪರಿನಿಷ್ಠಿತರೂಪವಾದ ಪದಾರ್ಥವು 'ಜಾತ' ಉತ್ಪನ್ನವಾಯಿತು ಎಂಬ ವ್ಯವಹಾರವನ್ನು ಪಡೆಯುತ್ತದೆ. ಈ ಜನನಕ್ರಿಯೆಯ ಪೂರ್ವಭಾಗಕ್ಕೆ ಜನ್ಮ-ವೆಂದು ಹೆಸರು. ಜನ್ಮಕ್ಕೆ ಕಾರಣವಾದ ವಸ್ತುಗಳ ಕ್ರಿಯೆಯು ಕ್ರಮರೂಪವಾಗಿ ನಡೆಯುತ್ತಿರುವಾಗ ಅದು ಪೂರ್ವಾಪರೀಭೂತವಾಗಿ ತೋರುತ್ತ 'ಜಾಯತೇ' ಎಂಬ ಕ್ರಿಯೆ ಎನಿಸುತ್ತದೆ.

**ಆಖ್ಯಾತಶಬ್ದೈರರ್ಥೋಽಸಾವೇವಂ ಭೂತೋಽಭಿಧೀಯತೇ ।**
**ನಾಮಶಬ್ದಾಃ ಪ್ರವರ್ತಂತೇ ಸಂಹರಂತ ಇವ ಕ್ರಮಮ್ ॥ ೨೯ ॥**

ಹೀಗೆ ಜಾತವಸ್ತುವಿನ ಪೂರ್ವಭಾಗವಾದ ಜನ್ಮವು ತಿಙಂತಪದಗಳಾದ ಜಾಯತೇ, ಉತ್ಪದ್ಯತೇ – ಇತ್ಯಾದಿಗಳಿಂದ ಉಕ್ತವಾದಾಗ ಕ್ರಮವಿಶಿಷ್ಟ-ವಾಗಿಯೇ ತೋರುತ್ತದೆ. ಅನಂತರ ಜನ್ಮ, ಜನನ – ಮುಂತಾದ ನಾಮ-ಪದಗಳು ಮಾತ್ರ ಕ್ರಮವಿಶಿಷ್ಟವಾದ ಪೌರ್ವಾಪರ್ಯವನ್ನು ಸಮಾಪ್ತಿಗೊಳಿ-ಸಿರುವಂತೆ ಜನ್ಮಾದ್ಯರ್ಥಗಳನ್ನು ನೀಡುತ್ತವೆ.

**ವಿವರಣೆ :**

ವಾಕ್ಯಪದೀಯದ ಜಾತಿಸಮುದ್ದೇಶದಲ್ಲಿ (ಶ್ಲೋ. ೩೬)

ಪೂರ್ವಸ್ಮಾತ್ ಪ್ರಚ್ಯುತಾ ಧರ್ಮಾದಪ್ರಾಪ್ತಾ ಚೋತ್ತರಂ ಪದಮ್ ।
ತದಂತರಾಲೇ ಭೇದಾನಾಮಾಶ್ರಯಾಜ್ಜನ್ಮ ಕಥ್ಯತೇ ॥

ಎಂದು ಜನ್ಮದ ಸ್ವರೂಪವನ್ನು ಹೇಳಿದೆ. ಶ್ಲೋಕಾರ್ಥ ಹೀಗೆ –

ಪೂರ್ವಸ್ಮಾತ್ ಧರ್ಮಾತ್ = ಕಾರಣ ಸ್ವರೂಪದಲ್ಲಿದ್ದ ಮೊದಲನೆಯ ಪೂರ್ವಾವಸ್ಥಾನ ಧರ್ಮದಿಂದ, ಪ್ರಚ್ಯುತಾ = ಮುಕ್ತವಾಗಿ, ಉತ್ತರಂ ಪದಂ = ಮುಂದಿನ ಕಾರ್ಯರೂಪದಿಂದಿರುವ ಅವಸ್ಥೆಯನ್ನು, ಅಪ್ರಾಪ್ತಾ = ಹೊಂದದೆ, ತದಂತರಾಲೇ = ಆ ಎರಡು ಅವಸ್ಥೆಗಳ ನಡುವೆ, ಭೇದಾನಾಂ = ಕಲ್ಪಿತಭೇದ–ಗಳುಳ್ಳ ವ್ಯಾಪಾರಗಳ, ಆಶ್ರಯಾತ್ = ಆಶ್ರಯಣದಿಂದ, ಜನ್ಮ ಕಥ್ಯತೇ = ಜಾಯತೇ ಎಂದು ಜನ್ಮವನ್ನು ಹೇಳಲಾಗುತ್ತದೆ.

ಕಾರಣಾವಸ್ಥೆಯನ್ನು ಬಿಟ್ಟು ಕಾರ್ಯಾವಸ್ಥೆಯನ್ನು ಪಡೆಯುತ್ತಿರುವ ಮಧ್ಯ–ಸ್ಥಿತಿಯು ಜನ್ಮ. ಕಾರ್ಯಾವಸ್ಥೆಯನ್ನು ಪಡೆದ ಉತ್ತರ ಸ್ಥಿತಿಯು ಅಸ್ತಿತ್ವ (ಸ್ಥಿತಿ).

**ಫಲಂ ಫಲಾಪದೇಶೋ ವಾ ವಸ್ತು ವಾ ತದ್ವಿರೋಧಿ ಯತ್ ।**
**ತದನ್ಯ ಏವ ಪೂರ್ವೇಷಾಂ ನಾಶ ಇತ್ಯಭಿಧೀಯತೇ ॥ ೩೦ ॥**

(ಕಾರಣ ವಿರುದ್ಧವಾದ) ಕಾರ್ಯರೂಪ ಫಲ, ಫಲವಲ್ಲದಿದ್ದರೂ ಫಲವೆಂದು ಆರೋಪಿತವಾಗುವ ವಸ್ತು ಅಥವಾ ವಿನಾಶಿಯೆಂದು ತಿಳಿದ ವಸ್ತುವಿಗೆ ವಿರೋಧಿಯಾದ ವಸ್ತು – ಒಟ್ಟಿನಲ್ಲಿ ಇವುಗಳಲ್ಲೊಂದು ವಸ್ತುವೇ ಪ್ರಾಚೀನ ವೈಶೇಷಿಕರ ಮತದಲ್ಲಿ ನಾಶವೆನಿಸಿಕೊಳ್ಳುತ್ತದೆ. ನಾಶವು ಅಭಾವರೂಪವಲ್ಲ – ಎಂದು ಅವರ ಅಭಿಪ್ರಾಯವಿದೆ.

**ವಿವರಣೆ :** ಲೋಕವ್ಯವಹಾರದಲ್ಲಿ ವಿನಾಶವೆಂದರೆ ವಸ್ತುವಿನ ಅಭಾವ ರೂಪವಾಗಿದೆ. ಅದನ್ನೇ ಧ್ವಂಸವೆನ್ನುತ್ತಾರೆ. ಆದರೆ ನಾಶವು ಮೇಲ್ಕಂಡ ಒಂದು ವಸ್ತುರೂಪವಾಗಿರುತ್ತದೆ, ಧ್ವಂಸವಲ್ಲ. ಹೇಗೆಂದರೆ ಫಲ = ಹೋಗುವ ಕ್ರಿಯೆಗೆ ಉತ್ತರದೇಶದ ಸಂಯೋಗವು ಫಲ. ಸಂಯೋಗವಾದೊಡನೆ ಕ್ರಿಯೆ ನಾಶವಾಗುತ್ತದೆ. ಆದ್ದರಿಂದ ಕ್ರಿಯೆಯ ನಾಶವೆಂದರೆ ಸಂಯೋಗ. ಘಟಜ್ಞಾನವಾದ ಮೇಲೆ ಪಟಜ್ಞಾನ ಬರುತ್ತದೆ. ಎರಡನೆಯ ಜ್ಞಾನವು ಮೊದಲನೆಯ ಜ್ಞಾನವನ್ನು

ನಾಶಮಾಡುವುದರಿಂದ ವಿರುದ್ಧವಾದ ಫಲ. ಪ್ರಥಮಜ್ಞಾನದ ನಾಶವೆಂದರೆ ದ್ವಿತೀಯ ಜ್ಞಾನವೇ. ಸುಖವನ್ನು ಅನುಭವಿಸಿದರೆ ಕಾರಣವಾದ ಧರ್ಮವು ನಶಿಸುತ್ತದೆ. ಧರ್ಮದ ನಾಶವೆಂದರೆ ಸುಖ. ಅಧರ್ಮದ ನಾಶವೆಂದರೆ ದುಃಖ, ದುಃಖಾನುಭವದಿಂದ ಅಧರ್ಮದ ನಾಶವಾಗುತ್ತದೆ.

ಆರೋಪಿತ ಫಲಾಭಾಸ = ಗಡಿಗೆಯನ್ನೊಡೆದರೆ ಚೂರಾಗುತ್ತದೆ. ಈ ಚೂರುಗಳು ಘಟದ ಫಲವೆಂಬುದು ಕಲ್ಪಿತವಾದದ್ದು. ಘಟದ ನಾಶವೆಂದರೆ ಫಲಾಭಾಸವಾದ ಚೂರುಗಳು.

ವಿರೋಧಿ – ಸಂಯೋಗಕ್ಕೆ ವಿರೋಧಿಯಾದದ್ದು ವಿಯೋಗ. ಸಂಯೋಗದ ನಾಶವೇ ವಿಯೋಗ, ಅಥವಾ ವಿಯೋಗದ ನಾಶವೇ ಸಂಯೋಗ.

ಈ ವಸ್ತುವಿನ ನಾಶವೆಂದರೆ ಇನ್ನೊಂದು ವಸ್ತುವೇ ಎನ್ನುವುದು ಹೇಗಾದೀತು – ಎಂಬ ಶಂಕೆಗೆ ಸಮಾಧಾನವಿದು –

**ನೈವಾಸ್ತಿ ನೈವ ನಾಸ್ತೀತಿ ವಸ್ತುನೋ ಗ್ರಹಣಾದ್ವಿನಾ ।**
**ಕಲ್ಪತೇ ಪರರೂಪೇಣ ವಸ್ತ್ವನ್ಯದನುಗಮ್ಯತೇ ॥ ೩೧ ॥**

ಒಂದು ವಸ್ತುವಿನ ಗ್ರಹಣವಾಗದೆ 'ಅಸ್ತಿ–ಇದೆ' ಎಂದು ಹೇಳುವುದು ಹೇಗೆ ಸಾಧ್ಯವಾಗುವುದಿಲ್ಲವೋ ಹಾಗೆಯೇ ವಸ್ತುವಿನ ಗ್ರಹಣವಾಗದೆ 'ನಾಸ್ತಿ– ಇಲ್ಲ' ಎಂಬ ವ್ಯವಹಾರವೂ ಸಾಧ್ಯವಾಗದು. ಆದ್ದರಿಂದ ಫಲ, ಆರೋಪಿತಫಲ–ಇತ್ಯಾದಿರೂಪದಿಂದ ಗ್ರಹಣವಾಗಿಯೇ 'ನಾಸ್ತಿ–ಇಲ್ಲ' ಎಂಬ ವ್ಯವಹಾರವು ಬರುತ್ತದೆ.

**ವಿವರಣೆ :** ವ್ಯವಹಾರದಲ್ಲಿ ಯಾವುದೇ ಒಂದು ಪದಾರ್ಥವು ಜ್ಞಾನ–ಗೋಚರವಾಗದಿದ್ದರೆ, ಅದು ವ್ಯವಹಾರಕ್ಕೆ ಬರುವುದಿಲ್ಲ. 'ಅಸ್ತಿ' ಎಂದು ಹೇಳಲು ಸಾಧ್ಯವಾಗುವುದಿಲ್ಲ. ಅಭಾವವು ಶೂನ್ಯತಾರೂಪವಾದ್ದರಿಂದ, ಅದನ್ನು ಗ್ರಹಿಸಲು ಸಾಧ್ಯವಿಲ್ಲ. ಆದ್ದರಿಂದ 'ನಾಸ್ತಿ' ಎಂಬ ವ್ಯವಹಾರವು ಶಕ್ಯವಾಗದು. ಅದಕ್ಕಾಗಿ ಫಲ, ಆರೋಪಿತಫಲ, ವಿರೋಧಿ–ಎಂದು ವಿನಾಶಕ್ಕೆ ಭಾವರೂಪವನ್ನು ಹೇಳಬೇಕಾಗಿದೆ.

**ಭಾವಾಭಾವೌ ಘಟಾದೀನಾಮಸ್ಪೃಶನ್ನಪಿ ಪಾಣಿನಾ ।**
**ಕಶ್ಚಿದ್‌ವೇದಾಪ್ರಕಾಶೇಽಪಿ ಪ್ರಕಾಶೇ ತತ ಏವ ವಾ ॥ ೩೨ ॥**

ಕತ್ತಲೆಯಲ್ಲಾಗಲಿ ಬೆಳಕಿನಲ್ಲಾಗಲಿ ಒಬ್ಬ ಮನುಷ್ಯನು ಕೈಯಿಂದ

ವಸ್ತುವನ್ನು ಮುಟ್ಟದಿದ್ದರೂ ಘಟಾದಿ ವಸ್ತುಗಳ ಭಾವವನ್ನಾಗಲಿ ಅಭಾವವನ್ನಾಗಲಿ ವಸ್ತು ಗ್ರಹಣದಿಂದಲೇ ತಿಳಿದುಕೊಳ್ಳುತ್ತಾನೆ.

**ವಿವರಣೆ :** ಕತ್ತಲೆಯಲ್ಲಿ ವಸ್ತುಗ್ರಹಣವಿಲ್ಲದಿದ್ದರೂ ಕೈಯಿಂದ ಸ್ಪರ್ಶಕ್ಕಾಗಿ ತಡವರಿಸುತ್ತಾ ಘಟದ ಅಭಾವವನ್ನು ನಿಶ್ಚಯಿಸಲು ಸಾಧ್ಯವಾಗುತ್ತದೆ. ಶೂನ್ಯತಾರೂಪವಾದ ಅಭಾವವು ವಸ್ತುಗ್ರಹಣವಿಲ್ಲದಿದ್ದರೂ ಗೊತ್ತಾಗುತ್ತದೆ – ಎಂಬ ಶಂಕೆಗೆ ಉತ್ತರವಿದು.

ಪದಾರ್ಥದ ಭಾವವನ್ನಾಗಲಿ ಅಭಾವವನ್ನಾಗಲಿ ಕೈಯಿಂದ ಮುಟ್ಟಿ–ನೋಡಿಯೇ ತಿಳಿಯಬೇಕೆಂಬ ನಿಯಮವೇನೂ ಇಲ್ಲ. ಕಣ್ಣಿಂದ ನೋಡಿಯೂ ತಿಳಿಯಬಹುದು. ವಾಸನೆಯನ್ನು ಮೂಸಿಯೂ ತಿಳಿಯಬಹುದು. ಬೆಳಕಿಲ್ಲದಿದ್ದರೂ ಭಾವಾಭಾವಗಳೆರಡನ್ನು ತಿಳಿಯಲು ಸಾಧ್ಯ. ಪ್ರತ್ಯಕ್ಷ, ಅನುಮಾನ, ಸ್ಮರಣೆಗಳಿಂದ ಅವೆರಡರ ಜ್ಞಾನವು ಬರುತ್ತದೆ. ಪ್ರತ್ಯಕ್ಷದಿಂದ ಗೊತ್ತಾಗುವುದೆಂದು ಎಲ್ಲರಿಗೂ ತಿಳಿದ ಸಂಗತಿ. ಬೆಂಕಿಯನ್ನು ನೋಡದಿದ್ದರೂ ಹೊಗೆಯನ್ನು ನೋಡಿ ಬೆಂಕಿಯಿದೆ–ಯೆಂದು ಅನುಮಾನದಿಂದ ನಿಶ್ಚಯಿಸುತ್ತೇವೆ. ರಾತ್ರಿ ಮಲಗುವಾಗ ಬಳಿಯಲ್ಲಿ ಬೆಂಕಿಪೆಟ್ಟಿಗೆಯನ್ನೋ ಕೈದೀಪ (torch) ವನ್ನೋ ಇಟ್ಟುಕೊಂಡಿರುತ್ತೇವೆ. ರಾತ್ರಿ ಎಚ್ಚರವಾದಾಗ ಕತ್ತಲೆಯಲ್ಲಿಯೇ ಅದು ಇದೆಯೆಂದು ಸ್ಮರಣೆಯಿಂದ ಗೊತ್ತಾಗುತ್ತದೆ. ಕೈದೀಪವನ್ನು ಇಟ್ಟುಕೊಳ್ಳದೆ ಮಲಗಿದ್ದರೆ ಅದು ಇಲ್ಲವೆಂಬುದೂ ಕೈದೀಪದ ಸ್ಮರಣೆಯಿಂದಲೇ ಗೊತ್ತಾಗುತ್ತದೆ. ಒಟ್ಟಿನಲ್ಲಿ ಒಂದು ವಸ್ತುವಿನ ಭಾವವಾಗಲಿ ಅಭಾವವಾಗಲಿ ಗೊತ್ತಾಗಲು ಆ ಪದಾರ್ಥವು ಆವಶ್ಯಕ. ರಾತ್ರಿ ತಡವರಿಸಿದಾಗ ಘಟವು ಕೈಗೆ ಸಿಗದಿದ್ದರೆ ಇಲ್ಲವೆಂದು ತಿಳಿಯುವುದು ಹೌದು. ಅದು ಘಟವೆಂಬ ವಸ್ತುಮೂಲಕವಾದದ್ದು. ಆದ್ದರಿಂದ ಶೂನ್ಯತಾಜ್ಞಾನಕ್ಕಾಗಿ ಹಿಂದೆ ಹೇಳಿದಂತೆ ಫಲ, ಆರೋಪಿತಫಲ, ವಿರೋಧಿಗಳೆಂಬ ವಸ್ತುಗಳನ್ನು ವಿನಾಶವೆಂದು ಹೇಳಿರುವುದು ಯುಕ್ತವಾಗಿದೆ ಇದು ಪ್ರಾಚೀನವೈಶೇಷಿಕರ ಆಶಯ.

**ವ್ಯಾಪಿ ಸೌಕ್ಷ್ಮ್ಯಂ ಕ್ವಚಿದ್ ಯಾತಿ ಕ್ವಚಿತ್ ಸಂಹನ್ಯತೇ ಪುನಃ ।**
**ಅಕುರ್ವಾಣೋಽಥವಾ ಕಿಂಚಿತ್ ಸ್ವಶಕ್ತ್ಯೈವಂ ಪ್ರಕಾಶತೇ ॥ ೩೩ ॥**

ಸರ್ವವ್ಯಾಪಿಯಾದ ಪ್ರಧಾನತತ್ತ್ವವು (ಸಾಂಖ್ಯರ ಪ್ರಕೃತಿಯು) ದೇಶಕಾಲಗಳ ವಶದಿಂದ ಅತ್ಯಂತ ಸೂಕ್ಷ್ಮಸ್ಥಿತಿಯನ್ನು ಪಡೆಯುತ್ತದೆ. ಇದೇ ನಾಶ – ತಿರೋಭಾವ. ಕೆಲವು ವೇಳೆ ಈ ಪ್ರಧಾನತತ್ತ್ವವೇ ಒಟ್ಟುಗೂಡಿ ಘನವಾಗಿ ಘಟಾದಿ ಕಾರ್ಯರೂಪವನ್ನು ಪಡೆಯುತ್ತದೆ. ಇದೇ ಜನ್ಮ –

ಆವಿರ್ಭಾವ. ಅಥವಾ ನಿಷ್ಕ್ರಿಯವಾದ ಆತ್ಮತತ್ತ್ವವು ಏನನ್ನು ಮಾಡದೆಯೇ ತನ್ನ ಅಚಿಂತ್ಯ ಮಾಯಾಶಕ್ತಿಯಿಂದ ಘಟಾದಿ ಪದಾರ್ಥವಾಗಿ ಜನ್ಮವನ್ನು ಪಡೆದಂತೆಯೂ ನಾಶವಾದಂತೆಯೂ ತೋರಿಸಿಕೊಳ್ಳುತ್ತದೆ.

**ವಿವರಣೆ :** ಈ ಶ್ಲೋಕದ ಮೊದಲನೆಯ ಸಾಲು ಸಾಂಖ್ಯಮತವನ್ನಾಶ್ರಯಿಸಿದ ನಿರುಕ್ತಕಾರರ ಅಭಿಪ್ರಾಯ. ತ್ರಿಗುಣಾತ್ಮಕವಾದ ಪ್ರಧಾನವು ದೃಢವಾಗಿ ಒಟ್ಟುಗೂಡಿ ಘಟಪಟಾದಿ ರೂಪದಲ್ಲಿ ಕಾಣಿಸಿಕೊಳ್ಳುತ್ತದೆ. ಇದೇ ಆವಿರ್ಭಾವ-ಘಟಾದಿಗಳ ಜನ್ಮ. ಈ ಸತ್ತ್ವರಜಸ್ತಮೋಗುಣಗಳು ಅತ್ಯಂತ ಶೈಥಿಲ್ಯವನ್ನು ಹೊಂದಿದಾಗ ನಾಶವಾಯಿತು ಎನ್ನುತ್ತೇವೆ. ಇದೇ ತಿರೋಭಾವ. ನಾಶ, ತಿರೋಭಾವ – ಮುಂತಾದ ನಾಮಪದಗಳಿಂದ ಹೇಳಿದಾಗ ಇದು ಸಿದ್ಧಸ್ವರೂಪವಾಗಿಯೂ ನಶ್ಯತಿ, ತಿರೋಭವತಿ – ಎಂದು ತಿಙಂತಗಳಿಂದ ಹೇಳಿದಾಗ ಕ್ರಮವಿಶಿಷ್ಟವಾಗಿ ಸಾಧ್ಯತಾ ರೂಪದಿಂದ ತೋರುತ್ತದೆ. ಈ ಮಾತನ್ನೇ ಭರ್ತೃಹರಿಯು ವಾಕ್ಯಪದೀಯದ ಜಾತಿ ಸಮುದ್ದೇಶದಲ್ಲಿ ಹೀಗೆ ಹೇಳಿದ್ದಾನೆ –

ತಿರೋಭಾವಾಭ್ಯುಪಗಮೇ ಭಾವಾನಾಂ ಸೈವ ನಾಸ್ತಿತಾ ।
ಲಬ್ಧಕ್ರಮೇ ತಿರೋಭಾವೇ ನಶ್ಯತೀತಿ ಪ್ರತೀಯತೇ ॥ (ಶ್ಲೋ.೩೮)

ಘಟಾದಿ ಭಾವ ಪದಾರ್ಥಗಳಿಗೆ ಅವುಗಳ ಉಪಾದಾನ ಕಾರಣಗಳಲ್ಲಿ ತಿರೋಭಾವವಾದಾಗ (ಅಡಗಿದಾಗ) ಆ ತಿರೋಭಾವವೇ ನಾಸ್ತಿತಾ (ನಾಶ). ಈ ತಿರೋಭಾವವು ಕ್ರಮವಾಗಿ ಅಡಗುತ್ತದೆಯೆಂಬ ಕ್ರಮವು ಇದ್ದಾಗ ನಶ್ಯತಿ = ನಾಶವಾಗುತ್ತದೆ ಎಂದು ಪ್ರತೀತವಾಗುತ್ತದೆ. ನಿರುಕ್ತಕಾರರ ಮತದಿಂದ ನಾಶವೆಂದರೆ ತ್ರಿಗುಣಾತ್ಮಕವಾದ ಪ್ರಕೃತಿಯು ಶೈಥಿಲ್ಯವನ್ನು ಪಡೆದು ಕಾಣಿಸಿಕೊಳ್ಳದೆ ಇರುವುದು.

ವ್ಯಾಪಿ ಸೌಕ್ಷ್ಮ್ಯಂ – ಎಂಬ ಶ್ಲೋಕದ ಎರಡನೆಯ ಸಾಲು ವೇದಾಂತಿಗಳ (ಅದ್ವೈತಿಗಳ) ಸಿದ್ಧಾಂತವನ್ನನುಸರಿಸಿದೆ. ನಿಷ್ಕ್ರಿಯವೂ ವ್ಯಾಪಿಯೂ ಆದ ಪರಬ್ರಹ್ಮವು ಅಚಿಂತ್ಯವಾದ ಮಾಯಾಶಕ್ತಿಯಿಂದ ಕೂಡಿ ಜನ್ಮ ನಾಶವ್ಯವಹಾರವನ್ನು ಅವಿದ್ಯಾದಶೆಯಲ್ಲಿ ನಡೆಸುತ್ತದೆ. ಹೇಗೆಂದರೆ –

**ಸರ್ವಸ್ವರೂಪತತ್ತ್ವಸ್ಯ ಯತ್ಕ್ರಮೇಣೇವ ದರ್ಶನಮ್ ।**
**ಭಾಗೈರಿವ ಪ್ರಕ್ಲೃಪ್ತಿಶ್ಚ ತಾಂ ಕ್ರಿಯಾಮಪರೇ ವಿದುಃ ॥ ೩೪ ॥**

ಸರ್ವಜಗತ್ತಿಗೂ ಅಧಿಷ್ಠಾನವಾದ್ದರಿಂದ ಸರ್ವರೂಪವಾದ ಬ್ರಹ್ಮತತ್ತ್ವಕ್ಕೆ ಕ್ರಮವೆಂಬುದಿಲ್ಲದಿದ್ದರೂ ಕಾಲವೆಂಬ ಸ್ವಾತಂತ್ರ್ಯ ಶಕ್ತಿಯಿಂದ ಕ್ರಮವಿಶಿಷ್ಟವೋ

ಎಂಬಂತೆ ತೋರುವುದು, ವಸ್ತುತಃ ಆ ಬ್ರಹ್ಮತತ್ತ್ವಕ್ಕೆ ಭಾಗವೇ ಇಲ್ಲದಿದ್ದರೂ ತನ್ನ ದಿಕ್ ಶಕ್ತಿಯಿಂದ ಪೂರ್ವಾಪರ ಭಾಗವಿಶಿಷ್ಟವೋ ಎಂಬಂತೆ ಪ್ರತೀತವಾಗುವುದು – ಇದನ್ನು ಜನ್ಮನಾಶಯುಕ್ತವಾದ ಕ್ರಿಯೆಯೆಂದು ಅದ್ವೈತಿಗಳು ತಿಳಿದಿದ್ದಾರೆ.

**ವಿವರಣೆ :** ಪರಬ್ರಹ್ಮ ಯಾವ ಕಲ್ಪನೆಗೂ ಅಗೋಚರವಾದದ್ದು. ಆದರೂ ದೇಶಕಾಲಗಳೆಂಬ ತನ್ನ ಶಕ್ತಿಗಳಿಂದ ವಿವೃತ್ತವಾಗಿ ಸಮಸ್ತ ಕ್ರಿಯಾಭೇದಗಳಿಂದ ಯುಕ್ತವಾದಂತೆ ತೋರುತ್ತದೆ. ವಿವರ್ತವೆಂದರೆ ಅತಾತ್ತ್ವಿಕವಾದ ಅನ್ಯಥಾಭಾವ. ಸ್ವಸ್ವರೂಪವನ್ನು ತ್ಯಜಿಸದೆಯೇ ಅನ್ಯಸ್ವರೂಪವನ್ನು ಧರಿಸಿದಂತೆ ತೋರುವುದು.

ಮೊದಲು ಹೇಳಿದ ಸಾಂಖ್ಯಮತದಲ್ಲಿ ಪ್ರಧಾನದ ಪರಿಣಾಮವೇ ಕ್ರಿಯೆ. ಪರಿಣಾಮವೆಂದರೆ ತಾತ್ತ್ವಿಕವಾದ ಅನ್ಯಥಾಭಾವ. ಪ್ರಕೃತಿಯು ವಾಸ್ತವಿಕವಾಗಿ ಅನ್ಯಥಾ ರೂಪವನ್ನು ಧರಿಸುತ್ತದೆ. ಅದ್ವೈತಿಗಳ ವಿವರ್ತವಾದದಲ್ಲಿ ಬ್ರಹ್ಮವು ಯಾವ ಪರಿಣಾಮವನ್ನೂ ಹೊಂದದೆ ಸ್ವಸ್ವರೂಪದಲ್ಲಿಯೇ ಅನ್ಯಸ್ವರೂಪವನ್ನು ಧರಿಸಿದಂತೆ ತೋರುತ್ತದೆ.

ಮಹಾ ಸಾಮಾನ್ಯ ರೂಪವಾದ ಸತ್ತಾ ಎಂಬುದೇ ಪರಬ್ರಹ್ಮವೆಂದು ಅದ್ವೈತದರ್ಶನ. ಈ ಸಿದ್ಧಾಂತದಂತೆ 'ಷಡ್ ಭಾವವಿಕಾರಾ ಭವಂತಿ' – ಎಂಬ ನಿರುಕ್ತ ವಚನವನ್ನೀಗ ಉಪಸಂಹರಿಸಬಹುದು.

**ಸತ್ತಾ ಸ್ವಶಕ್ತಿಯೋಗೇನ ಸರ್ವರೂಪಾ ವ್ಯವಸ್ಥಿತಾ ।**
**ಸಾಧ್ಯಾ ಚ ಸಾಧನಂ ಚೈವ ಫಲಂ ಭೋಕ್ತಾ ಫಲಸ್ಯ ಚ ॥ ೩೫ ॥**

ಸರ್ವತ್ರ ಸತ್, ಸತ್ – ಎಂಬ ಪ್ರತೀತಿಗೆ ಕಾರಣವಾದ ಸತ್ತೆಯು ಸರ್ವ ಜಗದ್ರೂಪವಾಗಿ ವ್ಯವಸ್ಥಿತವಾಗಿದೆ. ಅದು ಸಾಧ್ಯವೂ ಹೌದು, ಸಾಧನವೂ ಹೌದು; ಫಲವೂ ಹೌದು, ಫಲದ ಭೋಕ್ತೃವೂ ಹೌದು. ಬ್ರಹ್ಮರೂಪವಾದ ಈ ಸತ್ತೆಯು ತನ್ನ ಅಪ್ರತಿಮವಾದ ಮಾಯಾ ಶಕ್ತಿಯಿಂದ ಈ ಪರಿಯಲ್ಲಿ ತೋರಿಕೊಳ್ಳುತ್ತಿದೆ.

**ವಿವರಣೆ :** ಜಾತಿಸಮುದ್ದೇಶದಲ್ಲಿ – 'ತಾಂ ಪ್ರಾತಿಪದಿಕಾರ್ಥಂ ಚ ಧಾತ್ವರ್ಥಂ ಚ ಪ್ರಚಕ್ಷತೇ' ಎಂದು ಹೇಳಲಾಗಿದೆ (ಶ್ಲೋ. ೩೪). ಪ್ರಾತಿಪದಿಕಾರ್ಥ, ಧಾತ್ವರ್ಥಗಳೆರಡೂ ಸತ್ತಾ ಎಂಬ ಮಹಾಸಾಮಾನ್ಯವೇ ಎಂದು ಇದರ ಅರ್ಥ. ಬ್ರಹ್ಮರೂಪವಾದ ಈ ಸತ್ತೆಯು ಸರ್ವಾಧ್ಯಾಸಗಳಿಗೂ ಅಧಿಷ್ಠಾನವಾಗಿ

ಸರ್ವಜಗದ್ರೂಪವಾಗಿದೆ. ತನ್ನ ಮಾಯಾಶಕ್ತಿಯೆಂಬ ಉಪಾಧಿಯಿಂದ ಇದು ತನ್ನ ಸ್ವರೂಪವನ್ನು ಪರಿಮಿತಗೊಳಿಸಿಕೊಂಡು ಸಿದ್ಧಸಾಧ್ಯರೂಪವಾಗಿ ಫಲ ಮತ್ತು ಫಲಭೋಕ್ತೃರೂಪವಾಗಿ ಸಾಧನರೂಪವಾಗಿ ಸಮಸ್ತ ಶಬ್ದಗಳ ಅರ್ಥರೂಪವಾಗಿ ಅಂತೆಯೇ ಸಮಸ್ತ ಶಬ್ದರೂಪವಾಗಿ ವಿಶ್ವಯಾತ್ರೆಯನ್ನು ನಡೆಸುತ್ತಿದೆ. ಪ್ರಕೃತದಲ್ಲಿ ಕ್ರಿಯಾರೂಪವಾದ ಪ್ರವೃತ್ತಿಯೂ ಸತ್ತೆಯೆಂದು ತಿಳಿಯಬೇಕು.

ಕೆಲವರು ಇನ್ನೊಂದು ವಿಧದಲ್ಲಿ ಕ್ರಿಯಾ ಲಕ್ಷಣವನ್ನು ಹೇಳುತ್ತಾರೆ –

**ಕ್ರಿಯಾಮನ್ಯೇ ತು ಮನ್ಯಂತೇ ಕ್ವಚಿದಪ್ಯನಪಾಶ್ರಿತಾಮ್ ।**
**ಸಾಧನೈಕಾರ್ಥಕಾರಿತ್ವೇ ಪ್ರವೃತ್ತಿಮನಪಾಯಿನೀಮ್ ॥ ೩೬ ॥**

ಅನ್ಯೇ ತು = ತಂತ್ರಶಾಸ್ತ್ರವನ್ನನುಸರಿಸುವ ಕೆಲವು ತಾಂತ್ರಿಕರು, ಕ್ವಚಿದಪಿ = ಬೇರೆಯಾವ ದ್ರವ್ಯದಲ್ಲಿಯೂ, ಅನಪಾಶ್ರಿತಾಂ = ಆಶ್ರಯಿಸದೆ ಇರುವ ಮತ್ತು ಸಾಧನೈಕಾರ್ಥಕಾರಿತ್ವೇ = ಕರಣವೇ ಮೊದಲಾದ ಕಾರಕಗಳಿಂದ ಒಂದಾನೊಂದು ಫಲವನ್ನು ಸಾಧಿಸುವ ಕಾರ್ಯದಲ್ಲಿ ತೊಡಗಿದ, ಅನಪಾಯಿನೀಂ = ನಿತ್ಯವಾದ, ಪ್ರವೃತ್ತಿಂ = ಪರಮಾತ್ಮನ ಪ್ರವೃತ್ತಿಯನ್ನು, ಕ್ರಿಯಾಂ = ಧಾತ್ವರ್ಥವಾದ ಕ್ರಿಯೆಯೆಂದು, ಆಹುಃ = ಹೇಳುತ್ತಾರೆ.

**ವಿವರಣೆ :** ಹಿಂದೆ ಸಾಧನಸಮುದ್ದೇಶದ ಮೂವತ್ತನಾಲ್ಕನೆಯ ಕಾರಿಕೆಯಲ್ಲಿ ಈ ವಿಷಯವು ಪ್ರಸ್ತುತವಾಗಿದೆ. ಅದನ್ನೇ ಇಲ್ಲಿ ಗ್ರಂಥಕಾರರು ನೆನಪಿಗೆ ತಂದುಕೊಟ್ಟಿದ್ದಾರೆ. ಕ್ರಿಯೆಯು ಆತ್ಮನ ಒಂದುಶಕ್ತಿ. ಅದು ಆತ್ಮೇತರದ್ರವ್ಯಗಳಲ್ಲಿ ಇಲ್ಲ. ಕಾರಕಗಳೆಲ್ಲವೂ ಸೇರಿ ಯಾವ ಫಲವನ್ನುಂಟುಮಾಡುತ್ತದೆಯೋ ಆ ಫಲದ ಸಾಧನೆಗೆ ಈ ಪ್ರವೃತ್ತಿಯು ಆವಶ್ಯಕವಾದದ್ದು. ಅದು ಈಶ್ವರನ ಶಕ್ತಿಯಾದ್ದರಿಂದ ನಿತ್ಯವಾದದ್ದು ಎಂದು ಅಭಿಪ್ರಾಯ.

ಕ್ರಿಯೆಯು ಯಾವಾಗಲೂ ಸಾಧ್ಯಸ್ವಭಾವದ್ದೆಂದು ಹೇಳಿದ್ದೀರಿ. 'ಸಾಧ್ಯತ್ವೇನ ಪ್ರತೀಯಮಾನತ್ವಂ ಕ್ರಿಯಾತ್ವಂ'. ಈಗ ಹೇಳಿದ ಪ್ರಕಾರ ಕ್ರಿಯೆಯು ನಿತ್ಯವಾದರೆ, ಅದು ಸಾಧ್ಯಸ್ವಭಾವವುಳ್ಳದ್ದು ಹೇಗೆ? – ಎಂಬ ಪ್ರಶ್ನೆಗೆ ಸಮಾಧಾನ ಹೀಗೆ:

**ಸಾಮಾನ್ಯಭೂತಾ ಸಾ ಪೂರ್ವಂ ಭಾಗಶಃ ಪ್ರವಿಭಜ್ಯತೇ ।**
**ತತೋ ವ್ಯಾಪಾರರೂಪೇಣ ಸಾಧ್ಯೇವ ವ್ಯವತಿಷ್ಠತೇ ॥ ೩೭ ॥**

ಆ ಕ್ರಿಯೆಯು ಮೊದಲು ಆತ್ಮನ ಪ್ರವೃತ್ತಿಯೆಂಬ ಹೆಸರಿನಿಂದ ಸಾಮಾನ್ಯ ರೂಪದಲ್ಲಿರುತ್ತದೆ. ಆನಂತರ ಸಾಧನಗಳ ಮೂಲಕ ಫಲವನ್ನು

ಕೊಡಲು ಅಭಿಮುಖವಾದಾಗ ಸಾಧನಗಳೆಂಬ ಉಪಾಧಿಗಳಿಂದ ವ್ಯಾಪಾರರೂಪವಾಗಿ ಪರಿಣಮಿಸಿ ಸಾಧ್ಯತ್ವೇನ ರೂಪೇಣ – ಸಾಧ್ಯವೋ ಎಂಬಂತೆ – ವ್ಯವಸ್ಥಿತವಾಗುತ್ತದೆ.

**ವಿವರಣೆ :** ಆತ್ಮನ ಪ್ರವೃತ್ತಿಯೇ ಕ್ರಿಯೆ. ಅದು ಮೊದಲು ಸಾಮಾನ್ಯರೂಪ–ವಾಗಿ ಇದ್ದೇ ಇರುತ್ತದೆ. ಆನಂತರ ಸಾಧನದ್ರವ್ಯಗಳು ಫಲಾರ್ಥವಾಗಿ ಉದ್ಯುಕ್ತವಾದಾಗ ಅವುಗಳೊಡನೆ ಸೇರಿಕೊಂಡು ಹೊಸದಾಗಿ ಈ ಕ್ರಿಯೆ ಆರಂಭವಾಯಿತೋ ಎಂಬಂತೆ ತೋರುತ್ತದೆ. ಆಗ ಅದು ಸಾಧ್ಯತ್ವೇನ ನಮಗೆ ಪ್ರತೀತವಾಗುವುದು. ಈ ಕ್ರಿಯೆಯು ಕಾರಕಶಕ್ತಿಗಳಿಗೆ ಪ್ರವರ್ತಕ. ಕಾರಕಗಳು ಪ್ರವೃತ್ತವಾದಾಗ ಇದು ಪಚಿ ಕ್ರಿಯೆ, ಇದು ಗಮನ ಕ್ರಿಯೆ ಮುಂತಾದ ಹೆಸರನ್ನು ಪಡೆಯುತ್ತದೆ.

**ಪ್ರಕೃತಿಃ ಸಾಧನಾನಾಂ ಸಾ ಪ್ರಥಮಂ ತಚ್ಚ ಕಾರಕಮ್ ।**
**ವ್ಯಾಪಾರಾಣಾಂ ತತೋಽನ್ಯತ್ವಮಪರೈರುಪವರ್ಣ್ಯತೇ ॥ ೩೮ ॥**

ಸಾಮಾನ್ಯರೂಪವಾದ ಈ ಪ್ರವೃತ್ತಿಯು ಎಲ್ಲ ಸಾಧನಗಳಿಗೆ (ಕಾರಕಗಳಿಗೆ) ಪ್ರವರ್ತಕವಾದ್ದರಿಂದ ಅವುಗಳ ಪ್ರಕೃತಿಯಾಗಿದೆ. ಆದ್ದರಿಂದ ಈ ಪ್ರವೃತ್ತಿಯೇ ಪ್ರಥಮಕಾರಕವೆನ್ನಬಹುದು. ಕೆಲವರು ಸಾಮಾನ್ಯ ವಿಶೇಷಗಳಿಗೆ ಭೇದವಿದೆಯೆಂದು ತಿಳಿದು ಕಾರಕಗಳಿಗಿಂತ ಇದು ಭಿನ್ನವೆಂದು ಹೇಳುತ್ತಾರೆ.

**ವಿವರಣೆ :** ಕ್ರಿಯೆಯೇ ಕಾರಕವೆಂಬ ಸಿದ್ಧಾಂತವೂ ಇದೆ. ಪ್ರವೃತ್ತಿಯು ಕ್ರಿಯಾಸಾಮಾನ್ಯವಾದದ್ದು. ಕರ್ತೃಕರ್ಮಾದಿ ಕಾರಕಗಳ ಕ್ರಿಯೆ ವಿಶೇಷರೂಪ–ವಾದದ್ದು. ಪ್ರವೃತ್ತಿಯೇ ಕರ್ತ್ರಾದಿಕಾರಕಗಳಲ್ಲಿ ವಿಭಿನ್ನ ಸ್ವರೂಪವನ್ನು ತಳೆದು ಅವುಗಳ ಕ್ರಿಯೆಯನ್ನು ನಿರ್ವಹಿಸುತ್ತದೆಯಾದ್ದರಿಂದ ಪ್ರವೃತ್ತಿ ಸಾಮಾನ್ಯವೇ ಕಾರಕವೆಂದು ಕೆಲವರ ಮತ. ಸಾಮಾನ್ಯ ವಿಶೇಷಗಳಿಗೆ ಅಭೇದವನ್ನು ಇವರು ಅಂಗೀಕರಿಸುತ್ತಾರೆ.

ಇನ್ನು ಕೆಲವರು ಸಾಮಾನ್ಯವಿಶೇಷಗಳಿಗೆ ಭೇದವಿದೆಯೆಂದು ಹೇಳುತ್ತಾರೆ. ಇವರ ಮತದಂತೆ ಕರ್ತ್ರಾದಿ ನಿಷ್ಠ ಕಾರಕಕ್ರಿಯೆಗಳಿಗಿಂತ ಪ್ರವೃತ್ತಿಯು ಭಿನ್ನವೆಂದೂ ಇದು ಕಾರಕ ಕ್ರಿಯೆಗಳಿಗೆ ಪ್ರವರ್ತಕವೇ ಹೊರತು ಇದೇ ಕಾರಕಕ್ರಿಯೆಯಲ್ಲವೆಂದೂ ಹೇಳಬೇಕಾಗುವುದು.

**ಬಹೂನಾಂ ಸಂಭವೇಽರ್ಥಾನಾಂ ಕೇಚಿದೇವೋಪಕಾರಿಣಃ ।**
**ಸಂಸರ್ಗೇ ಕಶ್ಚಿದೇಷಾಂ ತು ಪ್ರಾಧಾನ್ಯೇನ ಪ್ರತೀಯತೇ ॥೩೯॥**

ಒಂದು ಪದದಿಂದ ಅನೇಕ ಅರ್ಥಗಳು ಒದಗಿಬಂದಾಗ ಅವುಗಳಿಗೆ ಪರಸ್ಪರ ಸಂಸರ್ಗವು ಆವಶ್ಯಕವಾಗುತ್ತದೆ. ಆಗ ಅವುಗಳಲ್ಲೊಂದು ಪ್ರಧಾನವಾಗಿ ಪ್ರತೀತವಾಗುತ್ತದೆ. ಉಳಿದವು ಪ್ರಧಾನಕ್ಕೆ ಉಪಕಾರಿಗಳಾಗುತ್ತವೆ. ಉಪಕಾರ್ಯವಾದ ಪ್ರಧಾನವು ಅಂಗಿ, ಉಪಕಾರಿಗಳಾದ ಉಳಿದವು ಅಂಗಗಳು.

**ವಿವರಣೆ :** ತಿಙಂತದಲ್ಲಿ ಆಖ್ಯಾತ (ತಿಙ್ ಪ್ರತ್ಯಯ) ಕ್ಕೆ ಅನೇಕ ಅರ್ಥ–ಗಳುಂಟು. ಕರ್ತೃ ಅಥವಾ ಕರ್ಮವೆಂಬ ಕಾರಕ (ಕ್ರಿಯೆ) ಏಕತ್ವಾದಿ ಸಂಖ್ಯೆ, ವರ್ತಮಾನಾದಿ ಕಾಲ, ಪ್ರಥಮಪುರುಷ ಮುಂತಾದ ಪುರುಷ, ಪರಸ್ಮೈಪದ ಅಥವಾ ಆತ್ಮನೇಪದ ಇವುಗಳ ಅರ್ಥವಿಶೇಷ – ಇವಿಷ್ಟು ಆಖ್ಯಾತ ಪ್ರತ್ಯಯದ ಅರ್ಥಗಳು. ಈ ಅರ್ಥಗಳಿಗೆ ಪ್ರಧಾನೋಪಸರ್ಜನಭಾವದಿಂದ ಅನ್ಯೋನ್ಯ ಸಂಬಂಧವು ಏರ್ಪಡುತ್ತದೆ.

**ಸಾಧ್ಯತ್ವಾತ್ ತತ್ರ ಚಾಖ್ಯಾತೈರ್ವ್ಯಾಪಾರಾಃ ಸಿದ್ಧಸಾಧನಾಃ ।**
**ಪ್ರಾಧಾನ್ಯೇನಾಭಿಧೀಯಂತೇ ಫಲೇನಾಪಿ ಪ್ರವರ್ತಿತಾಃ॥ ೪೦ ॥**

ಹೀಗಿರುವಾಗ ಸಿದ್ಧಸಾಧನಗಳೂ ಫಲದಿಂದ ಪ್ರವರ್ತಿತಗಳೂ ಆದ ಧಾತ್ವರ್ಥ ವ್ಯಾಪಾರಗಳು ಸಾಧ್ಯಸ್ವಭಾವದವಾದ್ದರಿಂದ ಪ್ರಧಾನವಾಗಿ ತಿಙಂತಗಳಿಂದ ಅಭಿಹಿತವಾಗುತ್ತವೆ.

**ವಿವರಣೆ :** ಆಖ್ಯಾತಶಬ್ದಕ್ಕೆ ತಿಙ್ ಪ್ರತ್ಯಯವೆಂದೂ ತಿಙಂತ ಕ್ರಿಯಾಪದ–ವೆಂದೂ ಎರಡು ಅರ್ಥಗಳಿವೆ. ಅದು ತಿಙ್ ಪ್ರತ್ಯಯವೆಂದು ಗ್ರಹಿಸಿದಾಗ, ಅದರ ಅರ್ಥಗಳೆಲ್ಲವೂ ಧಾತ್ವರ್ಥಕ್ರಿಯೆಗೆ ವಿಶೇಷಣವಾಗಿದ್ದು ಕ್ರಿಯೆಯೇ ಪ್ರಧಾನವಾಗಿ ತೋರುತ್ತದೆ. ಪ್ರಾಧಾನ್ಯವನ್ನನುಸರಿಸಿ ಪ್ರತ್ಯಯವು ಕ್ರಿಯಾವಾಚಿಯೆಂದು ಭಾವಿಸಬಹುದು. 'ಪ್ರಧಾನೇನ ಚ ವ್ಯಪದೇಶಾ ಭವಂತಿ' ಎಂಬ ನ್ಯಾಯವೂ ಉಂಟು.

ವ್ಯಾಪಾರವು ಸಾಧ್ಯಾವಸ್ಥೆಯಲ್ಲಿ ಪ್ರತೀತವಾಗುವುದಷ್ಟೆ. ಅದು ಉದ್ದಿಷ್ಟವಾದ್ದ–ರಿಂದ ಸಿದ್ಧವಾದ ಕಾರಕಕ್ಕಿಂತ ಮುಖ್ಯವಾದದ್ದು. ಸಿದ್ಧವಾದ ಕರ್ತೃಕರ್ಮಗಳು ಧಾತ್ವರ್ಥ ಫಲ ವ್ಯಾಪಾರಗಳಿಗೆ ಸಾಧನಗಳಾಗಿ ವರ್ತಿಸುತ್ತವೆ. ಕರ್ತರಿಪ್ರಯೋಗದಲ್ಲಿ

ವ್ಯಾಪಾರವು ವಿಶೇಷ್ಯವಾಗಿ ತೋರುವುದರಿಂದಲೂ ಫಲವು ಪ್ರವರ್ತಕವಾದ್ದ–ರಿಂದಲೂ ವ್ಯಾಪಾರವು ಪ್ರಧಾನ. ವ್ಯಾಪಾರಕ್ಕೆ ಉದ್ದಿಷ್ಟವಾದದ್ದು ಫಲವಾದ್ದರಿಂದ ಫಲವು ಮುಖ್ಯವೆಂಬುದು ಸಹಜವಾದರೂ ಕರ್ತರಿ ಪ್ರಯೋಗದಲ್ಲಿ ಪ್ರತೀತ್ಯನುಗುಣವಾಗಿ ಫಲವು ಪ್ರವರ್ತಕ ವಿಶೇಷಣವಾಗಿ ತೋರುತ್ತದೆ. ಕರ್ಮಣಿ ಪ್ರಯೋಗದಲ್ಲಿ ಕರ್ಮವು ಮುಖ್ಯವಾದ್ದರಿಂದ ಅದರಲ್ಲಿರುವ ಫಲವು ಮುಖ್ಯವಾಗಿ ತೋರುತ್ತದೆ. 'ಆಗ ಧಾತುವಿನ ಅರ್ಥವು ವ್ಯಾಪಾರಜನ್ಯ ಫಲ. ಕರ್ತರಿ ಪ್ರಯೋಗದಲ್ಲಿ ಫಲಾನುಕೂಲ ವ್ಯಾಪಾರವು ಅರ್ಥ. ಧಾತ್ವರ್ಥಫಲವ್ಯಾಪಾರಗಳು ಕರ್ತೃಕರ್ಮಗಳಿಂದ ಹುಟ್ಟಬೇಕಾದವು. ಹುಟ್ಟದೇ ಇರುವಾಗಲೇ ಅವು ಸಿದ್ಧವಾಗಿ–ರುವ ಕಾರಕಗಳಿಗೆ ವಿಶೇಷಣವಾಗಲು ಸಾಧ್ಯವಾಗದು. ಆದ್ದರಿಂದ ಸಿದ್ಧಕ್ಕಿಂತ ಸಾಧ್ಯವು ಪ್ರಧಾನವಾಗುತ್ತದೆ. ಇಲ್ಲಿ ಕರ್ತೃಕರ್ಮಗಳೆಂದರೆ ತಿಙ್ ಪ್ರತ್ಯಯದ ಅರ್ಥಗಳಾದ ಕರ್ತೃಕರ್ಮಗಳು. ಚೈತ್ರ, ತಂಡುಲ – ಮುಂತಾದ ನಾಮಪದಾರ್ಥಗಳಲ್ಲ. ಏಕೆಂದರೆ ಇಲ್ಲಿ ಪ್ರಕೃತವಾದದ್ದು ಆಖ್ಯಾತಶಬ್ದಗಳಾದ ತಿಙಂತಗಳು. ತಿಙ್ ಪ್ರತ್ಯಯಾರ್ಥವು ಧಾತ್ವರ್ಥಕ್ಕೆ ವಿಶೇಷಣ ಎಂದು ತಾತ್ಪರ್ಯ.

ಹಾಗಾದರೆ ಭಾವೇ ಪ್ರಯೋಗದಲ್ಲಿ ಹೇಗೆ? ಚೈತ್ರೇಣ ಭೂಯತೇ, ಮೈತ್ರೇಣ ಉಪವಿಶ್ಯತೇ, ಪಕ್ಷಿಣಾ ಡೀಯತೇ– ಮುಂತಾದ ಭಾವೇಪ್ರಯೋಗಗಳಲ್ಲಿ ತಿಙ್ ಪ್ರತ್ಯಯಾರ್ಥವು ಕಾರಕವಲ್ಲವಷ್ಟೆ? ನಿಜ. ಅಲ್ಲಿ ತಿಙರ್ಥಗಳಾದ ಸಂಖ್ಯಾಕಾಲಗಳು ಧಾತ್ವರ್ಥಕ್ಕೆ ವಿಶೇಷಣಗಳು; 'ತಿಙರ್ಥಸ್ತು ವಿಶೇಷಣಮ್'.

ಭಾವೇ ಪ್ರಯೋಗದಲ್ಲಿ ಕರ್ತೃಕರ್ಮಗಳೆರಡೂ ತಿಙರ್ಥಗಳಲ್ಲವಾದ್ದರಿಂದ ತಿಙರ್ಥವಾದ ಸಂಖ್ಯೆಗೆ ಏಕಪದೋಪಾತ್ತವೂ ಪ್ರಧಾನವೂ ಆದ ಕ್ರಿಯೆಯಲ್ಲಿಯೇ ಅನ್ವಯಬರುತ್ತದೆ. ಕ್ರಿಯೆಯು ಭೇದಾಭಾವರೂಪವಾದ ಏಕತ್ವದಿಂದ ಕೂಡಿರುತ್ತದೆ.

ಹಾಗಾದರೆ ಕ್ರಿಯಾ ವೃತ್ತಿಗಣನೆಯಲ್ಲಿ ಕೃತ್ವಸುಚ್, ಸುಚ್ ಪ್ರತ್ಯಯಗಳು ಹೇಗೆ ಬರುತ್ತವೆ? ಇದಕ್ಕೆ ಸಮಾಧಾನ ಹೀಗೆ –

**ಏಕತ್ವಾವೃತ್ತಿಭೇದಾಭ್ಯಾಂ ಭೇದಾಭೇದಸಮನ್ವಯೇ ।**
**ಸಂಖ್ಯಾಸ್ತತ್ರೋಪಲಭ್ಯಂತೇ ಸಂಖ್ಯೇಯಾವಯವಕ್ರಿಯಾಃ ॥ ೪೧ ॥**

ವ್ಯಾಪಾರಸಮೂಹ ರೂಪವಾದ ಕ್ರಿಯೆಯ ಅಭೇದರೂಪವಾದ ಏಕತ್ವ ಮತ್ತು ಕ್ರಿಯೆಯ ಆವೃತ್ತಿಯಿಂದಾದ ಭೇದ – ಇವುಗಳಿಂದ ಒಂದೇ ಧಾತ್ವರ್ಥದಲ್ಲಿ ಭೇದಾಭೇದಗಳು ಸಮನ್ವಿತವಾಗಿ ಸೇರಿಕೊಳ್ಳುತ್ತವೆ. ಆಗ ಸಂಖ್ಯೇಯವಾದದ್ದು ಆವೃತ್ತಿ. ಈ ಆವೃತ್ತಿಯಲ್ಲಾಗುವ ವ್ಯಾಪಾರಗಳ

ಸಮುದಾಯವೆಲ್ಲವನ್ನು ಸೇರಿಸಿ ಏಕತ್ವ ರೂಪದಿಂದಲೇ ತಿಙಂತವು ಬೋಧಿಸುತ್ತದೆ. ಆವೃತ್ತಿಗತವಾದ ಸಂಖ್ಯೆಯ ಭೇದವನ್ನು ಕೃತ್ವಸುಚ್ ಪ್ರತ್ಯಯಾಂತಗಳಾದ ಪಂಚಕೃತ್ವಃ ದ್ವಿಃ – ಮುಂತಾದ ಶಬ್ದಗಳು ಬೋಧಿಸುತ್ತವೆ.

**ವಿವರಣೆ :** ದ್ವಿಃ ಪಚತಿ, ಪಂಚಕೃತ್ವಃ ಪಠತಿ – ಮುಂತಾದ ಸ್ಥಳಗಳಲ್ಲಿ ಸಂಖ್ಯಾಭೇದವು ತೋರುತ್ತದೆಯಷ್ಟೆ. ಇದು ದ್ವಿಃ ಮುಂತಾದ ಶಬ್ದಗಳಲ್ಲಿ ಅನ್ವಿತವಾಗಿರುತ್ತದೆ. ತಿಙಂತವು ಮಾತ್ರ ಎಲ್ಲ ಆವೃತ್ತಕ್ರಿಯೆಗಳ ವ್ಯಾಪಾರ ಸಮೂಹವನ್ನು ಅಭೇದದಿಂದ ಬೋಧಿಸುತ್ತದೆ. ಆವೃತ್ತಿಗಳ ಭೇದವು ಕ್ರಿಯೆಯಲ್ಲಿದ್ದರೂ ಭೇದಾಭೇದಗಳು ಏಕತ್ರ ಇರಬಹುದೆಂಬುದನ್ನು ಹೇಳಿದ್ದಾಗಿದೆ.

ಪಚತಿ, ಪಚತಃ, ಪಚಂತಿ – ಇತ್ಯಾದಿ ಪ್ರಯೋಗಗಳಲ್ಲಿ ಕರ್ತೃಗತ ಸಂಖ್ಯೆಯೂ, ಕರ್ಮಣಿ ಪ್ರಯೋಗದಲ್ಲಿ ಕರ್ಮಗತ ಸಂಖ್ಯೆಯೂ ಕ್ರಿಯೆಯಲ್ಲಿ ಪ್ರತೀತವಾಗುತ್ತದೆ. ಕ್ರಿಯೆಗೆ ಸ್ವತಃ ಸಂಖ್ಯಾಯೋಗವಿಲ್ಲ. ಏಕತ್ವವೂ ಸಹ ಭೇದಾಭಾವರೂಪವಾದದ್ದು. ಪಾಕಃ, ಪಾಕೌ, ಪಾಕಾಃ – ಎಂಬಲ್ಲಿ ಕ್ರಿಯೆಯು ದ್ರವ್ಯರೂಪವನ್ನು ತಳೆಯುತ್ತದೆಯಾದ್ದರಿಂದ ಸಂಖ್ಯೆಯು ತೋರುತ್ತದೆ. ಅಸತ್ತ್ವಭೂತವಾದ ಕ್ರಿಯೆಗೆ ಸಂಖ್ಯಾಯೋಗವಿಲ್ಲ – ಎಂದು ತಾತ್ಪರ್ಯ. ಶಂಕೆ –

**ಸಿದ್ಧಸ್ಯಾರ್ಥಸ್ಯ ಪಾಕಾದೇಃ ಕಥಂ ಸಾಧನಯೋಗಿತಾ ।**
**ಸಾಧ್ಯತ್ವೇ ವಾ ತಿಙಂತೇನ ಕೃತಾಂ ಭೇದೋ ನ ಕಶ್ಚನ ॥೪೨॥**

ಸಿದ್ಧಾರ್ಥವನ್ನು ಬೋಧಿಸುವ ಪಾಕ ಮುಂತಾದ ಕೃದಂತ ಶಬ್ದಗಳಿಗೆ ಸಾಧನ ಸಂಬಂಧವು ಅನಾವಶ್ಯಕವಾದ್ದರಿಂದ ಏಕೆ ಬರುತ್ತದೆ? ಕೃದಂತಾರ್ಥವೂ ಸಾಧ್ಯತ್ವೇನ ತೋರುವುದಾದರೆ, ಕೃದಂತಗಳಿಗೆ ತಿಙಂತದೊಡನೆ ಯಾವ ಭೇದವೂ ಇರುವುದೇ ಇಲ್ಲ.

**ವಿವರಣೆ :** ಕೃದಂತದಿಂದ ಅಭಿಹಿತವಾಗುವ ಕ್ರಿಯೆಯು ಸಿದ್ಧಸ್ವರೂಪವಾಗಿ–ರುತ್ತದೆ – ಎಂದಾದರೆ, ಕ್ರಿಯೆಯನ್ನು ಸಾಧಿಸುವ ಸಾಧನಗಳಾದ ಕರ್ತೃಕರ್ಮಗಳ ಅಪೇಕ್ಷೆ ಇಲ್ಲವಾಗುತ್ತದೆ. ಸಿದ್ಧವಾದುದಕ್ಕೆ ಸಾಧನವು ಬೇಕಾಗಿಲ್ಲ. ಆಗ ಪಾಕ ಮುಂತಾದವುಗಳಿಗೆ ಸಾಧನಯೋಗವಿಲ್ಲವಾಗುವುದರಿಂದ ಕಾಳಿದಾಸಸ್ಯ ಕೃತಿಃ, ಓದನಸ್ಯ ಪಾಕಃ – ಇತ್ಯಾದಿ ಸ್ಥಳಗಳಲ್ಲಿ ಕರ್ತೃಕರ್ಮಗಳ ಮೇಲೆ ಷಷ್ಠೀ ಬಂದಿರು–ವುದು ಅಯುಕ್ತವಾಗುತ್ತದೆ. ಹಾಗಲ್ಲದೆ ಕೃದಭಿಹಿತ ಭಾವವೂ ಸಾಧ್ಯತಯಾ

ತೋರುವುದಾದರೆ ಭಾಷ್ಯವಿರೋಧವಾಗುತ್ತದೆ. ಭಾಷ್ಯಕಾರರು ತಿಜಂತ, ಕೃದಂತ–ಗಳಿಗೆ ಅರ್ಥಭೇದವನ್ನು ಒಪ್ಪಿದ್ದಾರೆ. ಆದ್ದರಿಂದ ಪಂಚಕೃತ್ವಃ ಪಚತಿ ಎಂಬಂತೆ, ಪಂಚಕೃತ್ವಃ ಪಾಕ ಎಂಬ ಪ್ರಯೋಗವು ಬರುವುದಿಲ್ಲ. ಅದು ಭಾಷ್ಯಸಂಮತವಲ್ಲ.

**ತತ್ರ ಕಾರಕಯೋಗಾಯಾ ಯದ್ಯಾಖ್ಯಾತಂ ನಿಬಂಧನಮ್ ।**
**ಷಷ್ಠ್ಯಾಃ ಸಾ ತೇನ ಸಂಬಂಧೇ ವ್ಯದಸ್ತಾ ಕರ್ತೃಕರ್ಮಣೋಃ ॥ ೪೩ ॥**

ಕೃದಂತದಲ್ಲಿ ಕ್ರಿಯೆಯು ಸಾಧ್ಯತಯಾ ಅಭಿಧಾನಹೊಂದುವಾಗ ಬರುವ ಕರ್ತೃ ಕರ್ಮ ಕಾರಕ ವಾಚಕಗಳ ಷಷ್ಠಿಗೆ ಆಖ್ಯಾತವು ನಿಮಿತ್ತವೆನ್ನುವುದೂ ಯುಕ್ತವಲ್ಲ. 'ನ ಲೋಕಾವ್ಯಯ . . .' ಎಂಬ ಸೂತ್ರದಲ್ಲಿ ಲಾದೇಶಗಳ ಯೋಗವಿದ್ದಾಗ ಷಷ್ಠಿಯು ನಿಷಿದ್ಧವಾಗಿದೆ.

**ವಿವರಣೆ :** 'ಕರ್ತೃ ಕರ್ಮಣೋಃ ಕೃತಿ' ಎಂಬ ಸೂತ್ರದಿಂದ ಕೃದಂತಗಳ ಯೋಗವಿದ್ದಾಗ ಕರ್ತೃ ಕರ್ಮವಾಚಕಗಳ ಮೇಲೆ ಷಷ್ಠೀವಿಭಕ್ತಿಯನ್ನು ಹೇಳಿದ್ದಾರೆ. ಈ ಸೂತ್ರದಲ್ಲಿ 'ಕೃತಿ' ಎಂಬ ಶಬ್ದವು ಅನಾವಶ್ಯಕವೆಂದು ಕೆಲವರ ಅಭಿಪ್ರಾಯವಿದೆ. ಆ ಅಭಿಪ್ರಾಯದಿಂದ ಈ ಶ್ಲೋಕಾರ್ಥವು ಸಂಗತವಾಗುತ್ತದೆ. 'ಕೃತಿ' ಎಂಬ ಶಬ್ದವಿಲ್ಲದಾಗ, ಕರ್ತೃಕರ್ಮಗಳಿಗೆ ಕ್ರಿಯಾ ಯೋಗವಿದ್ದಾಗ ಷಷ್ಠೀ ಬರಬಹುದು. ಕೃದಂತದ ಯೋಗವಿದ್ದಾಗ ಕ್ರಿಯೆಯು ಸಿದ್ಧಸ್ವರೂಪವಾಗಿಯೂ ತಿಜಂತದ ಯೋಗವಿದ್ದಾಗ ಕ್ರಿಯೆಯು ಸಾಧ್ಯಸ್ವರೂಪವಾಗಿಯೂ ತೋರುತ್ತದೆ – ಎಂದು ಅಭಿಪ್ರಾಯವಿರಬಹುದು. ಮಾತುಃ ಸ್ಮರತಿ = ತಾಯಿಯನ್ನು ಸ್ಮರಿಸಿಕೊಳ್ಳುತ್ತಾಳೆ. ಇಲ್ಲಿ ಕರ್ಮಣಿ ಷಷ್ಠೀ ಎಂದೂ ಸ್ಮರಣೆಯು ಸಾಧ್ಯತಯಾ ಪ್ರತೀತವಾಗುವುದೆಂದೂ ಆಶಯ. ತಿಜಂತಯೋಗದಲ್ಲಿ ಕರ್ತರಿಷಷ್ಠಿಗೆ ಉದಾಹರಣೆ ಸಿಗುವುದಿಲ್ಲ.

ಈ ಸಮಾಧಾನವು ಸರಿಯಲ್ಲ. 'ನ ಲೋಕಾವ್ಯಯ.....' ಎಂಬ ಸೂತ್ರದಲ್ಲಿ ಲಾದೇಶಗಳ ಯೋಗದಲ್ಲಿ ಷಷ್ಠಿಯೇ ನಿಷಿದ್ಧವಾಗಿದೆ. ತಿಙ್ ಪ್ರತ್ಯಯಗಳೆಲ್ಲವೂ ಲಾದೇಶಗಳು. 'ಮಾತುಃ ಸ್ಮರತಿ' ಎಂಬಲ್ಲಿ ಶೇಷೇ ಷಷ್ಠೀ ಬಂದಿದೆ. ಇದು ಕಾರಕಷಷ್ಠಿಯಲ್ಲ.

ಈ ಶ್ಲೋಕದಲ್ಲಿ ಶಂಕಾ ಸಮಾಧಾನಗಳು ಸರಿಯಾಗಿ ಹೊಂದುವುದಿಲ್ಲ. ವಾಕ್ಯಪದೀಯಕಾರರ ಆಶಯವು ಸರಿಯಾಗಿ ತಿಳಿಯುವುದಿಲ್ಲ.

**ಏಕಾಭಿಧಾನ ಏಕೋಽರ್ಥೋ ಯುಗಪಚ್ಚ!ದ್ವಿಧರ್ಮಭಾಕ್ ।**
**ನ ಸಂಭವತಿ ಸಿದ್ಧತ್ವೇ ಸ ಸಾಧ್ಯಃ ಸ್ಯಾತ್ ಕಥಂ ಪುನಃ ॥೪೪॥**

ಒಂದು ವಾಚಕಶಬ್ದವಿದ್ದಾಗ ಒಂದು ಅರ್ಥವು ಪ್ರತೀತವಾಗಿರುತ್ತದೆ. ಅದರಲ್ಲಿ ವಿರುದ್ಧವಾದ ಎರಡು ಧರ್ಮಗಳಿರುವುದು ಆಗದ ಮಾತು. ಸಿದ್ಧಸ್ವರೂಪವಾದ ಕ್ರಿಯೆಯು ಸಾಧ್ಯ ಸ್ವರೂಪವಾಗಿ ಹೇಗೆ ತೋರಬಲ್ಲದು ?

**ವಿವರಣೆ :** ಪಾಕಾದಿ ಕೃದಂತವಾಚ್ಯ ಕ್ರಿಯೆಯು ಕಾರಕಸಂಬಂಧವಿದ್ದಾಗ ಸಾಧ್ಯಸ್ವರೂಪವಾಗಿಯೂ ಸಂಖ್ಯಾದಿಗಳ ಯೋಗವಿದ್ದಾಗ ಸಿದ್ಧಸ್ವರೂಪವಾಗಿಯೂ ತೋರುತ್ತದೆ – ಎಂಬ ಶಂಕೆಗೆ ಉತ್ತರವಿದು. ಒಂದೇ ಶಬ್ದಾರ್ಥವು ಏಕಕಾಲದಲ್ಲಿ ವಿರುದ್ಧಧರ್ಮಗಳನ್ನು ಹೊಂದಲಾರದು. ಬೇರೆಬೇರೆ ಶಬ್ದಗಳಾದರೆ ಧರ್ಮಭೇದವು ತೋರಬಹುದು. ಪಚತಿ = ವಿಕ್ಲಿತ್ತ್ಯನುಕೂಲವ್ಯಾಪಾರ. ಪಾಚಕ = ವಿಕ್ಲಿತ್ತ್ಯನುಕೂಲ ವ್ಯಾಪಾರಾಶ್ರಯ.

**ಏತಾವತ್ ಸಾಧನಂ ಸಾಧ್ಯಮೇತಾವದಿತಿ ಕಲ್ಪನಾ ।**
**ಶಾಸ್ತ್ರ ಏವ ನ ವಾಕ್ಯೇಽಸ್ತಿ ವಿಭಾಗಃ ಪರಮಾರ್ಥತಃ ॥ ೪೫ ॥**

ಒಂದೇ ಪದದ ಅರ್ಥದಲ್ಲಿ ಎರಡು ಅಂಶಗಳಿರುವಾಗ, ಅನ್ವಯ ವ್ಯತಿರೇಕಗಳಿಂದ ಅಪೋದ್ಧಾರಮಾಡಿ, ಇಷ್ಟು ಸಾಧನ, ಇಷ್ಟು ಸಾಧ್ಯ ಎಂದು ಕಲ್ಪಿಸಲು ಶಾಸ್ತ್ರದಲ್ಲಿ ಮಾತ್ರ ಶಕ್ಯವಾಗುತ್ತದೆ. ಲೋಕಪ್ರಯುಕ್ತವಾದ ವಾಕ್ಯದಲ್ಲಾಗಲಿ ಪದದಲ್ಲಾಗಲಿ, ಪರಮಾರ್ಥವಾಗಿ ವಿಭಾಗವೇ ಇಲ್ಲ.

**ವಿವರಣೆ :** ಉದಾಹರಣೆಗೆ: 'ಪಚತಿ' ಎಂಬ ಶಬ್ದದಲ್ಲಿ ಪಚ ಎಂಬುದು ಧಾತು, ಅದರ ಅರ್ಥ ಪಾಕಕ್ರಿಯೆ, ಅದು ಸಾಧ್ಯವಾದದ್ದು. ತಿಙ್ ಪ್ರತ್ಯಯಾರ್ಥವು ಕರ್ತಾ, ಸಾಧನ. ಈ ಕರ್ತನಿಂದ ಸಾಧ್ಯವಾದ ಪಚಿಕ್ರಿಯೆ–ಎಂದು ಶಾಸ್ತ್ರದಲ್ಲಿ ವಿಭಾಗಮಾಡಿ ಹೇಳಲು ಸಾಧ್ಯ. ಲೋಕ ವ್ಯವಹಾರದಲ್ಲಿ 'ಪಚತಿ' ಎಂಬುದು ಅಖಂಡವಾದದ್ದು. ಇದರಲ್ಲಿ ಯಾವ ಶಬ್ದವಿಭಾಗವೂ ಇಲ್ಲ. ಅಖಂಡ ಶಬ್ದ ಇದು. ಪ್ರಕೃತ ಬೇಕಾದದ್ದು ಪದದ ವಿಷಯ ಮಾತ್ರ. ವಾಕ್ಯದ ವಿಚಾರವಲ್ಲ.

**ಆಖ್ಯಾತಶಬ್ದೇ ಭಾಗಾಭ್ಯಾಂ ಸಾಧ್ಯಸಾಧನವರ್ತಿತಾ ।**
**ಪ್ರಕಲ್ಪಿತಾ ಯಥಾ ಶಾಸ್ತ್ರೇ ಸ ಘಞಾದಿಷ್ವಪಿ ಕ್ರಮಃ ॥ ೪೬ ॥**

ಆಖ್ಯಾತಪ್ರತ್ಯಯಾಂತವಾದ ಕ್ರಿಯಾಪದದಲ್ಲಿ ಪಚ+ತಿ ಎಂಬ ಪ್ರಕೃತಿ ಪ್ರತ್ಯಯಗಳೆಂಬ ಎರಡು ವಿಭಾಗಗಳಿಂದ ಪ್ರಕೃತ್ಯರ್ಥವು ಸಾಧ್ಯವೃತ್ತಿಯೆಂದೂ ಪ್ರತ್ಯಯಾರ್ಥವು ಸಾಧನಪ್ರವೃತ್ತಿಯೆಂದೂ ಶಾಸ್ತ್ರದಲ್ಲಿ ಕಲ್ಪಿತವಾಗಿದೆಯಷ್ಟೆ. ಈ ಕ್ರಮವೇ ಘಞ್ ಮುಂತಾದ ಕೃದಂತದಲ್ಲಿಯೂ ಇದೆ.

**ವಿವರಣೆ :** ಪಾಕ ಶಬ್ದವು ಘಞ್ ಪ್ರತ್ಯಯಾಂತವಾದದ್ದು. ಇದರಲ್ಲಿ ಮೇಲೆ ಹೇಳಿದಂತೆ ಅರ್ಥದ್ವಯದ ಕಲ್ಪನೆ ಇದೆ.

**ಸಾಧ್ಯತ್ವೇನ ಕ್ರಿಯಾ ತತ್ರ ಧಾತುರೂಪನಿಬಂಧನಾ ।**
**ಸತ್ತ್ವಭಾಗಸ್ತು ಯಸ್ತಸ್ಯಾಃ ಸ ಘಞಾದಿನಿಬಂಧನಃ ॥ ೪೭ ॥**

ಪಾಕ ಇತ್ಯಾದಿ ಭಾವಕೃದಂತದಲ್ಲಿ ಸಾಧ್ಯತ್ವೇನ ಪ್ರತೀತವಾಗುವ ಕ್ರಿಯೆಯು ಪ್ರಕೃತಿಯಾದ ಧಾತುವಿನ ನಿಮಿತ್ತದಿಂದ ಹಾಗೆ ತೋರತಕ್ಕದ್ದಾಗಿದೆ. ಆ ಕ್ರಿಯೆಯ ಸತ್ತ್ವಭಾಗವು ಎಂದರೆ ಸಿದ್ಧತ್ವೇನ ಪ್ರತೀತವಾಗುವ ಭಾಗವು ಘಞಾದಿ ಪ್ರತ್ಯಯ ನಿಮಿತ್ತಕವಾದದ್ದು.

**ವಿವರಣೆ :** ತಾತ್ಪರ್ಯವಿಷ್ಟು – ಶಾಸ್ತ್ರದಲ್ಲಿ ಲೋಕವ್ಯವಹಾರಸಿದ್ಧಿಗಾಗಿ ಪ್ರಕೃತಿ ಪ್ರತ್ಯಯಾದಿ ವಿಭಾಗವನ್ನು ಮಾಡಿ ಅಪೋದ್ಧಾರಮಾರ್ಗದಿಂದ ಅರ್ಥವನ್ನು ವಿಭಾಗಿಸಿ ಹೇಳಿರುತ್ತಾರೆ. ಪ್ರಕೃತದಲ್ಲಿ ಭಾವಾರ್ಥಕ ಕೃದಂತದ ಅರ್ಥವಾದ ಕ್ರಿಯೆಯ ಪೂರ್ವಭಾಗವು ಪಚಾದಿ ಧಾತುಗಳಿಂದ ಸಾಧ್ಯಸ್ವರೂಪವಾಗಿಯೂ ಉತ್ತರಭಾಗವು ಕೃತ್ ಪ್ರತ್ಯಯಗಳಿಂದ ಸಿದ್ಧಸ್ವರೂಪವಾಗಿಯೂ ತೋರುತ್ತದೆ. ಆದ್ದರಿಂದ ಕ್ರಿಯೆಯ ಪೂರ್ವಭಾಗದೊಡನೆ ಅನ್ವಯವಿದ್ದಾಗ ಕಾರಕಯೋಗವು ಬರಲು ಅಡ್ಡಿ ಇಲ್ಲ. ಆಗ ಓದನಸ್ಯ ಪಾಕಃ ಸೂರ್ಯಸ್ಯ ದರ್ಶನಂ – ಇತ್ಯಾದಿ ಸ್ಥಳಗಳಲ್ಲಿ ಕರ್ಮಣಿ ಷಷ್ಠಿಯೂ ಕಾಳಿದಾಸಸ್ಯ ಕೃತಿಃ ಚೈತ್ರಸ್ಯ ಗಮನಂ – ಮುಂತಾದ ಸ್ಥಳಗಳಲ್ಲಿ ಕರ್ತರಿ ಷಷ್ಠಿಯೂ ಬರುತ್ತದೆ. ಉತ್ತರ ಭಾಗದ ಕ್ರಿಯೆಯು ಸಿದ್ಧಸ್ವರೂಪವಾದ್ದರಿಂದ ದ್ರವ್ಯದಂತೆ ಪಾಕಃ ಪಾಕೌ ಪಾಕಾಃ, ಪಾಕಂ, ಗಮನೇನ, ದರ್ಶನಾಯ, ಕೃತಯೇ, ಸ್ತುತಿಂ – ಇತ್ಯಾದಿ ಸ್ಥಳಗಳಲ್ಲಿ ಸಂಖ್ಯಾ, ಲಿಂಗ, ಕಾರಕಗಳ ಸಂಬಂಧವನ್ನು ಪಡೆಯುತ್ತದೆ ಎಂದು ನಿರ್ಣಯ. ಧಾತು, ಪ್ರತ್ಯಯಗಳು ಶಾಸ್ತ್ರದಲ್ಲಿ ಭಿನ್ನಶಬ್ದಗಳು. ಅವು ಹೇಳುವ ಧರ್ಮದ್ವಯವು ಒಂದೇ ಧರ್ಮಿಯಲ್ಲಿ ಬರಬಹುದು. ಹೇಗೆಂದರೆ –

**ಬಂಧುತಾ ಭೇದರೂಪೇಣ ಬಂಧುಶಬ್ದೇ ವ್ಯವಸ್ಥಿತಾ ।**
**ಸಮೂಹೋ ಬಂಧ್ವವಸ್ಥಾ ತು ಪ್ರತ್ಯಯೇನಾಭಿಧೀಯತೇ ॥ ೪೮ ॥**

ಬಂಧುತಾ = ಬಂಧುತ್ವವೆಂಬ ಧರ್ಮವು, ಬಂಧುಶಬ್ದಾರ್ಥದಲ್ಲಿ ಭೇದರೂಪದಿಂದ ಇದೆ. ಬಂಧೂನಾಂ ಸಮೂಹೋ ಬಂಧುತಾ – ಎಂದು

ವಿಗ್ರಹಿಸಿದಾಗ ತಲ್ ಪ್ರತ್ಯಯಾರ್ಥವಾದ ಸಮೂಹವು ಬಂಧು ಎಂಬ ಅಭೇದಾವಸ್ಥೆಯಲ್ಲಿ ಅಭಿಹಿತವಾಗುತ್ತದೆ.

**ವಿವರಣೆ :** ಬಂಧುತಾ ಶಬ್ದಕ್ಕೆ ಎರಡು ಅರ್ಥಗಳಿವೆ. ಬಂಧೋಃ ಭಾವಃ = ಬಂಧುತಾ. ಭಾವಾರ್ಥದಲ್ಲಿ ತಲ್ ಪ್ರತ್ಯಯ ಬಂದಿದೆ. ಭಾವವೆಂದರೆ ಇಲ್ಲಿ ಬಂಧುತ್ವವೆಂಬ ಧರ್ಮವಿಶೇಷ. ಇದು ಬಂಧುವಾದ ವ್ಯಕ್ತಿಯಲ್ಲಿ ಸಮವಾಯ ಸಂಬಂಧದಿಂದ ಇದೆ. ಸಮವಾಯವು ಭೇದಸಂಬಂಧ, ಬಂಧೂನಾಂ ಸಮೂಹೋ ಬಂಧುತಾ – ಎಂಬಲ್ಲಿ 'ಗ್ರಾಮಜನಬಂಧುಭ್ಯಸ್ತಲ್' ಎಂಬ ಸೂತ್ರದಿಂದ ಸಮೂಹಾರ್ಥದಲ್ಲಿ ತಲ್ ಪ್ರತ್ಯಯ ಬಂದಿದೆ. ಬಂಧುತಾಶಬ್ದಕ್ಕೆ ಬಂಧುತ್ವ, ಬಂಧುಸಮೂಹ ಎಂದು ಎರಡು ಅರ್ಥಗಳಾದವು. ಸಮೂಹವು ಬಂಧುಗಳಿಗೆ ಭಿನ್ನವಾದ ಇನ್ನೊಂದು ವಸ್ತುವಲ್ಲ. ಪ್ರತ್ಯಯಾರ್ಥವಾದ ಸಮೂಹವು ಬಂಧುಗಳಿಗೆ ಅಭಿನ್ನವಾಗಿದೆ. ಇಲ್ಲಿ ಪ್ರತ್ಯಯಾರ್ಥಕ್ಕೆ ಅಭೇದದಿಂದ ಅನ್ವಯವಿದೆ.

ಬಂಧುತಾ ಎಂಬಲ್ಲಿ ಬಂಧುವೆಂಬ ಧರ್ಮಿ ಒಂದೇ ಆಗಿದೆ. ಅಲ್ಲಿ ಪ್ರಕೃತಿ ಪ್ರತ್ಯಯಗಳಿಂದ ಅಭಿಹಿತವಾದ ಧರ್ಮದ್ವಯವು ಹೇಗೆ ವಿರುದ್ಧವಲ್ಲವೋ ಹಾಗೆ ಪಾಕಃ ಮುಂತಾದ ಶಬ್ದಗಳಲ್ಲಿಯೂ ಒಂದೇ ಕ್ರಿಯೆಯಲ್ಲಿ ಸಾಧ್ಯತ್ವ ಸಿದ್ಧತ್ವರೂಪ ಧರ್ಮಧ್ವಯದ ಸಂಬಂಧವು ವಿರುದ್ಧವಲ್ಲ. ಇಲ್ಲಿಯೂ ಪ್ರಕೃತಿ ಪ್ರತ್ಯಯಗಳೆಂಬ ಶಬ್ದಭೇದಗಳಿವೆ.

**ತತ್ರ ಯಂ ಪ್ರತಿ ಸಾಧ್ಯತ್ವಮಸಿದ್ಧಾ ತಂ ಪ್ರತಿ ಕ್ರಿಯಾ ।**
**ಸಿದ್ಧಾ ತು ಯಸ್ಮಿನ್ ಸಾಧ್ಯತ್ವಂ ನ ತಮೇವ ಪುನಃ ಪ್ರತಿ ॥ ೪೯ ॥**

ಭಾವಾರ್ಥಕ ಕೃದಂತ ಸ್ಥಳದಲ್ಲಿ ಯಾವ ಕಾರಕದೊಡನೆ ಕ್ರಿಯೆಗೆ ಸಾಧ್ಯತ್ವವಿದೆಯೋ ಅದರ ವಿಷಯದಲ್ಲಿ ಸಿದ್ಧತ್ವವಿರುವುದಿಲ್ಲ. ಯಾವುದರ ವಿಷಯದಲ್ಲಿ ಸಿದ್ಧತ್ವವಿದೆಯೋ ಅದೇ ಕಾರಕದೊಡನೆ ಕ್ರಿಯೆಗೆ ಸಾಧ್ಯತ್ವವೂ ಇರುವುದಿಲ್ಲ.

**ವಿವರಣೆ :** ಸಾಧ್ಯತ್ವ ವಿಶಿಷ್ಟ ಪ್ರಕೃತ್ಯರ್ಥಕ್ಕೆ ಕಾರಕದೊಡನೆ ಅನ್ವಯ, ಸಿದ್ಧತ್ವ ವಿಶಿಷ್ಟ ಪ್ರತ್ಯಯಾರ್ಥಕ್ಕೆ ಲಿಂಗ ಸಂಖ್ಯಾದಿಗಳೊಡನೆ ಅನ್ವಯ. ಆದ್ದರಿಂದ ವಿರೋಧವಿಲ್ಲ. ಸ್ಥಾಲ್ಯಾಮೋದನಸ್ಯ ಪಾಕಂ ನಿರ್ವರ್ತಯತಿ – ಇಲ್ಲಿ ಸ್ಥಾಲ್ಯಾಂ ಓದನಸ್ಯ – ಇವೆರಡಕ್ಕೂ ಪಚ್ ಧಾತ್ವರ್ಥದಲ್ಲಿ ಅನ್ವಯ. ಲಿಂಗ ವಚನಗಳಿಗೆ ಘಞ್ ಪ್ರತ್ಯಯಾರ್ಥ ಕ್ರಿಯೆಯಲ್ಲಿ ಅನ್ವಯ. ಕರ್ಮತ್ವಕ್ಕೆ ನಿರ್ವರ್ತನ ಕ್ರಿಯೆಯಲ್ಲಿ ಅನ್ವಯ.

**ರಾಜ್ಞಃ ಪುತ್ರಸ್ಯ ನಪ್ತೇತಿ ನ ರಾಜ್ಞಿ ವ್ಯತಿರಿಚ್ಯತೇ ।**
**ಪುತ್ರಸ್ಯಾರ್ಥಃ ಪ್ರಧಾನತ್ವಂ ನ ಚಾಸ್ಯ ವಿನಿವರ್ತತೇ ॥ ೫೦ ॥**

ರಾಜ್ಞಃ ಪುತ್ರಸ್ಯ ನಪ್ತಾ ವಿಜಯತಾಮ್ = ರಾಜನ ಪುತ್ರನ ಮೊಮ್ಮಗನು ಜಯಶಾಲಿಯಾಗಲಿ– ಎಂಬ ವಾಕ್ಯವಿದೆ. ಇಲ್ಲಿ ಪುತ್ರ ಶಬ್ದಾರ್ಥದ ಪ್ರಾಧಾನ್ಯವು ರಾಜಾಪೇಕ್ಷೆಯಿಂದ ವ್ಯತಿರಿಕ್ತವಾಗುವುದಿಲ್ಲ. ಮೊಮ್ಮಗನ ಅಪೇಕ್ಷೆಯಿಂದ ಅದು ಅಪ್ರಧಾನವೇ ಆಗಿದೆ. ಆದರೂ ರಾಜಾಪೇಕ್ಷೆಯಿಂದ ಪ್ರಾಧಾನ್ಯವು ಹೋಗುವುದಿಲ್ಲ.

**ವಿವರಣೆ :** ವಾಕ್ಯಾರ್ಥದಲ್ಲಿ ತೋರುವ ವಿಶೇಷಣ ವಿಶೇಷ್ಯಭಾವವನ್ನನುಸರಿಸಿ ವಿಶೇಷಣವು ಅಪ್ರಧಾನವೆಂದೂ ವಿಶೇಷ್ಯವು ಪ್ರಧಾನವೆಂದೂ ಶಾಸ್ತ್ರವ್ಯವಹಾರ. ಲೌಕಿಕವಾದ ಪ್ರಾಧಾನ್ಯವನ್ನಿಲ್ಲಿ ಗ್ರಹಿಸಬಾರದು. ಮೇಲ್ಕಂಡ ವಾಕ್ಯದಲ್ಲಿ ರಾಜನು ಪುತ್ರನಿಗೆ ವಿಶೇಷಣ ಸ್ಥಾನದಲ್ಲಿದ್ದು ಪುತ್ರನು ವಿಶೇಷ್ಯ ಸ್ಥಾನದಲ್ಲಿದ್ದಾನೆ. ಆದ್ದರಿಂದ ಪುತ್ರನು ರಾಜಾಪೇಕ್ಷೆಯಿಂದ ಪ್ರಧಾನ. ಈ ಪುತ್ರನೇ ತನ್ನ ಮೊಮ್ಮಗನ ಅಪೇಕ್ಷೆಯಿಂದ ವಿಶೇಷಣ ಸ್ಥಾನದಲ್ಲಿದ್ದಾನೆ. ಆದ್ದರಿಂದ ಮೊಮ್ಮಗನ ಅಪೇಕ್ಷೆಯಿಂದ ಈ ಪುತ್ರನು ಅಪ್ರಧಾನ. ಮೊಮ್ಮಗನೇ ಪ್ರಧಾನ. ಹೀಗೆ ಒಬ್ಬ ಪುತ್ರನಲ್ಲಿಯೇ ಪ್ರಾಧಾನ್ಯ ಅಪ್ರಾಧಾನ್ಯಗಳೆಂಬ ವಿರುದ್ಧ ಧರ್ಮಗಳಿರಲು ಸಾಧ್ಯವಾಗುತ್ತದೆ. ನಿರೂಪಕ ಭೇದಗಳಿರುವುದರಿಂದ ವಿರೋಧವಿಲ್ಲ. 'ಪುತ್ರ'ನಲ್ಲಿ ರಾಜ ನಿರೂಪಿತ ಪ್ರಾಧಾನ್ಯ, ನಪ್ತೃ ನಿರೂಪಿತ ಅಪ್ರಾಧಾನ್ಯಗಳಿವೆ. ರಾಜ, ನಪ್ತ – ಇವು ನಿರೂಪಕಗಳು.

ಹೀಗೆಯೇ ಪ್ರಕೃತದಲ್ಲಿಯೂ ಪಾಕ ಇತ್ಯಾದಿ ಸ್ಥಳಗಳಲ್ಲಿ ಪ್ರಕೃತಿ ಪ್ರತ್ಯಯ ಶಬ್ದಗಳು ಭಿನ್ನವಾದ್ದರಿಂದ ಒಂದೇ ಕ್ರಿಯೆಯಲ್ಲಿ ಸಿದ್ಧತ್ವಸಾಧ್ಯತ್ವಗಳು ಅನ್ಯಸಾ–ಪೇಕ್ಷಗಳಾಗಿ ತೋರಬಹುದು.

ಇದಕ್ಕೆ ಇನ್ನೂ ಒಂದು ದೃಷ್ಟಾಂತ –

**ಮೃಗೋ ಧಾವತಿ ಪಶ್ಯೇತಿ ಸಾಧ್ಯಸಾಧನರೂಪತಾ ।**
**ತಥಾ ವಿಷಯಭೇದೇನ ಸರಣಸ್ಯೋಪಪದ್ಯತೇ ॥ ೫೧ ॥**

ಮೃಗೋ ಧಾವತಿ, ಪಶ್ಯ = ಜಿಂಕೆಯು ಓಡುತ್ತಿದೆ, ನೋಡು. ಇಲ್ಲಿ ಓಡುವ ಕ್ರಿಯೆಗೆ ನಿರೂಪಕಭೇದದಿಂದ ಸಾಧ್ಯತ್ವ, ಸಾಧನತ್ವಗಳೆರಡೂ ಇವೆ. ಹಾಗೆಯೇ ಪಾಕಃ ಇತ್ಯಾದಿ ಸ್ಥಳಗಳಲ್ಲಿ ಪಾಕಾದಿ ಕ್ರಿಯೆಗೆ ವಿಷಯ

ಭೇದದಿಂದ – ಧಾತು ಪ್ರತ್ಯಯಗಳೆಂಬ ಭೇದದಿಂದ ಸಾಧ್ಯತ್ವ ಸಿದ್ಧತ್ವ–ಗಳೆರಡೂ ಇರಬಹುದು. ಸರಣ = ಗಮನಕ್ರಿಯೆ, ಓಟ.

**ವಿವರಣೆ :** ಮೃಗೋ ಧಾವತಿ, ಪಶ್ಯ – ಎಂಬಲ್ಲಿ ತಿಪ್ರತ್ಯಯದ ಅರ್ಥ ಕರ್ತೃ, ಮೃಗಕ್ಕೆ ಕರ್ತೃವಿನಲ್ಲಿ ಅಭೇದದಿಂದ ಅನ್ವಯ. ಮೃಗಾಭಿನ್ನವಾದ ಕರ್ತೃವಿನಲ್ಲಿರುವ ಧಾವನಕ್ರಿಯೆ – ಎಂದರ್ಥ. ಇದು 'ಪಶ್ಯ' ಎಂಬುದಕ್ಕೆ ಕರ್ಮವಾಗಿ ಅನ್ವಯಿಸುತ್ತದೆ. ಮೃಗವು ಓಡುವುದನ್ನು ನೋಡು – ಎಂದು ತಾತ್ಪರ್ಯ. ಮೃಗೋ ಧಾವತಿ – ಎಂಬ ವಾಕ್ಯದಲ್ಲಿ ಧಾವನವು (ಓಟವು) ಸಾಧ್ಯಸ್ವರೂಪದಲ್ಲಿದೆ. 'ಪಶ್ಯ' ಎಂಬುದಕ್ಕೆ ಕರ್ಮವಾದಾಗ ಸಿದ್ಧಸ್ವರೂಪವನ್ನು ಹೊಂದಿ ಕರ್ಮಕಾರಕವಾಗಿದೆ. ಸಾಧ್ಯಾವಸ್ಥೆಯಲ್ಲಿದ್ದಾಗ, ಸ್ವಯಂ ಅನಿಷ್ಪನ್ನವಾದ್ದರಿಂದ ಪರೋಪಕಾರಿಯಾದ ಸಾಧನವಾಗದು. ಹೀಗೆ ಧಾವನ ಕ್ರಿಯೆಯು ಮೃಗರೂಪಸಾಧನಾಪೇಕ್ಷೆಯಿಂದ ಸಾಧ್ಯಸ್ವರೂಪವೂ ದರ್ಶನಾಪೇಕ್ಷೆಯಿಂದ ಸಿದ್ಧಸ್ವರೂಪವೂ ಆಗಿದೆ. ಹೀಗೆಯೇ ಪಾಕಾದಿಶಬ್ದಗಳಲ್ಲಿಯೂ ಊಹಿಸಿಕೊಳ್ಳಬೇಕು.

ಮೇಲ್ಕಂಡ ವಾಕ್ಯದಲ್ಲಿ ದರ್ಶನಕ್ಕೆ ಮೃಗವು ಕರ್ಮವಲ್ಲ. ಕರ್ಮವಾದರೆ ದ್ವಿತೀಯಾ ವಿಭಕ್ತಿ ಬರಬೇಕಾಗುತ್ತದೆ. ಪಶ್ಯತಿ – ಎಂಬುದು ಕರ್ಮವಾದರೂ ಪ್ರಾತಿಪದಿಕವಲ್ಲವಾದ್ದರಿಂದ ದ್ವಿತೀಯಾ ಬರುವುದಿಲ್ಲ. ಇನ್ನೊಂದು ಶಂಕೆಯುಂಟು – ವ್ಯಾಕರಣ ಸಿದ್ಧಾಂತದಲ್ಲಿ ಕ್ರಿಯೆಯು ಕಾಣತಕ್ಕದ್ದಲ್ಲ. ಅದು ಅನುಮೇಯ. ಹೀಗಿರುವಾಗ 'ಕ್ರಿಯೆಯನ್ನು ನೋಡು' ಎಂಬ ಮಾತು ಹೇಗೆ ಯುಕ್ತ? ಹಾಗಲ್ಲ; ಧಾವನ ಕ್ರಿಯೆ ಮೃಗದಲ್ಲಿದೆ. ಮೃಗವು ದೃಶ್ಯವಾದದ್ದು. ಈ ದೃಶ್ಯತ್ವವನ್ನು ಅದರ ಕ್ರಿಯೆಯಲ್ಲಿ ಆರೋಪಿಸಿ ಈ ಪ್ರಯೋಗವು ಬಂದಿದೆ. 'ಆತನ ಔದಾರ್ಯವನ್ನು ನೋಡಿದ್ದೇನೆ. ರಾವಣನ ಕ್ರೌರ್ಯವನ್ನು ಕೇಳಿದ್ದೇನೆ' ಇವೆಲ್ಲ ಆರೋಪದಿಂದ ಬಂದ ಪ್ರಯೋಗಗಳು.

ಪ್ರಕೃತಿ ಪ್ರತ್ಯಯಾರ್ಥಗಳಲ್ಲಿ ಪ್ರತ್ಯಯಾರ್ಥವು ಪ್ರಧಾನವೆಂಬ ನ್ಯಾಯ ಉಂಟು. ಆದ್ದರಿಂದ ಭಾವಾರ್ಥಕ ಕೃತ್ ಪ್ರತ್ಯಯವು ಬಂದಾಗ ಪಾಕ, ಪಾತ ಇತ್ಯಾದಿಶಬ್ದಗಳಲ್ಲಿ ಸಿದ್ಧಾವಸ್ಥ ಕ್ರಿಯೆಯು ಪ್ರಧಾನವಾಗುತ್ತದೆ. ಆದ್ದರಿಂದ ಪಂಚಕೃತ್ವಃ ಪಾಕಃ ಎಂಬ ಪ್ರಯೋಗವು ಅಸಾಧು. ಏಕೆಂದರೆ ಆವೃತ್ತಿಯು ಸಾಧ್ಯಾವಸ್ಥೆಯ ಕ್ರಿಯೆಗೇ ಹೊರತು ಸಿದ್ಧಕ್ರಿಯೆಗಲ್ಲ. ಸಾಧ್ಯಾವಸ್ಥೆಯಲ್ಲಿ ಪಂಚಕೃತ್ವಃ ಪಚತಿ ಎಂಬ ಪ್ರಯೋಗವು ಸಾಧು.

**ಲಕೃತ್ಯಕ್ತಖಲರ್ಥಾನಾಂ ತಥಾಽವ್ಯಯಕೃತಾಮಪಿ ।**
**ರೂಢಿನಿಷ್ಠಾಘಞಾದೀನಾಂ ಧಾತುಃ ಸಾಧ್ಯಸ್ಯ ವಾಚಕಃ ॥ ೫೨ ॥**

ಹೀಗೆಯೇ ಲಟ್, ಲಿಟ್ ಮುಂತಾದ ಲಕಾರಾದೇಶಗಳು, ಕೃತ್ಯಕ್ತಖ–ಲರ್ಥ ಪ್ರತ್ಯಯಗಳು. ಅವ್ಯಯವಾಗುವ ಕೃತ್ ಪ್ರತ್ಯಯಗಳು, ರೂಢಶಬ್ದಗಳು, ಕ್ತಪ್ರತ್ಯಯ, ಘಞ್ ಮುಂತಾದ ಭಾವಾರ್ಥಕ ಪ್ರತ್ಯಯಗಳು ಬಂದಾಗ ಅವು–ಗಳ ಪ್ರಕೃತಿಯಾದ ಧಾತುವು ಸಾಧ್ಯಸ್ವಭಾವದ ಕ್ರಿಯೆಯನ್ನು ಬೋಧಿಸುತ್ತದೆ.

**ವಿವರಣೆ :** ಪೂರ್ವೋಕ್ತವಾದುದನ್ನೇ ಇಲ್ಲಿ ವಿಸ್ತರಿಸಿ ತೋರಿಸಲಾಗಿದೆ. ಸರ್ವತ್ರ ತಿಙಂತ ಕೃದಂತಗಳಲ್ಲಿ ಧಾತುವು ಸಾಧ್ಯಸ್ವಭಾವದ ಕ್ರಿಯೆಯನ್ನೇ ಬೋಧಿಸುತ್ತದೆ. ಪ್ರತ್ಯಯಾಂತವು ಸಿದ್ಧಸ್ವರೂಪವನ್ನು ತಳೆಯಬಹುದು ಎಂದು ತಾತ್ಪರ್ಯ. ನಿಷ್ಠಾಶಬ್ದದಿಂದ 'ಕ್ತ' ಪ್ರತ್ಯಯವು ಗೃಹೀತವಾಗಿದ್ದರೂ 'ನಪುಂಸಕೇ ಭಾವೇ ಕ್ತಃ' ಎಂದು ವಿಶೇಷವಾಗಿ ವಿಧಿಸಿದ ಕ್ತ ಪ್ರತ್ಯಯಕ್ಕಾಗಿ 'ಲಕೃತ್ಯಕ್ತ' ಎಂಬಲ್ಲಿ ಕ್ತ ಪ್ರತ್ಯಯವನ್ನು ವಿಶೇಷವಾಗಿ ಸೇರಿಸಲಾಗಿದೆ. ಉದಾಹರಣೆಗಳು –

ಲಾದೇಶ = (ತಿಙ್) ಪಠತಿ, ಗಚ್ಛತಿ, (ಕೃತ್) ಪಠನ್, ಪಠ್ಯಮಾನಂ

ಕೃತ್ಯ = ಪಠನೀಯ, ಗಮ್ಯ

ನಪುಂಸಕಕ್ತ = ಗತಂ, ಭೂತಂ.

ಖಲರ್ಥ = ದುಷ್ಕರ, ಸುಲಭ

ಅವ್ಯಯಕೃತ್ = ಪಠಿತ್ವಾ, ಗಂತುಂ

ರೂಢಿ = ಗಚ್ಛತೀತಿ ಗೌಃ, ವೃಶ್ಚ್ಯತೇ ಛಿದ್ಯತೇ ಇತಿ ವೃಕ್ಷಃ

ನಿಷ್ಠಾ = ಗತವಾನ್, ಉಕ್ತವತೀ; ಸ್ತುತಃ, ಪೀಡಿತಾ

ಘಞ್ = ಪಾಠಃ, ಲೇಖನಮ್ (ಲ್ಯುಟ್)

ಈ ವಿಚಾರವು ಸಮಾಪ್ತವಾಯಿತು.

**ಸಾಧ್ಯಸ್ಯಾಪರಿನಿಷ್ಪತ್ತೇಃ ಸೋಽಯಮಿತ್ಯನುಪಗ್ರಹಃ ।**
**ತಿಙಂತ್ಯೈರಂತರೇಣೈವಮುಪಮಾನಂ ತತೋ ನ ತೈಃ ॥ ೫೩ ॥**

ತಿಙಂತಗಳಿಂದ ಸಾಧ್ಯವಾಗಬೇಕಾದ ಸಾಧ್ಯದ್ವಯವು ಇನ್ನೂ ನಿಷ್ಪನ್ನ–ವಾಗಿಲ್ಲದಿರುವುದರಿಂದ, ಅದು ಇದು ಎಂದು ಅಭೇದದಿಂದ ಗ್ರಹಣವನ್ನು ಮಾಡಲಾಗುವುದಿಲ್ಲ. ಹೀಗೆ ಅಭೇದಗ್ರಹಣವಿಲ್ಲದುದರಿಂದ ತಿಙಂತಗಳೊಡನೆ ಉಪಮಾನವು ಬರುವುದಿಲ್ಲ.

**ವಿವರಣೆ :** ಭಾಷ್ಯದಲ್ಲಿ 'ನ ವೈ ತಿಙಂತೇನೋಪಮಾನಮಸ್ತಿ' ಎಂದು ಹೇಳಿದೆ. ತಿಙಂತಾರ್ಥದೊಡನೆ ಉಪಮಾನವು ಬರುವುದಿಲ್ಲವೆಂದರ್ಥ. ಅದಕ್ಕೆ ಕಾರಣ–ವೇನೆಂದರೆ ಉಪಮಾನವನ್ನು ಹೇಳುವಾಗ ಉಪಮಾನೋಪಮೇಯಗಳು ಸಿದ್ಧವಾಗಿರಬೇಕು. ಅವೆರಡಕ್ಕೂ ಅಭೇದವು ಸಂಭವಿಸುವಂತಿದ್ದರೆ ಉಪಮಾನ–ವನ್ನು ಹೇಳಲು ಸಾಧ್ಯ. ಸಿಂಹ ಇವ ಮಾಣವಕಃ – ಈ ಹುಡುಗನು ಸಿಂಹದಂತೆ ಇದ್ದಾನೆ ಎಂದು ಹೇಳಬೇಕಾದರೆ ಸಿಂಹೋ ಮಾಣವಕಃ – ಎಂದು ಅಭೇದದಿಂದ ಹೇಳಲು ಸಾಧ್ಯವಿರಬೇಕು. ಅದು ಶಕ್ಯವಾಗಬೇಕಾದರೆ ಉಪಮಾನೋಪಮೇಯ–ಗಳೆರಡೂ ಇರಬೇಕು. 'ಸೋಽಯಂ – ಅವನೇ ಇವನು ಎಂದು ಹೇಳುವಂತಿರ–ಬೇಕು. ತಿಙಂತದಲ್ಲಿ ಉಪಮಾನವಾಗಬೇಕಾದ ಕ್ರಿಯೆಯು ಸಾಧ್ಯಸ್ವರೂಪದಲ್ಲಿರು–ವುದರಿಂದ ಅದನ್ನು ಉಪಮಾನವಾಗಿ ಹೇಳಲು ಶಕ್ಯವಿಲ್ಲ. ಸಿದ್ಧವಾಗಿಲ್ಲದ್ದನ್ನು 'ಸಃ, ಅಯಂ' ಮುಂತಾದ ಸರ್ವನಾಮದಿಂದ ಗ್ರಹಿಸಲಾಗುವುದಿಲ್ಲ. 'ಚೈತ್ರಃ ಪಚತಿ, ಸಃ ನ ಸಮೀಚೀನಃ' ಇಲ್ಲಿ 'ಸಃ' ಎಂಬುದರಿಂದ ಪಚನವ್ಯಾಪಾರವನ್ನು ಗ್ರಹಿಸಲಾಗುವುದಿಲ್ಲ. ಆದ್ದರಿಂದ 'ನ ವೈ ತಿಙಂತೇನೋಪಮಾನಮಸ್ತಿ' ಎಂದು ಭಾಷ್ಯಕಾರರು ಹೇಳಿದ್ದಾರೆ. 'ಲಿಂಪತೀವ ತಮೋಂಗಾನಿ ವರ್ಷತೀವಾಂಜನಂ ನಭಃ' ಎಂಬುದು ಉತ್ಪ್ರೇಕ್ಷೆ ಉಪಮೆಯಲ್ಲ.

**ಸಾಧನತ್ವಂ ಪ್ರಸಿದ್ಧಂ ಚ ತಿಙ್‌ಕ್ಷು ಸಂಬಂಧಿನಾಂ ಯತಃ ।**
**ತೇನಾಧ್ಯಾರೋಪ ಏವ ಸ್ಯಾದುಪಮಾ ತು ನ ವಿದ್ಯತೇ ॥೫೪॥**

ತಿಙಂತಾರ್ಥಗಳಲ್ಲಿ ಸಂಬಂಧವನ್ನು ಹೊಂದಿದ ಪದಾರ್ಥಗಳಿಗೆ ಕರ್ತೃತ್ವ, ಕರಣತ್ವಾದಿ ಕಾರಕತ್ವವು ಪ್ರಸಿದ್ಧವಾಗಿದೆ. ಆದ್ದರಿಂದ ಕಾರಕತ್ವ ಸಂಪಾದಕವಾದ ಅಧ್ಯಾರೋಪವು ಇವ ಶಬ್ದದಿಂದ ಆದೀತೇ ಹೊರತು ಉಪಮೆಯು ಇವ ಶಬ್ದಾರ್ಥವಾಗುವುದಿಲ್ಲ.

**ವಿವರಣೆ :** ಸ್ವತಃ ಅಸಿದ್ಧವಾದ್ದರಿಂದ ತಿಙಂತವಾಚ್ಯಕ್ರಿಯೆಗೆ ಉಪಮಾನೋಪ–ಮೇಯಭಾವವು ಬಾರದಿದ್ದರೂ ಸಾಧನವಾದ ಕಾರಕದ ಮೂಲಕ ಉಪಮೆಯು ಬರಲು ಭಾಧಕವೇನು? ಎಂಬ ಶಂಕೆಗೆ ಇದು ಸಮಾಧಾನ. 'ಲಿಂಪತೀವ ತಮೋಂಗಾನಿ ವರ್ಷತೀವಾಂಜನಂ ನಭಃ ಎಂಬುದು ಸ್ವರೂಪೋತ್ಪ್ರೇಕ್ಷೆ. ಇಲ್ಲಿ ಉಪಮೇಯದಂತೆ ಇರಬೇಕಾದ ವಿಷಯವನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. ತಮಃ ಕರ್ತೃಕಸರ್ವದೇಶವ್ಯಾಪನವು ತಮಃ ಕರ್ತೃಕಲೇಪನದಂತಿದೆ, ತಮಃ ಕರ್ತೃಕ ಭೂಪರ್ಯಂತವ್ಯಾಪನವು ತಮಃ ಕರ್ತೃಕವರ್ಷಣದಂತಿದೆ – ಎಂದು ವಾಕ್ಯಾರ್ಥ. ಇಲ್ಲಿರುವ 'ಇವ' ಶಬ್ದವು ಸಂಭಾವನೆಯನ್ನು ವ್ಯಕ್ತಪಡಿಸುತ್ತದೆ. ಅದು ಆಹಾರ್ಯ–

ವಾದ ತಾದಾತ್ಮ್ಯೋತ್ಪ್ರೇಕ್ಷೆ. ವ್ಯಾಪನವು ಲೇಪನವೋ ಎಂಬಂತಿದೆ. ವ್ಯಾಪನವು ವರ್ಷಣವೋ ಎಂಬಂತಿದೆ – ಎಂದು ಲೇಪನವರ್ಷಣಗಳನ್ನು ವ್ಯಾಪನದಲ್ಲಿ ಆರೋಪಿಸಲಾಗಿದೆ. ಈ ಕ್ರಿಯೆಗಳು ಸಾಧ್ಯಸ್ವರೂಪದವಾದ್ದರಿಂದ ಉಪಮಾನವು ಬರುವುದಿಲ್ಲವೆಂದು ಹೇಳಿದ್ದಾಯಿತು. ಕರ್ತೃವು ಸಿದ್ಧವೇ ಆದ್ದರಿಂದ ಅದಕ್ಕೆ ಉಪಮಾನವಾಗಲಿ ಎಂಬ ಶಂಕೆ ಈಗ ಬಂದಿದೆ.

ಇಲ್ಲಿ ತಮಸ್ಸು ಕರ್ತೃಕಾರಕವಾಗಿದೆ. ಅದಕ್ಕೆ ಕ್ರಿಯೆಯಲ್ಲಿಯೇ ಅನ್ವಯ ಬರಬೇಕು. 'ಇವ' ಶಬ್ದಾರ್ಥದಲ್ಲಿ ಸಾದೃಶ್ಯಕ್ಕಾಗಿ ಅನ್ವಯವನ್ನು ಹೇಳಲಾಗುವುದಿಲ್ಲ. ತಮೋ ರೂಪಕರ್ತೃವು ಕ್ರಿಯಾಪದದಲ್ಲಿ ಉಕ್ತವಾದ ಕ್ರಿಯೆಯೊಡನೆ ಅನ್ವಿತವಾದಾಗ, ಆಕಾಂಕ್ಷೆಯೇ ಇರುವುದಿಲ್ಲವಾದ್ದರಿಂದ 'ಇವ' ದೊಡನೆ ಅನ್ವಯ ಬರುವುದೇ ಇಲ್ಲ. ಇದನ್ನೇ ದಂಡಿಯು ತನ್ನ ಕಾವ್ಯಾದರ್ಶದ ಉತ್ಪ್ರೇಕ್ಷಾ ಪ್ರಕರಣದಲ್ಲಿ ಹೀಗೆ ಉಪಪಾದಿಸಿದ್ದಾನೆ –

ಕರ್ತಾ ಯದ್ಯುಪಮಾನಂ ಸ್ಯಾತ್ ನ್ಯಗ್‌ಭೂತೋಽಸೌ ಕ್ರಿಯಾಪದೇ ।
ಸ್ವಕ್ರಿಯಾ ಸಾಧನವ್ಯಗ್ರಃ ನಾಲಮನ್ಯದ್ ವ್ಯಪೇಕ್ಷಿತುಮ್ ॥–ಕಾವ್ಯಾದರ್ಶ ೨–೨೩೦

ಇದರ ತಾತ್ಪರ್ಯ : 'ಲಿಂಪತೀವ ತಮೋಂಗಾನಿ' ಇತ್ಯಾದಿ ಸ್ಥಳದಲ್ಲಿ ಕರ್ತೃವಿಗೆ ಉಪಮಾನವಾಗಿ ಅನ್ವಯವಿಲ್ಲ. ಏಕೆಂದರೆ ಕರ್ತನು ಕ್ರಿಯಾಪದದ ಕ್ರಿಯೆಯಲ್ಲಿ ಅನ್ವಿತನಾದ್ದರಿಂದ ನ್ಯಗ್ಭೂತ (ಅಪ್ರಧಾನ) ನಾಗುತ್ತಾನೆ. ಅನ್ಯಾರ್ಥದಲ್ಲಿ ವಿಶೇಷಣ ಭೂತವಾದ್ದರಿಂದ 'ಇವ' ಶಬ್ದಾರ್ಥದೊಡನೆ ಅನ್ವಯ ಬರುವುದಿಲ್ಲ. ಅವನಿಗೆ ಕ್ರಿಯೆಯಲ್ಲಿಯೇ ಅನ್ವಯವಿದ್ದು ಇನ್ನೊಂದರ ಆಕಾಂಕ್ಷೆ ಬರುವುದಿಲ್ಲ. ಕ್ರಿಯೆಯನ್ನು ಸಾಧಿಸುವುದಕ್ಕಾಗಿ ಹೊರಟಿರುವುದರಿಂದ ಕರ್ತೃವಿಗೆ ಕ್ರಿಯೆಯಲ್ಲಿಯೇ ಅನ್ವಯವಿದೆ.

ಭಾವ ಪ್ರಧಾನಮಾಖ್ಯಾತಂ – ಎಂದು ಯಾಸ್ಕರು ನಿರುಕ್ತದಲ್ಲಿ ಹೇಳಿದ್ದಾರೆ. ಇದು ವೈಯಾಕರಣರ ಸಿದ್ಧಾಂತವೂ ಹೌದು. ಭಾವವೆಂದರೆ ಧಾತ್ವರ್ಥಕ್ರಿಯೆ. ಆಖ್ಯಾತ ಪ್ರತ್ಯಯಾರ್ಥವು ಕ್ರಿಯೆಯಲ್ಲಿ ವಿಶೇಷಣವಾಗಿ ಅಪ್ರಧಾನವಾಗಿರುತ್ತದೆ. ಚೈತ್ರಃ ಪಚತಿ – ಎಂಬಲ್ಲಿ ಚೈತ್ರಾಭಿನ್ನ ಕರ್ತೃನಿಷ್ಠವಾದ ವಿಕ್ಲಿತ್ತ್ಯನುಕೂಲ ವ್ಯಾಪಾರ ಎಂದರ್ಥ. ಇಲ್ಲಿ ಕರ್ತೃವು ಕ್ರಿಯೆಗೆ ವಿಶೇಷಣವಾಗಿರುವುದು ಸ್ಪಷ್ಟವಾಗಿದೆ.

ಇನ್ನು ತಾರ್ಕಿಕರ ಮತದಲ್ಲಿ 'ಚೈತ್ರಃ ಪಚತಿ' ಎಂದರೆ ವಿಕ್ಲಿತ್ತ್ಯನುಕೂಲ ವ್ಯಾಪಾರ ಉಳ್ಳವನು ಚೈತ್ರ ಎಂದರ್ಥ. ಅವರು 'ಭಾವಪ್ರಧಾನಮಾಖ್ಯಾತಂ' ಎಂಬುವುದನ್ನೊಪ್ಪುವುದಿಲ್ಲ. ಅದಕ್ಕೆ ಬೇರೆ ತರದ ಅರ್ಥವನ್ನು ಹೇಳಿಬಿಡುತ್ತಾರೆ.

ಅವರ ಮತದಂತೆ ಕರ್ತೃವು ಉಪಮಾನವಾಗಲಿ ಎಂಬ ಶಂಕೆ ಹುಟ್ಟುತ್ತದೆ. ಆಗ 'ತಮಸ್ಸು ಲೇಪನ ಕರ್ತೃವೋ ಎಂಬಂತಿದೆ' ಎಂದು ವಾಕ್ಯಾರ್ಥ. ಆಗಲೂ ಸಹ ಉಪಮಾನವಾಗುವುದಿಲ್ಲ. ತಮಸ್ಸಿನಲ್ಲಿಲ್ಲದ ಲೇಪನ ಕರ್ತೃತ್ವವನ್ನು ಆರೋಪಿಸ-ಬೇಕಾಗುತ್ತದೆಯಾದ್ದರಿಂದ ಉತ್ಪ್ರೇಕ್ಷೆಯೇ ಆಗಿಬಿಡುತ್ತದೆ. ಉಪಮೆಯಾಗುವುದೇ ಇಲ್ಲ. ಅದನ್ನೇ ಮೇಲ್ಕಂಡ ಕಾರಿಕೆಯಲ್ಲಿ 'ತೇನಾಧ್ಯಾರೋಪ ಏವ ಸ್ಯಾದುಪಮಾ ತು ನ ವಿದ್ಯತೇ ' ಎಂದು ತಿಳಿಸಿದೆ.

**ನ್ಯೂನೇಷು ಚಾಸಮಾಪ್ತಾರ್ಥಮುಪಮಾನಂ ವಿಧೀಯತೇ ।**
**ಕ್ರಿಯಾ ಚೈವಾಶ್ರಯೇ ಸರ್ವಾ ತತ್ರ ತತ್ರ ಸಮಾಪ್ಯತೇ ॥ ೫೫ ॥**

ತನಗಿಂತ ನ್ಯೂನವಸ್ತುಗಳಲ್ಲಿ ತನ್ನ ಎಲ್ಲ ಗುಣಗಳು ಇಲ್ಲದಾಗ ಅಂತಹ ಉಪಮೇಯದೊಡನೆ ಉಪಮಾನವು ವಿಹಿತವಾಗಿದೆ. ಕ್ರಿಯೆಯಾದರೋ ತನ್ನ ಆಶ್ರಯದಲ್ಲಿ ಎಲ್ಲ ಗುಣಗಳನ್ನು ಇಟ್ಟುಕೊಂಡು ಪೂರ್ಣವಾಗಿ ನೆಲೆಸಿರುತ್ತದೆ.

**ವಿವರಣೆ :** ಉಪಮಾನವು ಅಧಿಕ ಗುಣವುಳ್ಳದ್ದು ಉಪಮೇಯವು ಅದಕ್ಕಿಂತ ಅಲ್ಪಗುಣವುಳ್ಳದ್ದೂ ಆಗಿರುತ್ತದೆ. ಕ್ರಿಯೆಯು ತನ್ನ ಆಧಾರದಲ್ಲಿ ಏಕರೂಪವಾಗಿ ಇರುತ್ತದೆ. ಆದ್ದರಿಂದ ಕ್ರಿಯೆಗಳಿಗೆ ಹೋಲಿಕೆ ಬರುವುದಿಲ್ಲ.

**ಯೇನೈವ ಹೇತುನಾ ಹಂಸಃ ಪತತೀತ್ಯಭಿಧೀಯತೇ ।**
**ಆತೌ ತಸ್ಯ ಸಮಾಪ್ತತ್ವಾದುಪಮಾರ್ಥೋ ನ ವಿದ್ಯತೇ ॥೫೬॥**

ಯಾವ ಹೇತುವಿನಿಂದ ಎಂದರೆ ರೆಕ್ಕೆಗಳಿಂದ ಹಂಸವು ಹಾರುತ್ತದೆ ಎಂದು ಹೇಳಲಾಗುವುದೋ ಅದೇ ರೀತಿಯಲ್ಲಿ ಆತಿಯೆಂಬ ಪಕ್ಷಿಯೂ ರೆಕ್ಕೆಗಳಿಂದ ಹಾರುತ್ತದೆಯಾದ್ದರಿಂದ ರೆಕ್ಕೆಗಳಲ್ಲಿ ಹೇತುತ್ವವು ಸಮಾನವಾಗಿರುತ್ತದೆ. ಈ ಎರಡು ಕ್ರಿಯೆಗಳಲ್ಲಿ ನ್ಯೂನಾಧಿಕಭಾವವಿಲ್ಲ. ಆದ್ದರಿಂದ ಹಾರಾಟಗಳಿಗೆ ಹೋಲಿಕೆ ಬರುವುದಿಲ್ಲ. ಹೋಲಿಕೆಯಿಂದ ಪ್ರಯೋಜನವೂ ಇಲ್ಲ.

**ವಿವರಣೆ :** ಹಂಸದಂತೆ ಆತಿಯು ಹಾರುತ್ತದೆ – ಎಂಬ ಪ್ರಯೋಗ ಉಂಟು. ಅಲ್ಲಿ ಹಂಸಕ್ಕೂ ಆತಿಗೂ ಉಪಮಾನೋಪಮೇಯತೆ. ಹಾರಾಟಕ್ಕೆ ಈ ಹೋಲಿಕೆಯಲ್ಲ. ಹಂಸಕ್ಕಿಂತ ಆತಿಯು ದುರ್ಬಲ – ಎಂಬ ಭಾವನೆಯಿದ್ದಾಗ ಈ ಬಗೆಯ ಹೋಲಿಕೆ ಬರಬಹುದು.

ಸಜಾತೀಯ ಕ್ರಿಯೆಗಳಿಗೆ ಹೋಲಿಕೆ ಇಲ್ಲದಿದ್ದರೂ ವಿಜಾತೀಯ ಕ್ರಿಯೆಗಳಿಗೆ

ಹೋಲಿಕೆ ಬರಬಹುದಲ್ಲವೆ? ಎಂಬ ಶಂಕೆಗೆ ಉತ್ತರ –

**ಕ್ರಿಯಾಣಾಂ ಜಾತಿಭಿನ್ನಾನಾಂ ಸಾದೃಶ್ಯಂ ನಾವಧಾರ್ಯತೇ ।**
**ಸಿದ್ಧೇಶ್ಚ ಪ್ರಕ್ರಮೇ ಸಾಧ್ಯಮುಪಮಾತುಂ ನ ಶಕ್ಯತೇ ॥ ೫೭ ॥**

ಭಿನ್ನಜಾತೀಯ ಕ್ರಿಯೆಗಳಿಗೆ ಸಾದೃಶ್ಯವೇನೆಂಬುದು ತಿಳಿಯುವುದಿಲ್ಲ. ಸಿದ್ಧಿಯು ಒಂದರಲ್ಲಿ ಪ್ರಾರಂಭವಾಗಿದೆಯೆಂದು ಗೃಹೀತವಾದರೂ ಸಾಧ್ಯಾವಸ್ಥೆಯಲ್ಲಿರುವ ಇನ್ನೊಂದರೊಡನೆ ಹೋಲಿಸುವುದಕ್ಕಾಗುವುದಿಲ್ಲ.

**ವಿವರಣೆ :** ಪಚತಿ–ಗಚ್ಛತಿ ಮುಂತಾದ ಭಿನ್ನಜಾತೀಯ ಕ್ರಿಯೆಗಳಿಗೆ ಸಮಾನಧರ್ಮವೇ ಇರುವುದಿಲ್ಲವಾದ್ದರಿಂದ ಅವನ್ನು ಹೋಲಿಸುವುದಕ್ಕೆ ಬರುವುದಿಲ್ಲ. ಸಾಧ್ಯಸ್ವರೂಪಕ್ರಿಯೆಗಳಿಗೆ ಉಪಮಾನವು ಕೂಡುವುದಿಲ್ಲವೆಂದೂ ಸಹ ಹಿಂದೆ ಹೇಳಿದ್ದಾಗಿದೆ. ಅವುಗಳಲ್ಲೊಂದು ಸಿದ್ಧವೆಂದು ಗೃಹೀತವಾದರೂ ಪಾಕ ಇವ ಗಚ್ಛತಿ ಎಂದು ಹೇಳಲೂ ಸಾಧ್ಯವಿಲ್ಲ. ಆದ್ದರಿಂದ ತಿಙಂತದೊಡನೆ ಯಾವ ಸಂದರ್ಭದಲ್ಲಿಯೂ ಉಪಮಾನೋಪಮೇಯ ಭಾವವಿಲ್ಲ.

ಆದರೆ 'ಯದ್ ಹಂಸಃ ಪತತಿ ತದಿವ ಆತಿಃ ಪತತಿ' ಎಂದು ಸಾದೃಶ್ಯವನ್ನು ಕ್ರಿಯೆಗಳಿಗೆ ಹೇಳಬಹುದೆಂದೂ 'ನ ವೈ ತಿಙಂತೇನೋಪಮಾನಮಸ್ತಿ' ಎಂಬ ಭಾಷ್ಯವು ಏಕದೇಶ್ಯುಕ್ತಿಯೆಂದೂ ಅಂಬಾಕರ್ತ್ರೀ ವ್ಯಾಖ್ಯಾನಕಾರರು ಬರೆದಿದ್ದಾರೆ. ವಿಸ್ತೃತವಾಗುವುದರಿಂದ ಅಧಿಕವಿಚಾರವನ್ನಿಲ್ಲಿ ಬರೆಯುವುದಿಲ್ಲ.

**ವನಂ ವೃಕ್ಷಾ ಇತಿ ಯಥಾ ಭೇದಾಭೇದವ್ಯಪಾಶ್ರಯಾತ್ ।**
**ಅರ್ಥಾತ್ಮಾ ಭಿದ್ಯತೇ ಭಾವೇ ಸ ಬಾಹ್ಯಾಭ್ಯಂತರೇ ಕ್ರಮಃ ॥ ೫೮ ॥**

ಸಮುದಾಯ ಮತ್ತು ಅದರ ಅವಯವಗಳಿಗೆ ಭೇದವನ್ನು ಆಶ್ರಯಿಸಿ–ಕೊಂಡು ವೃಕ್ಷಗಳು ಎಂದೂ, ಅಭೇದವನ್ನಾಶ್ರಯಿಸಿಕೊಂಡು ವನವೆಂದೂ ಪ್ರತೀತವಾಗುವ ಅರ್ಥಸ್ವರೂಪವು ಪರಸ್ಪರ ಭಿನ್ನವಾಗುತ್ತದೆ. ಅದೇ ಪ್ರಕಾರ–ದಲ್ಲಿಯೇ ಪಾಕ ಇತ್ಯಾದಿ ಕೃದಂತ ಸ್ಥಳದಲ್ಲಿ ಪ್ರತ್ಯಯವಾಚ್ಯವಾದ ಬಾಹ್ಯ–ಭಾವವೂ ಧಾತುವಾಚ್ಯವಾದ ಆಭ್ಯಂತರಭಾವವೂ ಭೇದಾಭೇದಗಳನ್ನು ಆಶ್ರಯಿಸಿರುತ್ತದೆ.

**ವಿವರಣೆ :** ವನವೆಂದರೆ ವೃಕ್ಷಗಳ ಸಮುದಾಯ. ಅದರ ಅವಯವಗಳು ವೃಕ್ಷಗಳು. ಸಮುದಾಯ ಮತ್ತು ಅವಯವಗಳು ಭಿನ್ನವೆಂದೂ ಅಭಿನ್ನವೆಂದೂ ಎರಡು ಬಗೆಯಲ್ಲಿಯೂ ವ್ಯವಹಾರ ಉಂಟು. ವೃಕ್ಷಾಃ ಎಂದಾಗ ಅವಯವಗಳಲ್ಲಿ

ಪರಸ್ಪರ ಭೇದವೂ ನಾನಾತ್ವವೂ ತೋರುತ್ತದೆ. ವನವೆಂದಾಗ ಅವಯವಗಳಾದ ವೃಕ್ಷಗಳಿಗೂ ಸಮುದಾಯವಾದ ವನಕ್ಕೂ ಭೇದವು ತೋರುವುದಿಲ್ಲ. ಭಿನ್ನಪದಗಳಿಂದ ವೃಕ್ಷವೂ ಸಮುದಾಯವೂ ವಾಚ್ಯವಾಗಿರುವುದು ಇದಕ್ಕೆ ಕಾರಣ. ಹಾಗೆಯೇ ಪ್ರಕೃತದಲ್ಲಿ ಸಾಧ್ಯಸ್ವಭಾವದ ಕ್ರಿಯೆಯು ಧಾತುವಾಚ್ಯವಾದದ್ದು. ಅದರಲ್ಲಿ ನಾನಾ ವ್ಯಾಪಾರಗಳಿರುತ್ತವೆ. ಇವು ಪರಸ್ಪರ ಭಿನ್ನವಾದವು. ಸಿದ್ಧಸ್ವಭಾವದ ಭಾವವು ಪ್ರತ್ಯಯವಾಚ್ಯವಾದದ್ದು. ಅದರಲ್ಲಿ ಕ್ರಮವಾವುದೂ ತೋರುವುದಿಲ್ಲ.

ಪ್ರತ್ಯಯವಾಚ್ಯವಾದ ಭಾವಕ್ಕಿಂತ ಮೊದಲು ಪ್ರಕೃತಿಯಾದ ಧಾತುವಿನಿಂದ ವಾಚ್ಯವಾಗುವುದರಿಂದ ಸಾಧ್ಯಸ್ವಭಾವದ ಭಾವವು ಆಭ್ಯಂತರ. ಅನಂತರ ಪ್ರತ್ಯಯದಿಂದ ಪ್ರತೀತವಾಗುವ ಸಿದ್ಧಸ್ವಭಾವದ ಭಾವವು ಬಾಹ್ಯವೆಂದು ತಿಳಿಯಬೇಕು. ಪಾಕಃ ಎಂಬಲ್ಲಿ ಸಾಧ್ಯತ್ವ, ಸಿದ್ಧತ್ವಗಳೆಂಬ ಧರ್ಮದ್ವಯವಿಶಿಷ್ಟವಾದ ಒಂದು ಕ್ರಿಯೆಯು ತೋರುತ್ತದೆ. ಭಿನ್ನಶಬ್ದಾಭಿಧೇಯಗಳಾದ್ದರಿಂದ ವಿರೋಧವಿಲ್ಲವೆಂದು ಹೇಳಿದ್ದಾಗಿದೆ. ಅವುಗಳಲ್ಲಿಯೂ ಪ್ರತ್ಯಯಾರ್ಥವು ಪ್ರಧಾನವಾದ್ದರಿಂದ ಸಿದ್ಧಸ್ವಭಾವವಿಶಿಷ್ಟವಾದದ್ದು ವಿಶೇಷ್ಯವಾಗಿ ಪ್ರಧಾನವಾಗಿರುತ್ತದೆ.

**ಸಾಮಾನ್ಯೇ ಭಾವ ಇತ್ಯತ್ರ ಯಲ್ಲಿಂಗಮುಪಲಭ್ಯತೇ ।**
**ಭೇದಾನಾಮನುಮೇಯತ್ವಾನ್ನ ತತ್ ತೇಷು ವಿವಕ್ಷ್ಯತೇ ॥ ೫೯ ॥**

ಕ್ರಿಯಾಸಾಮಾನ್ಯಾರ್ಥದಲ್ಲಿ 'ಭಾವೇ' ಎಂಬ ನಿರ್ದೇಶನವನ್ನು ಮಾಡಿದಾಗ ಯಾವ ಲಿಂಗವು ತೋರುವುದೋ ಅದು ಅಲ್ಲಿ ವಿವಕ್ಷಿತವಲ್ಲ. ಏಕೆಂದರೆ ಲಿಂಗಾದಿ ಭೇದಗಳು ಅಲ್ಲಿ ಅನುಮಾನಗಮ್ಯವಾಗಿವೆ.

**ವಿವರಣೆ :** 'ಭಾವೇ ಎಂಬ ಅಧಿಕಾರದಲ್ಲಿ ಘಞಾದಿ ಪ್ರತ್ಯಯಗಳನ್ನು ವಿಧಾನಮಾಡಿದ್ದಾರೆ. ಭೂಧಾತುವಿನಿಂದ ಭಾವಶಬ್ದವು ನಿಷ್ಪನ್ನವಾದ್ದರಿಂದ ಭಾವ–ವೆಂದರೆ ಕ್ರಿಯಾಸಾಮಾನ್ಯವಾಗುತ್ತದೆ. ಲೇಖನ, ಪಠನಾದಿಗಳು ಕ್ರಿಯಾವಿಶೇಷಗಳು. 'ಕೃಭ್ವಸ್ತಯಃ ಕ್ರಿಯಾಸಾಮಾನ್ಯ ವಚನಾಃ' ಎಂಬ ಉಕ್ತಿ ಪ್ರಸಿದ್ಧವಾದದ್ದು, ಕೃ, ಭೂ, ಅಸ್ – ಇವು ಮೂರು ಕ್ರಿಯಾಸಾಮಾನ್ಯ ವಾಚಿಗಳು. 'ಭಾವೇ' ಎಂಬ ಸೂತ್ರದಲ್ಲಿ ಭಾವಶಬ್ದವು ಪುಲ್ಲಿಂಗದಲ್ಲಿದೆ. ಇದು ನಾಂತರೀಯಕ. ಎಂದರೆ ಅನಿವಾರ್ಯವಾಗಿ ಪುಲ್ಲಿಂಗವನ್ನೇ ಇಲ್ಲಿ ಬಳಸಬೇಕಾಗಿದೆ. ಹಾಗೆಯೇ ಏಕವಚನವೂ ಅನಿವಾರ್ಯ–ವಾಗಿದೆ. ಈ ಲಿಂಗ, ವಚನ (ಸಂಖ್ಯೆ) ಇವು ವಿವಕ್ಷಿತಗಳಲ್ಲ. ವಿವಕ್ಷಿತವಾದರೆ ಧೃತಿ, ಸ್ತುತಿ – ಎಂಬ ಸ್ತ್ರೀಲಿಂಗಶಬ್ದಗಳೂ ಪಾಕೌ, ಪಾಕಾಃ ಎಂಬಲ್ಲಿ ದ್ವಿವಚನ, ಬಹು–ವಚನಗಳೂ ಸಿದ್ಧಿಸದೆ ಹೋಗುತ್ತವೆ. ಆದ್ದರಿಂದ 'ಸೂತ್ರೇ ಲಿಂಗವಚನಮತಂತ್ರಂ'

ಎಂಬ ಪರಿಭಾಷೆ ಹೊರಟಿದೆ. ಅತಂತ್ರ ಎಂದರೆ ವಿವಕ್ಷಿತವಲ್ಲವೆಂದರ್ಥ. ಮೇಲ್ಕಂಡ ಶ್ಲೋಕದಲ್ಲಿ 'ಲಿಂಗ'ವೆನ್ನುವುದು ಸಂಖ್ಯೆಗೂ ಉಪಲಕ್ಷಣ. 'ನಿರ್ವಿಶೇಷಂ ನ ಸಾಮಾನ್ಯಂ' ಎಂಬ ಇನ್ನೊಂದು ಉಕ್ತಿಯುಂಟು. ವಿಶೇಷವಿಲ್ಲದ ಸಾಮಾನ್ಯವಿಲ್ಲ ಎಂದರ್ಥ. ಎಲ್ಲ ವಿಶೇಷಗಳನ್ನೂ ಒಳಗೊಂಡದ್ದು ಸಾಮಾನ್ಯವಾಚಿ. 'ಜನರು' ಎಂದರೆ ಸಾಮಾನ್ಯವಾಚಿಯಾಗುತ್ತದೆ. ಇದರಲ್ಲಿ ಗಂಡಸರು, ಹೆಂಗಸರು, ಮಕ್ಕಳು, ಮುದುಕರು ಎಲ್ಲರೂ ಸೇರುತ್ತಾರೆ. ಹಾಗೆ ಭಾವೇ ಎಂದರೆ ಎಲ್ಲ ಲಿಂಗಗಳೂ ಎಲ್ಲ ವಚನಗಳೂ ಅಂತೆಯೇ ಎಲ್ಲ ಕ್ರಿಯಾವಿಶೇಷಗಳೂ ಸೇರುತ್ತವೆ. 'ಭಾವೇ' ಎಂಬ ಅಧಿಕಾರದಲ್ಲಿ ಪುಲ್ಲಿಂಗ, ಸ್ತ್ರೀಲಿಂಗ, ನಪುಂಸಕಲಿಂಗದ ಪ್ರತ್ಯಯಗಳೂ ಬರುತ್ತವೆ – ಅವುಗಳನ್ನು ಎಲ್ಲ ವಚನಗಳಲ್ಲಿಯೂ ಪ್ರಯೋಗಿಸಬಹುದು.

**ನಿರ್ದೇಶೇ ಚರಿತಾರ್ಥತ್ವಾಲ್ಲಿಂಗಂ ಭಾವೇಽವಿವಕ್ಷಿತಮ್ ।**
**ಉಪಮಾನವಿಧತ್ವಾಚ್ಚ ಭಾವಾದನ್ಯತ್ ಪಚಾದಿಷು ॥ ೬೦ ॥**

'ಭಾವೇ' ಎಂಬಲ್ಲಿ ಶಬ್ದೋಚ್ಚಾರಣೆಗಾಗಿ ಪುಲ್ಲಿಂಗವು ಚರಿತಾರ್ಥವಾದ್ದರಿಂದ, ಅಲ್ಲಿ ಶ್ರುತವಾದ ಪುಲ್ಲಿಂಗವು ಮುಂದಿನ ಪ್ರತ್ಯಯವಿಧಿಯಲ್ಲಿ ಅವಿವಕ್ಷಿತ. ಭಾವ ಪದಾರ್ಥವು ಉಪಮಾನ ಸದೃಶವಾಗಿರುವುದರಿಂದ, ಭೂಧಾತುವಿನಿಂದ ಭಾವವಾದ ಹಾಗೆ ಪಚಾದಿ ಧಾತುಗಳ ಮೇಲೂ ಭಾವಾರ್ಥದ ಪ್ರತ್ಯಯಗಳೂ ಬರುತ್ತವೆ.

**ವಿವರಣೆ :** ಸಾಧ್ಯಸ್ವರೂಪದ ಕ್ರಿಯೆಗೆ ಲಿಂಗ ವಚನಾದಿಗಳಿಲ್ಲದಿದ್ದರೂ ಸಿದ್ಧಸ್ವರೂಪ ಕ್ರಿಯಾವಾಚಿಯಾದ ಭಾವಶಬ್ದಕ್ಕೆ ಲಿಂಗಾದಿಗಳ ಯೋಗವಿದೆ. ಆದ್ದರಿಂದ ಅನಿವಾರ್ಯವಾಗಿ ಪುಲ್ಲಿಂಗವನ್ನೂ, ಎಲ್ಲ ಸಂಖ್ಯೆಗಳಿಗೆ ಪ್ರತಿನಿಧಿಯಾದ ಏಕವಚನವನ್ನೂ ಬಳಸಬೇಕಾಯಿತು. ಭಾವಶಬ್ದದಲ್ಲಿ ಪುಲ್ಲಿಂಗವಾಗಲಿ ಏಕವಚನವಾಗಲಿ ವಿವಕ್ಷಿತವಲ್ಲ.

ಎರಡನೆಯ ಸಾಲಿನಲ್ಲಿ ಹೇಳಿದಂತೆ ಭವತಿಯು ಭಾವವಾದಂತೆ ಅನ್ಯಧಾತುಗಳಿಗೂ ವಿಹಿತ ಪ್ರತ್ಯಯಗಳೂ ಬರುತ್ತವೆ. ಆದ್ದರಿಂದ ಪಾಕ, ತ್ಯಾಗ, ಭೋಗ ಮುಂತಾದ ಶಬ್ದಗಳ ಸಿದ್ಧಿಯಾಗುವುದು ವಿಭಿನ್ನ ಲಿಂಗವಚನಗಳಲ್ಲಿ ಕ್ರಿಯಾಸಾಮಾನ್ಯವನ್ನು ಬೋಧಿಸುವ ಧಾತುಗಳ ಮೇಲೆ ವಿಹಿತ ಪ್ರತ್ಯಯಗಳು ಬರುತ್ತವೆ – ಎಂದು ತಾತ್ಪರ್ಯ. ಪೂರ್ವೋಕ್ತ ವಿಷಯವನ್ನೇ ಇಲ್ಲಿ ಪ್ರಕಾರಾಂತರದಿಂದ ಸಾಧಿಸಲಾಗಿದೆ.

**ಭವತೌ ಯತ್ ಪಚಾದೀನಾಂ ತಾವದತ್ರೋಪದಿಶ್ಯತೇ ।**
**ನ ಚ ಲಿಂಗಂ ಪಚಾದೀನಾಂ ಭವತೌ ಸಮವಸ್ಥಿತಮ್ ॥೬೧॥**

ಪಚಾದೀನಾಂ = ಪಚಾದಿಸರ್ವಧಾತುಗಳಿಗೂ, ಭವತೌ = ಭವತ್ಯರ್ಥವಾದ ಭಾವದಲ್ಲಿ ಯತ್ = ಪುಂಸ್ತ್ವ, ಏಕತ್ತ್ವ ಇವುಗಳಿಂದ ಅನುಗತವಾದ ಯಾವ ಸತ್ತಾರೂಪ ಸಾಮಾನ್ಯವಿದೆಯೋ ತಾವತ್ = ಅಷ್ಟು ಮಾತ್ರವೇ , ಅತ್ರ = 'ಭಾವೇ' ಎಂಬ ಸೂತ್ರದಲ್ಲಿ ಉಪದಿಶ್ಯತೇ = ನಿರ್ದಿಷ್ಟವಾಗಿದೆ. ಇನ್ನು ಪಚಾದಿಗಳಲ್ಲಿರಬಹುದಾದ ಲಿಂಗವಿಶೇಷವೂ ದ್ವಿತ್ವಾದಿಸಂಖ್ಯೆಗಳೂ ಭವತೌ = ಭವತ್ಯರ್ಥವಾದ ಭಾವದಲ್ಲಿ, ನ ಸಮವಸ್ಥಿತಂ = ನಿರ್ದಿಷ್ಟವಾಗಿಲ್ಲ.

**ವಿವರಣೆ :** ಇದು ಭಾಷ್ಯದಲ್ಲಿಯೇ ಹೇಳಿದ ಇನ್ನೊಂದು ಪರಿಹಾರ. ಹಿಂದಿನ ಶ್ಲೋಕದಲ್ಲಿ ಹೇಳಿದ ಪರಿಹಾರದ ತಾತ್ಪರ್ಯ ಇದು – ಧಾತ್ವರ್ಥ ಕ್ರಿಯಾಸಾಮಾನ್ಯದಲ್ಲಿ ಘಞಾದಿ ಪ್ರತ್ಯಯವನ್ನು ವಿಧಿಸಲಾಗಿದೆ. ವಿಭಿನ್ನ ಲಿಂಗಸಂಖ್ಯಾ ವಿಶಿಷ್ಟ ಪ್ರತ್ಯಯಗಳಿರುವ ವಿಭಿನ್ನ ಧಾತ್ವರ್ಥ ಸಾಮಾನ್ಯವನ್ನು ಹೇಳುವಾಗಲೂ ಈ ಪ್ರತ್ಯಯಗಳು ಬರುತ್ತವೆಯೆಂಬ ತಾತ್ಪರ್ಯವಿರುವುದರಿಂದ 'ಭಾವೇ' ಎಂಬಲ್ಲಿ ನಿರ್ದಿಷ್ಟವಾದ ಪುಂಸ್ತ್ವ, ಏಕತ್ವಗಳೂ ಅವಿವಕ್ಷಿತ. 'ಸೂತ್ರೇ ಲಿಂಗವಚನಮತಂತ್ರಂ'.

ಈ ಶ್ಲೋಕದ ತಾತ್ಪರ್ಯ ಹೀಗೆ – ಭಾವೇ ಎಂಬುದರಿಂದ ಸತ್ತಾಸಾಮಾನ್ಯವು ಉಕ್ತವಾಗಿದೆ. ಸತ್ತಾ ಸಾಮಾನ್ಯಕ್ಕೆ ಲಿಂಗಸಂಖ್ಯೆಗಳ ಸಂಬಂಧವೇ ಇಲ್ಲ. ಆದ್ದರಿಂದ ಎಲ್ಲ ಧಾತುಗಳ ಮೇಲೂ ಸತ್ತಾ ಸಾಮಾನ್ಯದಲ್ಲಿ ಅಯಾ ಪ್ರತ್ಯಯಗಳೂ ಬರುತ್ತವೆ. 'ಭಾವೇ' ಎಂಬಲ್ಲಿ ಲಿಂಗಸಂಖ್ಯೆಗಳ ಸಂಬಂಧವೇ ಇಲ್ಲದ ಸಾಮಾನ್ಯವನ್ನು ಹೇಳಿರುವುದರಿಂದ ಲಿಂಗಸಂಖ್ಯೆಗಳು ಅವಿವಕ್ಷಿತ ಎಂದು ಹೇಳಬೇಕಾದ್ದೇ ಇಲ್ಲ.

'ಭಾವೇ' ಎಂಬ ಸೂತ್ರದಲ್ಲಿ ಭಾವಶಬ್ದದಿಂದ ಸಿದ್ಧಸ್ವರೂಪದ ಕ್ರಿಯಾ–ಸಾಮಾನ್ಯವು ಉಕ್ತವಾಗಿದೆಯಷ್ಟೆ. 'ಭಾವ' ಶಬ್ದವು ಪುಲ್ಲಿಂಗದಲ್ಲಿರುವುದರಿಂದ ಕ್ರಿಯಾಸಾಮಾನ್ಯದಲ್ಲಿ ಪುಂಸ್ತ್ವವೂ ವಿವಕ್ಷಿತವಾಗಿದೆಯೆಂದು ಹೇಳಬೇಕಾಗುತ್ತದೆ. ಸಾಮಾನ್ಯದಲ್ಲಿಯೂ ವಿಶೇಷ ಧರ್ಮವಿರಬಹುದು. ಆದ್ದರಿಂದಲೇ 'ನಿರ್ವಿಶೇಷಂ ನ ಸಾಮಾನ್ಯಂ' ಎಂಬ ನ್ಯಾಯ ಉಂಟು. ವಿಶೇಷವಿಲ್ಲದ ಸಾಮಾನ್ಯವಿಲ್ಲ ಎಂದರ್ಥ. ಭೋಗಃ, ತ್ಯಾಗಃ, ಪಾಕಃ – ಎಂಬಲ್ಲಿ ಘಞ್ ಪ್ರತ್ಯಯವು ಕ್ರಿಯಾ–

ಸಾಮಾನ್ಯಾರ್ಥದಲ್ಲಿ ಬಂದಿದ್ದರೂ ಪುಂಸ್ತ್ವವು ಅವಶ್ಯವಾಗಿ ತೋರುತ್ತದೆಯಷ್ಟೆ. ಹಾಗಾದರೆ ಪಕ್ತಿಃ, ಪಚನಂ – ಮುಂತಾದ ಸ್ಥಳದಲ್ಲಿ ಭಾವಪ್ರತ್ಯಯವು ಬಂದದ್ದು ಹೇಗೆ? ಈ ಶಬ್ದಗಳಲ್ಲಿ ಪುಂಸ್ತ್ವವಿಲ್ಲ, ಅದಕ್ಕೆ ಬದಲಾಗಿ ಪಕ್ತಿಃ ಎಂಬಲ್ಲಿ ಸ್ತ್ರೀತ್ವವೂ ಪಚನಂ ಎಂಬಲ್ಲಿ ನಪುಂಸಕತ್ವವೂ ತೋರುತ್ತದೆಯಲ್ಲ? ಎಂಬ ಶಂಕೆಗೆ ಸಮಾಧಾನ –

**ಏಕಶ್ಚ ಸೋಽರ್ಥಃ ಸತ್ತಾಖ್ಯಃ ಕಥಂಚಿತ್ ಕೈಶ್ಚಿದುಚ್ಯತೇ ।**
**ಲಿಂಗಾನಿ ಚಾಸ್ಯ ಭಿದ್ಯಂತೇ ಪಚಿರೂಪಾದಿಭೇದವತ್ ॥೬೨॥**

ಭಾವಶಬ್ದದಿಂದ ಉಕ್ತವಾದ ಕ್ರಿಯಾಸಾಮಾನ್ಯವು ಭಾವ, ಭವನ, ಸತ್ತಾ ಮುಂತಾದ ಧಾತುಪ್ರತ್ಯಯ ಸಮುದಾಯ ರೂಪವಾದ ಶಬ್ದಗಳಿಂದಲೂ ಅಭಿಹಿತವಾಗುತ್ತದೆ. ಪಾಕಃ, ತ್ಯಾಗಃ ಮುಂತಾದ ವಿಶೇಷಶಬ್ದಗಳಿಂದಲೂ ಇನ್ನೊಂದು ಪ್ರಕಾರದಿಂದ ಅಭಿಹಿತವಾಗುತ್ತದೆ. ಆಗ ಲಿಂಗಗಳೂ ಬೇರೆ ಬೇರೆಯಾಗಬಹುದು. ಪಚ್‌ಧಾತುವಿಗೆ – ಪಾಕಃ, ಪಕ್ತಿಃ, ಪಚನಂ ಎಂಬ ರೂಪಭೇದಗಳಾದ ಹಾಗೆ ಲಿಂಗಗಳೂ ಬೇರೆ ಬೇರೆ ಆಗಬಹುದು.

**ವಿವರಣೆ :** ಇದರ ತಾತ್ಪರ್ಯವಿಷ್ಟು – ಭಾವೇ ಎಂಬ ಸೂತ್ರದಲ್ಲಿ ಪುಲ್ಲಿಂಗವು ವಿವಕ್ಷಿತವಲ್ಲ. ಸಂಖ್ಯೆಯೂ ವಿವಕ್ಷಿತವಲ್ಲ. ಪಾಕೌ, ಪಾಕಾಃ – ಎಂಬಲ್ಲಿ ದ್ವಿತ್ವ, ಬಹುತ್ವ ಸಂಖ್ಯೆಗಳೂ ತೋರುತ್ತವೆ. ಆದ್ದರಿಂದ 'ಸೂತ್ರೇ ಲಿಂಗವಚನಮತಂತ್ರಂ' ಎಂಬ ಪರಿಭಾಷೆ ಹೊರಟಿದೆ. ಸೂತ್ರದಲ್ಲಿರುವ ಲಿಂಗ ವಚನಗಳು ಅನಿವಾರ್ಯವಾಗಿ ಬಂದಿವೆ. ಅವು ವಿಧಿಗೆ ಸಂಬಂಧಿಸಿದವುಗಳಲ್ಲ.

ವೃಕ್ಷತ್ವ ಎನ್ನುವುದು ಸಾಮಾನ್ಯಧರ್ಮ. ಇದು ಎಲ್ಲ ಮರಗಳಲ್ಲಿಯೂ ಇರುತ್ತದೆ. ಆಮ್ರತ್ವ, ಪನಸತ್ವ, ಪೂಗತ್ವ – ಇವು ವಿಶೇಷ ಧರ್ಮಗಳು. ಆಮ್ರ = ಮಾವಿನಮರ, ಪನಸ = ಹಲಸಿನ ಮರ, ಪೂಗ = ಅಡಿಕೆಮರ. ವಿಶೇಷ ಧರ್ಮವಿದ್ದಲ್ಲಿ ಸಾಮಾನ್ಯಧರ್ಮ ಇದ್ದೇ ಇರುತ್ತದೆ. ಸಾಮಾನ್ಯಧರ್ಮವಿದ್ದಲ್ಲಿ ಯಾವುದಾದರೊಂದು ವಿಶೇಷ ಧರ್ಮವಿದ್ದೇ ಇರುತ್ತದೆ. ಎಲ್ಲ ಮರಗಳಲ್ಲಿಯೂ ವೃಕ್ಷತ್ವವೆಂಬ ಸಾಮಾನ್ಯಧರ್ಮವಿದ್ದರೂ ಆಮ್ರತ್ವ ಮುಂತಾದ ವಿಶೇಷ ಧರ್ಮಗಳು ಎಲ್ಲ ಮರಗಳಲ್ಲಿಯೂ ಇರುವುದಿಲ್ಲ. ಪಾಕಃ ಎಂಬಲ್ಲಿ ಪ್ರತ್ಯಯದಿಂದ ಸಾಮಾನ್ಯಧರ್ಮವೂ ಧಾತುವಿನಿಂದ ವಿಶೇಷಧರ್ಮವೂ ತೋರುತ್ತದೆ. ಪಕ್ತಿಃ ಪಚನಂ–ಎಂಬಲ್ಲಿಯೂ ಹೀಗೆಯೇ.

**ಆಚಾರ್ಯೋ ಮಾತುಲಶ್ಚೇತಿ ಯಥೈಕೋ ವ್ಯಪದಿಶ್ಯತೇ ।**
**ಸಂಬಂಧಿಭೇದಾದರ್ಥಾತ್ಮಾ ಸ ವಿಧಿಃ ಪಕ್ತಿಭಾವಯೋಃ ॥ ೬೩ ॥**

'ಇವನು ಆಚಾರ್ಯ, ಅವನು ಮಾತುಲ' ಎಂದು ಒಬ್ಬ ವ್ಯಕ್ತಿಯೇ ಸಂಬಂಧಿಗಳ ಭೇದದಿಂದ ಅಭಿಹಿತನಾಗುತ್ತಾನೆ. ಹಾಗೆಯೇ ಪಕ್ತಿಭಾವ–ಗಳಿಗೂ ಆ ಪ್ರಕಾರವು ಅನ್ವಯಿಸುತ್ತದೆ.

**ವಿವರಣೆ :** ಯಜ್ಞದತ್ತನೆಂಬ ಉಪಾಧ್ಯಾಯನ ಶಿಷ್ಯ ಚೈತ್ರ. ಯಜ್ಞದತ್ತನ ತಂಗಿಯ ಮಗ ಮೈತ್ರ. ಚೈತ್ರನಿಗೆ ಯಜ್ಞದತ್ತನು ಆಚಾರ್ಯನಾಗಿದ್ದಾನೆ. ಮೈತ್ರನಿಗೆ ಯಜ್ಞದತ್ತನು ಮಾತುಲ (ಸೋದರಮಾವ)ನಾಗಿದ್ದಾನೆ. ಒಬ್ಬನೇ ಯಜ್ಞದತ್ತನು ಬೇರೆಬೇರೆ ಸಂಬಂಧಿಗಳ ದೃಷ್ಟಿಯಿಂದ ಆಚಾರ್ಯನೂ ಆಗುತ್ತಾನೆ, ಮಾತುಲನೂ ಆಗುತ್ತಾನೆ. ಇದರಲ್ಲಿ ವಿರೋಧವೇನೂ ಇಲ್ಲ. ಹಾಗೆಯೇ ಪಕ್ತಿಭಾವಗಳಿಗೂ ಈ ಪ್ರಕಾರವಿರುತ್ತದೆ.

ಪಕ್ತಿ(ಪಾಕ) – ಇದು ತನ್ನಲ್ಲಿ ಒಳಗೊಂಡ ಅಧಿಶ್ರಯಣಾದ್ಯಧಃಶ್ರಯಣ ಪರ್ಯಂತವಾದ ವ್ಯಾಪಾರ ವಿಶೇಷಗಳ ಅಪೇಕ್ಷೆಯಿಂದ ಸಾಮಾನ್ಯವೆನಿಸುತ್ತದೆ. ವ್ಯಾಪಾರಗಳು ವ್ಯಾಪ್ಯ, ಸಾಮಾನ್ಯವು ವ್ಯಾಪಕ. ಸಕಲಧಾತುಗಳಲ್ಲಿಯೂ ಇರುವ ಭಾವಕ್ಕೆ (ಸತ್ತಾ ಸಾಮಾನ್ಯಕ್ಕೆ) ಪಕ್ತಿಯು ವಿಶೇಷಧರ್ಮವಾಗುತ್ತದೆ. ಇದರಂತೆ ಭಕ್ತಿ, ಸಕ್ತಿ, ರಕ್ತಿ, ತ್ಯಾಗ, ಭೋಗಗಳು ಅಂತರ್ಗತ ವ್ಯಾಪಾರಗಳ ಅಪೇಕ್ಷೆಯಿಂದ ಸಾಮಾನ್ಯವೂ ಹೌದು, ಸತ್ತಾ ಸಾಮಾನ್ಯವಾದ ಭಾವದ ಅಪೇಕ್ಷೆಯಿಂದ ವಿಶೇಷವೂ ಹೌದು. ಈ ಕಾರಣದಿಂದಲೇ 'ನಿರ್ವಿಶೇಷಂ ನ ಸಾಮಾನ್ಯಂ' ಎಂಬ ವಚನವು ಸಿದ್ಧವಾಗಿದೆ.

**ಇಲ್ಲಿಗೆ ಮಹಾವೈಯಾಕರಣ ಶ್ರೀಭರ್ತೃಹರಿ ವಿರಚಿತವಾದ**
**ವಾಕ್ಯಪದೀಯ ಗ್ರಂಥದಲ್ಲಿ ಕ್ರಿಯಾಸಮುದ್ದೇಶವು ಸಮಾಪ್ತವಾಯಿತು.**

**– ಶ್ರೀರಸ್ತು –**

# ಅನುಬಂಧ – ೧

# ಬ್ರಹ್ಮಕಾಂಡ

ಈ ಬ್ರಹ್ಮಕಾಂಡದಲ್ಲಿರುವ 'ಸೈಷಾ ಸಂಸಾರಿಣಾಂ ಸಂಜ್ಞಾ . . .' ಎಂಬ ೧೩೬ನೆಯ ಶ್ಲೋಕವಾದ ಮೇಲೆ ಕೆಲವು ಪ್ರತಿಗಳಲ್ಲಿ ಕೆಳಗೆ ಬರೆದ ಶ್ಲೋಕವು ಕಂಡುಬರುತ್ತದೆ. ಅಂಬಾಕರ್ತ್ರೀ ವ್ಯಾಖ್ಯಾನಕಾರರು ಇದನ್ನು ಮೂಲಸ್ಥಶ್ಲೋಕ–ವೆಂದು ಗಣಿಸಿಲ್ಲ. ಭರ್ತೃಹರಿಯ ಸ್ವೋಪಜ್ಞವೃತ್ತಿಯಲ್ಲಿ 'ಏವಂ ಹ್ಯಾಹ' ಎಂಬ ಅವತರಣಿಕೆಯೊಡನೆ ಈ ಶ್ಲೋಕವನ್ನು ಉದಾಹರಿಸಿದ್ದಾರೆ. ಆದ್ದರಿಂದ ಈ ಶ್ಲೋಕವು ವಾಕ್ಯಪದೀಯಕಾರರದ್ದಲ್ಲವೆಂದು ಹೇಳಬಹುದಾಗಿದೆ. ವಾಚಕರ ಸೌಕರ್ಯಕ್ಕಾಗಿ ಇಲ್ಲಿ ಇದರ ಅರ್ಥವಿವರಣೆಗಳನ್ನು ಬರೆಯಲಾಗಿದೆ. ಈ ಶ್ಲೋಕವು ಪ್ರಕೃತೋಪಯುಕ್ತವೂ ಆಗಿದೆ –

ಅರ್ಥಕ್ರಿಯಾಸು ವಾಕ್ ಸರ್ವಾನ್ ಸಮೀಹಯತಿ ದೇಹಿನಃ ।
ತದುತ್ಕ್ರಾಂತೌ ವಿಸಂಜ್ಞೋಽಯಂ ದೃಶ್ಯತೇ ಕಾಷ್ಠಕುಡ್ಯವತ್ ॥

ವಾಕ್ ಎಂಬುದು ಸರ್ವಪ್ರಾಣಿಗಳನ್ನೂ ಜಲಾಹರಣಾದಿ ಸಫಲಕ್ರಿಯೆಗಳಲ್ಲಿ ಪ್ರೇರಿಸುತ್ತದೆ. ಈ ವಾಕ್ ಎನ್ನುವುದು ಉತ್ಕ್ರಾಂತವಾಗಿ ಹೊರಟುಹೋದರೆ ಈ ಮನುಷ್ಯನು ಕಟ್ಟಿಗೆ ತುಂಡಿನಂತೆಯೂ ಮಣ್ಣಿನ ಗೋಡೆಯಂತೆಯೂ ಆಗಿಬಿಡುತ್ತಾನೆ. ಇವನು ವಿಸಂಜ್ಞ(ಚೇತನಾ)ರಹಿತನೆನಿಸಿಕೊಳ್ಳುತ್ತಾನೆ.

**ವಿವರಣೆ** – ಹಿಂದಿನ ಶ್ಲೋಕದಲ್ಲಿ ವಾಕ್ ಎನ್ನುವುದು ಜನರ ಚೈತನ್ಯವೇ ಆಗಿದೆಯೆಂದು ಹೇಳಿದ್ದಾಗಿದೆ. ಅದರ ಸಮರ್ಥನೆ ಈ ಶ್ಲೋಕದಲ್ಲಿದೆ. ಚೈತನ್ಯವೇ ವಾಕ್. ಅದೇ ಜೀವ. ಇದು ಇಚ್ಛೆ, ಯತ್ನಗಳ ಮೂಲಕ ಮನುಷ್ಯನಲ್ಲಿ ಕ್ರಿಯೆಯನ್ನು ಹುಟ್ಟಿಸುತ್ತದೆ. 'ನೀರನ್ನು ತೆಗೆದುಕೊಂಡು ಬಾ' ಎಂದರೆ ನೀರನ್ನು ತರಲು ಪ್ರೇರಣೆಯಾಗುತ್ತದೆ. ಜ್ಞಾನಪೂರ್ವಕವಾಗಿ ಕ್ರಿಯೆ ಹುಟ್ಟುವುದರಿಂದ ಮನುಷ್ಯನಲ್ಲಿ ಜ್ಞಾನ ಹುಟ್ಟಿದರೆ, ವಾಕ್‌ತತ್ತ್ವವು ಅವನಲ್ಲಿದೆಯೆಂದು ದೃಢವಾಗುತ್ತದೆ. ಪ್ರಾಣ ಹೋದ ಮೇಲೆ ವಾಕ್‌ತತ್ತ್ವವಿರುವುದಿಲ್ಲವಾದ್ದರಿಂದ ಯಾರೂ ಅವನಿಗೆ ಕ್ರಿಯೆಯನ್ನು ವಿಧಿಸುವುದಿಲ್ಲ. ಆ ದೇಹವನ್ನು ವಿಸಂಜ್ಞವೆನ್ನುತ್ತಾರೆ.

# ಅನುಬಂಧ – ೨

# ಕಾಲಸಮುದ್ದೇಶ

ಬಹಳ ವರ್ಷಗಳ ಹಿಂದೆ ಕ್ಷಿತೀಶಚಂದ್ರ ಚಟ್ಟೋಪಾಧ್ಯಾಯರೆಂಬ ವಿದ್ವಾಂಸರು ಕಲ್ಕತ್ತಾ ನಗರದಿಂದ 'ಸಂಸ್ಕೃತ ಸಾಹಿತ್ಯ ಪರಿಷತ್ಪತ್ರಿಕೆ' ಎಂಬ ಮಾಸಿಕ ಪತ್ರಿಕೆಯನ್ನು ಹೊರಡಿಸುತ್ತಿದ್ದರು. ಅದರಲ್ಲಿ ಕಾಲದ ವಿಷಯವಾಗಿ ವಿಭಿನ್ನ ಮತಗಳನ್ನು ಸಂಗ್ರಹಿಸಿ ಧಾರಾವಾಹಿಯಾಗಿ ಒಬ್ಬ ಪಂಡಿತರು ಲೇಖನಗಳನ್ನು ಬರೆಯುತ್ತಿದ್ದರು. ನಾನು ಕುತೂಹಲದಿಂದ ಆ ಲೇಖನಗಳನ್ನು ಸಂಗ್ರಹಿಸಿ ಇಟ್ಟುಕೊಳ್ಳುತ್ತಿದ್ದೆ. ದುರ್ದೈವದಿಂದ ಆ ಪತ್ರಿಕೆಯ ಸಂಪಾದಕರು ಸ್ವರ್ಗಸ್ಥರಾದ್ದರಿಂದ ಪತ್ರಿಕೆ ನಿಂತುಹೋಯಿತು. ಆ ಧಾರಾವಾಹಿ ಲೇಖನಗಳನ್ನು ಬರೆಯುತ್ತಿದ್ದವರು ಮಹಾಮಹೋಪಾಧ್ಯಾಯ ಹಾರಾಣಚಂದ್ರಭಟ್ಟಾಚಾರ್ಯರೆಂಬ ಪಂಡಿತೋತ್ತ–ಮರು. ಅವರು ಈಚೆಗೆ ಆ ಲೇಖನಗಳನ್ನೆಲ್ಲ ಪರಿಷ್ಕರಿಸಿ, ಇನ್ನೂ ಸೇರಿಸಬೇಕಾಗಿದ್ದ ಲೇಖನಗಳನ್ನು ಸೇರಿಸಿ, 'ಕಾಲಸಿದ್ಧಾಂತದರ್ಶಿನೀ' ಎಂಬ ಹೆಸರಿನ ಒಂದು ಗ್ರಂಥವನ್ನು ರಚಿಸಿದರು. ಅದನ್ನು ಕಾಶಿಯಲ್ಲಿರುವ ಸಂಸ್ಕೃತ ವಿಶ್ವವಿದ್ಯಾಲಯವು ಪ್ರಕಟಿಸಿದೆ. ಈ ವಿಷಯವು ನನಗೆ ತಿಳಿದೊಡನೆ ಆ ಗ್ರಂಥವನ್ನು ನಾನು ತರಿಸಿಕೊಂಡಿದ್ದೇನೆ. ಅದರಲ್ಲಿ ಕಾಲದ ವಿಷಯವಾಗಿ ಒಟ್ಟು ಐವತ್ತೇಳು ಮತಗಳ ವಿವರಣೆ ಇದೆ. ನಮ್ಮ ಪ್ರಾಚೀನ ವಿದ್ವಾಂಸರು ಕಾಲದ ವಿಷಯವಾಗಿ ಎಷ್ಟು ವಿಫುಲವಾಗಿ ವಿಚಾರಸರಣಿಗಳನ್ನು ಬೆಳೆಸಿದ್ದರೆಂಬುದು ಇದರಿಂದ ಗೊತ್ತಾಗುತ್ತದೆ. ವಾಕ್ಯಪದೀಯಕಾರನಾದ ಭರ್ತೃಹರಿಯು ಇವೆಲ್ಲವನ್ನು ಪರಿಶೀಲಿಸಿ ಸಾರವತ್ತಾದ ಕೆಲವು ಮತಗಳನ್ನು ಮಾತ್ರ ತನ್ನ ಕಾಲಸಮುದ್ದೇಶದಲ್ಲಿ ಪ್ರಸ್ತಾಪಿಸಿದ್ದಾನೆ. ಅನ್ಯಮತಗಳನ್ನು ಖಂಡಿಸದೆ, ಅವುಗಳಲ್ಲಿರುವ ದೋಷಗಳನ್ನು ಹೇಳದೆ, ಕಡೆಯಲ್ಲಿ ತನ್ನ ಸಿದ್ಧಾಂತವನ್ನು ಹೇಳಿ ಕೈ ಬಿಡುವುದು–ಭರ್ತೃಹರಿಯ ಸ್ವಭಾವ. ಪ್ರಕೃತ ವಾಚಕರಿಗೆ ಆ ಮತಗಳನ್ನು ಚರ್ಚಿಸದೆ ಸಂಕ್ಷೇಪವಾಗಿ ಪರಿಚಯ ಮಾಡಿಕೊಡಲು ಯತ್ನಿಸುತ್ತೇನೆ. ಅವುಗಳಲ್ಲಿ ಕೆಲವು ಮತಗಳು ಏಕಾಭಿಪ್ರಾಯವನ್ನು ತಳೆದಿರುವುದೂ ಉಂಟು.

ವೇದದಲ್ಲಿ ಕಾಲದ ಅಂತರ್ಭೇದಗಳ ನಿರೂಪಣೆ ಕಂಡು ಬರುತ್ತದೆ.

## ೧. ಋಗ್ವೇದ

ಕಾಲವು ಅನಾಧಾರ, ಆದರೆ ಜಗತ್ತಿಗೆ ಆಧಾರ ಋತುಗಳು ಆರು ಎಂದು ಹೇಳಿದೆ. ಎರಡೆರಡು ಋತುಗಳು ಸಮಾನ ಸ್ವಭಾವದವು ಎಂಬ ಅಭಿಪ್ರಾಯದಿಂದ ಋತುಗಳು ಮೂರು ಎಂದೂ ಇದೆ. ಅಸ್ಯ ವಾಮೀಯ ಸೂಕ್ತದಲ್ಲಿ 'ಪಂಚಪಾದಂ ಪಿತರಂ ದ್ವಾದಶಾಕೃತಿಂ' ಎಂದೂ ಕಾಲದ ವರ್ಣನೆ ಇದೆ. ಪಿತರಂ ಎಂದು ಹೇಳಿರುವುದು ಕಾಲದ ಸರ್ವಪದಾರ್ಥಗಳ ಉತ್ಪತ್ತಿಗೆ ಕಾರಣ ಎಂಬ ಅಭಿಪ್ರಾಯದಿಂದ. ಹೇಮಂತ ಶಿಶಿರ ಋತುಗಳೆರಡೂ ಚಳಿಗಾಲವಾದ್ದರಿಂದ ಒಂದು ಋತುವೆಂದು ಭಾವಿಸಿ 'ಪಂಚಪಾದಂ' ಎಂದು ಸಂವತ್ಸರಕ್ಕೆ ವಿಶೇಷಣವಾಗಿ ಹೇಳಿದೆ. ಆರು ಋತುಗಳೂ ಅಧಿಕಮಾಸವೂ ಬರುವುದರಿಂದ ಏಳು ಋತುಗಳೆಂಬ ಹೇಳಿಕೆಯೂ ಉಂಟು.

## ೨. ಉಪನಿಷತ್

ಮುಂಡಕೋಪನಿಷತ್ತಿನಲ್ಲಿ ಕಾಲವು ಬ್ರಹ್ಮದಿಂದ ಉತ್ಪನ್ನವಾಗುವುದೆಂದು ಸ್ಪಷ್ಟವಾಗಿ ಹೇಳಿದೆ. ಬೃಹದಾರಣ್ಯಕದಲ್ಲಿ ಪರಮೇಶ್ವರನೊಬ್ಬನೇ ಕಾಲವನ್ನು ನಿಯಮಿಸತಕ್ಕವನು ಎಂದಿದೆ.

## ೩. ವೇದಾಂಗ ಜ್ಯೋತಿಷ

ಈ ಗ್ರಂಥದ ಆದಿಯಲ್ಲಿ –

> ಪಂಚಸಂವತ್ಸರಮಯಯುಗಾಧ್ಯಕ್ಷಂ ಪ್ರಜಾಪತಿಮ್ ।
> ದಿನರ್ತ್ವಯನಮಾಸಾಂಗಂ ಪ್ರಣಮ್ಯ ಶಿರಸಾ ಶುಚಿಃ ॥

ಎಂಬ ಶ್ಲೋಕವಿದೆ. ಪಂಚಸಂವತ್ಸರಮಯವಾದ ಯುಗಕ್ಕೆ ಅಧ್ಯಕ್ಷನೂ, ದಿನ–ಋತು–ಅಯನ–ಮಾಸ – ಇವನ್ನು ಅವಯವಗಳನ್ನಾಗಿ ಉಳ್ಳವನೂ ಆದ ಕಾಲನೆಂಬ ಪ್ರಜಾಪತಿಯನ್ನು ಶುಚಿಯಾಗಿ ನಮಸ್ಕರಿಸಿ ಈ ಗ್ರಂಥವನ್ನು ರಚಿಸುತ್ತೇನೆ ಎಂದು ಅಭಿಪ್ರಾಯ. ಸಂವತ್ಸರ, ಪರಿವತ್ಸರ, ಇದಾ (ಇಡಾ) ವತ್ಸರ, ಅನುವತ್ಸರ, ಇದ್ವತ್ಸರ – ಎಂಬ ಐದು ಬಗೆಯ ವರ್ಷಗಳಿಗೆ ಯುಗವೆಂದು ಹೆಸರಿದೆ. 'ಯುಗಂ ಭವೇದ್ವತ್ಸರಪಂಚಕೇನ' ಎಂದು ಜ್ಯೋತಿಃಶಾಸ್ತ್ರದ ಸಂಕೇತ.

೧. ಸಂವತ್ಸರ = ಮೇಷ, ವೃಷಭ ಇತ್ಯಾದಿ ಹನ್ನೆರಡು ಮಾಸಗಳು. ಈ ಸೌರಮಾನದಿಂದ ಗಣನೆಯಾದಾಗ ಸಂವತ್ಸರವೆನಿಸುತ್ತದೆ.

೨. ಪರಿವತ್ಸರ = ಬೃಹಸ್ಪತಿಯು ಮೇಷಾದಿ ರಾಶಿಗಳಲ್ಲಿ ಇರುವ ಕಾಲ. ಸಾಮಾನ್ಯವಾಗಿ ಬೃಹಸ್ಪತಿಯು ಒಂದೊಂದು ರಾಶಿಯಲ್ಲಿ ಒಂದು

ವರ್ಷ ಇರುತ್ತಾನೆ. ಇದು ಬಾರ್ಹಸ್ಪತ್ಯಮಾನ.

೩. ಇದಾವತ್ಸರ = ಅಶ್ವಿನೀ ಮುಂತಾದ ಇಪ್ಪತ್ತೇಳು ನಕ್ಷತ್ರಗಳಲ್ಲಿ ಚಂದ್ರನು ಸಂಚರಿಸುವ ಕಾಲ.

೪. ಅನುವತ್ಸರ = ಚೈತ್ರಾದಿ ಗಣನೆಯಿಂದ ಹನ್ನೆರಡು ತಿಂಗಳು. ಇದು ಚಾಂದ್ರವರ್ಷ.

೫. ವತ್ಸರ = ಒಟ್ಟು ೩೬೦ ದಿನಗಳಿಗೆ ವತ್ಸರವೆಂದು ಹೆಸರು.

ದಿನ, ಋತು, ಅಯನ, ಮಾಸ, ಸಂವತ್ಸರ – ಇವುಗಳ ಗಣನೆ ಆಗಲೇ ಇತ್ತೆಂದು ಈ ಶ್ಲೋಕದಿಂದ ಗೊತ್ತಾಗುತ್ತದೆ. ಕಾಲವನ್ನು ಪ್ರಜಾಪತಿ ಎಂದು ಹೇಳಿದ್ದುದಕ್ಕೆ ಪ್ರಜೆಗಳ ಉತ್ಪತ್ತಿ ಸ್ಥಿತಿ ಲಯಗಳಿಗೆ ಹೇತುವಾದದ್ದು ಕಾಲ ಎಂದು ಆಶಯ.

## ೪. ಜ್ಯೋತಿಃಶಾಸ್ತ್ರ

ಸೂರ್ಯಾದಿಗ್ರಹಗಳೂ ನಕ್ಷತ್ರಾದಿಗಳೂ ಸಂಚರಿಸುವ ಕ್ರಿಯೆಯೇ ಕಾಲ.

ಆದಿತ್ಯಗ್ರಹತಾರಾದಿ ಪರಿಸ್ಪಂದಮಥಾಪರೇ ।
ಭಿನ್ನಮಾವೃತ್ತಿಭೇದೇನ ಕಾಲಂ ಕಾಲವಿದೋ ವಿದುಃ ॥

–ಕಾಲಸಮುದ್ದೇಶ, ಶ್ಲೋಕ ೭೩

## ೫. ಮಹಾಭಾಷ್ಯಕಾರ ಪತಂಜಲಿ

'ಯೇನ ಮೂರ್ತೀನಾಮುಪಚಯಾಶ್ಚಾಪಚಯಾಶ್ಚ ಲಕ್ಷ್ಯಂತೇ ತಂ ಕಾಲಮಾಹುಃ' (ಮಹಾಭಾಷ್ಯ ೨–೨–೫). ಮರ, ಹುಲ್ಲು, ಬಳ್ಳಿ ಮುಂತಾದ ಮೂರ್ತ ವಸ್ತುಗಳ ವೃದ್ಧಿ ಹ್ರಾಸಗಳು ಯಾವ ಕಾರಣದಿಂದ ಕಂಡುಬರುತ್ತವೆಯೋ ಅದು ಕಾಲವೆಂದು ಹೇಳುತ್ತಾರೆ ಎಂದರ್ಥ. ಕಾಲವಿರುವುದು ಒಂದೇ. ಹಗಲು, ರಾತ್ರಿ ಮುಂತಾದ ಭೇದಗಳು ಆದಿತ್ಯಗತಿಯೆಂಬ ಕ್ರಿಯೆಯ ಉಪಾಧಿಯಿಂದಾಗುತ್ತವೆ ಎಂದೂ ಮಹಾಭಾಷ್ಯದಲ್ಲಿದೆ.

## ೬. ವಾಕ್ಯಪದೀಯಕಾರ ಭರ್ತೃಹರಿ

ವಸ್ತುಗಳ ಉತ್ಪತ್ತಿ–ಸ್ಥಿತಿ–ಲಯಗಳಿಗೆ ನಿಮಿತ್ತವಾದದ್ದು ಕಾಲ. ಪ್ರತಿಬಂಧ ಮತ್ತು ಅನುಜ್ಞೆಗಳನ್ನೀಯುವುದು ಕಾಲದಲ್ಲಿರುವ ಶಕ್ತಿವಿಶೇಷ. ಕಾಲವು ಒಂದೇ ಆದರೂ ಉಪಾಧಿಭೇದದಿಂದ ನಾನಾರೂಪಗಳನ್ನು ತಾಳಿ ವ್ಯವಹಾರದಲ್ಲಿ

ಗೋಚರಿಸುತ್ತದೆ – ಇತ್ಯಾದಿ ವಿವರಗಳು ಪ್ರಕೃತ ಗ್ರಂಥದಲ್ಲಿಯೇ ಬಂದಿರುವುದ–ರಿಂದ ಇಲ್ಲಿ ವಿವರಿಸುವ ಆವಶ್ಯಕತೆ ಇಲ್ಲ. ಮಹಾಭಾಷ್ಯದಲ್ಲಿ ಮೂರ್ತವಸ್ತುಗಳ ವೃದ್ಧಿಹ್ರಾಸಗಳಿಗೆ ಕಾರಣವಾದದ್ದು ಕಾಲ ಎಂದಿಷ್ಟೇ ಹೇಳಿದೆ. ಕಾರಣವಾದದ್ದು ಯಾವುದು? – ಇತ್ಯಾದಿ ವಿವರಗಳು ಮುಂದಿನ ಶಿಷ್ಯ ಪರಂಪರೆಯಿಂದ ಗೊತ್ತಾಗಬೇಕು. ಭರ್ತೃಹರಿಯು ಆ ಪರಂಪರೆಯಲ್ಲಿ ಬಂದವನು. ಭಾಷ್ಯವಿರುದ್ಧವಾದ್ದನ್ನು ಆತನು ಎಂದಿಗೂ ಅಂಗೀಕರಿಸುವುದಿಲ್ಲ. ಆದ್ದರಿಂದ ವೃದ್ಧಿ ಹ್ರಾಸಾದಿಗಳಿಗೆ ಕಾರಣವಾದದ್ದು ಬ್ರಹ್ಮಶಕ್ತಿ ಎಂದು ಭರ್ತೃಹರಿ ಹೇಳುತ್ತಾನೆ. ವೈಯಾಕರಣ ಮತವು ಶಬ್ದಾದ್ವೈತಪರವಾದದ್ದು, ಅದ್ವೈತವೇದಾಂತಿಗಳೂ ಬ್ರಹ್ಮಶಕ್ತಿಯೇ ಕಾಲವೆನ್ನುತ್ತಾರೆ.

ಈ ಸಂದರ್ಭದಲ್ಲಿ ಬೇರೆಬೇರೆ ವ್ಯಾಖ್ಯಾನಕಾರರು ವಾಕ್ಯಪದೀಯ ಶ್ಲೋಕ–ಗಳಿಗೆ, ವಿವಿಧಾರ್ಥಗಳನ್ನು ಕಲ್ಪಿಸಿರುವುದುಂಟು. ಅವೆಲ್ಲವನ್ನೂ ಹೇಲಾರಾಜನು ದೂಷಿಸಿ ಬ್ರಹ್ಮಶಕ್ತಿಯೇ ಕಾಲವೆಂಬುದು ಭರ್ತೃಹರಿಯ ಸಿದ್ಧಾಂತವೆಂದು ಸಮರ್ಥಿಸಿದ್ದಾನೆ.

## ೭. ಸಾಂಖ್ಯಮತ

ಇದು ಕಪಿಲಮುನಿಪ್ರಣೀತವಾದ್ದರಿಂದ ಕಾಪಿಲಸಾಂಖ್ಯವೆಂದೂ ಈಶ್ವರನನ್ನು ಅಂಗೀಕರಿಸುವುದಿಲ್ಲವಾದ್ದರಿಂದ ನಿರೀಶ್ವರ ಸಾಂಖ್ಯವೆಂದೂ ಪ್ರಸಿದ್ಧವಾಗಿದೆ. ಕಾಲದ ವಿಷಯದಲ್ಲಿ ಸಾಂಖ್ಯಾಚಾರ್ಯರು ಭಿನ್ನಾಭಿಪ್ರಾಯಗಳನ್ನು ತಳೆದಿದ್ದಾರೆ –

೧. ಸಾಂಖ್ಯಮತದಲ್ಲಿ ಕಾಲವೆಂಬ ಪದಾರ್ಥವೇ ಇಲ್ಲ. ಹಗಲು, ರಾತ್ರಿ, ಘಂಟೆ, ನಿಮಿಷ – ಮುಂತಾದ ವ್ಯವಹಾರವು ಅಖಂಡಕಾಲದಲ್ಲಿ ಸೂರ್ಯಗತಿ ಮುಂತಾದ ಉಪಾಧಿಗಳಿಂದಲೇ ಸಿದ್ಧವಾಗುತ್ತೆಯಷ್ಟೆ. ಆ ಉಪಾಧಿಗಳಿಂದಲೇ ಹಗಲು, ರಾತ್ರಿ ಮುಂತಾದ ವ್ಯವಹಾರಗಳೂ ನಡೆಯುತ್ತವೆಯಾದ್ದರಿಂದ ಕಾಲವೆಂಬ ವಸ್ತುವೇ ಬೇಕಾಗಿಲ್ಲ. ಇದು ಪ್ರಸಿದ್ಧವಾದ ಸಾಂಖ್ಯರ ನಿಲುವು.

೨. ಸತ್ತ್ವರಜಸ್ತಮೋಗುಣಾತ್ಮಕವಾದ ಪ್ರಕೃತಿಯ ಪರಿಣಾಮದಿಂದ ಕಾಲವು ಹುಟ್ಟಿದೆ. ಆದ್ದರಿಂದ ಕಾಲವೆಂಬ ವಸ್ತು ಉಂಟು.

೩. ಪ್ರಕೃತಿಯಿಂದ ಕಾಲವು ಹುಟ್ಟುತ್ತದೆಯೆಂದೇಕೆ ಹೇಳಬೇಕು ? ಪ್ರಕೃತಿ–ಯನ್ನೇ ಕಾಲವೆಂದು ಹೇಳಬಹುದು.

೪. ಅಖಂಡಕಾಲಕ್ಕೆ ಉಪಾಧಿಯಾದ ಕ್ರಿಯೆಯನ್ನೇ ಕಾಲವೆಂದು ಹೇಳ–ಬಹುದು.

೫. ಆಕಾಶವನ್ನೇ ಕಾಲವೆಂದು ಹೇಳಬಹುದು.

ಇತ್ಯಾದಿ ನಾನಾಭಿಪ್ರಾಯಗಳಿದ್ದರೂ ಕಾಲವೆಂಬ ಅತಿರಿಕ್ತ ಪದಾರ್ಥವಿಲ್ಲ ಎಂಬ ಮತವೇ ಪ್ರಸಿದ್ಧವಾದದ್ದು.

## ೮. ಯೋಗದರ್ಶನ

ಇದು ಪತಂಜಲಿ ಮುನಿ ಪ್ರಣೀತವಾದ್ದರಿಂದ ಪಾತಂಜಲ ದರ್ಶನವೆನ್ನುತ್ತಾರೆ. ಇದು ಈಶ್ವರನನ್ನು ಅಂಗೀಕರಿಸುತ್ತದೆ. ಉಳಿದ ಪದಾರ್ಥಗಳೆಲ್ಲವೂ ಕಾಪಿಲ ಸಾಂಖ್ಯದರ್ಶನದಂತೆಯೇ ಇರುವುದರಿಂದ ಸೇಶ್ವರಸಾಂಖ್ಯವೆಂದು ಪ್ರಸಿದ್ಧವಾಗಿದೆ. ಇದು ಕ್ಷಣಾತ್ಮಕವಾದ ಕಾಲವನ್ನು ಅಂಗೀಕರಿಸುತ್ತದೆ. ಎಂದರೆ ಕಾಲವು ಪರಮಾಣುವಿನಂತೆ ಅತಿಸೂಕ್ಷ್ಮವಾದ ವಸ್ತುವಾಗಿರುತ್ತದೆ. ಮುಹೂರ್ತ, ಹಗಲು, ರಾತ್ರಿ, ಘಂಟೆ, ನಿಮಿಷ ಮೊದಲಾದವು ವ್ಯವಹಾರಕ್ಕಾಗಿ ಬುದ್ಧಿ ಕಲ್ಪಿತವಾದವು.

## ೯. ವೈಶೇಷಿಕ

ಇದು ಕಣಾದ ಋಷಿ ಪ್ರಣೀತವಾದ ದರ್ಶನ. ಈ ದರ್ಶನದಂತೆ ಕಾಲವು ಒಂದು ದ್ರವ್ಯ. ಇದು ಪ್ರತ್ಯಕ್ಷವಲ್ಲ. ಇದು ವಿಭು, ನಿತ್ಯ. ವಿಭುವಾದರೂ ಉಪಾಧಿಭೇದದಿಂದ ಕ್ಷಣ, ಮುಹೂರ್ತ ಮುಂತಾದ ಭೇದಗಳನ್ನು ಪಡೆದು ವ್ಯವಹಾರಗೋಚರವಾಗುತ್ತದೆ. ಇದು ಸರ್ವವಸ್ತುಗಳಿಗೂ ಕಾರಣ. ಸರ್ವಕ್ಕೂ ಆಧಾರವಾದದ್ದು.

## ೧೦. ನ್ಯಾಯದರ್ಶನ

ಇದು ಗೌತಮಮುನಿಪ್ರಣೀತವಾದದ್ದು. ವೈಶೇಷಿಕ ಮತಕ್ಕೂ ಇದಕ್ಕೂ ಹೆಚ್ಚು ಭೇದವಿಲ್ಲ. ಈ ದರ್ಶನವೂ ಕಾಲವನ್ನು ದ್ರವ್ಯ, ವಿಭು, ನಿತ್ಯ ಎಂದು ಅಂಗೀಕರಿಸುತ್ತದೆ. ಈ ಎರಡು ದರ್ಶನಗಳಲ್ಲಿಯೂ ಹೆಚ್ಚು ಭೇದವಿಲ್ಲವಾದ್ದರಿಂದ ವೈಶೇಷಿಕರನ್ನೂ ನೈಯಾಯಿಕರನ್ನೂ ಸೇರಿಸಿ ತಾರ್ಕಿಕರೆಂದು ಹೇಳುತ್ತಾರೆ.

## ೧೧. ಮೀಮಾಂಸಾ

ಇದು ಜೈಮಿನಿ ಪ್ರಣೀತವಾದರೂ ವ್ಯಾಖ್ಯಾನಕಾರರ ಪಾಂಡಿತ್ಯದಿಂದ ಮೂರು ವಿಧವಾಗಿದೆ. ಕುಮಾರಿಲಭಟ್ಟ, ಪ್ರಭಾಕರ ಮತ್ತು ಮುರಾರಿಮಿಶ್ರರೇ ಆ ಮೂವರು ವ್ಯಾಖ್ಯಾನಕಾರರು.

೧. ಕುಮಾರಿಭಟ್ಟರ ಮತದಲ್ಲಿ ಕಾಲವು ದ್ರವ್ಯ, ವಿಭು ಮತ್ತು ನಿತ್ಯವಾದದ್ದು.

ಅದು ಒಂದೇ ಆದರೂ ಉಪಾಧಿವಶದಿಂದ ಕ್ಷಣ, ದಿನ, ಮಾಸಾದಿ ಭೇದವ್ಯವಹಾರವು ಬರುತ್ತದೆ. ಇದು ಆರು ಇಂದ್ರಿಯಗಳಿಗೂ ಗೋಚರವಾಗುತ್ತದೆ. ಪಂಚಜ್ಞಾನೇಂದ್ರಿಯ ಮತ್ತು ಮನಸ್ಸು ಸೇರಿ ಆರು ಇಂದ್ರಿಯಗಳು. ಇವುಗಳಿಂದ ನೇರವಾಗಿ ಕಾಲವು ಗೃಹೀತವಾಗ–ದಿದ್ದರೂ ಆ ಇಂದ್ರಿಯಗಳಿಗೆ ಗೋಚರಿಸುವ ವಿಷಯಗಳಿಗೆ ಕಾಲವು ವಿಶೇಷಣವಾಗಿ ಇದ್ದೇ ಇರುವುದರಿಂದ ಕಾಲವೂ ಆ ಇಂದ್ರಿಯಗಳಿಂದ ಗೃಹೀತವಾಗುತ್ತದೆ ಎಂದು ತಿಳಿಯಬೇಕು.

೨. ನ ಸೋಽಸ್ತಿ ಪ್ರತ್ಯಯೋ ಲೋಕೇ ಯತ್ರ ಕಾಲೋ ನ ಭಾಸತೇ – ಎಂದು ಈ ಮೀಮಾಸಂಕರ ಪ್ರಸಿದ್ಧವಾದ ಉಕ್ತಿ. 'ಈ ಲೋಕದಲ್ಲಿ ಕಾಲವು ತೋರದೆ ಇರುವ ಯಾವ ಪದಾರ್ಥಜ್ಞಾನವೂ ಇಲ್ಲ' ಎಂದು ಅದರ ಅರ್ಥ.

೩. ಪ್ರಾಭಾಕರರು ಕಾಲಕ್ಕೆ ದ್ರವ್ಯತ್ವ ವಿಭುತ್ವ, ಏಕತ್ವ – ಮುಂತಾದ್ದನ್ನು ಒಪ್ಪುತ್ತಾರೆ. ಆದರೆ ಇದು ಇಂದ್ರಿಯಗ್ರಾಹ್ಯವೆಂಬುದನ್ನು ಒಪ್ಪುವುದಿಲ್ಲ. ಇವರ ಮತದಲ್ಲಿ ಕಾಲವು ಯಾವ ಇಂದ್ರಿಯಕ್ಕೂ ಗೋಚರವಿಲ್ಲ. ಇವರ ಅಭಿಪ್ರಾಯವು ವೈಶೇಷಿಕರ ಮತದಂತೆಯೇ ಇದೆ.

ಮುರಾರಿ ಮಿಶ್ರನ ಮತವು ಕಾಲದ ವಿಷಯವಾಗಿ ಹೇಗಿತ್ತೆಂಬುದು ತಿಳಿಯುವುದಿಲ್ಲ. ಪೂರ್ತಿಯಾಗಿ ಅವನ ಗ್ರಂಥವು ದೊರಕಿಲ್ಲ. ಅರ್ಥವಾದಾ–ಧಿಕರಣದಲ್ಲಿ ಸ್ವಲ್ಪ ಭಾಗವು ದೊರೆತಿದ್ದರೂ ಅದರಲ್ಲಿ ಕಾಲದ ವಿಷಯ ಬಂದಿಲ್ಲ. 'ಮುರಾರೇಸ್ತೃತೀಯಃ ಪಂಥಾಃ' ಎಂಬ ಗಾದೆಯಲ್ಲಿ ಮಾತ್ರ ಆತನ ಹೆಸರು ಉಳಿದುಕೊಂಡಿದೆ.

## ೧೨. ಶ್ರೀನಿಂಬಾರ್ಕ ಸಂಪ್ರದಾಯ

ಈ ಸಂಪ್ರದಾಯದವರು ವೈಷ್ಣವರು. ಇವರ ಮತದಲ್ಲಿ ಚಿತ್, ಅಚಿತ್, ಮಾಯಾ ಎಂಬ ಮೂರು ಪದಾರ್ಥಗಳಿವೆ. ಜೀವನೂ ಈಶ್ವರನೂ ಚಿತ್ ಪದಾರ್ಥದಲ್ಲಿ ಸೇರುತ್ತಾರೆ. ಮಾಯೆಯು ಸತ್ತ್ವರಜಸ್ತಮೋ ಗುಣಗಳುಳ್ಳದ್ದು. ಅಚಿತ್ ಮೂರು ವಿಧ –

೧. ಪ್ರಾಕೃತ

೨. ಅಪ್ರಾಕೃತ

೩. ಕಾಲ

ಗುಣತ್ರಯಾತ್ಮಕಮಾಯೆಗೆ ಆಶ್ರಯವಾದ ದ್ರವ್ಯವು ಪ್ರಾಕೃತ. ಅದು ನಿತ್ಯವೂ ಪರಿಣಾಮಿಯೂ ಆಗಿದೆ. ಇದು ಜಗದ್ರೂಪವಾಗಿ ಪರಿಣಮಿಸಿದೆ. ಮಾಯಾ ಪ್ರಾಕೃತಗಳಿಗೆ ಅತಿರಿಕ್ತವಾದ ವಿಷ್ಣುಪದ, ಬ್ರಹ್ಮಲೋಕ – ಮುಂತಾದ ಹೆಸರುಳ್ಳದ್ದು ಅಪ್ರಾಕೃತ. ಇದು ಪರಿಣಾಮವಿಲ್ಲದ್ದು. ಕಾಲವರ್ಜಿತವಾದದ್ದು, ಪ್ರಾಕೃತ ಅಪ್ರಾಕೃತಗಳೆರಡೂ ಅಲ್ಲದ ಅಚೇತನದ್ರವ್ಯವೇ ಕಾಲ. ಅದು ವಿಭುವು ನಿತ್ಯವೂ ಆಗಿದೆ. ಉಪಾಧಿವಶದಿಂದ ದಿನ, ಮಾಸ – ಮುಂತಾದ ಕಾಲಭೇದವನ್ನು ಹೊಂದುತ್ತದೆ. ಈಶ್ವರನೇ ವಿಷ್ಣು, ಶ್ರೀಕೃಷ್ಣ.

## ೧೩. ಶ್ರೀಮಧ್ವಾಚಾರ್ಯಮತ

ಈ ಮತದಲ್ಲಿ ದ್ರವ್ಯ, ಗುಣ, ಕರ್ಮ – ಮುಂತಾದ ಹತ್ತು ಪದಾರ್ಥಗಳಿವೆ. ಅವುಗಳಲ್ಲಿ ದ್ರವ್ಯವು ಇಪ್ಪತ್ತು ವಿಧ. ಕಾಲವು ದ್ರವ್ಯಗಳಲ್ಲೊಂದು. ಅದು ಸಂಸಾರಬದ್ಧ ಜೀವಿಗಳಿಗೆ ಆಯುಸ್ಸನ್ನು ವ್ಯವಸ್ಥೆಗೊಳಿಸುತ್ತದೆ. 'ಆಯುರ್ವ್ಯವಸ್ಥಾಪಕಃ ಕಾಲಃ' ಎಂದು ಮಾಧ್ವಮತದ ಪದಾರ್ಥಸಂಗ್ರಹದಲ್ಲಿ ಬರೆದಿದೆ. ಪರಮಾತ್ಮನಿಗೂ ಮುಕ್ತರಾದ ಜೀವಗಳಿಗೂ ಕಾಲದ ಸಂಬಂಧವಿಲ್ಲ.

ಈ ಕಾಲವು ಅಖಂಡವಾದ ಒಂದು ದ್ರವ್ಯವಲ್ಲ. ಕ್ಷಣ, ಮುಹೂರ್ತ ಇತ್ಯಾದಿ ಬಹುಸ್ವರೂಪವುಳ್ಳದ್ದು, ಮತ್ತು ಸರ್ವವ್ಯಾಪಿ ಕಾಲಕ್ಕೆ ಉತ್ಪತ್ತಿ ವಿನಾಶಗಳುಂಟು. ಆದ್ದರಿಂದ ಅನಿತ್ಯದ್ರವ್ಯ. ಪ್ರಕೃತಿಯಿಂದ ಕಾಲವು ಹುಟ್ಟುತ್ತದೆ. ಸರ್ವತ್ರವ್ಯಾಪಿಯಾದ ಪ್ರಕೃತಿಯ ಕೆಲವು ಅಂಶಗಳಿಂದ ಕಾಲವು ಹುಟ್ಟುತ್ತದೆ. ಉಳಿದ ಅಂಶಗಳಿಂದ ಜಗತ್ತು ಹುಟ್ಟಿದೆ. ಪ್ರಕೃತಿಯ ಕೆಲವು ಅಂಶಗಳಿಂದ ಕಾಲವು ಹುಟ್ಟುವುದಾದರೆ ಅದು ಸರ್ವವ್ಯಾಪಿಯಾಗುವುದು ಹೇಗೆ? ಹೇಗೆಂದರೆ ಪರಮಾತ್ಮನು ಅಚಿಂತ್ಯಶಕ್ತಿಶಾಲಿ–ಯಾದ್ದರಿಂದ ಅಲ್ಪವಾದ ಕಾಲವನ್ನು ಸರ್ವವ್ಯಾಪಿಯಾಗಿ ಮಾಡಬಲ್ಲನು! 'ಈಗ ಪ್ರಾತಃಕಾಲ' ಎಂಬುದು ಸರ್ವರ ವ್ಯವಹಾರದಲ್ಲಿ ಬರುವುದರಿಂದ ಕಾಲವು ಸರ್ವಾಧಾರವಾಗಬಲ್ಲದು. ಕಾಲವು ಉತ್ಪನ್ನವಾಗುವುದರಿಂದ ವಿನಾಶವಿದ್ದರೂ ಪ್ರವಾಹನಿತ್ಯವೆಂದು ಹೇಳುತ್ತೇವೆ. ನಾವು ನೋಡುವ ನದಿಯ ಪ್ರವಾಹವು ಮುಂದೆ ಮುಂದೆ ಹರಿದುಹೋದರೂ, ಹಿಂದಿನಿಂದ ಪ್ರವಾಹವು ಹುಟ್ಟಿ ಬರುವುದರಿಂದ, ನದಿಯು ನಿತ್ಯವಾಗಿದೆ ಎಂದು ಹೇಳುವಂತೆ, ಕಾಲವು ನಿತ್ಯವೆನಿಸಬಹುದು. ಶ್ರುತಿಸ್ಮೃತಿಗಳಲ್ಲಿ ಕಾಲವು ನಿತ್ಯವೆಂದು ಹೇಳಿರುವುದು ಪ್ರವಾಹನಿತ್ಯವೆಂಬ ಅಭಿಪ್ರಾಯದಿಂದ. ಕಾಲವು ಸಾಕ್ಷಿ ಗೋಚರವಾದದ್ದು. ಸಾಕ್ಷಿಯು ಯಾರೆಂದರೆ ಸರ್ವಜೀವಗಳ ಸ್ವರೂಪಭೂತನಾದ ವಿಷ್ಣು.

## ೧೪. (ವಾಕ್ಯಪದೀಯದಲ್ಲಿರುವ)ಏಕದೇಶಿಮತ

ಕಾಲವು ಬುದ್ಧಿ ಸಂಕಲನಾರೂಪವೇ ಆದ್ದರಿಂದ ಕಾಲವೆಂಬ ಒಂದು ವಸ್ತು ಇಲ್ಲ. ಕೇಚಿದ್ ಬುದ್ಧ್ಯನುಸಂಹಾರಲಕ್ಷಣಂ ತಂ ಪ್ರಚಕ್ಷತೇ॥ (ವಾಕ್ಯ. ೩–೫೭). 'ವಿಭಿನ್ನ ಕ್ರಿಯೆಗಳನ್ನು ಬುದ್ಧಿಯಿಂದ ಸಂಕಲಿಸಿದಾಗ ಆಗುವ ಕ್ರಿಯೆಗಳ ಸಂಖ್ಯೆಯೇ ಕಾಲವೆಂದು ಕೆಲವರು ಹೇಳುತ್ತಾರೆ'. ಪ್ರಸಿದ್ಧವಾದ ಸೂರ್ಯಗತಿಯನ್ನು, ಎಂದರೆ ಕ್ರಿಯೆಯನ್ನು ಗಣನೆಗೆ ಇಟ್ಟುಕೊಳ್ಳಬಹುದು. ಸೂರ್ಯನ ಚಲನಕ್ರಿಯೆ ಅಥವಾ ಭೂಮಿಯ ಸುತ್ತುವ ಕ್ರಿಯೆ ಸತತವಾಗಿ ನಡೆಯುತ್ತಿರುವುದು. ಆ ಕ್ರಿಯೆಯ ಸೂಕ್ಷ್ಮವಾದ ಕ್ಷಣಿಕಾಂಶವು ಒಂದು ಕ್ರಿಯೆ ಎಂದಿಟ್ಟುಕೊಳ್ಳಬೇಕು. ಆ ಕ್ರಿಯೆಗಳು ನಡೆಯುವಾಗ ಎಷ್ಟು ಕ್ರಿಯೆಗಳು ನಡೆದವು ಎಂಬುದನ್ನು ನಮ್ಮ ಬುದ್ಧಿಯಿಂದ ಗ್ರಹಿಸಬಹುದಷ್ಟೆ. ಸ್ವಲ್ಪ ಕ್ರಿಯೆಗಳು ಮಾತ್ರ ನಡೆದವೆಂದು ತೋರಿದಾಗ 'ಬೇಗನೆ' ಬಂದನು ಎನ್ನುತ್ತೇವೆ. ಆ ಕ್ರಿಯೆಗಳು ಬಹಳ ನಡೆದವೆಂದು ತೋರಿದಾಗ 'ತಡವಾಗಿ ಬಂದನು' ಎಂದು ಹೇಳುತ್ತೇವೆ. ಅಭ್ಯಾಸಬಲದಿಂದ ಬುದ್ಧಿಯು ಕ್ರಿಯೆಗಳ ಸಂಕಲನವನ್ನು ಮಾಡಿಕೊಳ್ಳುತ್ತದೆ. ಆದ್ದರಿಂದ ಸೂರ್ಯಗತಿ ರೂಪ ಕ್ರಿಯೆಯೇ– 'ಬೇಗನೆ, ತಡವಾಗಿ' ಮುಂತಾದ ವ್ಯವಹಾರಗಳಿಗೆ ಕಾರಣವಾಗುತ್ತದೆ. ಹೀಗೆಯೇ ಘಂಟೆ, ದಿನ, ತಿಂಗಳು ಮುಂತಾದದ್ದು ಸೂರ್ಯಗತಿಯನ್ನವಲಂಬಿಸುವುದರಿಂದ ಸಂಕಲನಾತ್ಮಕ ಬುದ್ಧಿಗೆ ವಿಷಯವಾದ ಕ್ರಿಯೆಯೇ ಕಾಲವೆನ್ನಬಹುದು. ಕಾಲವೆಂಬ ಪ್ರತ್ಯೇಕ ಪದಾರ್ಥವನ್ನು ಅಂಗೀಕರಿಸಬೇಕಾಗಿಲ್ಲ ಎಂದು ಅಭಿಪ್ರಾಯ. ಇದು ಯಾರ ಮತವೆಂದು ಭರ್ತೃಹರಿಯು ಹೇಳಿಲ್ಲ. ಇದು ಚಾರ್ವಾಕರ ಮತವೆಂದು ಕೆಲವರು ಹೇಳುತ್ತಾರೆ.

## ೧೫. ಶ್ರೀಶಂಕರ ಅದ್ವೈತಸಿದ್ಧಾಂತ

ಈ ಸಿದ್ಧಾಂತದಲ್ಲಿ ಪದಾರ್ಥದ ಅಸ್ತಿತ್ವವು ಮೂರುವಿಧ–

೧. ಪಾರಮಾರ್ಥಿಕ ಸತ್ತಾ

೨. ಪ್ರಾತಿಭಾಸಿಕ ಸತ್ತಾ

೩. ವ್ಯಾವಹಾರಿಕ ಸತ್ತಾ

ಪರಮಾರ್ಥವಾಗಿ ಪರಬ್ರಹ್ಮ ಒಂದೇ ಇದೆ. ಉಳಿದುದೆಲ್ಲವೂ ಮಿಥ್ಯೆಯಾದ್ದರಿಂದ ಕಾಲವೆಂಬುದಿಲ್ಲ. ರಜ್ಜುಸರ್ಪ, ಶುಕ್ತಿರಜತ – ಮುಂತಾದ ಭ್ರಮೆಗೆ ಗೋಚರವಾದದ್ದು ಪ್ರಾತಿಭಾಸಿಕ. ಸ್ವಪ್ನದಲ್ಲಿ ಕಾಣತಕ್ಕದ್ದೂ ಪ್ರಾತಿಭಾಸಿಕ.

ವ್ಯವಹಾರದಲ್ಲಿ ಗೋಚರಿಸುವ ಎಲ್ಲ ವಸ್ತುಗಳೂ ವ್ಯಾವಹಾರಿಕವಾಗಿ ಸತ್ಯವೆನಿಸು–ತ್ತವೆ. ವ್ಯವಹಾರದಲ್ಲಿ ಕಾಲವಿರುವುದರಿಂದ ವ್ಯವಹಾರ ಸಿದ್ಧಿಗಾಗಿ ಕಾಲವಿದೆ ಎಂದು ಒಪ್ಪಬೇಕು. ಕಾಲವು ಸರ್ವಾಧಾರವೆಂಬುದನ್ನು ಅದ್ವೈತ ವೇದಾಂತವು ಒಪ್ಪುವುದಿಲ್ಲ. ಪರಬ್ರಹ್ಮವೇ ಸರ್ವಾಧಾರ. ಪರಬ್ರಹ್ಮಾತಿರಿಕ್ತವಾದ ವಿಷ್ಣು, ಶಿವ ಮುಂತಾದ ಸಮಸ್ತವಸ್ತುಗಳಿಗೂ ಕಾಲವು ಆಧಾರವಾಗಬಹುದು. ಹಾಗಾದರೆ ವ್ಯಾವಹಾರಿಕವಾಗಿ ಕಾಲವೆಂದರೆ ಯಾವುದು ?

ಅವಿದ್ಯೆ ಅಥವಾ ಮಾಯೆ ಎನ್ನುವುದು ಕಾಲ. ಪರಬ್ರಹ್ಮದಲ್ಲಿ ತೋರುವ ಮಾಯೆಯೆನ್ನುವುದು ಒಂದು ಬ್ರಹ್ಮಶಕ್ತಿ. 'ಶಕ್ತಿಶಕ್ತಿಮತೋರಭೇದಃ' ಎಂಬ ಸಿದ್ಧಾಂತದಂತೆ ಮಾಯೆಯಿದ್ದರೂ ಅದ್ವೈತಕ್ಕೆ ಭಂಗವಿಲ್ಲ. ಮತ್ತು ಪರಮಾರ್ಥ ದೆಶೆಯಲ್ಲಿ ಮಾಯೆಯೂ ಇರುವುದಿಲ್ಲ. ಆದ್ದರಿಂದ ವ್ಯವಹಾರದಲ್ಲಿ ಗೋಚರಿಸುವ ಕಾಲವು ಬ್ರಹ್ಮದ ಮಾಯಾ ಶಕ್ತಿಯಾಗಿದೆ. ಉಪಾಧಿಭೇದದಿಂದ ಅದೂ ಕ್ಷಣ, ಮುಹೂರ್ತ, ಘಂಟೆ, ದಿನ – ಇತ್ಯಾದಿ ಭೇದಗಳನ್ನು ಪಡೆಯುತ್ತದೆ. ವ್ಯಾವಹಾರಿಕ ಸತ್ಯವಾಗಿ ಕಾಲವಿದೆ.

## ೧೬. ಶ್ರೀವಲ್ಲಭಸಂಪ್ರದಾಯಮತ

ಈ ಮತದಲ್ಲಿ ಬ್ರಹ್ಮವು ಅಚಿಂತ್ಯವೂ ಅನಂತವೂ ಆದ ಶಕ್ತಿಯುಳ್ಳದ್ದು. ಆದ್ದರಿಂದ ಬ್ರಹ್ಮವೇ ಈ ಪ್ರಪಂಚರೂಪದಲ್ಲಿ ತನ್ನ ಇಚ್ಛಾನುಸಾರವಾಗಿ ಪರಿಣಾಮ ಹೊಂದುತ್ತದೆ. ಈ ಪರಿಣಾಮವು ಸತ್ಯವಾದದ್ದು. ಹಾಲು ಮೊಸರಾಗುವಂತೆ ಬ್ರಹ್ಮವು ಜಗದ್ರೂಪವಾಗಿ ಪರಿಣಾಮ ಹೊಂದಿದೆ. ಬ್ರಹ್ಮಾತಿರಿಕ್ತವಾದ ವಸ್ತುವೇ ಇಲ್ಲ. ಬ್ರಹ್ಮವು ಜಗತ್ತಿಗೆ ನಿಮಿತ್ತ ಕಾರಣವೂ ಹೌದು. ಉಪಾದಾನ ಕಾರಣವೂ ಹೌದು. ಆದ್ದರಿಂದ ಬ್ರಹ್ಮವೇ ಕಾಲವಾಗಿ ತೋರುತ್ತದೆ. ಆದ್ದರಿಂದಲೇ ಗೀತೆಯಲ್ಲಿ 'ಕಾಲೋಽಸ್ಮಿ ಲೋಕಕ್ಷಯಕೃತ್‌ಪ್ರವೃದ್ಧಃ' ಎಂದು ಶ್ರೀಕೃಷ್ಣನು ಹೇಳಿದ್ದಾನೆ. ಕಾಲರೂಪವಾದ ಬ್ರಹ್ಮವೇ ಉಪಾಧಿಭೇದದಿಂದ ನಾನಾ ಅಂತರ್ಭೇದಗಳನ್ನು ಪಡೆಯುತ್ತದೆ.

## ೧೭. ಗೌಡೀಯ ವೈಷ್ಣವಮತ

ಶ್ರೀಕೃಷ್ಣ ಚೈತನ್ಯ ಪ್ರಭುಪಾದರು ಗೌಡೀಯ ವೈಷ್ಣವಮತವನ್ನು ಸ್ಥಾಪಿಸಿದರು. ಇವರ ಸಿದ್ಧಾಂತದಲ್ಲಿ ಪರಮೇಶ್ವರ, ಜೀವ, ಮಾಯಾ, ಕಾಲ – ಎಂಬ ನಾಲ್ಕು ಪದಾರ್ಥಗಳನ್ನು ಅಂಗೀಕರಿಸಿದ್ದಾರೆ. ಪರಮೇಶ್ವರನೊಬ್ಬನೇ ಸ್ವತಂತ್ರಶಕ್ತಿಯುಳ್ಳವನು. ಜೀವಮಾಯೆ ಕಾಲಗಳು ಪರಮೇಶ್ವರನ ಶಕ್ತಿಗೆ ಅಧೀನರೂ ಅಸ್ವತಂತ್ರರೂ ಆಗಿದ್ದಾರೆ. ಪರಮೇಶ್ವರನು ಮಾಯೆಗೆ ನಿಯಂತೃವಾಗಿದ್ದಾನೆ. ಜೀವನು ಮಾಯೆಗೆ

ಅಧೀನನಾಗಿದ್ದಾನೆ. ಸತ್ತ್ವಾದಿಗುಣತ್ರಯವಿಲ್ಲದ್ದೂ ಜಡವೂ ಆದ ದ್ರವ್ಯವು ಕಾಲವಾಗಿದೆ. ಭೂತ, ಭವಿಷ್ಯತ್, ವರ್ತಮಾನಾದಿ ವ್ಯವಹಾರಕ್ಕೆ ಈ ಕಾಲವು ಕಾರಣ. ನಿತ್ಯವೂ ಏಕವೂ ಆದ ಕಾಲವು ಉಪಾಧಿವಶದಿಂದ ದಿನ, ರಾತ್ರಿ, ಮಾಸ – ಮುಂತಾದ ವ್ಯವಹಾರಕ್ಕೆ ಕಾರಣವಾಗಿದೆ.

## ೧೮. ಶಾಕ್ತಮತ

ಇದು ಅಭಿಪ್ರಾಯಭೇದಗಳಿಂದ ತೊಡಕುಗೊಂಡ ಮತವಾಗಿದೆ. ಸ್ಥೂಲವಾಗಿ ಹೇಳಬಹುದಾದದ್ದು ಇಷ್ಟು. ಚಿತಿಯೆಂಬ ಸತ್ಯಸ್ವರೂಪನಾದ ಆತ್ಮನೇ ಪರಮಶಿವ. ಈತನು ತನ್ನ ಸ್ವಾತಂತ್ರ್ಯಶಕ್ತಿಯಿಂದ ಜಗದ್ರೂಪನಾಗಿ ತೋರುತ್ತಾನೆ. ಪರಮಶಿವ–ನನ್ನು ಚಿತಿ (ಚೈತನ್ಯ), ಶಕ್ತಿ, ಆತ್ಮ ಎಂದು ಹೇಳುತ್ತಾರೆ. ಶಕ್ತಿ ಎಂಬ ಹೆಸರನ್ನು ಆಧರಿಸಿ ಶಾಕ್ತಮತ ಎಂಬ ಹೆಸರು ಬಂದಿದೆ. ಶಾಕ್ತರು ಪರಮಶಿವನ ಸ್ವಾತಂತ್ರ್ಯ–ಶಕ್ತಿಯನ್ನು ಸ್ತ್ರೀರೂಪದಲ್ಲಿ ಉಪಾಸನೆಮಾಡುತ್ತಾರೆ. ಈ ಸ್ವಾತಂತ್ರ್ಯಶಕ್ತಿಯನ್ನು ಕ್ರಿಯಾ, ವಿಮರ್ಶಃ – ಎಂದು ಕರೆಯುವುದುಂಟು. ಈ ಜಗತ್ತು ಪರಮಶಿವನ ವಿವರ್ತವೂ ಅಲ್ಲ, ಪರಿಣಾಮವೂ ಅಲ್ಲ, ಆತನು ಪ್ರತ್ಯೇಕವಾಗಿ ನಿರ್ಮಿಸಿದ ವಸ್ತುವೂ ಅಲ್ಲ. ಸ್ವಾತಂತ್ರ್ಯಶಕ್ತಿಯಿಂದ, ಕನ್ನಡಿಯಲ್ಲಿ ಕಾಣಿಸುವ ಪ್ರತಿಬಿಂಬದಂತೆ ಆತನಲ್ಲಿಯೇ ಕಾಣುವ ಪ್ರತಿಬಿಂಬವೇ ಜಗತ್ತು. ಪರಮಶಿವನೇ ಜೀವರೂಪದಲ್ಲಿದ್ದಾನೆ. ಪರಮಶಿವನ ಸ್ವಾತಂತ್ರ್ಯಶಕ್ತಿಯೂ ಮಾಯಾಶಕ್ತಿಯೂ ಪರಿಪೂರ್ಣಶಿವನಲ್ಲಿ ಭೇದವನ್ನು ತೋರಿಸಿದಾಗ ಅವಿದ್ಯಾಶಕ್ತಿ ಎನ್ನಿಸುತ್ತದೆ. ಪರಮಶಿವನ ಸ್ವಾತಂತ್ರ್ಯಶಕ್ತಿಯು ಸಂವಿದ್ರೂಪವಾಗಿದೆ. ಈ ಸಂವಿತ್ತನ್ನು ಮಹೇಶ್ವರೀ, ದೇವೀ, ಶಿವಾ, ಉಮಾ ಶಬ್ದಗಳಿಂದ ವ್ಯವಹರಿಸುತ್ತಾರೆ. ಅವಿದ್ಯೆಯು ಜಡಶಕ್ತಿ.

ಮಾಯಾಶಕ್ತಿಯಿಂದ ಕಲಾ, ವಿದ್ಯಾ, ರಾಗ, ಕಾಲ, ನಿಯತಿ – ಎಂಬ ಐದು ತತ್ತ್ವಗಳು ಹುಟ್ಟುತ್ತವೆ. ಶಿವನು ಜೀವಭಾವವನ್ನು ಮಾಯಾಶಕ್ತಿಯಿಂದ ಪಡೆದಾಗ ಇವು ಐದು ಜೀವಾತ್ಮನ ಪಂಚಕಂಚುಕಗಳೆನಿಸುತ್ತವೆ. ಕಾಲವೂ ಒಂದು ಕಂಚುಕ. ಇದು ಮಾಯಾಜನ್ಯವಾದ್ದರಿಂದ ನಿತ್ಯವಾದ್ದಲ್ಲ – ಇತ್ಯಾದಿ ವಿವಿಧ ಮತಭೇದಗಳು ಶಾಕ್ತಸಿದ್ಧಾಂತದಲ್ಲಿವೆ. ಬಳಸು ಮಾತುಗಳಿಂದ ಸುತ್ತಿ ಹೇಳಿದರೂ ಈ ಮತವು ಅದ್ವೈತಸಿದ್ಧಾಂತದಲ್ಲಿ ಸೇರಿಕೊಳ್ಳುತ್ತದೆ. ಕಾಲವು ಬ್ರಹ್ಮದ ಒಂದು ಶಕ್ತಿ. ಉಪಾಧಿಭೇದಗಳಿಂದ ನಾನಾ ರೂಪಗಳನ್ನು ತಳೆದು ಜೀವಾತ್ಮನ ವ್ಯವಹಾರದಲ್ಲಿ ಗೋಚರವಾಗುತ್ತದೆ.

## ೧೯. ಸಿದ್ಧಾಂತಾಗಮ

ಸಿದ್ಧಾಂತಾಗಮದಲ್ಲಿ ಇಪ್ಪತ್ತೆಂಟು ಭೇದಗಳಿವೆ. ಸಂಕ್ಷೇಪವಾಗಿ ಹೇಳಬಹು–ದಾದದ್ದು ಇಷ್ಟು –

ಈ ಮತದಲ್ಲಿ ಮೂವತ್ತಾರು ತತ್ತ್ವಗಳಿವೆ. ಪರಶಿವನು ತತ್ತ್ವಾತೀತನಾದವನು. ಮಹಾಪ್ರಳಯಪರ್ಯಂತವಾಗಿ ಮಾತ್ರ ಇದ್ದು ನಾಶವಾಗುವ ವಸ್ತುವಿಗೆ ತತ್ತ್ವವೆಂದು ಹೆಸರು. ಶಿವನೂ ಆತನ ಶಕ್ತಿಯೂ ಚಿತ್ಸ್ವರೂಪವಾದವು. ಶಕ್ತಿ ಶಕ್ತಿಮತ್‌ಗಳಿಗೆ ಅಭೇದವಿರುವುದರಿಂದ ಶಕ್ತಿಯು ಶಿವನಿಗಿಂತ ಬೇರೆಯಾದದ್ದಲ್ಲ. ಈ ಸಿದ್ಧಾಂತದಲ್ಲಿ ತತ್ತ್ವವನ್ನು 'ಅಧ್ವ' (ಮಾರ್ಗ) ಎಂದು ಕರೆಯುತ್ತಾರೆ. ಅದು ಶುದ್ಧ, ಅಶುದ್ಧ ಎಂದು ಎರಡು ವಿಧ. ಶುದ್ಧವಾದ ಅಧ್ವಕ್ಕೆ ಉಪಾದಾನ–ಕಾರಣವಾದದ್ದು ಬಿಂದು ಎಂಬ ವಸ್ತು. ಅದೇ ಮಹಾಮಾಯೆ. ಈ ಬಿಂದುವಿಗೆ ಶಿವತತ್ತ್ವ, ಪರಮಾಯಾ, ಕುಂಡಲಿನೀ, ಮಹಾಮಾಯಾ, ಪರನಾದ – ಮುಂತಾದ ಹೆಸರುಗಳಿವೆ.

ಅಶುದ್ಧವಾದ ಅಧ್ವಕ್ಕೆ ಉಪಾದಾನ ಕಾರಣವಾದದ್ದು ಮಾಯಾ. ವಿಶ್ವದಲ್ಲಿರುವ ಅನಂತ ಜೀವಗಳೆಲ್ಲವೂ ಈಶ್ವರಕೋಟಿಗೆ ಸೇರಿದವು. ಜೀವನಿಂದ ಅಧಿಷ್ಠಿತವಾದ ಮಾಯೆಯಿಂದ ಮೊದಲು ಕಾಲವು ಹುಟ್ಟುತ್ತದೆ. ಅನಂತರ ನಿಯತಿ, ಕಲಾ – ಮೊದಲಾದವು ಮಾಯೆಯಿಂದಲೇ ಹುಟ್ಟುತ್ತವೆ. ಏವಂಚ, ಈಶ್ವರನೇ ಆದ ಜೀವನಿಂದ ವಿಶಿಷ್ಟವಾದ ಮಾಯೆಯಿಂದ ಕಾಲವು ಹುಟ್ಟುತ್ತದೆ ಎಂದು ಸಿದ್ಧ–ವಾಗುತ್ತದೆ. ವಿಶ್ವದ ಸೃಷ್ಟಿಯಾಗುವಾಗ ಮೊದಲು ಜೀವನೂ ಅನಂತರ ಕಾಲವೂ ಮಾಯೆಯಿಂದ ಹುಟ್ಟುತ್ತವೆ. ಕಾಲವು ಜಡ, ಚೇತನವಲ್ಲ. ಇದು ಪ್ರಕೃತಿಯ ವಿಕಾರವಿಶೇಷವೆನ್ನಬಹುದು. ಕಾಲವು ವರ್ತಮಾನ, ಭೂತ, ಭವಿಷ್ಯತ್ ಎಂದು ಮೂರು ವಿಧ. ಎಲ್ಲ ಕ್ರಿಯೆಗಳೂ ಈ ಮೂರರಲ್ಲಿ ಒಂದಾಗಿ ಸೇರಿಕೊಂಡಿರುತ್ತವೆ.

ವೀರಶೈವ ಮುಂತಾದ ಇತರ ಶೈವ ಮತಗಳಲ್ಲಿಯೂ ಕಾಲದ ಸ್ವರೂಪವು ಸಿದ್ಧಾಂತಾಗಮದಲ್ಲಿ ಹೇಳಿದಂತೆಯೇ ಇದೆ.

## ೨೦. ಶ್ರೀರಾಮಾನುಜ ಸಂಪ್ರದಾಯಮತ

ಶ್ರೀರಾಮಾನುಜಾಚಾರ್ಯರೇ ಮೊದಲಾದ ಕೆಲವು ಆಚಾರ್ಯರು ಶ್ರೀವೈಷ್ಣವರು, ಶ್ರೀಸಂಪ್ರದಾಯದವರು. ಇವರ ಮತದಲ್ಲಿ ಚಿತ್, ಅಚಿತ್, ಈಶ್ವರ – ಎಂಬ ಮೂರು ತತ್ತ್ವಗಳಿವೆ. ಜೀವವರ್ಗವು ಚಿತ್. ಜೀವನು ಅಣುಪರಿಮಾಣ–ದವನು. ಪ್ರತಿ ಶರೀರದಲ್ಲಿಯೂ ಬೇರೆಬೇರೆ ಜೀವಾತ್ಮರಿದ್ದಾರೆ. ಸಕಲಜಗತ್ತಿನ ಸೃಷ್ಟಿ,

ಸಂಹಾರಕರ್ತನು ಈಶ್ವರ. ಅಚಿತ್ತತ್ತ್ವವು ಶುದ್ಧ, ಮಿಶ್ರ, ಸತ್ತ್ವಶೂನ್ಯ ಎಂದು ಮೂರು ವಿಧ. ಸತ್ತ್ವಶೂನ್ಯವೆಂದರೆ ಸತ್ತ್ವಾದಿಗುಣತ್ರಯ ಶೂನ್ಯವೆಂದರ್ಥ. ಕಾಲವು ಸತ್ತ್ವಶೂನ್ಯವಾದದ್ದು. ಇದು ಪ್ರಕೃತಿ ಮತ್ತು ಪ್ರಾಕೃತವಸ್ತುಗಳ ಪರಿಣಾಮಕ್ಕೆ ಹೇತುವಾಗಿದೆ. ಕಾಲವು ನಿತ್ಯವೂ ಈಶ್ವರನ ಕ್ರೀಡಾಪರಿಕರವೂ ಆಗಿದೆ. ಈಶ್ವರನ ಶರೀರವೂ ಆಗಿದೆ. ಭೂತಭವಿಷ್ಯತ್ ಇತ್ಯಾದಿ ವ್ಯವಹಾರಕ್ಕೆ ಕಾಲವು ಕಾರಣ. ಕಾಲಿಕ ಸಂಬಂಧದಿಂದ ಸರ್ವಾಧಾರವಾದದ್ದು ಕಾಲ.

ಪ್ರಕೃತಿ, ಪ್ರಧಾನ, ಅವ್ಯಕ್ತ – ಇವು ಪರ್ಯಾಯಪದಗಳು. ಅವ್ಯಕ್ತದಿಂದ ಜನಿಸುವ ಮಹತ್ತತ್ತ್ವಾದಿಗಳು ಪ್ರಾಕೃತಗಳು. ಇವುಗಳು ಪರಿಣಾಮ ಹೊಂದುವುದಕ್ಕೆ ಕಾಲವು ಅವಶ್ಯವಾಗಿ ಬೇಕಾಗುತ್ತದೆ. ಕಾಲವು ಕ್ಷಣ, ಮುಹೂರ್ತ, ಯಾಮ – ಮುಂತಾದ ರೂಪಗಳಲ್ಲಿ ಸ್ವತಃ ಪರಿಣಮಿಸುತ್ತದೆ. ಹಾಗೆ ತಾನು ಪರಿಣಮಿಸಿದರೂ ಸ್ವರೂಪದಿಂದ ಇದ್ದೇ ಇರುತ್ತದೆಯಾದ್ದರಿಂದ ಪರಿಣಾಮಿನಿತ್ಯವಾಗಿದೆ. ಪ್ರಕೃತಿಯೂ ಹೀಗೆ ಪರಿಣಾಮಿನಿತ್ಯವಾಗಿದೆ. ಮಣ್ಣು ಗಡಿಗೆ, ಹರಿವೆ ಇತ್ಯಾದಿ ರೂಪಗಳಲ್ಲಿ ಪರಣಮಿಸಿದರೂ ಮಣ್ಣು ಇದ್ದೇ ಇರುತ್ತದೆ. (ಕಾಲವು ತಾನಾಗಿ ಕ್ಷಣ, ಯಾಮಾದಿ ರೂಪಗಳಲ್ಲಿ ತನ್ನನ್ನು ಪರಿವರ್ತಿಸಿಕೊಳ್ಳುತ್ತದೆ. ಉಪಾಧಿಗಳು ಬೇಕಾಗಿಲ್ಲ – ಎನ್ನುವುದೊಂದು ವೈಚಿತ್ರ್ಯ.) ಈ ಸಂಪ್ರದಾಯದ ಆಚಾರ್ಯರಲ್ಲಿ ಈ ವಿಚಾರವಾಗಿ ಮತಭೇದ ಉಂಟು.

## ೨೧. ಪ್ರಪಂಚಸಾರ

ಶ್ರೀವಿದ್ಯೆಯನ್ನು ಬೋಧಿಸುವ ತಂತ್ರಗ್ರಂಥವಿದು. ಶ್ರೀಚಕ್ರದ ಉಪಾಸನಾ ಕ್ರಮ ಇದರಿಂದ ಬಂದದ್ದು. ಕಾಲದ ವಿಷಯವಾಗಿ ಜಟಿಲವಾದ ಈ ಗ್ರಂಥದ ಅಭಿಪ್ರಾಯವಿಷ್ಟು –

ಚಿತ್, ಜಡ – ಎಂದು ಎರಡು ಪದಾರ್ಥಗಳಿವೆ. ಜಡವು ಚಿದ್ರೂಪಕ್ಕೆ ಉಪಾಧಿಯಾಗಿರುತ್ತದೆ. ಜಡವನ್ನು ಅಚಿತ್ ಎನ್ನಬಹುದು. ಜಡವಾದ ಈ ಉಪಾಧಿಯ ಸಂಬಂಧದಿಂದ ಚಿದ್ರೂಪವೂ ಪ್ರಕೃತಿ, ಪುರುಷ, ಕಾಲ – ಎಂಬ ಮೂರು ವಸ್ತುಗಳಾಗಿ ತೋರುತ್ತದೆ. ಉಪಾಧಿಭೇದದಿಂದಲೇ ಈ ಮೂರು ವಸ್ತುಗಳೂ ಪರ–ಅಪರ ಎಂದು ಎರಡೆರಡು ವಸ್ತುಗಳಾಗಿ ವಿಭಕ್ತವಾಗುತ್ತದೆ. ಆಗ ಆರು ವಸ್ತುಗಳಾಗುತ್ತವೆ. ಹೇಗೆಂದರೆ,

೧. ಅಚಿತ್ (ಜಡ) – ಎಲ್ಲವೂ ಉಪಾಧಿಯಾದಾಗ ಚಿದ್ರೂಪವು ಪರಾಪ್ರಕೃತಿ ಎನಿಸುತ್ತದೆ.

೨. ಅಚಿತ್ತಿನ ಒಂದಂಶವು ಉಪಾಧಿಯಾದಾಗ ಚಿದ್ರೂಪವು ಪರನಾದ ಪುರುಷನಾಗುತ್ತದೆ ಇವನೇ ಪರಮಪುರುಷ, ಈಶ್ವರ, ಪರಮಾತ್ಮ.

೩. ಅಚಿತ್ತಿನ ಒಂದಂಶವಾದ ಮಾಯೆಯಲ್ಲಿ ಪ್ರತಿಬಿಂಬಿಸಿದ ಪರಮ ಪುರುಷನೇ ಜೀವ. ಜೀವನನ್ನು ಅಪರಪುರುಷನೆನ್ನಬಹುದು.

೪. ಅಚಿತ್ತಿನ ಸೂಕ್ಷ್ಮತಮವೂ ವಿಶುದ್ಧವೂ ಆದ ಒಂದಂಶವನ್ನು ಉಪಾಧಿಯಾಗಿ ಉಳ್ಳ ಚಿದ್ರೂಪವು ಪರವಾದ ಕಾಲ.

೫. ಅಚಿತ್ತಿನ ಪರಿಣಾಮವಿಶೇಷಗಳನ್ನು ಉಪಾಧಿಯಾಗಿ ಹೊಂದಿದ ಚಿದ್ರೂಪವು ಕ್ಷಣ, ಮುಹೂರ್ತ ಮುಂತಾದ ಅಪರಕಾಲವೆನಿಸುತ್ತದೆ.

೬. ಕೇವಲ ಅಚಿತ್ತು ಅಪರಾ ಪ್ರಕೃತಿ. ಇದು ಜಗತ್ತಿಗೆ ಉಪಾದಾನ ಕಾರಣವಾಗಿ ಆಕಾಶ ವಾಯು ಮುಂತಾದ ಪಂಚಭೂತಗಳನ್ನೂ ಇಂದ್ರಿಯಾದಿಗಳನ್ನೂ ಸೃಜಿಸುತ್ತದೆ.

ಅದ್ವೈತಸಿದ್ಧಾಂತಕ್ಕೆ ಹೋಲಿಸಿದಾಗ ಚಿದ್ರೂಪವೇ ಬ್ರಹ್ಮ. ಪರಾಪ್ರಕೃತಿಯು ಶಬಲ ಬ್ರಹ್ಮ. ಪರನಾದ ಪುರುಷ ಈಶ್ವರ. ಮಾಯೆಯಲ್ಲಿ ಕಾಣುವ ಈಶ್ವರ ಪ್ರತಿಬಿಂಬವೇ ಜೀವ. ಜಗತ್ತು ಮಾಯಾಕಲ್ಪಿತವಾದ ಜಡವಸ್ತು.

ಈ ಸಿದ್ಧಾಂತದಲ್ಲಿ ಜಡವೆಂಬ ಪ್ರತ್ಯೇಕ ತತ್ತ್ವವನ್ನು ಅಂಗೀಕರಿಸಿದರೂ ಅಚಿತ್ತನ್ನು ಚಿದ್ವಸ್ತುವಿನಲ್ಲಿ ಆರೋಪಿಸುತ್ತಾರಾದ್ದರಿಂದ ಅದ್ವೈತಕ್ಕೆ ಚ್ಯುತಿ ಇಲ್ಲ. ಪರವಾದ ಕಾಲವೆಂದರೆ ಅಖಂಡವಾದ ಕಾಲ. ಅದ್ವೈತವೇದಾಂತದಲ್ಲಿ ಬ್ರಹ್ಮದ ಮಾಯಾಶಕ್ತಿ ವಿಶೇಷವು ಅಖಂಡಕಾಲ. ಇದರಲ್ಲಿ ಮಾಯೆಯ ಒಂದಂಶದಿಂದ ಕೂಡಿದ ಚಿದ್ರೂಪವೇ ಅಖಂಡಕಾಲ. ಕ್ಷಣ ಮುಹೂರ್ತಾದಿಗಳು ಉಭಯಮತ–ಗಳಲ್ಲಿಯೂ ಉಪಾಧಿಗಳಿಂದ ಆಗುವ ಕಲ್ಪಿತ ಭೇದಗಳು.

## ೨೨. ವಿಷ್ಣುಪುರಾಣ

ವಿಷ್ಣು ಪುರಾಣವು ಅದ್ವೈತಿಗಳ ವಿವರ್ತವಾದವನ್ನು ಅಂಗೀಕರಿಸುತ್ತದೆ.

ಜ್ಞಾನಸ್ವರೂಪಮತ್ಯಂತನಿರ್ಮಲಂ ಪರಮಾರ್ಥತಃ ।
ತದೇವಾರ್ಥಸ್ವರೂಪೇಣ ಭ್ರಾಂತಿದರ್ಶನತಃ ಸ್ಥಿತಮ್ ॥

– (ಪ್ರಥಮಾಂಶ ೨–೬)

ಆ ಪರವಸ್ತುವು ಪರಮಾರ್ಥವಾದಾಗ ಕೇವಲ ಜ್ಞಾನಸ್ವರೂಪವೂ ಅತ್ಯಂತ

ನಿರ್ಮಲವೂ ಆದದ್ದು. ಆ ವಸ್ತುವೇ ಘಟಪಟಾದಿ ಜಗದ್ರೂಪದಿಂದ ಭ್ರಾಂತಿಯ ಕಾರಣವಾಗಿ ತೋರುತ್ತದೆ.

ಒಂದೇ ಅದ್ವೀತೀಯವಸ್ತುವು ಭ್ರಾಂತಿಯಿಂದ (ಅವಿದ್ಯೆಯಿಂದ) ನಾನಾರೂಪದಲ್ಲಿ ತೋರುವುದಕ್ಕೆ ವಿವರ್ತವೆಂದು ಹೆಸರು.

ತದೇವ ಸರ್ವಮೇವೈತದ್ ವ್ಯಕ್ತಾವ್ಯಕ್ತಸ್ವರೂಪವತ್ ।
ತಥಾ ಪುರುಷರೂಪೇಣ ಕಾಲರೂಪೇಣ ಚ ಸ್ಥಿತಮ್ ॥

'ಆ ಅದ್ವಿತೀಯ ಬ್ರಹ್ಮವೇ ವ್ಯಕ್ತ, ಅವ್ಯಕ್ತ (ಪ್ರ.೨–೧೪) ಸ್ವರೂಪದಲ್ಲಿರುವ ಈ ಸಕಲ ಜಗತ್ತಾಗಿದೆ. ಅದೇ ಪುರುಷ ರೂಪವನ್ನೂ ಕಾಲರೂಪವನ್ನೂ ಧರಿಸಿದೆ'. ವ್ಯಕ್ತ = ಮಹತ್ತತ್ತ್ವ ಮೊದಲಾದದ್ದು. ಅವ್ಯಕ್ತ = ಪ್ರಧಾನ, ಪ್ರಕೃತಿ, ಪುರುಷ = ಆತ್ಮ, ಬ್ರಹ್ಮವೇ ಕಾಲವೆನಿಸಿದೆ ಎಂದು ಇಲ್ಲಿ ಸ್ಪಷ್ಟವಾಗಿ ಹೇಳಿದೆ.

ಬ್ರಹ್ಮವೇ ಪ್ರಕೃತಿ, ಪುರುಷ, ಕಾಲ – ಎಂಬ ಮೂರು ರೂಪಗಳಲ್ಲಿದೆ. ಪ್ರಳಯವಾದಾಗ ಕಾಲವು ಸ್ಥೂಲರೂಪದಲ್ಲಿರಲ್ಲಿಲ್ಲ. ಆಗ ಉಪಾಧಿಯಾದ ಆದಿತ್ಯಗತಿ ಮುಂತಾದದ್ದಿರಲಿಲ್ಲ. ಅದು ಪ್ರಪಂಚಸಾರದಲ್ಲಿ ಹೇಳಿದ ಪರವೆಂಬ ಕಾಲ. ಸೃಷ್ಟಿಕಾಲದಲ್ಲಿ ಕಾಲವು ಪ್ರಕೃತಿಪುರುಷರ ಸಂಯೋಜನವನ್ನು ಮಾಡುತ್ತದೆ. ಇದೇ ಪರವೆಂಬ ಕಾಲ, ಸೃಷ್ಟಿಯಾದ ಮೇಲೆ ಇದೇ ಅಪರಕಾಲವೆನಿಸುತ್ತದೆ. ಆಗ ಆದಿತ್ಯಾದಿಗತಿಯೆಂಬ ಉಪಾಧಿಯಿಂದ ಹಗಲು, ರಾತ್ರಿ ಮುಂತಾದ ಕಾಲದ ಅಂತರ್ಭೇದಗಳು ಕಂಡುಬರುತ್ತವೆ. ಇದೆಲ್ಲವೂ ವಿಷ್ಣುಪುರಾಣದ ಪ್ರಥಮಾಂಶ–ದಲ್ಲಿದೆ. ವ್ಯಾಖ್ಯಾನಕಾರರಾದ ಶ್ರೀಧರಸ್ವಾಮಿಗಳು ವಿವರಿಸಿ ಹೇಳಿದ್ದಾರೆ. ವಿಷ್ಣುಪುರಾಣವು ಅದ್ವೈತಪರವಾದದ್ದು.

## ೨೩. ಶ್ರೀಭಾಗವತ

ಭಾಗವತದ ತೃತೀಯ ಸ್ಕಂಧದಲ್ಲಿ ಎಂಟನೆಯ ಅಧ್ಯಾಯದಿಂದ ಸೃಷ್ಟಿಕ್ರಮವು ನಿರೂಪಿತವಾಗಿದೆ. ಭಗವಂತನ ಕಾಲವೆಂಬ ಶಕ್ತಿಯು ಪ್ರಳಯಕಾಲದಲ್ಲಿ ಸುಪ್ತವಾ–ಗಿದೆಯೋ ಎಂಬಂತೆ ಶಾಂತವಾಗಿರುತ್ತದೆ. ಮುಂದಿನ ಸೃಷ್ಟಿಯನ್ನಾರಂಭಿಸುವಾಗ ಭಗವಂತನು ಆ ಕಾಲವನ್ನು ಪ್ರೇರಿಸುತ್ತಾನೆ – ಎಂದು ವರ್ಣಿತವಾಗಿದೆ. ಆದ್ದರಿಂದ ಭಾಗವತದ ಮತದಂತೆ ಕಾಲವೆಂಬ ಬ್ರಹ್ಮಶಕ್ತಿಯು ನಿತ್ಯವಾದದ್ದು. ಕಾಲವು ಸೂಕ್ಷ್ಮ ಸ್ಥೂಲರೂಪಗಳಿಂದ ಎರಡು ವಿಧವಾಗಿದೆ. ಇದನ್ನು ಅನುಮಾನಪ್ರಮಾಣದಿಂದ ನಿಶ್ಚಯಿಸಬಹುದು. ಐದನೆಯ ಅಧ್ಯಾಯದಲ್ಲಿ ಸೂರ್ಯಗತಿ ಎಂಬ ಉಪಾಧಿ–ಯಿಂದ ಕಾಲಭೇದಗಳುಂಟಾಗುತ್ತವೆ ಎಂದು ಹೇಳಿದೆ. ಶ್ರೀಧರೀಯ ವ್ಯಾಖ್ಯಾನದಲ್ಲಿ ಇದೆಲ್ಲವನ್ನೂ ಸ್ಪಷ್ಟವಾಗಿ ವಿವರಿಸಿದ್ದಾರೆ.

## ೨೪. ಸೂತಸಂಹಿತಾ

ಸ್ಕಾಂದಪುರಾಣದಲ್ಲಿ ಸೂತಸಂಹಿತಾ ಬರುತ್ತದೆ. ಅದರ ಪ್ರಕಾರ ಕಾಲವು ಪರಮ, ಅಪರಮ ಎಂದು ಎರಡು ವಿಧ. ಶಿವನೊಡನೆ ಮಾಯೆಯ ಸಂಬಂಧವು ಪರಮಕಾಲ. ಅದೇ ಮುಂದೆ ಕಲ್ಪ, ಮನ್ವಂತರ, ಸಂವತ್ಸರ ಮಾಸ ಇತ್ಯಾದಿ ರೂಪದಿಂದ ಪರಿಚ್ಛಿನ್ನವಾಗಿ ಅಪರಕಾಲ ಎನ್ನಿಸುತ್ತದೆ. ಈ ಕಾಲವು ಅನಾದಿ–ಯಾದರೂ ಮಾಯಾಕಲ್ಪಿತವಾದ್ದರಿಂದ 'ಮಾಯೆಯಿಂದ ಉತ್ಪನ್ನವಾದ ಕಾಲ' ಎಂದು ವರ್ಣಿಸಲಾಗಿದೆ. ಮಾಯೆಯು ಕಲ್ಪಿತವಾದ್ದರಿಂದ ಅಸತ್ಯವಾದದ್ದು. ಹಾಗೆಯೇ ಕಾಲವೂ ಲೋಕವ್ಯವಹಾರ ಸಿದ್ಧಿಗಾಗಿ ಕಲ್ಪಿತವೇ. ಮಾಯೆ ಕಾಲಗಳೆರಡೂ ಶಿವನಲ್ಲಿ ಲೀನವಾಗಿ ಹೋಗುವುದರಿಂದ ಅದ್ವೈತವು ಸಿದ್ಧಿಸುತ್ತದೆ.

## ೨೫. ಜೈನಮತ

ಜೈನಸಿದ್ಧಾಂತದಲ್ಲಿ ದ್ರವ್ಯವು ಜೀವ–ಅಜೀವ ಎಂದು ಎರಡು ವಿಧ. ಅಜೀವವು ಪುದ್ಗಲ, ಧರ್ಮ, ಅಧರ್ಮ, ಆಕಾಶ, ಕಾಲ – ಎಂದು ಐದು ವಿಧ. ಕಾಲವು ವ್ಯವಹಾರಕಾಲ, ನಿಶ್ವಯಕಾಲವೆಂದು ಎರಡು ವಿಧವಾಗಿದೆ. ಕ್ಷಣ, ಮುಹೂರ್ತ – ಇತ್ಯಾದಿ ವಿಭಾಗರಹಿತವಾದ ಕಾಲವು ನಿಶ್ಚಯಕಾಲ. ಕ್ಷಣಾದಿ ವಿಭಾಗಸಹಿತವಾದದ್ದು ವ್ಯವಹಾರಕಾಲವೆನಿಸುತ್ತದೆ.

ನಿಶ್ಚಯ ಕಾಲವು ಅಣುರೂಪವಾದ ದ್ರವ್ಯ. ಇದು ನಿತ್ಯವಾದದ್ದು. ಹೂ, ಕಾಯಿ – ಮುಂತಾದವುಗಳು ಪರಿಣಾಮಹೊಂದುವುದಕ್ಕೆ ಈ ನಿಶ್ಚಯಕಾಲವು ಸಹಕಾರಿ. ಈ ನಿಶ್ಚಯಕಾಲದಿಂದ ಗಳಿಗೆ, ಮುಹೂರ್ತ ಮುಂತಾದವು ಹುಟ್ಟುತ್ತದೆ ಎಂದರೆ ನಿಶ್ಚಯ ಕಾಲದ ಕಾರ್ಯ. ಈ ವ್ಯವಹಾರಕಾಲವನ್ನು ಜೈನರು ಸಮಯ ಎನ್ನುತ್ತಾರೆ. ಇದು ಘಟಾದಿದ್ರವ್ಯಗಳೊಡನೆ ಪ್ರತ್ಯಕ್ಷವಾಗುತ್ತದೆ. ನಿಶ್ಚಯಕಾಲವು ಪ್ರತ್ಯಕ್ಷವಲ್ಲ. ಕೆಲವು ಜೈನಾಚಾರ್ಯರು ಕಾಲವನ್ನು ಅಂಗೀಕರಿಸುವುದಿಲ್ಲ.

ಬೌದ್ಧರೂ ಚಾರ್ವಾಕರೂ ಕಾಲವನ್ನೊಪ್ಪುವುದಿಲ್ಲ. ಮಹಾಭಾರತದಲ್ಲಿ ಹಲವಾರು ಮತಗಳ ಸಂಕೀರ್ಣತೆ ಇದೆ. ವಿಶೇಷವಾಗಿ ಸಾಂಖ್ಯಮತದ ಉಲ್ಲೇಖ ಉಂಟು. ಭಗವದ್ಗೀತೆಯ ಪ್ರಕಾರ ಕಾಲವೆಂಬುದಿದೆ. ಮಹಾಭಾರತದ ತಾತ್ಪರ್ಯವೇನೆಂದು ನಿಶ್ಚಯಿಸುವುದು ಕಷ್ಟ. ಕಾಲಸಿದ್ಧಾಂತದರ್ಶಿನಿಯಲ್ಲಿ ಒಟ್ಟು ೫೭ ಮತಗಳ ಉಲ್ಲೇಖವಿದೆ. ಇದುವರೆಗೆ ವರ್ಣಿಸಿದ ಮತಗಳಲ್ಲಿಯೇ ಉಳಿದವು ಅಂತರ್ಭಾವ ಹೊಂದುವುದರಿಂದ ಅವನ್ನು ಈ ಅನುಬಂಧದಲ್ಲಿ ವಿವರಿಸಿಲ್ಲ.

ವಿಶೇಷವೇನೆಂದರೆ ವಾಲ್ಮೀಕಿರಾಮಾಯಣದ ಮತವೇನು ಎಂಬುದನ್ನು ಆ

ಗ್ರಂಥದಲ್ಲಿ ಹೇಳಿಲ್ಲ. ಕುತೂಹಲಕರವಾದ ಆ ವಿಷಯ ಒಂದನ್ನು ಇಲ್ಲಿ ಹೇಳಬೇಕಾಗಿದೆ –

ಉತ್ತರಕಾಂಡದ ಕಡೆಯಲ್ಲಿ ಶ್ರೀರಾಮನ ಸ್ವರ್ಗಾರೋಹಣದ ವಿಷಯ ಬರುತ್ತದೆ. ಮೊದಲು ಕಾಲಪುರುಷನು ತಾಪಸವೇಷದಿಂದ ಬಂದು ಶ್ರೀರಾಮನನ್ನು ಏಕಾಂತದಲ್ಲಿ ಕಂಡು ಮಾತನಾಡಬೇಕಾಗಿದೆಯೆಂದು ಲಕ್ಷ್ಮಣನಿಗೆ ಹೇಳುತ್ತಾನೆ. ಅದರಂತೆ ಲಕ್ಷ್ಮಣನು ಏರ್ಪಡಿಸಿದಾಗ, ಕಾಲಪುರುಷನನ್ನು ಕುರಿತು 'ನೀನು ಯಾರು?' ಎಂದು ಶ್ರೀರಾಮನು ಕೇಳುತ್ತಾನೆ. ಆಗ ಕಾಲಪುರುಷನು ಹೇಳುವ ಮಾತಿದು –

ತವಾಹಂ ಪೂರ್ವಸದ್ಭಾವೇ ಪುತ್ರಃ ಪರಪುರಂಜಯ ।
ಮಾಯಾಸಂಭಾವಿತೋ ವೀರ ಕಾಲಃ ಸರ್ವಸಮಾಹರಃ ॥

–ಉತ್ತರಕಾಂಡ ೧೦೪–೩

'ಎಲೈ ವೀರಾಗ್ರಣಿ – ಶ್ರೀರಾಮ, ನೀನು ಪೂರ್ವಾವಸ್ಥೆಯಲ್ಲಿದ್ದಾಗ – ಪರಬ್ರಹ್ಮವೆನಿಸಿ ಸತ್ ಸ್ವರೂಪದಲ್ಲಿದ್ದಾಗ – ನಿನ್ನಿಂದ ಮಾಯೆಯಲ್ಲಿ ಜನಿಸಿದ ನಿನ್ನ ಪುತ್ರನು ನಾನು! ಸರ್ವಕೃತ್ಯನಿರ್ವಾಹಕನಾದ ಕಾಲನೇ ನಾನು.' ಸರ್ವಸಮಾಹರಃ – ಎಂದರೆ ಸರ್ವವನ್ನೂ ನಾಶಪಡಿಸತಕ್ಕ ಕಾಲನು ನಾನು ಎಂದೂ ಹೇಳಬಹುದು. ಸಂಭೂತ ಎಂಬುದರ ಪ್ರೇರಣಾರ್ಥದ ರೂಪ ಸಂಭಾವಿತ. ಮಾಯೆಯಲ್ಲಿ ಹುಟ್ಟಿಸಲ್ಪಟ್ಟವನು ಎಂದು ಶಬ್ದಾರ್ಥ.

ಇದು ಅದ್ವೈತ ಸಿದ್ಧಾಂತಕ್ಕೆ ಅನುಗುಣವಾಗಿದೆ. ಅದಕ್ಕೆ ಆಧಾರವೂ ಆಗಿದೆ. ಹೀಗೆ ಕಾಲದ ವಿಷಯದಲ್ಲಿ ನಾನಾ ಅಭಿಪ್ರಾಯಗಳಿವೆ.

**– ಶ್ರೀರಸ್ತು –**

# ಅನುಬಂಧ – ೩

# ಶ್ಲೋಕಾನುಕ್ರಮಣಿಕೆ

**ಶ್ಲೋಕಸಂಖ್ಯೆಯನ್ನು ಸೂಚಿಸುವಾಗ ಎರಡು ಸಂಖ್ಯೆಗಳನ್ನು ನೀಡಲಾಗಿದೆ. ಆರಂಭದ ಸಂಖ್ಯೆ ೧ = ಬ್ರಹ್ಮಕಾಂಡವೆಂದೂ ೨ = ಕಾಲಸಮುದ್ದೇಶವೆಂದೂ ೩ = ಕ್ರಿಯಾಸಮುದ್ದೇಶವೆಂದೂ ತಿಳಿಯಬೇಕು.**

## ಫ



## ಬ



## ಭ

– **ಶ್ರೀರಸ್ತು** –

# ಅನುಬಂಧ–೪

## ಪ್ರಕಟಿತ ವಾಕ್ಯಪದೀಯ ಗ್ರಂಥಸೂಚಿ

| ಕ್ರ.ಸಂ. | ಸಂಪಾದಕ | ವ್ಯಾಖ್ಯಾಕಾರ | ವ್ಯಾಖ್ಯಾನ | ಭಾಗ | ಭಾಷೆ | ಪ್ರಕಾಶನ | ವರ್ಷ |
|---|---|---|---|---|---|---|---|
| ೧. | ಶ್ರೀಸಾಂಬಶಿವಶಾಸ್ತ್ರಿ | ಹೇಲಾರಾಜ | ಪ್ರಕಾಶ | ಬ್ರಹ್ಮಕಾಂಡ<br>ವಾಕ್ಯಕಾಂಡ<br>ಪದಕಾಂಡ | ಸಂಸ್ಕೃತ | ಮಹಾರಾಜ ಪ್ರಕಾಶನ<br>ತಿರುವನಂತಪುರಂ | ೧೯೩೩ |
| ೨. | ಶ್ರೀಗೋಸ್ವಾಮಿ<br>ದಾಮೋದರ ಶಾಸ್ತ್ರಿ | ಹೇಲಾರಾಜ | ಪ್ರಕಾಶ | – | ಸಂಸ್ಕೃತ | ಕೃಷ್ಣದಾಸ್ ಗುಪ್ತ<br>ಬನಾರಸ್ | ೧೯೩೩ |
| ೩. | ಶ್ರೀಚಾರುದೇವ ಶಾಸ್ತ್ರಿ | ಭರ್ತೃಹರಿ | ಸ್ವೋಪಜ್ಞ | ಬ್ರಹ್ಮಕಾಂಡ<br>ವಾಕ್ಯಕಾಂಡ | ಸಂಸ್ಕೃತ | – | ೧೯೩೫ |
| ೪. | ಶ್ರೀ ಕೆ.ಎ. ಸುಬ್ರಹ್ಮಣ್ಯ<br>ಅಯ್ಯರ್ | ಹೇಲಾರಾಜ | ಪ್ರಕಾಶ | – | ಸಂಸ್ಕೃತ | ಡೆಕ್ಕನ್ ಕಾಲೇಜ್<br>ಪೂನಾ | ೧೯೬೩ |

| | | | | | | | |
|---|---|---|---|---|---|---|---|
| ೫. | ಶ್ರೀ ರಘುನಾಥ ಶರ್ಮಾ | ಶ್ರೀರಘುನಾಥ ಶರ್ಮಾ | ಅಂಬಾಕರ್ತ್ರೀ | ಬ್ರಹ್ಮಕಾಂಡ | ಸಂಸ್ಕೃತ | ರೀಸರ್ಚ್ ಇನ್ಸ್ಟಿಟ್ಯೂಟ್ ವಾರಾಣಸೀ ಸಂಸ್ಕೃತ ವಿಶ್ವವಿದ್ಯಾಲಯ | ೧೯೬೩ |
| ೬. | ಶ್ರೀ ಕೆ.ಎ. ಸುಬ್ರಹ್ಮಣ್ಯ ಅಯ್ಯರ್ | ಭರ್ತೃಹರಿ | ಸ್ವೋಪಜ್ಞ | ಬ್ರಹ್ಮಕಾಂಡ ವಾಕ್ಯಕಾಂಡ | ಸಂಸ್ಕೃತ | ಡೆಕ್ಕನ್ ಕಾಲೇಜ್, ಪೂನಾ | ೧೯೬೬ |
| ೭. | – | ಸತ್ಯಕಾಮ | – | ಬ್ರಹ್ಮಕಾಂಡ | ಸಂಸ್ಕೃತ | ಮುನ್ಶಿರಾಮ್, ಮನೋ–ಹರಲಾಲ್, ನವದೆಹಲಿ | ೧೯೭೦ |
| ೮. | ಶ್ರೀಭಗೀರಥಪ್ರಸಾದ ತ್ರಿಪಾಠಿ | ಹೇಲಾರಾಜ ಶ್ರೀರಘುನಾಥ ಶರ್ಮಾ | ಪ್ರಕಾಶ ಅಂಬಾಕರ್ತ್ರೀ | ಜಾತಿ, ದ್ರವ್ಯ ಮತ್ತು ಸಂಬಂಧ ಸಮುದ್ದೇಶ | ಸಂಸ್ಕೃತ | ವಾರಾಣಸೀ ಸಂಸ್ಕೃತ ವಿಶ್ವವಿದ್ಯಾಲಯ, ವಾರಾಣಸೀ | ೧೯೭೪ ೧೯೯೧ |
| ೯. | – | ಶ್ರೀಪೆರಿ ಸೂರ್ಯ ನಾರಾಯಣಶಾಸ್ತ್ರಿ | – | ಬ್ರಹ್ಮಕಾಂಡ, ವಾಕ್ಯಕಾಂಡ | ಸಂಸ್ಕೃತ | ತೆಲುಗು ಅಕಾಡೆಮಿ ಹೈದರಾಬಾದ್–೫೦೦೦೨೯ | ೧೯೭೪ |

